# ಮರಾಟರೂ ಇಂಗ್ಲೀಷರೂ

( ೩ ಭಾಗ ಪೂರ್ಣ )



ಭಿ. ಪ. ಕಾಳೆ

K9
K1

ಶ್ರೀಶೇಷಾಚಲ ಗ್ರಂಥಮಾಲೆ, ಧಾರವಾಡ.

# ಮರಾಟರೂ ಇಂಗ್ಲಿಷರೂ

(ಸಾಧಾರ ಐತಿಹಾಸಿಕ ಪುಸ್ತಕ)

೧-೨-೩ ಭಾಗಗಳು



ಅನುವಾದಕ:

ಭೀ. ಪ. ಕಾಳೆ.



ಪ್ರಕಾಶಕ:

ಮ. ಗು. ಕುಲಕರ್ಣಿ

ಸಂಪಾದಕ ಸ. ಚ.

ಆನಂದವನ-ಅಗಡಿ



೧೯೪೧

# ಮುನ್ನುಡಿ

ನೂರು ನೂರಾಇಪ್ಪತ್ತು ವರ್ಷಗಳ ಹಿಂದೆ ಪುಣೆಯೊಳಗಿನ ಮರಾಟಾ ಶಾಹಿಯು ನಾಶಗೊಂಡಿತು. ಮರಾಟಾಶಾಹಿಯ ನಿಜವಾದ ಅಂತವು ಯಾವ ದಿವಸ ವಾಯಿತೆಂಬ ಬಗ್ಗೆ ಮತಭೇದವಿದೆ. ಕೆಲವರು ತಾ|| ೧೬ನೇ ಫೆಬ್ರುವಾರಿ ೧೭೯೬ಕ್ಕೆ, ಕೆಲವರು ತಾ|| ೧೩-೩-೧೮೦೦ಕ್ಕೆ, ಕೆಲವರು ತಾ|| ೩೧-೧೨-೧೮೦೨ಕ್ಕೆ, ಕೆಲವರು ತಾ|| ೨೫-೯-೧೮೦೩ಕ್ಕೆ, ಕೆಲವರು ತಾ|| ೧೭-೧೧-೧೮೧೭ಕ್ಕೆ, ಕೆಲವರು ಬಾಜೀ ರಾಯನು ಜನರಲ್ಲ ಮಾಲಕಮ್ಮನ ಸ್ವಾಧೀನವಾದ ತಾ|| ೩-೬-೧೮೧೮ಕ್ಕೆ ಬೇರೆ ಕೆಲ ವರು ಮರಾಟರ ಮೂಲ ಪಟ್ಟವಾದ ಸಾತಾರೆಯು ಖಾಲಸಾ ಆದ ದಿನ ಅಂದರೆ ತಾ|| ೧೬-೫ ೧೮೪೮ಕ್ಕೆ ಮರಾಟಾಶಾಹಿಯ ಅಂತವೆಂದು ಗಣಿಸುತ್ತಾರೆ.

ಆ ದಿನವು ಯಾವದೇ ಇದ್ದರೂ ಮರಾಟರಿಗೂ ಇಂಗ್ಲಿಷರಿಗೂ ಎಂದಿನಿಂದ ಸಂಬಂಧವುಂಟಾಯಿತೋ, ಅಂದಿನಿಂದ ಮರಾಟಾಶಾಹಿಯ ಅಂತದ ವರೆಗಿನ ಅವ ರಿವರ ಸಂಬಂಧದ ಸಂಕ್ಷಿಪ್ತ ಇತಿಹಾಸವು ಈ ಚಿಕ್ಕ ಪುಸ್ತಕದಲ್ಲಿ ವರ್ಣಿಸಲ್ಪಟ್ಟಿವೆ ಈ ಪುಸ್ತಕ ವಾಚನದಿಂದ ಮುಖ್ಯವಾಗಿ ತಿಳಿದುಬರುವದೇನಂದರೆ, ಮರಾಟರಿಗೂ ಇಂಗ್ಲಿಷರಿಗೂ ಅರ್ಥಾತ್ ಹಿಂದುಸ್ತಾನದ ನಿವಾಸಿಗಳಿಗೂ ಇಂಗ್ಲಿಷರಿಗೂ ಸಂಬಂಧ ವುಂಟಾದಾಗ ಐಶ್ವರ್ಯ-ವೈಭವ-ಶೌರ್ಯ-ಸಾಹಸ-ಶಿಸ್ತು-ಧೋರಣ-ಬುದ್ಧಿಮತ್ತೆ ಮುಂತಾದ ಪ್ರತಿಯೊಂದು ರಾಷ್ಟ್ರೀಯತ್ವದ ಹಾಗು ರಾಷ್ಟ್ರಪೋಷಕ ಗುಣಗಳಲ್ಲಿ ಮರಾಟರು ಇಂಗ್ಲಿಷರಿಗಿಂತ ಕಡಿಮೆ ಯೋಗ್ಯತೆಯುಳ್ಳವರಾಗಿದ್ದಿಲ್ಲ; ಪ್ರತಿಯೊಂದು ಬಾಬಿನಲ್ಲಿ ಇವರನ್ನು ನುಂಗಿ ನೀರು ಕುಡಿಯುವ ಹಾಗಿದ್ದರು. ಪೇಶ್ವೇ ಮಾಧವ ರಾಯನ ಕಾಲದ ವರೆಗೂ ಮನಸ್ಸಿನಲ್ಲಿ ಹೇಗೆಯೇ ಇರಲೊಲ್ಲದೇಕೆ, ಇಂಗ್ಲಿಷರು ಪ್ರತಿಯೊಂದು ಬಾಬಿನಲ್ಲೂ ಮರಾಟರಿಗೆ ತಲೆಬಾಗಿಯೇ ನಡೆಕೊಳ್ಳುತ್ತಿದ್ದರು; ಆದರೆ ಬರಬರುತ್ತ ನಮ್ಮವರ ಅಂತರಂಗ-ಬಹಿರಂಗಗಳಲ್ಲಿ ಕೊಂಚವೂ ಸುಧಾರಣೆಯಾಗಲಿಲ್ಲ. ಇವರು ದಿನದಿನಕ್ಕೆ ವ್ಯಕ್ತಿಗತ ಸ್ವಾರ್ಥಲೋಲುಪರಾಗಿ, ರಾಷ್ಟ್ರೀಯತ್ವವೆಂದರೇನು? ಅದನ್ನು ಹೇಗೆ ಸಂಪಾದಿಸಬೇಕು? ಮತ್ತು ಹೇಗೆ ಸಂವರ್ಧಿಸಬೇಕು? ಮುಂತಾದ್ದ ನ್ನು ದುರ್ಲಕ್ಷಿಸಿದರು; ಅಲ್ಲದೆ, ಪರಕೀಯರು ರಾಷ್ಟ್ರೀಯತ್ವಕ್ಕಾಗಿ ವ್ಯಕ್ತಿಗತ ಸ್ವಾರ್ಥ ವನ್ನು ಎಷ್ಟು ತುಚ್ಛೀಕರಿಸುವರೆಂಬದರ ಕಡೆಗೆ ಕಣ್ಣೆತ್ತಿ ಕೂಡ ನೋಡದಾದರು. ಆ ದುರ್ಗುಣ ಜಾಡ್ಯದಿಂದಲೇ ನಮ್ಮ ಮರಾಟಶಾಹಿಯು ಲಯಹೊಂದಿತೆಂಬದು ನಿರ್ವಿ ವಾದವು.

ಇಂಥ ಅತ್ಯುತ್ತಮ ಪುಸ್ತಕವನ್ನು ಕನ್ನಡಿಸಲಿಕ್ಕೆ ಅನುಜ್ಞೆಯನ್ನಿತ್ತ ಒಗೆ ಶ್ರೀಮಾನ್ ನ. ಚಿ. ಕೇಳಕರರಿಗೆ ಅತ್ಯಂತ ಋಣಿಯಾಗಿರುವೆನು.

ತಾ|| ೭—೧—೧೯೪೧ —ಅನುವಾದಕ.

# ಮರಾಟರೂ ಇಂಗ್ಲಿಷರೂ.

## ೧ನೆಯ ಪರಿಚ್ಛೇದ

### ಇಂಗ್ಲಿಷರ ಪೂರ್ವದ ಚರಿತ್ರ.

ಮರಾಟರಿಗೂ ಇಂಗ್ಲಿಷರಿಗೂ ಎಲ್ಲಕ್ಕೂ ಮೊದಲು ಎಲ್ಲಿ ಭೆಟ್ಟಿಯಾಯಿತೆಂಬುದನ್ನು ತಿಳಿಯುವದು ಸರ್ವಸಾಮಾನ್ಯರಿಗೆ ಅಶಕ್ಯವಾಗಿದ್ದಂತೆ, ಬಖ್ಖರುಗಳಿಂದ ಇತಿಹಾಸ ಸಂಶೋಧಕರಿಗೂ ಬಲು ಕಠಿಣವಾಗಿರುತ್ತದೆ. ಅವರೀರ್ವರಿಗೆ ಎಲ್ಲಕ್ಕೂ ಮೊದಲು ಭೆಟ್ಟಿಯಾದಾಗ ಇವನು ಇಂಗ್ಲಿಷನು, ಇವನು ಮರಾಟನು ಎಂಬುದು ಆ ಉಭಯತರೂ ಗುರ್ತಿಸಿಕೊಳ್ಳಲಿಕ್ಕೆ ಆಧಾರವಿರಲಿಕ್ಕಿಲ್ಲ. ಇಂಗ್ಲಿಷರು ಹಿಂದುಸ್ಥಾನದಲ್ಲಿ ಕಾಲಿಟ್ಟಾಗ ಇಲ್ಲಿ ಮುಸಲ್ಮಾನರು ಸತ್ತಾಧಾರಿಗಳಾಗಿದ್ದರು. ಅದರಿಂದ ಪರದೇಶದಿಂದ ಬಂದ ಇಂಗ್ಲಿಷರಿಗೆ ಆಗಿನ ಮುಸಲ್ಮಾನರನ್ನು ಗುರ್ತಿಸುವದೇ ಮುಖ್ಯ ಕೆಲಸವಾಗಿತ್ತು; ಸರ್ವಸಾಮಾನ್ಯರಾದ ಮರಾಟರ ಕಡೆಗೆ ಅವರ ಲಕ್ಷ್ಯವು ಹೋಗುತ್ತದೇತಕ್ಕೆ? ಸುರತ ಅಥವಾ ಮತ್ತಾವುದಾದರೊಂದು ಕೊಂಕಣ ಪ್ರಾಂತದೊಳಗಿನ ಬಂದರಕ್ಕೆ ಇಳಿದ ಇಂಗ್ಲಿಷನು ನೆಟ್ಟಗೆ ದಿಲ್ಲಿಯ ದಾರಿಯನ್ನು ಹಿಡಿಯುತ್ತಿದ್ದನು. ಯಾವನೊಬ್ಬ ಮರಾಟನು ಅವನನ್ನು ಕಂಡರೆ, ಅವನು ಇಂಗ್ಲಿಷನೇ ಎಂದು ಗೊತ್ತಾಗಲಿಕ್ಕೆ ಇವನಿಗೆ ಮಾರ್ಗವಿರಲಿಲ್ಲ, ಯಾಕಂದರೆ, ಆಗ ಈ ದೇಶದಲ್ಲಿ ಇಂಗ್ಲಿಷರ ಹೆಸರು ಕೂಡ ಕೇಳಿಗೊತ್ತಿರಲಿಲ್ಲ. ಆಗ ಡಚ್ಚ, ಪೋರ್ತುಗೀಜ ಜನಾಂಗದ ವ್ಯಾಪಾರಿಗಳು ಸರ್ವತ್ರ ಈ ದೇಶದಲ್ಲಿ ಸಂಚರಿಸುತ್ತಿದ್ದರು. ಅದರಿಂದ ಯಾವನೊಬ್ಬ [illegible]ವನನ್ನು ಕಂಡ ಕೂಡಲೆ ಅವನು ಡಚ್ಚ ಇದ್ದಾನೆ ಪೋರ್ತುಗೀಜನೆಂದೇ ಎಲ್ಲರೂ ತಿಳಿಯುತ್ತಿದ್ದರು. ಇದರಂತೆ ಯಾವನೊಬ್ಬ ಉಂಡಚಣ್ಣದ, ಉದ್ದನ್ನ ಅಂಗಿಯ, ವಿಚಿತ್ರ ಶಿರಸ್ತ್ರಾಣದ ಮರಾಠೀ ಮನುಷ್ಯನನ್ನು ಕಂಡು ಇವನು ಈ ದೇಶದ ಯಾವನೊಬ್ಬ ಅರಹುಚ್ಚ ಮನುಷ್ಯನಿರಬಹುದೆಂದು ಇಂಗ್ಲಿಷನೂ, ಇಂಗ್ಲಿಷರ ಕೋಚದ ಬುಟ್ಟಿಯಂತಹ ಟೊಪ್ಪಿಗೆ, ಇಷ್ಟುದ್ದನ್ನ ಕೋರಿನ ಪಟ್ಟಿ ಹಾಗು [illegible] ಬಿಳುಪಿನ ಮೈ ಇವುಗಳಿಂದ ಕೂಡಿದ ಇಂಗ್ಲಿಷನನ್ನು ಕಂಡು ಇದೊಂದು ವಿಚಿತ್ರವೇಷದ ಮಂಗವೆಂದು ಮರಾಟಿಗನೂ ತಿಳಿದಿದ್ದರೆ ಆಶ್ಚರ್ಯವೇನು? ಯಾವನೊಬ್ಬ ಇರಾಣಿಯು-ಚಾಕು-ಕತ್ತರಿಗಳನ್ನು ಮಾರುವವನು-ಯಾವುದೊಂದು ಹಳ್ಳಿಗೆ ಬಂದರೆ ಅವನ ಸುತ್ತಲೂ ಆ ಊರ ಚಿಕ್ಕ ದೊಡ್ಡವರು ಕಲೆತು ಅವನನ್ನು ಕುತೂಹಲಪೂರ್ವಕ[illegible]

ಯಿಂದ ಈಗಲೂ ಸ್ಪಷ್ಟವಾಗುತ್ತಿರುವಂತೆ, ಇಂಗ್ಲಿಷರನ್ನು ಕಂಡ ಮರಾಟರು ಆ ಕಾಲಕ್ಕೆ ನೆರೆಯುತ್ತಿದ್ದರು. ಮೊದಮೊದಲು ಇಲ್ಲಿಗೆ ಬರುತ್ತಿದ್ದ ಇಂಗ್ಲಿಷ ಪ್ರವಾಸಿಗರು ಈ ದೇಶದ ಜನರ ವರ್ಣನವನ್ನು ಬರೆದು ಇಟ್ಟಿರುತ್ತಾರೆ. ಅದರ ಮೇಲಿಂದ ಅವರ ಆಶ್ಚರ್ಯಭರಿತ ವೃತ್ತಿಯು ಚನ್ನಾಗಿ ವ್ಯಕ್ತವಾಗುತ್ತದೆ.

ಮರಾಟರಿಗೂ ಇಂಗ್ಲಿಷರಿಗೂ ಎಲ್ಲಕ್ಕೂ ಮೊದಲು ಭೆಟ್ಟಿಯಾದಾಗ "ನಾವು ಈ ಮರಾಟರ ರಾಜ್ಯವನ್ನು ನುಂಗಿ ನೀರು ಕುಡಿಯುವೆವೆಂದೂ, ಇವರು ನಮ್ಮ ಅಧೀನರಾಗುವರೆಂದೂ" ಯಾವ ಇಂಗ್ಲಿಷರೂ ತರ್ಕಿಸಿರಲಿಕ್ಕಿಲ್ಲ. ಅದರಂತೆ "ತಮ್ಮ ಬಳಿಯಲ್ಲಿ ಒಳ್ಳೇ ವಿನಯದಿಂದ ವರ್ತಿಸುವ, ಗಿರಾಕಿಗಳನ್ನು ಒಳ್ಳೇ ಆದರದಿಂದ ಬರ ಮಾಡಿಕೊಳ್ಳುವ ಈ ಇಂಗ್ಲಿಷ ವಣಿಕರು ಮುಂದೆ ತಮ್ಮ ರಾಜರಾಗುವರೆ"ಂಬ ಕಲ್ಪನೆಯು ಯಾವ ಮರಾಟಿಗನಿಗೂ ಉಂಟಾಗಿರಲಿಕ್ಕಿಲ್ಲ; ಆದರೆ ಜಗದೀಶನ ಲೀಲೆಯು ವಿಚಿತ್ರವಾದದ್ದು. ಆತನ ಲೀಲಾಮಾತ್ರದಿಂದ ಬಗೆಬಗೆಯ ಚಮತ್ಕಾರಗಳು ಲೋಕದಲ್ಲಿ ಉಂಟಾಗುತ್ತಿರುತ್ತವೆ. ಆರುಸಾವಿರ ಮೈಲುಗಳಾಚೆಯ ಇಂಗ್ಲಿಷರು ಹಿಂದುಸ್ತಾನಕ್ಕೆ ಜಲಮಾರ್ಗದಿಂದ ವ್ಯಾಪಾರಕ್ಕೆಂದು ಬರುವದೂ, ಅವರು ತಮ್ಮ ಉದ್ಯೋಗವನ್ನು ಬೆಳೆಸುತ್ತ ಕಡೆಗೆ ಇಲ್ಲಿಯ ಅಧಿರಾಜರಾಗಿ ಕೂಡ್ರುವದೂ ನಿಯತದ ಚಮತ್ಕಾರವಲ್ಲದೆ ಮತ್ತೇನಿರಬೇಕು? ಇಷ್ಟು ದೂರದ ಜನರು ಇಷ್ಟು ನಿಕಟದ ಸಂಬಂಧಿಕರಾದದ್ದು ಜಗತ್ತಿನಲ್ಲಿ ಇದೇ ಮೊದಲೆಂದು ಹೇಳಬಹುದು. ಇನ್ನು ಜಗತ್ತಿನೊಳಗಿನ ಯಾವುದೊಂದು ಜನಾಂಗವು ಒಂದೇ ದೇಶದಲ್ಲಿ ಕಡೆತನಕ ವಾಸಿಸಿರದೆಂಬದು ನಿಶ್ಚಿತವಾಗಿದ್ದರೂ, ಮಾನವ ವಂಶದ ಉಗಮಸ್ಥಾನವನ್ನು ಶೋಧಿಸುವ ದಿವ್ಯದೃಷ್ಟಿಯು ಲಭಿಸಿದರೆ, ಮನುಷ್ಯನ ಸ್ಥಾನಿಕ ದೇಶಾಭಿಮಾನವು ಕದಾಚಿತ್ ನಷ್ಟವಾಗಿ, ಅವನಿಗೆ ವಿಶ್ವಬಂಧುತ್ವ ದೃಷ್ಟಿಯು ಲಭಿಸುವದಾಗಿದ್ದರೂ, ಲೋಕಮಾನ್ಯ ಟಿಳಕರ ಉಪಪತ್ತಿಯಂತೆ ಆರ್ಯನ್ ಜನಾಂಗವು ಉತ್ತರಧ್ರುವದಿಂದ ಕೆಳಗೆ ಇಳಿಯುತ್ತ ಇಳಿಯುತ್ತ ಭೂಮಧ್ಯರೇಷೆಯ ವರೆಗೆ ಬಂದಿವೆಂದು ತಿಳಿದರೂ, ಖುದ್ದ ಹಿಂದುಸ್ತಾನದಲ್ಲಿ ಅವರು ಇಷ್ಟು ದೀರ್ಘಕಾಲದ ವರೆಗೆ ವಾಸಿಸಿರುವದರಿಂದ, ಅವರಿಗೆ ತಾವು ಪರದೇಶದಲ್ಲಿ ವಾಸಿಸಿರುತ್ತೇವೆಂಬ ಕಲ್ಪನೆಯೇ ಲೋಪವಾಗಿ ಬಿಟ್ಟಿರುತ್ತದೆ. ಇಂಗ್ಲಿಷರ ಆದ್ಯಪೂರ್ವಜರೂ, ಮರಾಟರ ಆದ್ಯಪೂರ್ವಜರೂ ಕದಾಚಿತ್ ಉತ್ತರಧ್ರುವದ ಬಳಿಯಲ್ಲಿ ಒತ್ತಟ್ಟಿಗೆ ಕೂಡಿ ಇದ್ದಿರಬಹುದು, ಆದರೆ ಮನುಷ್ಯನ ಸ್ಮರಣದ ಆಚೆಗಿನ ಹಾಗು ವಾಙ್ಮಯದ ಉಗಮದ ಪೂರ್ವದ ಸಂಗತಿಗಳನ್ನು ಲೆಕ್ಕದಲ್ಲಿ ಹಿಡಿಯುಬರುವಂತಿಲ್ಲ. ಈ ದೃಷ್ಟಿಯಿಂದ ನಾವು ಹಿಂದೂ ಆರ್ಯರು ಅನಾದಿಕಾಲದಿಂದ ಹಿಂದುಸ್ತಾನದ ರಹಿವಾಸಿಗಳೆಂದೂ, ಇಂಗ್ಲಿಷರು ಅನಾದಿಕಾಲದಿಂದ ಇಂಗ್ಲಂಡದ-ಯುರೋಪದ-ರಹಿವಾಸಿಗಳೆಂದೂ ತಿಳಿಯುವದು ನ್ಯಾಯವಾಗಿರುತ್ತದೆ. ಮರಾಟರೂ ಇಂಗ್ಲಿಷರೂ ಪೂರ್ವದ ಅಣ್ಣ-ತಮ್ಮಂದಿರೆಂದು ತಿಳಿದರೂ ಅವರಲ್ಲಿ ಪ್ರಸ್ತುತಕಾಲದಲ್ಲಿ ಉಂಟಾದ ನಿಕಟದ ಸಂಬಂಧವು ಮಾತ್ರ ಆಶ್ಚರ್ಯಕ್ಕಿಂತ ಆಶ್ಚರ್ಯವೆಂದು ಹೇಳದಿರಲಾರೆವು.

ಹದಿನೇಳನೇ ಶತಕದ ಪ್ರಾರಂಭದಲ್ಲಿ ಹಿಂದುಸ್ತಾನದಲ್ಲಿ ಒಮ್ಮೆಲೆ ಬೇರೆ ಬೇರೆ ಎರಡು, ರಾಜಕೀಯ ಸತ್ತೆಗಳು ಉದಯಹೊಂದಿದವು. ಅವುಗಳಲ್ಲೊಂದು ಇಂಗ್ಲಿಷರದು; ಅದು ಆಗ ಸಪಳ್ಳಿನವಾಗಿ ಪ್ರಾರಂಭವಾಗುವದರಲ್ಲಿತ್ತು. ಎರಡನೇದು ಮರಾಟರ ಸತ್ತೆಯು ಪುನರುಜ್ಜೀವನಗೊಳ್ಳುವುದರಲ್ಲಿತ್ತು. ಹದಿಮೂರನೇ ಶತಕಕ್ಕಿಂತ ಮೊದಲು ಹಿಂದುಸ್ತಾನದ ಎಲ್ಲ ಕಡೆಗಳಲ್ಲೂ ಹಿಂದೂ ಸತ್ತೆಯೇ ಪ್ರಚಲಿತವಾಗಿದ್ದಿತು; ಆದರೆ ಪ್ರಾಚೀನ ಕಾಲದಂತೆ ಇಡೀ ಹಿಂದುಸ್ತಾನವನ್ನು ಆಕ್ರಮಿಸಿದಂತಹ ಎಲ್ಲೆಡೆಯಲ್ಲಿಯೂ ತನ್ನದೇ ಸತ್ತೆಯನ್ನು ನಡೆಸುವಂತಹ ಒಬ್ಬನೇ ಅಧಿರಾಜನು-ಸಮ್ರಾಟನು ಆಗ ಇರಲಿಲ್ಲ. ಇಡೀ ಹಿಂದುಸ್ತಾನದಲ್ಲಿ ೧೦-೧೫ ಜನ ಪ್ರಮುಖ ಸ್ವತಂತ್ರ ರಾಜರೂ, ಅವರಿಂದ ಗೆದ್ದಂಥವರಲ್ಲದಿದ್ದರೂ ಅವರ ಆಶ್ರಯದಲ್ಲಿದ್ದಂಥ ನೂರಾರು ಜನ ಉಪರಾಜರೂ, ಮಾಂಡಲಿಕರೂ, ಪಾಳಯಗಾರರೂ, ನಾಯಕರೂ, ಸರದೇಶಮುಖರೂ, ವತನದಾರರೂ, ಪಾಟೀಲರೂ ಇದ್ದರು. ನಮ್ಮ ಹಿಂದುಸ್ತಾನದೊಳಗಿನ ಸ್ಥಾನಿಕ ಸ್ವಾತಂತ್ರ್ಯದ ಪರಂಪರೆಯು ಬಹು ಪ್ರಾಚೀನಕಾಲದ್ದಾಗಿರುವದು. ಪರಚಕ್ರ ಬಂದರೂ ಕೂಡ ವಿಜಯಿಯಾದ ರಾಜನು ಬಹಳವಾದರೆ ಕಪ್ಪ-ಕಾಣಿಕೆಗಳನ್ನು ಪಡೆದು ಹಿಂದಿರುಗಬೇಕು ಆಗಲೂ ವಿಜಯದ ಕೋಬ್ಬು ಸರ್ವತ್ರದಲ್ಲಿದ್ದರೂ ಪ್ರಸ್ತುತದಂತೆ ಸೋತ ರಾಷ್ಟ್ರವನ್ನು ಉದವಂತೆ ನಿರಂತರವಾಗಿ ಕಾಲ್ತೊಡಗಿಸಿಕೊಂಡು ಕೂಡ್ರುತ್ತಿರಲಿಲ್ಲ; ಅಥವಾ ಜಿಗಳಿಯಂತೆ ಸೋತ ರಾಷ್ಟ್ರದ ಸತ್ವರಕ್ತವನ್ನು ಹೊಟ್ಟೆಯುಬ್ಬುವವರೆಗೂ ಹೀರುತ್ತಿರಲಿಲ್ಲ. ಕೇವಲ ಕೀರ್ತಿಗಾಗಿಯೂ ಬಾಹುಬಲ ಪ್ರದರ್ಶನಕ್ಕಾಗಿಯೂ ಆಗಿನ ಪ್ರಬಲ ರಾಷ್ಟ್ರಗಳು ಪರರಾಷ್ಟ್ರಗಳ ಮೇಲೆ ದಿಗ್ವಿಜಯಕ್ಕೆ ಹೊರಡುತ್ತಿದ್ದವಲ್ಲದೆ, ಈಗಿನಂತೆ ಕೇವಲ ತಮ್ಮ ಹಾಗು ತಮ್ಮವರ ಉದರಂಭರಣಕ್ಕಾಗಿ ಹೊರಡುತ್ತಿರಲಿಲ್ಲ.

ಭಾರತ ಹಾಗು ರಾಮಾಯಣಗಳಲ್ಲಿ ದಿಗ್ವಿಜಯದ ಹಲವು ಪ್ರಸಂಗಗಳ ವರ್ಣನವಿರುತ್ತದೆ. ಆಗಿನ ದಿಗ್ವಿಜಯಿಗಳು ಪ್ರತಿಪಕ್ಷದವರು ಸೋತೆವೆಂದು ಸಂಜ್ಞೆ ದೋರಿದರೆ, ಇಲ್ಲವೆ ಕಪ್ಪ-ಕಾಣಿಕೆಗಳನ್ನು ಒಪ್ಪಿಸಿದರೆ ತೀರಿತು. ಅವರು ತಮ್ಮ ದೇಶಕ್ಕೆ ಮರಳಿ ಹೋಗುತ್ತಿದ್ದರು. ಯಾವನೊಬ್ಬ ರಾಜನು ಪರರಾಜ್ಯದಲ್ಲಿ ತನ್ನ ರಾಜಕೀಯ ಅಮಲನ್ನು ಕೂಡ್ರಿಸಿದರೂ ಅವನು ಅಲ್ಲಿ ಸ್ಥಾಯಿ ನೆಲೆಗೊಳ್ಳುತ್ತಿದ್ದಿಲ್ಲವಿಷ್ಟೇ ಅಲ್ಲ; ತನ್ನ ಸುಭೇದಾರ ಇಲ್ಲವೆ ಗವರ್ನರನನ್ನು ಅಲ್ಲಿ ನಿರಂತರವಾಗಿ ಇರಿಸುತ್ತಿದ್ದಿಲ್ಲ ಒಂದು ವೇಳೆ ಅಂಥ ಅಧಿಕಾರಿಯು ನೇಮಿಸಲ್ಪಟ್ಟರೂ ಸೋತದೇಶದ ಅಂತರ್ವ್ಯವಸ್ಥೆಯಲ್ಲಿ ಕೊಂಚವೂ ಕೈಹಾಕುತ್ತಿರಲಿಲ್ಲ. ಆ ಕಾಲದ ಜವಾಬುದಾರಿಯ ಅರ್ಥವೇ ಬೇರೆಯಾಗಿತ್ತು ತನ್ನ ಸಂಸ್ಕೃತಿಯು ಸ್ವಾಭಿಮಾನದ ಮೂಲಕ ಯಾವನೊಬ್ಬ ರಾಜನಿಗೆ ಶ್ರೇಷ್ಠವೆಂದು ಅನಿಸಿದರೂ ಅದನ್ನು ತನ್ನಿಂದ ಜಿತರಾಷ್ಟ್ರದವರು ಅನುಸರಿಸಲೇ ಬೇಕೆಂದೂ, ಒತ್ತಾಯದಿಂದಾದರೂ ಅದನ್ನು ಅವರಿಗೆ ಕಲಿಸಿಯೇ ತೀರುವ ಜವಾಬದಾರಿಯು ತನ್ನ ಮೇಲೆ ಇದೆಯೆಂದೂ ಅವನು ತಿಳಿಯುತ್ತಿರಲಿಲ್ಲ. ಅಶೋಕ ಮೊದ

ಲಾದ ಸಾಮ್ರಾಟರು ಎಷ್ಟೋ ವಿದೇಶಗಳನ್ನು ಗೆದ್ದಿದ್ದರು; ಆದರೆ ತಾವು ಗೆದ್ದಂಥ ರಾಷ್ಟ್ರದ ಅಂತರ್ವ್ಯವಸ್ಥೆಯಲ್ಲಿ ಅವರು ಎಳ್ಳಷ್ಟೂ ಕೈ ಸೇರಿಸಲಿಲ್ಲ. ಧಾರ್ಮಿಕ ನಡವಳಿಕೆ, ನ್ಯಾಯವಿಚಾರ, ಶಿಕ್ಷಣ, ಗ್ರಾಮವ್ಯವಸ್ಥೆ, ವ್ಯಾಪಾರೋದ್ಯೋಗ ಮುಂತಾದ ಬಾಬುಗಳಲ್ಲಿ ಸನಾತನ ಪದ್ಧತಿಯಂತೆ ನಡೆಯಲಿಕ್ಕೆ ಆಗಿನ ಜನರಿಗೆ ಸಂಪೂರ್ಣವಾಗಿ ಅಧಿಕಾರವಿದ್ದಿತು; ಮತ್ತು ರಾಜಾಧಿಕಾರಿ ಹಾಗು ಪ್ರಜೆಗಳು ಇವರ ಸಂಬಂಧವು ಕ್ವಚಿತ್ತಾಗಿಯೇ ಉಂಟಾಗುತ್ತಿತ್ತು. ಪ್ರತಿಯೊಂದು ಜಾತಿಯ ಜನರಲ್ಲಿ ಪಂಚಾಯತಿಯ ವ್ಯವಸ್ಥೆಯು ಆಗಿನ ಕಾಲದಲ್ಲಿದ್ದು, ರಾಜಾಜ್ಞೆಯ ಅಮಲಬಜಾವಣೆಯು ಆ ಪಂಚಾಯತಿಸಂಸ್ಥೆಗಳ ಮುಖಾಂತರವಾಗಿಯೇ ಆಗುತ್ತಿತ್ತು. ಸೋತ ರಾಷ್ಟ್ರವು ಕರಭಾರವನ್ನು ಕೊಡುತ್ತಿತ್ತು, ಆದರೆ ಆ ಬಗ್ಗೆ ಗ್ರಾಮಸಂಸ್ಥೆಗಳೇ ಜವಾಬುದಾರಗಳಾಗಿದ್ದು, ಗ್ರಾಮಸಂಸ್ಥೆಯ ಹೊರತು ಈ ಬಗ್ಗೆ ಬೇರೆ ಯೋಗ್ಯ ಅಧಿಕಾರಿಯೇ ಇಲ್ಲವೆಂದು ಆಗಿನ ಕಾಲದಲ್ಲಿ ರೂಢವಾಗಿತ್ತು.

ಮುಸಲ್ಮಾನರು ಹದಿಮೂರನೆಯ ಶತಕದ ಈಚೆಗೆ ಹಿಂದುಸ್ತಾನಕ್ಕೆ ಬಂದರು. ಅವರ ಆಗಮನದಿಂದ ಆ ನಮ್ಮ ಹಿಂದಿನ ವ್ಯವಸ್ಥೆಯಲ್ಲಿ ತುಸ ಹೆಚ್ಚು ಕಡಿಮೆಯಾಗಹತ್ತಿತು. ಆ ಜನರು ವಿದೇಶಿಗರಾಗಿದ್ದು, ಇವರು ಕೇವಲ ಕೀರ್ತಿಲೋಲುಪತೆಯಿಂದಲೇ ದಿಗ್ವಿಜಯ ಮಾಡುತ್ತಿರಲಿಲ್ಲ. ಪಶ್ಚಿಮದಂತೆ ಪೂರ್ವಭಾಗದಲ್ಲೂ ಅವರು ತಾವು ಹೋದ ಪ್ರದೇಶದಲ್ಲಿ ಸ್ಥಿರವಾಗಿಯೇ ನೆಲಿಸಿದರು; ಮತ್ತು ಸ್ವಂತದ ಹಾಗೂ ಸ್ವಕೀಯರ ಉದರಂಭರಣದ ಭಾರವನ್ನು ತಾವು ಗೆದ್ದ ರಾಷ್ಟ್ರದ ಮೇಲೆಯೇ ಹೇರಹತ್ತಿದರು. ಬರಿಯ ಕರಭಾರದಿಂದಲೇ ಅವರ ಸಮಾಧಾನವಾಗದೆ, ತಮ್ಮ ಚರಿತಾರ್ಥಕ್ಕೂ, ಸೊಬಗಿನ ಇರವಿಗೂ ಅವರಿಗೆ ಪ್ರತಿವರ್ಷ ನಿರಂತರ ವಸೂಲಿಯ ಅಗತ್ಯವೆನಿಸಿತು. ಅದರಿಂದ ಹಿಂದೂ ಪ್ರಜೆಗಳ ಮೇಲೆ ಕರಭಾರವು ದಿನೇ-ದಿನೇ ಹೆಚ್ಚಾಗತೊಡಗಿತು. ಮುಸಲ್ಮಾನ ರಾಜರು ತಾವು ಗೆದ್ದಂಥ ರಾಷ್ಟ್ರದ ಮೇಲೆ ತಮ್ಮ ಸುಭೇದಾರ ಇಲ್ಲವೆ ಗವರ್ನರರನ್ನು ನೇಮಿಸಹತ್ತಿದರು ಆದರೂ ಕೂಡ ಅವರು ನಮ್ಮ ಪುರಾತನ ಗ್ರಾಮಸಂಸ್ಥೆಗಳಲ್ಲಿ ತಮ್ಮ ಕೈಸೇರಿಸಲಿಲ್ಲ. ತಮ್ಮ ಧರ್ಮಪ್ರಸಾರದ ಕಡೆಗೆ ಅವರ ಲಕ್ಷ್ಯವಿದ್ದರೂ, ಅವರಲ್ಲಿ ಸ್ವಾರ್ಥಗಳ ಸಂಬಂಧವೇ ಹೆಚ್ಚಾಗಿ ಉಂಟಾಗುತ್ತಿತ್ತು. ಮುಸಲ್ಮಾನ ಜನರು ಪರದೇಶಗಳಿಂದ ಬಂದವರಾಗಿದ್ದರೂ ಅವರು ತಮ್ಮ ಮೂಲದೇಶದ ಸಂಬಂಧವನ್ನು ತೊರೆದು, ಈ ಹಿಂದುಸ್ತಾನ ದೇಶವೇ ತಮ್ಮದೆಂದು ತಿಳಿದು, ಅವರು ಇಲ್ಲಿಯೇ ಇರಹತ್ತಿದರು. ಅವರು ಇಲ್ಲಿ ಕಾಯಮವಾಗಿ ಇರಹತ್ತಿದ ಮೂಲಕ, ತಮ್ಮ ಮನೆ-ಮಾರುಗಳನ್ನು ಇಲ್ಲಿಯೇ ಸೃಷ್ಟಿಸಿದರು. ವತನ-ಜಹಗೀರುಗಳನ್ನು ಇಲ್ಲಿಯೇ ಸಂಪಾದಿಸಿದರು, ವ್ಯಾಪಾರೋದ್ಯೋಗಗಳನ್ನು ಇಲ್ಲಿಯೇ ನಡೆಸಿದರು, ಮಸೀದಿ-ಮಕಾನುಗಳನ್ನು ಇಲ್ಲಿಯೇ ಕಟ್ಟಿಸಿದರು, ದುಡ್ಡು-ದುಗ್ಗಾಣಿಗಳನ್ನು ಇಲ್ಲಿಯೇ ವ್ಯಯ ಮಾಡಿದರು. ತಾತ್ಪರ್ಯ, ಈ ಹಿಂದಸ್ತಾನವೇ ತಮ್ಮ ಸ್ವದೇಶವೆಂದು ತಿಳಿದು, ಅವರು ಇಲ್ಲಿಯ ಸ್ಥಾನಾಭಿಮಾನವನ್ನು ವಹಿಸಿದರು!

ಇದರ ಹೊರತು ಇನ್ನೊಂದು ವಿಶೇಷವೇನಂದರೆ, ಮುಸಲ್ಮಾನ ರಾಜ್ಯಕರ್ತರು ತಮ್ಮಿಂದ ಗೆದ್ದವರೆಂದು ಹಿಂದೂ ಜನರನ್ನು ಅಧಿಕಾರ ಭ್ರಷ್ಟಗೊಳಿಸಲಿಲ್ಲ. ಊರ ಶಾನುಭೋಗ, ತಾಲೂಕಿನ ಅಮಲ್ದಾರ, ಪ್ರಾಂತದ ಸುಭೇದಾರ ಹಾಗು ದಂಡಿನೊಳಗಿನ ಸರದಾರ ಇವೆಲ ಅಧಿಕಾರ ಸ್ಥಳಗಳು ಮುಸಲ್ಮಾನೀ ರಾಜ್ಯದಲ್ಲಿ ನಮ್ಮ ಹಿಂದುಗಳಿಗೆ ಸಹಜವಾಗಿ ದೊರಕುತ್ತಿದ್ದವು. ಅದರಲ್ಲಿಯೇ ಯಾವನೊಬ್ಬ ಹಿಂದುವು ಮುಸಲ್ಮಾನನಾದರಂತೂ ತೀರಿತು; ವಿಲಾಯತಿ ಮುಸಲ್ಮಾನ, ಹಿಂದೂ(ದೇಶೀ)ಮುಸಲ್ಮಾನ ಈ ಬಗೆಯ ಭೇದಭಾವವು ಸ್ವತಃ ಬಾದಶಹನಲ್ಲಿ ಕೂಡ ಹುಟ್ಟುತ್ತಿರಲಿಲ್ಲ; ಅಲ್ಲದೆ ಮುಸಲ್ಮಾನ ಜನರು ಹೆಚ್ಚಾಗಿ ಹಿಂದೂ ಸ್ತ್ರೀಯರನ್ನೇ ಲಗ್ನವಾಗುತ್ತಿದ್ದದರಿಂದ ಹಿಂದೂ ಜನರಿಗೆ ಬಾದಶಾಹ ಜಾದ(ಬಾದಶಹನ ಔರಸ ಮಗ)ನವರೆಗಿನ ಅಧಿಕಾರ ಲಭಿಸುವದು ಶಕ್ಯವಾಗಿತ್ತು. ಅಹಮ್ಮದನಗರದ ಮೊದಲನೇ ಬಾದಶಹನೂ, ವರ್ಹಾಡದೊಳಗಿನ ಇಮಾದಶಾಹಿಯ ಮೊದಲನೇ ಬಾದಶಹನೂ ಹುಟ್ಟಾ ಬ್ರಾಹ್ಮಣ ಜಾತಿಯವರಾಗಿದ್ದರೆಂದು ಹೇಳುತ್ತಾರೆ. ಮುಸಲ್ಮಾನರು ಸ್ವಭಾವತಃ ಆಲಸ್ಯಪ್ರಿಯರೂ, ದುಂದುಗಾರರೂ ಡೌಲಿನವರೂ ಆದುದರಿಂದ, ಅವರು ತಾವಾಗಿ ರಾಜ್ಯಕಾರಭಾರದ ಕಡೆಗೆ ಲಕ್ಷ್ಯಗೊಡುತ್ತಲೇ ಇರಲಿಲ್ಲ. ಅಧಿಕಾರಪರತ್ವದಿಂದ ಪ್ರಾಪ್ತವಾದ ರಾಜ್ಯಕಾರಭಾರದ ಕೆಲಸವನ್ನು ಕೂಡ ಅವರು ತಾವು ಸ್ವತಃ ನಿರ್ವಹಿಸಲಾರದೆ, ಪರಕೀಯರ (ಹಿಂದುಗಳ) ಮುಖಾಂತರ ನಡೆಸುತ್ತಿದರು. ಈ ಪರಿಸ್ಥಿತಿಯ ಮೂಲಕ "ತಾವು ಸ್ವದೇಶಕ್ಕೆ ಇನ್ನೂ ಎರವಾಗಿಲ್ಲ"ವೆಂದು ಹಿಂದುಗಳಿಗೆ ಅನಿಸುತ್ತಿತ್ತು. ಇಷ್ಟೇ ಅಲ್ಲ; ಮುಸಲ್ಮಾನೀ ರಾಜ್ಯವು ತಮ್ಮ ಆಧಾರದಿಂದಲೇ ನಡೆದಿದೆಯೆಂದು ಅವರಿಗೆ ಅನಿಸುತ್ತಿತ್ತು. ಆದರಿಂದ ಬಾದಶಹನ ಚಾಕರಿ ಮಾಡುವದೊಂದು ಬಹುಮಾನ ದ್ಯೋತಕವೆಂದು ಅವರು ಭಾವಿಸುತ್ತಿದರು! ಹಿಂದುಸ್ತಾನದೊಳಗಿನ ಯಾವ ಯಾವ ಪ್ರಾಂತದಲ್ಲಿಯ ಅಭಿಜಾತವರ್ಗವು ಮುಂದು ಬೀಳಬೇಕೆಂದು ಯತ್ನಿಸುತ್ತಿದ್ದಿತೋ, ಅಲ್ಲಲ್ಲಿ ಅದಕ್ಕೆ ಹಳೇ ರಾಜಕೀಯ ಮಾನ್ಯತೆಯು ಸ್ಥಿರವಾಗಿದ್ದದ್ದು ಕಂಡು ಬರುತ್ತಿದ್ದು, ಹೊಸ ರಾಜಕೀಯ ಸತ್ತೆಯನ್ನು ಸಂಪಾದಿಸಲಿಕ್ಕೆ ಅವಕಾಶವಿದ್ದಿತು. ಮುಸಲ್ಮಾನೀ ರಾಜ್ಯದಲ್ಲಿ ಹಳೇ ವತನ-ವಹಿವಾಟಿಗಳು ಸ್ಥಿರವಾಗಿ ಉಳಿದು, ಹೊಸ ವತನ-ಜಹಗೀರುಗಳು ದೊರೆತವು. ಮುಸಲ್ಮಾನರು ಉತ್ತರ ಹಿಂದುಸ್ತಾನದಲ್ಲಿ ಉದೇಪುರದ ಹೊರತು ಉಳಿದ ಎಲ್ಲ ರಾಜ-ಉಪರಾಜರನ್ನು ಗೆದ್ದ ಬಳಿಕ, ಅವರೊಡನೆ ಒಡಂಬಡಿಕೆ ಮಾಡಿ ಸ್ನೇಹಾಂಕಿತರನ್ನಾಗಿ ಮಾಡಿಕೊಂಡರು. ೧೬ನೇ ಶತಕದಲ್ಲಿ ದಕ್ಷಿಣದಲ್ಲಿ ಮುಸಲ್ಮಾನೀ ಬಾದಶಹರ ಅಧಿಪತ್ಯದಲ್ಲಿ ನಡೆಯದ ಹಾಗು ಅವರ ಸಾರ್ವಭೌಮತ್ವವನ್ನು ಒಡಂಬಡದ ಅರಸರೆಂದರೆ, ಒಬ್ಬ ವಿಜಯನಗರದವರೇ ಹೊರತು ಅನ್ಯರಾರೂ ಇರಲಿಲ್ಲ. ದಕ್ಷಿಣ ಸಮುದ್ರದ ತೀರದಲ್ಲಿ ಮಾತ್ರ ಮುಸಲ್ಮಾನೀ ಬಾದಶಹರ ಅಮಲು ಕಡೆಯವರೆಗೂ ನೆಲಿಸದ್ದರಿಂದ, ಅಲ್ಲಿ ಅನಾದಿಪರಂಪರೆಯು ವಿಚ್ಛಿನ್ನವಾಗದಂತಹ ಸಣ್ಣಪುಟ್ಟ ಹಿಂದೂ ರಾಜರ-ದ್ರಾವಿಡರ-ರಾಜ್ಯಗಳು ಸ್ವತಂತ್ರವಾಗಿ ಉಳಿದಿದ್ದವು.

ಹದಿಮೂರರಿಂದ ಹದಿನಾರನೇ ಶತಕದ ಕೊನೆಯ ವರೆಗೆ ಮುಸಲ್ಮಾನರ ಅಮಲು ನಮ್ಮ ಹಿಂದುಸ್ಥಾನದಲ್ಲಿ ಅಬಾಧಿತವಾಗಿ ನಡೆಯಿತು. ಆಗ ಉತ್ತರ ಹಿಂದುಸ್ಥಾನ ದಲ್ಲಿ ಅವರ ವರ್ಚಸ್ಸು ಹೆಚ್ಚಾಗಿದ್ದಿತು; ದಕ್ಷಿಣದಲ್ಲಿ ಮಾತ್ರ ಶೀರ ಕಡಿಮೆಯಾಗಿತ್ತು. ಉತ್ತರಕ್ಕಿಂತಲೂ ಮೊದಲು ದಕ್ಷಿಣದಲ್ಲಿಯೇ ಸ್ವತಂತ್ರ ಮುಸಲ್ಮಾನೀ ರಾಜ್ಯಗಳು ಸ್ಥಾಪಿಸಲ್ಪಟ್ಟಿದ್ದವು. ದಿಲ್ಲೀ ಬಾದಶಹನ ಅಮಲಿನಲ್ಲಿ ಅವು ಹತಾಶವಾಗಿ ಹೋದವು; ಆದರೆ ದಕ್ಷಿಣದೊಳಗಿನ ಆ ಮುಸಲ್ಮಾನೀ ರಾಜ್ಯಗಳು ಸಣ್ಣ-ಪುಟ್ಟವೂ ಭಿನ್ನ ಭಿನ್ನ ಹಂಗಡದವೂ ಇದ್ದದರಿಂದ, ದಿಲ್ಲೀ ಬಾದಶಹನಿಗಿಂತಲೂ ಅವು ತಮ್ಮ ರಾಜ್ಯದೊಳಗಿನ ಹಿಂದೂ ಅಧಿಕಾರಿಗಳಿಗೂ, ಹಿಂದೂ ಪ್ರಜೆಗಳಿಗೂ ಹೆಚ್ಚಾಗಿ ಬಾಗಿ ನಡೆಯಬೇಕಾಗುತ್ತಿತ್ತು. ದಕ್ಷಿಣದೊಳಗಿನ ಮುಸಲ್ಮಾನೀ ರಾಜರ ಕೈಕೆಳಗಿನ ಹಿಂದೂ ಅಧಿಕಾರಿಗಳೇ ಆ ರಾಜ್ಯಗಳ ನಿಜವಾದ ಆಧಾರಸ್ತಂಭಗಳಾಗಿದ್ದರು. ದಿಲ್ಲಿಯ ಆಚೆಗೆ ಸಮೀಪದಲ್ಲಿಯೇ ಬೇರೆ ಸ್ವತಂತ್ರ ಮುಸಲ್ಮಾನೀ ರಾಜ್ಯಗಳ ಗಡಿಯು ಪ್ರಾರಂಭವಾಗುತ್ತಿದ್ದು, ಅದು ನೆಟ್ಟಗೆ ಕಾನಸ್ಟಾಂಟಿನೋಪಲದ ವರೆಗೆ ಹಬ್ಬಿರುತ್ತದೆ. ಅಂದರೆ ಹಿಂದುಸ್ಥಾನದೊಳಗಿನ ಮುಸಲ್ಮಾನೀ ರಾಜ್ಯವು ಏಸಿಯಾಖಂಡದೊಳಗಿನ ಮಧ್ಯವರ್ತೀ ಮುಸಲ್ಮಾನೀ ಸಾಮ್ರಾಜ್ಯ ವೃಕ್ಷದ ಒಂದು ಕೊಂಬೆಯೆಂದು ಅನ್ನಬಹುದಾಗಿತ್ತು. ಅದರಿಂದ ದಿಲ್ಲಿದರ್ಬಾರಕ್ಕೆ ಅಚ್ಚ ಮುಸಲ್ಮಾನೀ ವಂಶದ ಬೀಜಗಳು ಆಗಾಗ್ಗೆ ಸಾಕಷ್ಟು ಸಹಜವಾಗಿ ದೊರೆಯುತ್ತಿದ್ದವು. ಮುಸಲ್ಮಾನ ಜನರ ದೀರ್ಘಕಾಲದ ವಸತಿಯಿಂದಲೂ ಧರ್ಮಪ್ರಸಾರದಿಂದಲೂ ದಿಲ್ಲಿಯ ಸುತ್ತುಮುತ್ತಲಿನಲ್ಲಿ ಮುಸಲ್ಮಾನರ ಸಂಖ್ಯೆಯು ಹೆಚ್ಚಾಗಿ ಬೆಳೆದಿದ್ದಿತು; ಆದರೆ ದಕ್ಷಿಣದ ಕಡೆಗೆ ಸಾಗಿದ ಹಾಗೆ ಈ ಎರಡೂ ಬಾಬುಗಳಲ್ಲಿ ಕೊರತೆಯುಂಟಾಗುತ್ತಿತ್ತು; ಯಾಕಂದರೆ, ದಕ್ಷಿಣದ ಮುಸಲ್ಮಾನೀ ರಾಜ್ಯಗಳು ಬಹು ದೂರ; ಮೇಲಾಗಿ ಅವು "ಬಾಮನಿ" ಅಂದರೆ ಪ್ರಾರಂಭದಲ್ಲಿಯೇ ಬ್ರಾಹ್ಮಣರ ಕೃಪೆಗೆ ಪಾತ್ರವಾದಂಥವುಗಳು. ಅದರಿಂದ ಅವುಗಳ ಒಲವು ಸ್ವಾಭಾವಿಕವಾಗಿಯೇ ಹಿಂದುಗಳ ಕಡೆಗೆ ಹೆಚ್ಚು. ಜುಫೀರಖಾನನನ್ನು ಒಬ್ಬ ಬ್ರಾಹ್ಮಣನು ಹೇಗೆ ತನ್ನ ದಾಸ್ಯದಿಂದ ಮುಕ್ತಮಾಡಿದ್ದನೋ, ಹಾಗೆಯೇ ದಿಲ್ಲೀ ಬಾದಶಹನ ವಿರುದ್ಧವಾಗಿ ಬಂಡನ್ನೆಬ್ಬಿಸಲಿಕ್ಕೂ ತನ್ನ ರಾಜ್ಯವನ್ನು ಸ್ವತಂತ್ರವನ್ನಾಗಿ ಕಾಪಾಡಿಕೊಳ್ಳಲಿಕ್ಕೂ ಹಿಂದುಗಳೇ ಆ ಖಾನನಿಗೆ ನೆರವಾಗಿದ್ದರು. ದಕ್ಷಿಣದಲ್ಲಿ ಮುಸಲ್ಮಾನರ ವಸತಿಯು ಅತ್ಯಲ್ಪವಾಗಿದ್ದಿತು. ಹಿಂದುಗಳು ಮುಸಲ್ಮಾನರ ಸಂಸ್ಕೃತಿಯನ್ನು ಎತ್ತಿ ಹಿಡಿಯುವದಕ್ಕಿಂತ ಮುಸಲ್ಮಾನರೇ ಹಿಂದುಗಳ ಸಂಸ್ಕೃತಿಯನ್ನು ಹೆಚ್ಚಾಗಿ ಅನುಸರಿಸಹತ್ತಿದ್ದರು. ತಾತ್ಪರ್ಯ—ಯಾವ ಕಡೆಯಿಂದ ನೋಡಿದರೂ ಇಲ್ಲಿ ಮುಸಲ್ಮಾನೀ ಸತ್ತೆಯು ಪ್ರಾರಂಭವಾಗಿದ್ದರೂ, ಹಿಂದುಗಳಿಗೆ ತಮ್ಮ ವರ್ಚಸ್ಸವು ಕಡಿಮೆಯಾಯಿತೆಂದು ತಿಳಕೊಳ್ಳಲಿಕ್ಕೆ ಕಾರಣವಿರಲಿಲ್ಲ.

ದಕ್ಷಿಣದೊಳಗಿನ ಮುಸಲ್ಮಾನೀ ರಾಜ್ಯಗಳು ಮರಾಟರಿಗೆ ವಿಶೇಷವಾಗಿ ತ್ರಾಸದಾಯಕಗಳೆನಿಸಲಿಲ್ಲ. ಇದಕ್ಕೆ ಕಾರಣವೇನೆಂದರೆ, ಬಾದಶಹನು ಮುಸಲ್ಮಾನ ಜಾತಿಯವ

ನಾಗಿದ್ದರೂ ಬಹುಸಂಖ್ಯೆಗೆ ಎಲ್ಲ ಮುಲಕೀ ಹಾಗು ದಂಡಿನ ಕಾರಭಾರಗಳು ಹಿಂದುಗಳ ಕೈಯಲ್ಲಿಯೇ ಇರುತ್ತಿದ್ದವು. ಹಿಂದುಗಳ ಧರ್ಮಚ್ಛಲನವು ಸಹಸಾ ಆಗುತ್ತಿರಲಿಲ್ಲ. ಫಕೀರ--ಮುಲ್ಲಾಗಳಂತೆ ಬ್ರಾಹ್ಮಣ--ಲಿಂಗಾಯತರಿಗೂ ವಂಶಪರಂಪರಾಗತವಾದ ದೇಣಿಗೆಗಳು ಧರ್ಮಾರ್ಥವಾಗಿ ಕೊಡಲ್ಪಟ್ಟಿದ್ದವು. ವಿಜಾಪುರದ ಬಾದಶಹನೊಬ್ಬನು ಶ್ರೀ ದತ್ತಾತ್ರೇಯರ ಭಕ್ತನಿದ್ದದ್ದು ಸುಪ್ರಸಿದ್ಧವೇ ಇರುತ್ತದೆ. ಕೋಟೆ ಕೊತ್ತಳಗಳು ಮುಸಲ್ಮಾನ ಅಧಿಕಾರಗಳ ಹೆಸರಿನಿಂದ ಸರಕಾರೀ ಕಾಗದ-ಪತ್ರಗಳಲ್ಲಿ ದಾಖಲೆಯಾದರೂ, ಅವುಗಳ ನಿಜವಾದ ಅಧಿಕಾರವು ಆ ಮುಸಲ್ಮಾನೀ ಅಧಿಕಾರಿಗಳ ಸಹಾಯಕರಾದ ಹಿಂದುಗಳ ಕೈಯಲ್ಲಿಯೇ ಇರುತ್ತಿತ್ತು. ಸರದಾರ ಮುರಾರಿರಾಯನು ಗೋವಳಕೊಂಡದ ಬಾದಶಹನ ದಿವಾಣನಾಗಿದ್ದನು. ಅದರಂತೆ ಅಲ್ಲಿಯ ಕೊನೆಯ ಬಾದಶಹನಲ್ಲಿ ಮದನ ಪಂಡಿತನೆಂಬ ಹೆಸರಿನ ಬ್ರಾಹ್ಮಣನ ವರ್ಚಸ್ಸು ಅತಿಶಯವಾಗಿದ್ದುದರಿಂದ, ಆ ಬಾದಶಹನ ಹಾಗು ಶಿವಾಜಿಯ ನಡುವಿನ ಸ್ನೇಹವು ಅಬಾಧಿತವಾಗಿ ಉಳಿದಿತ್ತು. ದಾಮೋದರಸು ಕಾಳೆ ಎಂಬವನು ಮಲಿಕ ಅಂಬರನಂತೆ ಪ್ರಸಿದ್ಧನಾಗಿದ್ದು, ಅವನು ಬಾದಶಹನ ಮುಲುಖಮೊಳಗಿನ ಜಮೀನ ಬಾಬಿನ ವ್ಯವಸ್ಥೆಯನ್ನು ಬಹು ಚನ್ನಾಗಿ ಮಾಡಿದ್ದನು. ಮೊಗಲರ ದರ್ಬಾರಿಗೆ ಹೋಗುವ ಅಹಮ್ಮದನಗರದ ಕಡೆಯ ವಕೀಲರು ಬಹುಶಃ ಬ್ರಾಹ್ಮಣ ಜಾತಿಯವರೇ ಆಗಿರುತ್ತಿದ್ದರು. ಬುರ್‍ಹಾಣಶಹನ ಒಬ್ಬ ಮಂತ್ರಿಯು ಬ್ರಾಹ್ಮಣನೇ ಆಗಿದ್ದನು. ವಿಜಾಪುರದ ದರ್ಬಾರದಲ್ಲಿ ಏಸೂ ಪಂಡಿತನೆಂಬ ಹೆಸರಿನ ಬ್ರಾಹ್ಮಣನು 'ಮುಸ್ತಾಫೆ'ಯ ಕೆಲಸವನ್ನು ನೋಡುತ್ತಿದ್ದನು. ಗೋವಳಕೊಂಡ ದರ್ಬಾರದ ಆಕಣ್ಣ-ಮಾದಣ್ಣ ಎಂಬಿಬ್ಬ ಮುತ್ಸದ್ದಿಗಳು ಸುಪ್ರಸಿದ್ಧರಾಗಿರುತ್ತಾರೆ. ಮರಾಟರ ಸರದಾರರಿಗೆ ದೊಡ್ಡ ದೊಡ್ಡ ಮನಸಬದಾರಿಗಳು ಕೊಡಲ್ಪಡುತ್ತಿದ್ದವು. ಒಬ್ಬ ಬ್ರಾಹ್ಮಣೀ ಬಾದಶಹನು ೨೦೦ಜನ ಮರಾಠೀ ಶಿಲೇದಾರರನ್ನು ತನ್ನ ಅಂಗಸಂರಕ್ಷಕರನ್ನಾಗಿ ನೇಮಿಸಿಕೊಂಡಿದ್ದನು! ವಾಘೋಜಿ ಜಾಧವರಾವ ನಾಯಿಕನೆಂಬ ಮರಾಠೀ ಸರದಾರನು ಬಾದಶಹರನ್ನು ಪಟ್ಟಕ್ಕೆ ಕೂಡ್ರಿಸುವ ಹಾಗು ಪಟ್ಟದಿಂದ ತಳ್ಳುವ ಅನೇಕ ಆಟಗಳನ್ನು ಆಡಿದನು; ಹಾಗೂ ಅದರಿಂದ ಅವನಿಗೆ ಬಾಮನೀ ಬಾದಶಾಹಿಯೊಳಗಿನ "ಕಿಂಗ ಮೇಕರ" ನೆನ್ನಲಿಕ್ಕೆ ಬಾಧಕವಿರುವದಿಲ್ಲ. ಮುರಾರಿರಾವ ಜಾಧವನು ಒಮ್ಮೆ ವಿಜಾಪುರ ದರ್ಬಾರದ ಮರ್ಯಾದೆಯನ್ನು ಚೆನ್ನಾಗಿ ಕಾಯ್ದನು. ಶಹಾಜಿಯು ವಿಜಾಪುರ-ಅಹಮ್ಮದನಗರ ದರ್ಬಾರಗಳಲ್ಲಿ ಅಖಂಡೈಶ್ವರ್ಯವನ್ನು ಭೋಗಿಸಿದನು ಅಹಮ್ಮದನಗರದ ಬಾದಶಹನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಶಹಾಜಿಯು ತಾನೇ ಹಲವು ವರ್ಷಗಳ ವರೆಗೆ ಬಾದಶಾಹೀ ಕಾರಭಾರವನ್ನು ನಡೆಸಿದನು. ಶಿರ್ಕೆ, ಜಾಧವ, ನಿಂಬಾಳಕರ, ಘಾಟಗೆ, ಮೋರೆ, ಮಹಾಡೀಕ, ಗುಜರ, ಮೋಹಿತೆ ಮುಂತಾದ ಸರದಾರರು ಬಲಾಢ್ಯರಾಗಿದ್ದು, ಇವರ ಅಧೀನದಲ್ಲಿ ಹತ್ತಿಪ್ಪತ್ತು ಸಾವಿರ ದಂಡು ಸದಾ ಇರುತ್ತಿತ್ತು.

ಆದರೆ ಬಾಮನೀ-ಮುಸಲ್ಮಾನೀ ಬಾದಶಹರೊಡನೆ ಇಷ್ಟು ಸ್ನೇಹಭಾವದಿಂದ

ವರ್ತಿಸುವ ಮರಾಟರು, ಮೊಗಲರು ದಕ್ಷಿಣಕ್ಕೆ ದಾಳಿಯನಿಕ್ಕ ಹತ್ತುತ್ತಲೆ ಉಗ್ರ ಸ್ವರೂಪವನ್ನು ಧಾರಣಮಾಡಿದರು. ಮರಾಟರು ಮೊಗಲರೊಡನೆ ಸರಾಸರಿ ೨೦೦ ವರ್ಷಗಳವರೆಗೆ ಏಕೋಪ್ರಕಾರವಾಗಿ ಕಾದಿದರು; ಆದರೂ ಅವರು ತಮ್ಮ ಸತ್ತೆಯನ್ನು ಸರ್ವಸ್ವೀಯಾಗಿ ಅವರ ಸ್ವಾಧೀನಪಡಿಸಲಿಲ್ಲ. ಮೊಗಲರ ದಾಳಿಯು ಮೊದಲು ೨೦೦ ವರ್ಷಗಳ ಪೂರ್ವದಲ್ಲಿಯೇ ಸಿದ್ಧವಾಗುತ್ತಲಿದ್ದ ಕ್ಷಾತ್ರಕ್ಷೇತ್ರದಲ್ಲಿಯೂ ಕರ್ತೃತ್ವಭೂಮಿಯಲ್ಲಿಯೂ ಅಂಕುರಿಸಿದ ಸ್ವಾತಂತ್ರ್ಯದ ಬೀಜಕ್ಕೆ ಮೊಗಲರ ಧರ್ಮಚ್ಛಲನದಿಂದಲೂ ಸ್ವಾತಂತ್ರ್ಯನಾಶದ ಪ್ರಯತ್ನದ ಕಾವಿನಿಂದಲೂ ಮೊಳಿಕೆಯೊಡೆದು, ಅದು ವೃಕ್ಷವಾಯಿತು, ಮತ್ತು ಅದಕ್ಕೆ ಶ್ರೀಶಿವಾಜಿಮಹಾರಾಜರ ಕಾಲದಲ್ಲಿ ಸ್ವತಂತ್ರವಾದ ಹಿಂದುಪದಪಾತಶಾಹಿಯು ಸುಮಧುರ ಹಾಗು ಸ್ಪೃಹಣೀಯವಾದ ಫಲಗಳು ಉಂಟಾದವು; ಆದರೆ ದೇಶದಲ್ಲಿ ಮುಸಲ್ಮಾನೀ ಅಮಲು ಅಷ್ಟು ಪ್ರಖರತೆಗೆ ಏರಿದ್ದರೂ ಹಿಂದುಗಳಲ್ಲಿಯ ಒಂದು ವರ್ಗದವರು ಅದಕ್ಕೆ ಎಂದೂ ತಲೆ ತೆಗ್ಗಿಸದವರಾಗಿದ್ದರು. ಮುಸಲ್ಮಾನರ ಆಳಿಕೆಯಲ್ಲಿ ಅವರು ಸಂಪೂರ್ಣ ಸ್ವತಂತ್ರರಾಗಿರದಿದ್ದರೂ ಸ್ವಾತಂತ್ರ್ಯಪ್ರಿಯರಾಗಿದ್ದರು. ಹದಿನಾಲ್ಕನೆಯ ಶತಕದೊಳಗೆ ಮಹಾರಾಷ್ಟ್ರದಲ್ಲಿ ಮುಸಲ್ಮಾನರ ಸತ್ತೆಯ ದೊಡ್ಡದೊಂದು ತೆರೆಯು ಬರಲು, ಅದಕ್ಕೆ ಮರಾಟರು ತುಸ ತಲೆತೆಗ್ಗಿಸಿದರೂ, ಸಮುದ್ರದಲ್ಲಿ ಮುಳುಗುವ ನಿಷ್ಣಾತ ನೀರು ಮುಳುಗುವವನನಂತೆ ಅವರು ಅಲ್ಪಾವಕಾಶದಲ್ಲಿಯೇ ಆ ತೆರೆಯ ಮೇಲೇರಿ ಹೋಗಿ, ಅದರ ನೀರನ್ನು ಬಾಯಲ್ಲಿ ತಕ್ಕೊಂಡು, ಆ ಯವನ ಸತ್ತಾರೂಪೀ ತೆರೆಯ ಮೇಲೆಯೇ ಉಗುಳಲಾರಂಭಿಸಿದರು! ಹಿಂದುಸ್ತಾನದಲ್ಲಿ ಮುಸಲ್ಮಾನರಿಂದ ಎಂದೂ ಸಂಪೂರ್ಣವಾಗಿ ಸೋಲಿಸಲ್ಪಡದಂತಹ ಜನಾಂಗವೆಂದರೆ, ಒಬ್ಬ ಮರಾಟರೇ ಎಂದು ನಿರ್ಬಾಧವಾಗಿ ಹೇಳಬಹುದು! ಶೂರ ವೀರಾಗ್ರಣಿಗಳಾದ ರಜಪೂತರೂ ಕಡೆಗೆ ಮೊಗಲರಿಗೆ ಶರಣಾಗತರಾದರು; ಆದರೆ ಮರಾಟರು ಮಾತ್ರ ಹಾಗೆ ಎಂದೂ ಆಗಲಿಲ್ಲ!

ಮಹಾರಾಷ್ಟ್ರದ ಭೂಮಿಯೇ ಕದಾಚಿತ್ ಸ್ವಾತಂತ್ರ್ಯಬುದ್ಧಿಯು ಬೆಳೆಗೆ ತಕ್ಕದ್ದಾಗಿರಬಹುದು; ಇಲ್ಲವೆ ಮಹಾರಾಷ್ಟ್ರದೊಳಗಿನ ಹೊಳೆಗಳ ನೀರೇ ಹಾಗಿರಬಹುದೆಂದು ಭಾಷಾಲಂಕಾರ ದೃಷ್ಟಿಯಿಂದ ಕದಾಚಿತ್ ಒಪ್ಪಬಹುದಾಗಿದೆ; ಆದರೆ ಮಹಾರಾಷ್ಟ್ರದ ಭೂರಚನೆ, ಅಂದರೆ ಅದರ ಸುತ್ತುಮುತ್ತಲಿನ ಪರ್ವತಾವಳಿ, ಅವುಗಳೊಳಗಿನ ದರಿ-ಕಂದರಗಳು, ಅಲ್ಲಿಯ ಸಮಶೀತೋಷ್ಣ ಹವೆ ಇವೆಲ್ಲವುಗಳು ಮರಾಟರ ಸ್ವಭಾವದ ಮೇಲೆ ಪರಿಣಮಿಸಿದ್ದರೆ ಅರಿದಲ್ಲ ಮಹಾರಾಷ್ಟ್ರದೊಳಗಿನ ಗುಡ್ಡಗಳೊಳಗಿನ ಕೋಟೆಗಳನ್ನಷ್ಟೇ ನೋಡಿದರೂ, ಅವು ಯಾರ ವಶದಲ್ಲಿರುವವೋ ಅವರು ಇಡೀ ಜಗತ್ತನ್ನು ತುಚ್ಛವೆಂದು ತಿಳಿಯಬಹುದೆಂಬದನ್ನು ಅವುಗಳೊಳಗಿನ ಯಾವದೊಂದು ಕೋಟೆಯ ಮೇಲೇರಿ ಸುತ್ತಲೂ ದೃಷ್ಟಿಕ್ಷೇಪ ಮಾಡಿದವರ ಮನಸ್ಸಿನಲ್ಲಿ ಬಿಂಬಿಸದಿರಲಾರದು ದೂರ ದೂರ ಮಜಲಿನ ತೋಫುಗಳ ಯುಕಿಯು ಹೊರಟು ನೈಲೆರಡು ಮೈಲುಗಳ ಅಂತರದ ಮೇಲಿನ ಕೋಟೆಗಳ ಕೊತ್ತಳಗಳನ್ನು ಬುಡ

ಮೇಲು ಮಾಡುವದು ಸುಸಾಧ್ಯವಾಗುವವರೆಗೆ, ಆ ಕೋಟೆಗಳೆಂದರೆ ಸ್ವಾತಂತ್ರ್ಯ ನಿಧಿಸಂರಕ್ಷಣ ಮಾಡುವ ಶ್ರೇಷ್ಠ ಖುಕ್ಕಿನ ತಿಜೋರಿಗಳೇ ಆಗಿದ್ದವೆಂದು ಹೇಳಬಹು ದಾಗಿತ್ತು. ಆ ಕೋಟೆಗಳ ಆಶ್ರಯದಿಂದ ವಾಸಿಸುವ ಜನರು ಧೈರ್ಯಶಾಲಿಗಳೂ ಚಪಲರೂ ಕಾಟಕಸ್ವಭಾವದವರೂ ಆಗಿದ್ದು, ಪರಾಧೀನತೆಯುಳ್ಳಿರುವದು ಅವರಿಗೆ ಯಾವಾಗಲೂ ಸಂಕಟವೆನಿಸುತ್ತಿತ್ತು. ಪ್ರತಿಯೊಬ್ಬ ಮರಾಟನು ತನ್ನ ಮಾಲಕಿ ವಹಿವಾಟಿಯ ಮನೆತನದ ಭೂಮಿಯಲ್ಲಿ ಹೊಲ-ಮನೆಗಳನ್ನು ಮಾಡಿಕೊಂಡು ಲಭ್ಯವಾದಷ್ಟು ಹಿಂಡಿ-ರೊಟ್ಟಿಯಲ್ಲಿ ಸಂತುಷ್ಟನಾಗಿ ಸ್ವಾಭಿಮಾನವನ್ನು ಕಾಯ್ದು ಕೊಳ್ಳಬೇಕೆಂಬ ಪರಂಪರೆಯು ಮಹಾರಾಷ್ಟ್ರದಲ್ಲಿ ಮುಸಲ್ಮಾನರು ಬರುವ ಪೂರ್ವ ದಲ್ಲಿಯೇ ಇತ್ತು; ಆದರೆ ಖುದ್ದ ಮುಸಲ್ಮಾನರಿಗೂ ಮಹಾರಾಷ್ಟ್ರದೊಳಗಿನ ಆ ೫೦-೬೦ ಸಾವಿರ ಚೌರಸ ಮೈಲುಗಳ ಪ್ರದೇಶವನ್ನು ಸಂಪೂರ್ಣವಾಗಿ ಎಂದೂ ತಮ್ಮ ಸ್ವಾಧೀನ ಪಡಿಸಿಕೊಳ್ಳಲಿಕ್ಕೆ ಆಗಲಿಲ್ಲ. ಮರಾಟರ ವ್ಯಕ್ತಿನಿಷ್ಠ ಸ್ವಾತಂತ್ರ್ಯ ಪ್ರಿಯತೆಯು ಗ್ರಾಮಸಂಸ್ಥೆಗಳಿಗೆ ತೊಂದರೆಯನ್ನುಂಟುಮಾಡುತ್ತಿರಲಿಲ್ಲ; ಆದರೆ ಏಕಛತ್ರದ ಅಮಲು ಮಾತ್ರ ಅವರಿಗೆ ಕೇವಲ ಬರ್ಷಣವಾಗಿ ತೋರುತ್ತಿದ್ದದರಿಂದ, ಏಕಛತ್ರದ ಅಮಲು, ವಿಶೇಷವಾಗಿ ಪರಕೀಯರ ಅಬಾಧಿತವಾದ ಅಮಲು, ಅವರ ಮೇಲೆ ಬಹು ಕಾಲದವರೆಗೆ ನೆಲಿಸಲಿಲ್ಲ. ಪರಶತ್ರು ಬಂದನೆಂದರೆ, ಅವರೆಲ್ಲರು ಒಟ್ಟು ಗೂಡಿ ಒಮ್ಮನಸಿನಿಂದ ವಿಚಾರ ಮಾಡುತ್ತಿದ್ದರು; ಆದರೆ ಶಾಂತತೆಯ ಕಾಲದಲ್ಲಿ ನೈಸರ್ಗಿಕವಾದ ಸ್ವಾತಂತ್ರ್ಯಪ್ರಿಯತೆಯ ಮೂಲಕ ಅವರು ತಮ್ಮ ತಮ್ಮೊಳಗೆ ಕಲಹಾಸಕ್ತರಾಗುತ್ತಿದ್ದರು.

ಮರಾಟರು ಪರಕೀಯರಾದ ಶತ್ರುಗಳನ್ನು ಎಷ್ಟು ಸಾರೆ ಸೋಲಿಸಿ ಓಡಿಸಿ ದರು, ಆದರೆ ಚಾಲುಕ್ಯ, ಗುಪ್ತ, ಶಿಲಾಹಾರ, ಯಾದವ ಇವರು ತಮ್ಮ ತಮ್ಮೊಳಗೆ ರಣಸಂಗ್ರಾಮವೆಸಗಿದ್ದು ಇತಿಹಾಸದಲ್ಲಿ ದಾಖಲೆಯುಂಟು. ಮರಾಟರಲ್ಲಿ ತಮ್ಮತಮ್ಮಕ್ಕೆ ತಾವಿದ್ದುಕೊಳ್ಳುವ ಹಾಗು ಜಗಳಗಂಟತನದ ದೋಷವು ಹೆಚ್ಚಾಗಿರುತ್ತದೆ; ಆದರೆ ಅವರಲ್ಲಿಯ ಸ್ವಾತಂತ್ರ್ಯಪ್ರಿಯತೆಯೇ ಇದಕ್ಕೆ ಮುಖ್ಯ ಕಾರಣವಾಗಿರುತ್ತದೆ. ಉತ್ತರಹಿಂದುಸ್ತಾನದಲ್ಲಿ ಹನ್ನೆರಡನೇ ಶತಕದಿಂದಲೇ ಮುಸಲ್ಮಾನರ ಅಮಲು ಹೆಚ್ಚು-ಕಡಿಮೆಯಾಗಿ ಉಂಟಾಯಿತು; ಆದರೆ ಆ ಅಮಲು ದಕ್ಷಿಣದಲ್ಲಿ ಪ್ರವೇಶ ವಾಗಲಿಕ್ಕೆ ಮುಂದೆ ೨-೨॥ ಶತಕಗಳ ಕಾಲಾವಧಿಯು ಬೇಕಾಯಿತು. ಇಷ್ಟಾದರೂ ದಕ್ಷಿಣದಲ್ಲಿ ಆ ಅಮಲು ಬಹು ಕಾಲದವರೆಗೆ ಉಳಿಯಲಿಲ್ಲ. ಅದರಲ್ಲಿಯೂ ಮಾಳವ ಪ್ರಾಂತ ಹಾಗು ಸಹ್ಯಾದ್ರಿಯ ಘಟ್ಟಗಳ ಮೇಲೆ ಮುಸಲ್ಮಾನರ ಅಮಲು ಎಂದೂ ಸ್ಥಿರವಾಗಲಿಲ್ಲ; ಇಷ್ಟೇ ಅಲ್ಲ, ದಿಲ್ಲಿಯ ಬಾದಶಾಹಿಯು ಕಳೆಗುಂದಲು, ಮಾಳ ವದ ಮರಾಟರು ಆ ಬಾದಶಾಹಿಯ ಭವ್ಯ ಇಮಾರತಿಯ ಕಲ್ಲುಗಳನ್ನು ಒಂದರ ಹಿಂದೊಂದರಂತೆ ಕೆಡವಲಿಕ್ಕೆ ಪ್ರಾರಂಭಿಸಿದರು. ಕಡೆಗೆ ಅವರು ದಿಲ್ಲಿ ಹಾಗು ಅಲ್ಲಿಯ ಬಾದಶಹರನ್ನು ಕೈವಶ ಮಾಡಿಕೊಂಡು ಸರಾಸರಿ ಐವತ್ತು ವರುಷಗಳ

ವರೆಗೆ ಸಾಮ್ರಾಜ್ಯಸತ್ತೆಯ ಸುಖವನ್ನು ಅನುಭವಿಸಿದರು. ಮರಾಟರ ಮಹತ್ವಾಕಾಂಕ್ಷೆಯಂತೆ ಅವರಿಗೆ ದಿಲ್ಲಿಯಲ್ಲಿ ಹಿಂದೂಪದಪಾತಶಾಹಿಯನ್ನು ಸ್ಥಾಪಿಸಲಿಕ್ಕೆ ಆಗದಿದ್ದರೂ, ಇಂಗ್ಲಿಷರು ಯಾವಾಗ ಸಾಮ್ರಾಜ್ಯ ಸತ್ತೆಯನ್ನು ಸ್ಥಾಪಿಸಲಾರಂಭಿಸಿದರೋ, ಆಗ ಅವರಿಗೆ ನಿಜವಾದ ಎದುರಾಳಿಗಳು ಮರಾಟರೊಬ್ಬರೇ ಆಗಿದ್ದರು. ಎಲ್ಫಿನ್ಸಟನ್, ಸರ್ ವಿಲ್ಯಮ್ ಹಂಟರ, ಸರ ಆಲ್ಫ್ರೇಡ ಲಾಯಲ್ ಮುಂತಾದ ಇಂಗ್ಲಿಷ ಇತಿಹಾಸಕಾರರು ಪ್ರಾಂಜಲವಾಗಿ ಒಪ್ಪಿರುವದೇನಂದರೆ:—

“ನಾವು ಹಿಂದುಸ್ತಾನದೊಳಗಿನ ಸಾಮ್ರಾಜ್ಯಸತ್ತೆಯನ್ನು ಮುಸಲ್ಮಾನರಿಂದ ಗೆದ್ದುಕೊಂಡಿರದೆ, ಮರಾಟರಿಂದ ಗೆದ್ದುಕೊಂಡಿರುತ್ತೇವೆ. ಮುಸಲ್ಮಾನರ ಕೈಯೊಳಗಿನ ಆ ಸತ್ತೆಯು ಎಂದೋ ಹೋಗಿಬಿಟ್ಟಿತ್ತು. ನಾವು ಕಟ್ಟಕಡೆಗೆ ಮಾಡಿದ ಯುದ್ಧಗಳನ್ನು ಮುಸಲ್ಮಾನರೊಡನೆ ಮಾಡಿರದೆ, ಮರಾಟರೊಡನೆಯೇ ಮಾಡಿದೆವು.” ತಾತ್ಪರ್ಯವೇನಂದರೆ, ಹಿಂದುಸ್ತಾನದೊಳಗಿನ ಬಾದಶಾಹೀ ಅಮಲಿಗೆ ಇಂಗ್ಲಿಷರು ಮರಾಟರ ನಿಜವಾದ ವಾರಸದಾರರು; ಮುಸಲ್ಮಾನರ ವಾರಸದಾರರಲ್ಲ.

ಮೊಗಲರ ದಾಳಿಗಳು ದಕ್ಷಿಣದಲ್ಲಿ ಮುಖ್ಯತಃ ಮರಾಟರ ಮೇಲೆ ಒದಗದೆ, ಇಲ್ಲಿಯ ಬಂಡುಗಾರರಾದ ಮುಸಲ್ಮಾನೀ ರಾಜ್ಯಗಳ ಮೇಲೆ ಒದಗಿದ್ದವು. ಅದರಿಂದ ಇಲ್ಲಿಯ ಮುಸಲ್ಮಾನರೂ ಮರಾಟರೂ ಒಟ್ಟಾಗಿ ಅವುಗಳಿಗೆ ಎದುರಾದರು. ಇತ್ತಣ ಮುಸಲ್ಮಾನರ ಬಲವು ಮೊಗಲರನ್ನು ಎದುರಲಾರದೆಂಬದು ಮನಗಾಣಹತ್ತಿದ ಬಳಿಕ, ಮರಾಟರು ಸ್ವಸಂರಕ್ಷಣೆಗೆ ಸ್ವತಂತ್ರ ರೀತಿಯಿಂದ ಪ್ರಾರಂಭಿಸಿದರು. ಅಹಮ್ಮದನಗರದ ರಾಜ್ಯವನ್ನು ಸಂರಕ್ಷಿಸುವ ಸಲುವಾಗಿ ಚಾಂದಬೀಬಿ ಮಲಿಕ ಅಂಬರ ಹಾಗೂ ಶಹಾಜಿ ಭೋಸಲೆ ಇವರು ಬಹಳ ಪ್ರಯತ್ನಪಟ್ಟರು; ಆದರೆ ಅದು ಸಿದ್ಧಿಸದೆ, ಮೊಗಲರು ಅಹಮ್ಮದನಗರವನ್ನು ಹದಿನೇಳನೇ ಶತಮಾನದ ಪ್ರಾರಂಭಕ್ಕೆ ಆಕ್ರಮಿಸಿದರು. ಆಗ ಅಲ್ಲಿಯ ಎಷ್ಟೋ ಜನ ಮರಾಟರಾದ ಸರದಾರರು ಮೊಗಲರ ಮನಸಬದಾರಿಯನ್ನು ವಹಿಸಿದರು, ಎಷ್ಟೋ ಜನರು ವಿಜಾಪುರ ದರ್ಬಾರಿಗೆ ಹೊರಟು ಹೋದರು; ಆದರೆ ಇನ್ನುಳಿದ ಹಲವರು ಸಂಪೂರ್ಣ ಸ್ವತಂತ್ರರಾಗುವ ವಿಚಾರವನ್ನೇ ನಡೆಸಿದರು. ಮೊಗಲರು ದಕ್ಷಿಣದೇಶದ ಮೇಲೆ ದಾಳಿಯನ್ನಿಕ್ಕದಿದ್ದರೆ ಇಲ್ಲ ಮರಾಠೀ ಪದಪಾತಶಾಹಿಯು ಇಷ್ಟು ಬೇಗನೆ ಪ್ರಾದುರ್ಭವಿಸುತ್ತಿರಲಿಲ್ಲ. ಬಾಮನೀ ರಾಜರ ಆಶ್ರಯದಲ್ಲಿ ಮರಾಟರು ದೊರಕಿಸಿದ ಮಹತ್ವವೇ ಮುಂದ ಅವರಿಗೆ ಸ್ವತಂತ್ರರಾಗಲಿಕ್ಕೆ ಕಾರಣೀಭೂತವಾಯಿತು. ನ್ಯಾಯಾಡುವದೇ ಆದರ ಮಂದಿಯ ಸಲುವಾಗಿ ಏಕೆ ನ್ಯಾಯಾಡಬೇಕು? ಸ್ವಾತಂತ್ರ್ಯದ ಸಲುವಾಗಿ ನ್ಯಾಯಾಡಿದರೆ ಸ್ವಾತಂತ್ರ್ಯವಾದರೂ ಲಭಿಸೀತೆಂದು ಮರಾಠೀ ಸರದಾರರಿಗೆ ಅನಿಸುತ್ತಿತ್ತು. ಮಹಾರಾಷ್ಟ್ರದೊಳಗಿನ ಕೋಟೆ-ಕೊತ್ತಳಗಳನ್ನು ಅವರು ಮೊದಲೇ ಭದ್ರಪಡಿಸತೊಡಗಿದ್ದರು; ಮತ್ತು ಅಕಬರನು ದಕ್ಷಿಣಕ್ಕೆ ದಂಡೆತ್ತಿ ಬಂದು ಇಲ್ಲಿಯ ಮುಸಲ್ಮಾನೀ ರಾಜ್ಯಗಳನ್ನು ಧ್ವಂಸಮಾಡಿದ್ದೇ ಮರಾಠೀ ರಾಜ್ಯಸ್ಥಾಪನೆಗೆ ಅನುಕೂಲ ಪರಿಸ್ಥಿತಿಯನ್ನುಂಟ್ಯ

ಮಾಡಿಕೊಟ್ಟಂತಾಯಿತು. ತಾತ್ಪರ್ಯ, ಈ ರೀತಿಯಾಗಿ ಹದಿನೇಳನೆಯ ಶತಕದ ಪ್ರಾರಂಭದಲ್ಲಿ ಯಾವಾಗ ಇಂಗ್ಲಿಷರು ವ್ಯಾಪಾರದ ಕಂಪನಿಯನ್ನು ಸ್ಥಾಪಿಸಿಕೊಂಡು ಹಿಂದುಸ್ಥಾನಕ್ಕೆ ಬಂದು ವ್ಯಾಪಾರ ಮಾಡಬೇಕೆಂಬ ಉದ್ಯೋಗವನ್ನು ಆರಂಭಿಸಿದ್ದರೋ, ಆಗ ಮರಾಟರು ಇಲ್ಲಿ ಸ್ವರಾಜ್ಯಸ್ಥಾಪನೆಯ ಉದ್ಯೋಗಕ್ಕೆ ತೊಡಗಿದ್ದರು. ಆಗಿನ ಇಂಗ್ಲಿಷರು ಮರಾಟರ ಹೆಸರನ್ನು ಕೂಡ ಕೇಳಿರದೆ, ಅವರು ದಿಲ್ಲಿಯ ಮೊಗಲ ಬಾದಶಹನ ಅಪ್ಪಣೆ ಪಡೆದು ತಮ್ಮ ವ್ಯಾಪಾರೀ ಹಡಗುಗಳನ್ನು ಹಿಂದುಸ್ಥಾನದ ಬಂದರಕ್ಕೆ ತಂದು, ಇಲ್ಲಿ ತಮ್ಮ ಪಸಾರವನ್ನು ಹರಡಿಸುವ ಹವಣಿಕೆಯಲ್ಲಿದ್ದರು. ಮರಾಟರಾದರೂ ಆಗಿನ ಕಾಲದಲ್ಲಿ ಇಂಗ್ಲಿಷರ ಹೆಸರನ್ನು ಕೂಡ ಕೇಳಿರದೆ, ತಮ್ಮ ಹಿಂದುಸ್ಥಾನದಲ್ಲಿ-ಕೊನೆಗೆ ಮಹಾರಾಷ್ಟ್ರದಲ್ಲಾದರೂ-ನಷ್ಟ ಹೊಂದಿದ್ದ ಹಿಂದೂಪದಪಾತಶಾಹಿಯ ಪ್ರಾಣಪ್ರತಿಷ್ಠಾಪನೆಯನ್ನು ಮತ್ತೆ ಮಾಡಬೇಕೆಂದೂ ಅದಕ್ಕಾಗಿ ಮೊಗಲರಂತಹ ಬಲಾಢ್ಯ ಶತ್ರುಗಳ ಕೂಡಾದರೂ ಕಾದಬೇಕೆಂದೂ, ಅವರ ಮಾನಸವಿದ್ದಿತು. ಆ ಕಾಲಕ್ಕೆ ಇಂಗ್ಲಿಷರು ತಮ್ಮ ಕೈಯಲ್ಲಿ ತಕ್ಕಡಿಯನ್ನು ಹಿಡಿದುಕೊಂಡು ಮುಂದೆ ಬರುತ್ತಿದ್ದರೆ, ಮರಾಟರು ಖಡ್ಗಪಾಣಿಗಳಾಗಿ ಮುಂದರಿಯುತ್ತಿದ್ದರು. ಇವರಿಬ್ಬರಿಗೂ ಬೇರೆ ಬೇರೆ ರೀತಿಯಿಂದ ಮೊಗಲರ ಅಂತರಂಗವನ್ನು ಪ್ರವೇಶಿಸಬೇಕಾಗಿದ್ದಿತು. ಶ್ರೀಶಿವಛತ್ರಪತಿಯು ಹುಟ್ಟಿದಾಗ್ಗೆ ಸುರತದಲ್ಲಿಯ ಇಂಗ್ಲಿಷರ ವಖಾರವು ಸ್ಥಾಪನವಾಗಿ ಹದಿನ್ಯೆದು ವರ್ಷಗಳಾಗಿದ್ದವು. ಈ ರೀತಿಯಾಗಿ ಉದಯೋನ್ಮುಖರಾದ ಇಂಗ್ಲಿಷ ಮತ್ತು ಮರಾಟರ ಸಂಬಂಧವು ಮುಂದೆ ಪರಸ್ಪರರಲ್ಲಿ ಹೇಗೆ ಉಂಟಾಯಿತು? ಕಡೆಗೆ ಅದರ ಪರಿಣಾಮವು ಹೇಗೆ ಆಯಿತು? ಇದೇ ಸಂಗತಿಯನ್ನು ನಾವು ಇನ್ನು ಮುಂದೆ ಹೇಳತಕ್ಕವರಿರುತ್ತೇವೆ. ಅದಕ್ಕಾಗಿಯೇ ನಾವು ಇದುವರೆಗೆ ಮರಾಟರ ಆ ಮೊದಲಿನ ಅಲ್ಪ ಪರಿಚಯುವನ್ನು ಮಾಡಿಕೊಟ್ಟಿರುತ್ತೇವೆ. ಇದರಂತೆ ಇಂಗ್ಲಿಷರಾದರೂ ಹಿಂದುಸ್ಥಾನಕ್ಕೆ ಏಕೆ ಹಾಗು ಹೇಗೆ ಬಂದರೆಂಬ ಸಂಗತಿಯಾದರೂ ನಮ್ಮ ವಾಚಕರಿಗೆ ತಿಳಿಯುವದು ಅತ್ಯವಶ್ಯವಾದುದರಿಂದ ಅದನ್ನು ಈ ಮುಂದಿನ ಪರಿಚ್ಛೇದದಲ್ಲಿ ನಿವೇದಿಸುತ್ತೇವೆ.

---

೨ನೆಯ ಪರಿಚ್ಛೇದ.

## ಇಂಗ್ಲಿಷರು ಹಿಂದುಸ್ಥಾನಕ್ಕೆ ಏಕೆ ಮತ್ತು ಹೇಗೆ ಬಂದರು?

ಇಂಗ್ಲಿಷರು ಹಿಂದುಸ್ಥಾನಕ್ಕೆ ವ್ಯಾಪಾರಕ್ಕೆಂದು ಮೊದಲು ಆಗಮಿಸಿದರು. ಅವರಿಗಿಂತ ಮೊದಲು ಪುರಾತನ ಕಾಲದಲ್ಲಿ ಯುರೋಪದೊಳಗಿನ ಯಾವ-ಯಾವ ರಾಷ್ಟ್ರಗಳು ಉದಯಹೊಂದಿದ್ದವೋ, ಅವುಗಳಲ್ಲಿಯ ಬಹುತರ ಎಲ್ಲ ರಾಷ್ಟ್ರಗಳೂ ಹಿಂದುಸ್ಥಾನದೊಡನೆ ವ್ಯಾಪಾರೀ ಸಂಬಂಧವನ್ನು ಬೆಳೆಸಿದ್ದವು; ಅಥವಾ ಏಶಿಯಾ

ಖಂಡದೊಳಗಿನ-ಅದರಲ್ಲೂ ಹಿಂದುಸ್ತಾನದೊಳಗಿನ-ವ್ಯಾಪಾರವು ಯಾವ ರಾಷ್ಟ್ರದ ಅಧೀನವಾಗುತ್ತಿತ್ತೋ, ಅದೇ ರಾಷ್ಟ್ರವು ಮೇಲ್ತರಗತಿಯದೆಂದು ಎಣಿಸುವ ಪರಿಪಾಠವು ಆಗಿನ ಕಾಲದಲ್ಲಿತ್ತೆಂದು ಅನುಮಾನಿಸಬಹುದಾಗಿದೆ. ಕ್ರಿಸ್ತಶತಕದ ಮುಂಚೆ ೨೦೦೦ ವರ್ಷಗಳಿಂದ, ಅಂದರೆ ಖಾಲ್ಡಿಯನ್ ಜನರ ಕಾಲದಿಂದಲೂ, ಈ ವ್ಯಾಪಾರವನ್ನು ಯುರೋಪಿಯನ್ನರು ಮಾಡುತ್ತ ಬಂದಿರುವರೆಂದು ಅನ್ನುತ್ತಾರೆ. ಈ ಸಂಗತಿಯು ಸಟೆಯೇ ಇರಲಿ, ದಿಟವೇ ಆಗಿರಲಿ, ಗ್ರೀಕ ಸತ್ತೆಯ ಪ್ರಾರಂಭದಿಂದಲೂ ಯುರೋಪ-ಹಿಂದುಸ್ತಾನಗಳಲ್ಲಿಯ ವ್ಯಾಪಾರೀ ಸಂಬಂಧವು ಐತಿಹಾಸಿಕ ಆಧಾರದಿಂದ ಸಿದ್ಧವಾಗುತ್ತಲಿದೆ. ಈ ಗೂತಿನ ಆರಂಭಕಾಲವು ಕ್ರಿ. ಶ. ಮುಂಚೆ ೩೨೭ ವರ್ಷ; ಅಂದರೆ ಶಿಕಂದರ ಬಾದಶಹನು ಹಿಂದುಸ್ತಾನಕ್ಕೆ ದಂಡೆತ್ತಿ ಬಂದಾಗಿನಿಂದ. ಶಿಕಂದರನ ಕೂಡ ಬಂದ ಇತಿಹಾಸಕಾರರೂ ವಕೀಲ ಜನರೂ ಹಿಂದುಸ್ತಾನದ ಸಂಗತಿಯನ್ನೆಲ್ಲ ಯುರೋಪಿಯನ್ನರಿಗೆ ಹೇಳಿಕೊಟ್ಟರು. ಹಿಂದುಸ್ತಾನವು ಸಂಪತ್ತಿನ ಆಗರವೆಂಬದು ಸ್ವತಃ ಶಿಕಂದರನಿಗೆ ಆ ಸ್ವಾರಿಯ ನಂತರವೇ ಎಲ್ಲಕ್ಕೂ ಮೊದಲು ತಿಳಿದುಬಂದಿತು. ಚಂದ್ರಗುಪ್ತನ ದರ್ಬಾರದಲ್ಲಿದ್ದ ಮ್ಯಾಗಸ್ಥನೀಸ ಎಂಬ ಹೆಸರಿನ ಗ್ರೀಕ ವಕೀಲನು ಆ ಕಾಲದ ಹಿಂದೂ ಜನರ ಚಾರಿತ್ರ್ಯದ ಬಗ್ಗೆ ತನ್ನ ಅಭಿಪ್ರಾಯವನ್ನು ಹೀಗೆ ಬರೆದಿಟ್ಟಿರುತ್ತಾನೆ:—“ಸ್ತ್ರೀಯರ ಅತ್ಯುಚ್ಚ ಪಾತಿವ್ರತ್ಯ, ಗುಲಾಮಗಿರಿಯ ಅಭಾವ ಮುಂತಾದ ಸಂಗತಿಗಳಲ್ಲಿ ಹಿಂದುಸ್ತಾನವನ್ನು ಸರಿಗಟ್ಟುವ ದೇಶವು ಕ್ವಚಿತ್ತಾಗಿಯೇ ಸಿಕ್ಕೀತು ಇಡೀ ಏಶಿಯಾಖಂಡದಲ್ಲಿ ಹಿಂದೂಜನರಷ್ಟು ಪರಾಕ್ರಮಿಗಳು ಅನ್ಯರಿರುವದಿಲ್ಲ. ತಮ್ಮ ಮನೆಯ ಬಾಗಿಲುಗಳಿಗೆ ಕೀಲಿಯನ್ನು ಹಾಕುವ ಆವಶ್ಯಕತೆಯು ಇವರಿಗೆಂದಿಗೂ ಉಂಟಾಗುತ್ತಿರುವದಿಲ್ಲ; ಸುಳ್ಳಾಡುವದು ಸ್ವಪ್ನದಲ್ಲಿ ಕೂಡಾ ಗೊತ್ತಿಲ್ಲ; ನ್ಯಾಯಾಸನದ ಮೆಟ್ಟಲುಗಳನ್ನೇರುವದಂತೂ ಗೊತ್ತೇ ಇಲ್ಲ. ಒಳ್ಳೇ ಒಕ್ಕಲಿಗರೂ, ಕುಶಲ ಕಸಬುದಾರರೂ ಇಲ್ಲಿ ಇರುತ್ತಿದ್ದು, ಇವರು ಒಳ್ಳೇ ಕಷ್ಟಾಳುಗಳಾಗಿರುತ್ತಾರೆ. ಇವರಿಗೆ ಯಾವ ತರದ ವ್ಯಸನವೂ ಇರುವದಿಲ್ಲ.”

ಗ್ರೀಕ ಸತ್ತೆಯು ನಾಮಶೇಷವಾದ ನಂತರ ರೋಮನ್ ಜನರು ಉದಯ ಹೊಂದಿದರು. ಇವರು ಹಿಂದುಸ್ತಾನದೊಡನೆ ದೊಡ್ಡ ಪ್ರಮಾಣದಿಂದ ವ್ಯಾಪಾರವನ್ನು ನಡೆಸಿದರು. ರೇಶಿಮೆ ಹಾಗು ಬೇರೆ ಬೆಲೆಯುಳ್ಳ ವಸ್ತ್ರಗಳು, ಮುತ್ತು-ರತ್ನಗಳು, ಸುಗಂಧಿ ಪದಾರ್ಥಗಳು, ಮಸಾಲಿ, ಆನೆಯಹಲ್ಲು ಮುಂತಾದ ಜೀನಸುಗಳನ್ನು ರೋಮನ್ನರು ಹಿಂದುಸ್ತಾನದಿಂದ ಸಾಗಿಸುತ್ತಿದ್ದರು. ಅದರಂತೆ ಹಲವು ಪ್ರಕಾರದ ಬಣ್ಣಗಳೂ ಔಷಧಗಳೂ ಇಲ್ಲಿಂದ ರೋಮದೇಶಕ್ಕೆ ರಫ್ತಾಗುತ್ತಿದ್ದವು. ಆ ಕಾಲಕ್ಕೆ ಹಿಂದುಸ್ತಾನದಿಂದ ಯುರೋಪಕ್ಕೆ ಯಾವ ಬಗೆಯ ಕಚ್ಚಾಮಾಲೂ ಹೆಚ್ಚಾಗಿ ಹೋಗುತ್ತಿರಲಿಲ್ಲವೆಂಬದು ಚೆನ್ನಾಗಿ ಲಕ್ಷ್ಯದಲ್ಲಿಡತಕ್ಕ ಮಾತಾಗಿರುತ್ತದೆ. ರೋಮನ್ನ ಜನರ ವಿಲಾಸ ಭೋಗಗಳು ಹಿಂದುಸ್ತಾನದಿಂದ ಹೋಗುವ ಮುತ್ತು-ರತ್ನಗಳನ್ನೇ ಮುಖ್ಯತ್ವವಾಗಿ ಅವಲಂಬಿಸಿರುತ್ತಿದ್ದವು.

ರೋಮನ ಜನರು ಆಳಿಗಾಲವನ್ನೈದಿದ ನಂತರ ವ್ಹೆನಿಶಿಯನ್ ಜನರು ವೈಭವಕ್ಕೇರಿದರು. ಇವರು ವ್ಯಾಪಾರದಲಿಯೇ ಲಕ್ಷ್ಯವುಳ್ಳವರಾಗಿದ್ದರು. ಹಿಂದುಸ್ಥಾನದೊಳಗಿನ ಯುರೋಪದ ವ್ಯಾಪಾರವನ್ನು ಇವರು ಸಂಪೂರ್ಣವಾಗಿ ಆಕ್ರಮಿಸಿದ್ದರು. ಈ ಜನರ ಭರಭರಾಟಿಯ ಸಮಯದಲ್ಲಿ ಒಂದು ವಿಶೇಷ ಸಂಗತಿಯುಂಟಾಯಿತು; ಹಾಗೂ ಅದರ ಯೋಗದಿಂದ ವ್ಹೆನಿಶಿಯನ್ ಸತ್ತೆಯು ಇಳಿಮುಖವನ್ನು ತಾಳಿ, ಕಡೆಗೆ ವ್ಹೆನಿಶಿಯರ ಹೆಸರು ಕೂಡ ನಿರ್ನಾಮವಾಗಿ ಹೋಯಿತು! ಆ ವಿಶೇಷ ಸಂಗತಿಯೆಂದರೆ, ಆಫ್ರಿಕದ ಕೆಳಗಡೆಯಿಂದ ಹಿಂದುಸ್ಥಾನಕ್ಕೆ ಹೋಗುವ-ಹೊಸ ಮಾರ್ಗದ ಶೋಧವು. ಅದುವರೆಗೆ ಹಿಂದುಸ್ಥಾನ-ಯುರೋಪಗಳ ವ್ಯಾಪಾರವು (೧) ಅರಬೀಸಮುದ್ರ, ಇರಾಣದ ಆಖಾತಗಳ ವರೆಗೆ ಹಡಗ, ಅಲ್ಲಿಂದ ಏಶಿಯಾಮೈನರದಲ್ಲಿ ಭೂಮಧ್ಯ ಸಮುದ್ರದವರೆಗೆ ನೆಲಮಾರ್ಗ, ಅಲ್ಲಿಂದ ಮತ್ತೆ ಹಡಗ. ಇದು ಒಂದನೆಯ ಮಾರ್ಗ. (೨) ಅರಬೀಸಮುದ್ರ-ಕೆಂಪುಸಮುದ್ರಗಳಲ್ಲಿ ಹಡಗ; ಅಲ್ಲಿಂದ ಮಿಸರದೇಶದಿಂದ ಭೂಮಧ್ಯಸಮುದ್ರದ ವರೆಗೆ ನೆಲಮಾರ್ಗ; ಮುಂದೆ ಮತ್ತೆ ಹಡಗ. ಇದು ಎರಡನೆಯ ಮಾರ್ಗ. (೩) ಹಿಂದುಸ್ಥಾನದ ಉತ್ತರಗಡಿಯಿಂದ ಮಧ್ಯಏಶಿಯಾದೊಳಗಿನ ಆಕ್ಸಸ್‌ಪರ್ವತದ ಮೇಲಿಂದ ಕಪ್ಪುಸಮುದ್ರದವರೆಗೆ ನೆಲಮಾರ್ಗ. ಅಲ್ಲಿಂದ ಮುಂದೆ ಜಲಮಾರ್ಗ. ಹೀಗೆ ಸಾಗುತ್ತಿದ್ದು, ಈ ಮೂರು ಮಾರ್ಗಗಳೂ ಬಹು ತ್ರಾಸದಾಯಕಗಳೂ ಖರ್ಚಿನವೂ ಆಗಿದ್ದವು. ಆಫ್ರಿಕೆಯನ್ನು ಸುತ್ತಿಕೊಂಡು ಬರುವ ಹೊಸ ಜಲಮಾರ್ಗದ ಶೋಧವಾದ ಬಳಿಕ ಇವೆಲ್ಲ ತೊಂದರೆಗಳು ಕಡಿಮೆಯಾದವು. ಈ ಹೊಸಮಾರ್ಗವನ್ನು ಕ್ರಿ. ಶ. ೧೪೯೮ರಲ್ಲಿ ವಾಸ್ಕೋಡಿಗಾಮಾ ಎಂಬ ಹೆಸರಿನ ಪೋರ್ತುಗೀಜನು ಗೊತ್ತುಹಚ್ಚಿದನು. ಅಂದಿನಿಂದ ಯುರೋಪದ ಜನರು ಹಿಂದುಸ್ಥಾನಕ್ಕೆ ಎಡೆಬಿಡದೆ ಬರತೊಡಗಿದರು. ೧೬ನೆಯ ಶತಕದಲ್ಲಿ ಪೋರ್ತುಗೀಜರು ಇಲ್ಲಿಗೆ ಬಂದರು. ೧೭ನೆಯ ಶತಮಾನದಲ್ಲಿ ಡಚ್ಚರು ಬಂದರು ೧೮ರಲ್ಲಿ ಫ್ರೆಂಚರು ಬಂದರು. ಅಲ್ಲಿಂದ ಮುಂದೆ ಇಂಗ್ಲಿಷರು ಬರಹತ್ತಿ, ಅವರ ವರ್ಚಸ್ಸು ಹಿಂದುಸ್ಥಾನದಲಿ ಬೆಳೆಯಹತ್ತಿತು.

ಹೊಸಮಾರ್ಗದ ಶೋಧವಾದೊಡನೆಯೇ ಪೋರ್ತುಗೀಜರ ಕೂಡ ಕ್ರಿಸ್ತಿಧರ್ಮವೂ ಹಿಂದುಸ್ಥಾನದಲ್ಲಿ ಡಾಣಾಡಂಗುರವಾಗಿ ಕಾಲಿಡಹತ್ತಿತು. ಅದಕ್ಕೂ ಮೊದಲು, ಅಂದರೆ ಯೇಸೂ ಕ್ರಿಸ್ತನು ಹುಟ್ಟಿದ ೭೫ ವರ್ಷಗಳಲ್ಲಿ ಅದು ಹಿಂದುಸ್ಥಾನವನ್ನು ಇಣಿಕಿ ನೋಡಲಾರಂಭಿಸಿತ್ತು. ಸೆಂಟ ಥಾಮಸ್‌ನೆಂಬ ಕ್ರಿಸ್ತಭಕ್ತನೂ ಶುಭವರ್ತಮಾನವನ್ನು ಪ್ರಸಾರಗೊಳಿಸುವ ಸಾಧುವೂ ಕ್ರಿ. ಶ. ದ ೬೮ನೇ ವರ್ಷವೇ ಮದ್ರಾಸದ ಬಳಿಯಲ್ಲಿ ಸತ್ತನು; ಅಥವಾ ಕೊಲ್ಲಲ್ಪಟ್ಟನೆಂದು ಅನ್ನುತ್ತಾರೆ. ಅದಕ್ಕೂ ಮೊದಲು ಎಷ್ಟೋ ವರ್ಷ ಮಲಬಾರ ಹಾಗು ಕಾರೋಮಂಡಲದ ಸಮುದ್ರ ದಂಡೆಗೆ ಹೊಂದಿದ ಪ್ರಾಂತದಲ್ಲಿ ಅವನು ಕ್ರಿಸ್ತೀಧರ್ಮವನ್ನು ಉಪದೇಶಿಸುತ್ತ ಸಂಚರಿಸುತ್ತಿದ್ದನು. ಇ. ಸ. ೧೪೯ನೇ ವರ್ಷದಲ್ಲಿ ಟ್ಯಾಂಟೆನಸ್ ಎಂಬ ಹೆಸ

ರಿನ ಪಾದರಿಯು ಹಿಂದುಸ್ಥಾನಕ್ಕೆ ಬಂದನು. ಇಸವಿ ಸನ್ನ ೩ನೇ ಶತಕದ ಕೊನೆಗೆ ಮಲಬಾರ ದಂಡೆಯಲ್ಲಿ ಕ್ರಿಸ್ತಧರ್ಮವು ಚನ್ನಾಗಿಯೇ ಹಬ್ಬಿತ್ತು. ೪೮೦ರಲ್ಲಿ ಬಾಬಿಲನ್‌ದಿಂದ ನೆಸ್ಟೋರಿಯನ್ ಎಂಬ ಹೆಸರಿನ ಕ್ರಿಸ್ತಧರ್ಮೋಪದೇಶಕನು ಮಲಬಾರ ದಂಡೆಗೆ ಇಳಿದು, ಅಲ್ಲಿ ತನ್ನ ಧರ್ಮವನ್ನು ಪ್ರಸಾರಗೊಳಿಸುವ ಉದ್ಯೋಗ ನಡೆಸಿದನು. ೮ನೇ ಶತಕದಲ್ಲಿ ಅರ್ಮೇನಿಯನ್ ಮಿಶನರಿಯಾದ ಸೇಂಟ ಥಾಮಸನು ಮಲಬಾರದ ದಂಡೆಯಲ್ಲಿ ಕ್ರಿಸ್ತಿಧರ್ಮದ ಮಂದಿರವನ್ನು ಸ್ಥಾಪಿಸಿದನು. ಈ ಮಂದಿರವೇ ಹಿಂದುಸ್ಥಾನದೊಳಗಿನ ಮೊಟ್ಟಮೊದಲಿನ ಕ್ರಿಸ್ತಿಮಂದಿರವಾಗಿರುತ್ತದೆ. ೮೮೩ರಲ್ಲಿ ಇಂಗ್ಲಂಡದ ಅರಸನಾದ ಆಲ್ಫ್ರೇಡನು ತನ್ನ ಇಬ್ಬರು ಧಾರ್ಮಿಕ ಪ್ರತಿನಿಧಿಗಳನ್ನು ಸೆಂಟ ಥಾಮಸನ ಗೋರಿಯು ಪವಿತ್ರಸ್ಥಳದ ಯಾತ್ರೆಗೆಂದು ಇಲ್ಲಿಗೆ ಕಳಿಸಿದ್ದನೆಂದು ಅನ್ನುತ್ತಾರೆ. ಹೀಗೆ ಯುರೋಪಿಯನ್ನ ಜನರು ಆಗಾಗ್ಗೆ ಹಿಂದುಸ್ತಾನಕ್ಕೆ ಬಂದ ದಾಖಲೆಗಳು ದೊರೆಯುತ್ತವೆ; ಆದರೂ ಪೋರ್ತುಗೀಜರು ಹಿಂದುಸ್ಥಾನಕ್ಕೆ ಬಂದ ನಂತರವೇ ಇಲ್ಲಿ ಕ್ರಿಸ್ತಿಧರ್ಮದ ಪ್ರಸಾರವು ಹಬ್ಬಿತೆಂಬ ಮಾತು ನಿರ್ವಿವಾದವಾದದ್ದು.

ಧರ್ಮಪ್ರಸಾರ ಮತ್ತು ವ್ಯಾಪಾರವನ್ನು ಬೆಳಿಸುವದು ಈ ಎರಡು ಧ್ಯೇಯಗಳನ್ನು ಮುಂದಿಟ್ಟುಕೊಂಡೇ ಪೋರ್ತಗೀಜರು ಹಿಂದುಸ್ಥಾನಕ್ಕೆ ಬಂದರು. ಅವರ ಮೊದಲನೇ ಹೇತುವು ಎರಡನೆಯ ಧ್ಯೇಯಕ್ಕೆ ಪೋಷಕವಾಗದೆ ವಿಘಾತಕವೇ ಆಯಿತೆಂಬದು ಆಗಿನ ಇತಿಹಾಸವನ್ನು ಓದುವದರಿಂದ ವಾಚಕರ ನಿದರ್ಶನಕ್ಕೆ ಬಂದೀತು. ವಾಸ್ಕೋಡಿ ಗಾಮನು ಎಲ್ಲಕ್ಕೂ ಮೊದಲು ದಕ್ಷಿಣದೊಳಗಿನ ಕಾಲಿಕತ್ತ ಬಂದರಕ್ಕೆ ಬಂದಿಳಿದನು. ಆಗ್ಗೆ ಆ ಪಟ್ಟಣವು ಒಳ್ಳೇ ಭರಭರಾಟಿಯಲ್ಲಿದ್ದಿತು. ಅಲ್ಲಿಯ ಅರಸನಿಗೆ 'ಝಾಮಾರೀನ' ಎಂದೆನ್ನುತ್ತಾರೆ. ಸರಾಸರಿ ೬೦೦ ವರ್ಷಗಳಿಂದ ಅಲ್ಲಿಯ ವ್ಯಾಪಾರವು ಅರಬದೇಶದ ಮುಸಲ್ಮಾನರ ವಶದಲ್ಲಿತ್ತು. ಗಾಮಾನು ಝಾಮಾರೀನ ಕೃಪೆ ಸಂಪಾದಿಸಿದನು. ಅವನು ಮರಳಿ ಹೋಗುವಾಗ ಝಾಮಾರೀನನು ಪೋರ್ತುಗಾಲದ ಅರಸನಿಗೊಂದು ಪತ್ರವನ್ನು ಬರೆಕೊಟ್ಟಿದ್ದನು. ಅದರಲ್ಲಿಯ ಸಂಗತಿಯು ಹೀಗೆ ಇದ್ದಿತು:—"ತಮ್ಮ ಮನೆತನದೊಳಗಿನ ಸರದಾರ ವಾಸ್ಕೋಡಿ ಗಾಮಾ ಇವರು ನಮ್ಮ ದೇಶಕ್ಕೆ ಬಂದುದರಿಂದ ನಮಗೆ ಬಹು ಸಂತೋಷವಾಗಿರುತ್ತದೆ. ನಮ್ಮ ದೇಶದೊಳಗೆ ದಾಲಚಿನ್ನಿ, ಲವಂಗ, ಶುಂಠಿ, ಮೆಣಸು ಮತ್ತು ಮುತ್ತು-ರತ್ನಾದಿಗಳು ಸಮೃದ್ಧಿಯಾಗಿದ್ದು, ಇವಕ್ಕೆ ಪ್ರತಿಯಾಗಿ ನಿಮ್ಮ ದೇಶದ ಬಂಗಾರ, ಬೆಳ್ಳಿ, ಹವಳ ಮುಂತಾದ ಜಿನಸುಗಳು ನಮಗೆ ದೊರೆಯಬೇಕೆಂದು ನಮ್ಮ ಇಚ್ಛೆಯಿರುತ್ತದೆ."

ಈ ಬಗೆಯಾಗಿ ಹಿಂದುಸ್ಥಾನಕ್ಕೆ ಹೋಗುವ ಹೊಸ ಜಲಮಾರ್ಗವನ್ನು ಪೋರ್ತುಗೀಜರು ಗೊತ್ತುಹಚ್ಚಿದ ಕೂಡಲೆ ಇಡೀ ಜಗತ್ತಿನಲ್ಲಿಯೇ ಒಂದು ಬಗೆಯ ಅಭೂತಪೂರ್ವವಾದ ಕ್ರಾಂತಿಯುಂಟಾಯಿತು. ಯುರೋಪದೊಳಗೆ ಪೋರ್ತು

ಗಾಲ ದೇಶದ ಮಹತ್ವವು ಹೆಚ್ಚಿತು. ವ್ಹೆನಿಸ, ಜಿನೋವಾ ಮುಂತಾದ ದೇಶಗಳ ವ್ಯಾಪಾರವು ಬಿದ್ದಿತು; ಹಾಗು ನೌಕಾಯನ ಕಲೆಯೊಳಗಿನ ಪ್ರವೀಣ ರಾಷ್ಟ್ರಗಳು ಉದಯಹೊಂದಿದವು.

೧೫೦೩ರಲ್ಲಿ ಅಲಬುಕರ್ಕ ಎಂಬ ಹೆಸರಿನ ಪೋರ್ತುಗೀಜನು ಹಿಂದುಸ್ತಾನಕ್ಕೆ ಬಂದನು. ವಾಸ್ಕೋಡಿ ಗಾಮಾನು ವ್ಯಾಪಾರದ ಧ್ಯೇಯವನ್ನೇ ಮುಖ್ಯವಾಗಿಟ್ಟು ಕೊಂಡು ಇಲ್ಲಿಗೆ ಬಂದಿದ್ದನು, ಆದರೆ ಅಲಬುಕರ್ಕನು ಅವನಗಿಂತಲೂ ಮುಂದಾಗಿ ರಾಜ್ಯವಿಸ್ತಾರದ ಕಲ್ಪನೆಯನ್ನು ತನ್ನ ಕಣ್ಮುಂದಿರಿಸಿಕೊಂಡನು. ಆತನು ೧೫೧೦ರಲ್ಲಿ ಗೋವೆಯನ್ನು ಗೆದ್ದುಕೊಂಡನು. ೧೫೧೫ರಲ್ಲಿ ಗೋವೆಯಲ್ಲೇ ಅವನು ಕ್ರಿಸ್ತವಾಸಿ ಯಾದನು. ೧೫೨೪ರಲ್ಲಿ ವಾಸ್ಕೋಡಿ ಗಾಮಾನು ಮೂರನೇ ಸಾರೆ ಹಿಂದುಸ್ತಾನಕ್ಕೆ ಬಂದನು; ಹಾಗು ೧೫೨೪ರಲ್ಲಿ ಕೋಚಿನದಲ್ಲಿ ಮರಣಹೊಂದಿದನು. ೧೫೦೦ರಿಂದ ೧೬೦೦ರ ವರೆಗಿನ ೧೦೦ ವರ್ಷಗಳವರೆಗೆ ಪೋರ್ತುಗೀಜರು ಹಿಂದುಸ್ತಾನದಲ್ಲಿ ಭರ ಭರಾಟೆಯಲ್ಲಿದ್ದರು; ಆದರೆ ಮುಂದೆ ಅವರ ಸತ್ತೆಯು ಇಳಿಮುಖವನ್ನು ಹೊಂದಿತು; ಯಾಕಂದರೆ, ಯುರೋಪದೊಳಗಿನ ಪೋರ್ತುಗೀಜ ರಾಜಸತ್ತೆಯು ಸ್ಪೇನದೇಶದ ಸ್ವಾಧೀನವಾಯಿತು. ಮುಂದೆ ೧೬೪೦ರಲ್ಲಿ ಪೋರ್ತುಗೀಜರು ಮತ್ತೆ ಸ್ವತಂತ್ರ ರಾದರೂ ಅಷ್ಟರೊಳಗೆ ಡಚ್ಚ ಹಾಗು ಇಂಗ್ಲಿಷ ಜನರು ಹಿಂದುಸ್ತಾನದೊಳಗಿನ ಪೋರ್ತುಗೀಜರ ವ್ಯಾಪಾರವನ್ನು ಸ್ವಾಧೀನಪಡಿಸಿಕೊಂಡು ಬಿಟ್ಟಿದ್ದರು. ಹಿಂದುಸ್ತಾನ ದೊಳಗಿನ ಪೋರ್ತುಗೀಜರ ಹ್ರಾಸಕ್ಕೆ ಇನ್ನೂ ಕೆಲ ಕಾರಣಗಳುಂಟು. ಅವರು ಹಲವು ಕ್ರೂರ ಕೃತ್ಯಗಳನ್ನು ಮಾಡಿದ್ದೂ, ಅವರಲ್ಲಿಯ ಐಷ-ಆರಾಮಿಯ ಹೆಚ್ಚ ಳವೂ, ಮಿತಿಮೀರಿದ ಧರ್ಮಚ್ಛಲನವೂ ಅವರ ಹ್ರಾಸದ ಮುಖ್ಯ ಕಾರಣಗಳಾಗಿದ್ದವು. ಇದರಂತೆ ಯುರೋಪಿಯನ್ನ ಪುರುಷರೊಡನೆ ಏತದ್ದೇಶೀಯ ಸ್ತ್ರೀಯರ ವಿವಾಹ ಮಾಡುವ ಅವರ ಹೊಸಪದ್ಧತಿಯಿಂದ ಅವರ ಯಾವ ಉದ್ದೇಶವೂ ಸಫಲವಾಗದೆ, ಅದು ಅವರ ವಿನಾಶಕ್ಕೇ ಸಹಾಯಭೂತವಾಯಿತು. ಪೋರ್ತುಗೀಜರ ತರುವಾಯ ಡಚ್ಚರು ಹಿಂದುಸ್ತಾನದಲ್ಲಿ ಪ್ರಬಲರಾದರು.

ಡಚ್ಚರು ಹಿಂದುಸ್ತಾನಕ್ಕೆ ಬರಲಿಕ್ಕೆ ಇಂಗ್ಲಿಷರಂತೆ ಯುರೋಪದ ಉತ್ತರ ಕಡೆಯಿಂದ ಮಾರ್ಗವನ್ನು ಶೋಧಿಸತೊಡಗಿದ್ದರು; ಆದರೆ ಅದರಲ್ಲಿ ಅವರು ಸಂಪೂ ರ್ಣವಾಗಿ ಅಯಶಸ್ವಿಗಳಾದರು. ಆದರೂ ಅವರು ಪೋರ್ತುಗೀಜರ ಶೋಧದ ಸಂಪೂರ್ಣ ಲಾಭಮಾಡಿಕೊಳ್ಳಲಿಕ್ಕೆ ಸ್ವಲ್ಪವೂ ಮನಸರಿ ಮಾಡಲಿಲ್ಲ. ಪೋರ್ತು ಗೀಜರ ಒಂದೇ ನೂರು ವರ್ಷಗಳ ವ್ಯಾಪಾರದಿಂದ ಲಿಸ್ಬನ್ ಪಟ್ಟಣವು ಹೆಚ್ಚಳವನ್ನು ಪಡೆಯಿತು. ಹಿಂದುಸ್ತಾನದಿಂದ ಲಿಸ್ಬನ್ ಪಟ್ಟಣಕ್ಕೆ ಬಂದ ಮಾಲನ್ನು ಬೇರೆ ಬೇರೆ ದೇಶಗಳಿಗೆ ಒಯ್ದು ಮಾರುವ ಉದ್ಯೋಗದಲ್ಲಿ ಪೋರ್ತುಗೀಜರು ಡಚ್ಚರ ನೆರ ವನ್ನು ಪಡೆಯಬೇಕಾಯಿತು. ಡಚ್ಚರ ಹಡಗಗಳು ಲಿಸ್ಬನ್ನದೊಳಗಿನ ಎಲ್ಲ ಬಗೆಯ ಮಾಲನ್ನು ತುಂಬಿಕೊಂಡೊಯ್ದು ಯುರೋಪದ ಉತ್ತರ ನಾಡುಗಳಿಗೆಲ್ಲ ಪೂರೈಸು

ತ್ತಿದ್ದವು. ಬರಬರುತ್ತ ಡಚ್ಚ ಹಡಗುಪಡೆಗಳು ಹಿಂದುಸ್ತಾನಕ್ಕೂ ಬರತೊಡಗಿದವು. ಲಿನ್ಸಕೋಟೇನ ಎಂಬ ಹೆಸರಿನ ಒಬ್ಬ ಡಚ್ಚ ವ್ಯಾಪಾರಿಯು ಕೆಲ ದಿನಗಳವರೆಗೆ ಲಿಸ್ಬನ್ನದಲ್ಲಿದ್ದು, ಅಲ್ಲಿಂದ ಪೋರ್ತುಗೀಜರೊಡನೆ ಗೋವೆಗೆ ಬಂದನು. ಅವನು ಅಲ್ಲಿ ೧೩ ವರ್ಷಗಳ ವರೆಗೆ ಇದ್ದು, ಈ ದೇಶದ ವ್ಯಾಪಾರದ ಮಾಹಿತಿಯನ್ನು ಸಂಪಾದಿಸಿಕೊಂಡನು. ೧೫೮೯ರಲ್ಲಿ ಅವನು ಸ್ವದೇಶಕ್ಕೆ ಹೋಗಿ, ತಾನು ಸಂಪಾದಿಸಿದ ಹಿಂದುಸ್ತಾನದೊಳಗಿನ ವ್ಯಾಪಾರ ವಿಷಯಕ ಮಾಹಿತಿಯನ್ನು ೧೫೯೬ರಲ್ಲಿ ಪುಸ್ತಕ ರೂಪದಿಂದ ತನ್ನ ದೇಶದಲ್ಲಿ ಪ್ರಸಿದ್ಧಿಸಿದನು. ಇದೇ ಸಮಯಕ್ಕೆ ಆಮಸ್ಟರ್ಡಾಮದ ವ್ಯಾಪಾರಿಗಳು ಒಂದು ಸಭೆಯನ್ನು ಕೂಡಿಸಿ, ಹಿಂದುಸ್ತಾನಕ್ಕೆ ಹೊರಡುವದನ್ನು ಗೊತ್ತುಮಾಡಿದರು. ಆ ಸಭೆಯ ಠರಾವಿನಂತೆ ಕಾರ್ನೇಲಿಯಸ ಹಾಟಮನ್ ಎಂಬವನ ಕೈಕೆಳಗೆ ನಾಲ್ಕು ಹಡಗುಗಳು ಇ. ಸ. ೧೫೯೫ರಲ್ಲಿ ಆಫ್ರಿಕೆಯನ್ನು ಸುತ್ತುವರಿದು ಹಿಂದುಸ್ತಾನಕ್ಕೆ ಬಂದವು. ಅವು ಎರಡೂವರೆ ವರ್ಷಗಳ ನಂತರ ಮರಳಿ ಸ್ವದೇಶಕ್ಕೆ ಹೊರಟು ಹೋದವು. ಮುಂದೆ ೫-೬ ವರ್ಷಗಳಲ್ಲಿ ಡಚ್ಚರು ೧೪-೧೫ ಸಾರಿಗೆಗಳನ್ನು ಮಾಡಿದರು; ಹಾಗು ಅವರ ಹಲವು ಕಂಪನಿಗಳು ಸ್ಥಾಪಿಸಲ್ಪಟ್ಟವು. ಡಚ್ಚಪಾರ್ಲಿಮೆಂಟದವರು ಮುಂದೆ ಅವೆಲ್ಲ ಕಂಪನಿಗಳನ್ನು ಒಟ್ಟುಗೂಡಿಸಿ "ಡಚ್ಚ ಈಸ್ಟ ಇಂಡಿಯಾ ಕಂಪನಿ" ಎಂಬ ಹೆಸರಿನ ದೊಡ್ಡದೊಂದು ಕಂಪನಿಯನ್ನು ೧೬೦೨ರಲ್ಲಿ ಸ್ಥಾಪಿಸಿದರು.

೧೭ನೇ ಶತಮಾನದಲ್ಲಿ ಪೂರ್ವಕಡೆಯ ವ್ಯಾಪಾರವೆಲ್ಲ ಡಚ್ಚರ ಸ್ವಾಧೀನದಲ್ಲಿದ್ದಿತು. ಅದಕ್ಕೆ ಕಾರಣವೆಂದರೆ, ಆಗ ಅವರ ಸಮುದ್ರದ ಮೇಲಿನ ವರ್ಚಸ್ಸೇ ಅಷ್ಟು ಅಬಾಧಿತವಾಗಿತ್ತು. ಡಚ್ಚ ಜನರ ಉದ್ದೇಶವು ಬರಿಯ ವ್ಯಾಪಾರದ ಹೆಚ್ಚಳವೇ ಆಗಿತ್ತು. ಪೋರ್ತುಗೀಜರಂತೆ ಅವರು ವ್ಯಾಪಾರವನ್ನು ಮುಳುಗಿಸಿ, ಕ್ರಿಸ್ತೀ ಧರ್ಮವನ್ನು ಬೆಳಸುವದೂ, ಹೊಸ ಹೊಸ ದೇಶಗಳನ್ನು ಗೆದ್ದು ತಮ್ಮ ರಾಜ್ಯವನ್ನು ವಿಸ್ತರಿಸುವದೂ ಡಚ್ಚರ ಉದ್ದೇಶವಾಗಿರಲಿಲ್ಲ. ಯಾವದೊಂದು ಪ್ರದೇಶದ ರಾಜಕೀಯ ಅಂತರ್ವ್ಯವಸ್ಥೆಯಲ್ಲಿ ಅವರು ಕೈ ಹಾಕಲಿಲ್ಲ. ೧೬೦೯ರಲ್ಲಿ ಡಚ್ಚರು ತಮ್ಮ ಮೊದಲನೇ ವಖಾರವನ್ನು ಮದ್ರಾಸದ ಬಳಿಯ ಪಾಲಕೋಲ ಎಂಬಲ್ಲಿ ಸ್ಥಾಪಿಸಿದರು. ಮುಂದೆ ೪೯ ವರ್ಷಕ್ಕೆ, ಅಂದರೆ ೧೬೫೮ರಲ್ಲಿ ಸಿಲೋನದೊಳಗಿನ ಪೋರ್ತುಗೀಜರ ಜಫನಾ ಪಟ್ಟಣವೆಂಬ ಕೋಟೆಯನ್ನು ಅವರು ಆಕ್ರಮಿಸಿದರು. ಮಲಬಾರ ದಂಡೆಯೊಳಗಿನ ಪೋರ್ತುಗೀಜರ ಎಲ್ಲ ಠಾಣ್ಯಗಳನ್ನು ೧೬೬೩ರಲ್ಲಿ ಗೆದ್ದು, ೧೬೭೪ರಲ್ಲಿ ಸೆಂಟ ಥಾಮಿ ಎಂಬಲ್ಲಿಂದ ಅವರನ್ನು ಹೊಡೆದೋಡಿಸಿದರು. ಈ ರೀತಿಯಾಗಿ ಡಚ್ಚ ಜನರು ಹಿಂದುಸ್ತಾನದಲ್ಲಿ ಸರ್ವಸಮರ್ಥರಾಗಿ ಕುಳಿತರು; ಆದರೆ ಅವರ ಆ ವೈಭವವನ್ನು ನಿಸ್ತೇಜಗೊಳಿಸಬಲ್ಲ ಹೊಸದೊಂದು ಸತ್ತೆಯು ಹಿಂದುಸ್ತಾನದಲ್ಲಿ ಮೆಲ್ಲಮೆಲ್ಲನೆ ಬೆಳೆಯುತ್ತಿತ್ತು. ಅಂಥ ಆ ಹೊಸ ಸತ್ತೆಯೇ ಇಂಗ್ಲಿಷರದಾಗಿತ್ತು.

ಅಂಬೋಯನಾದಲ್ಲಿ ಡಚ್ಚರು ೧೬೨೩ರಲ್ಲಿ ಮಾಡಿದ ಇಂಗ್ಲಿಷರ ಕೊಲೆಯೇ ಹಿಂದುಸ್ತಾನದಲ್ಲಿ ಬ್ರಿಟಿಶರ ಸತ್ತೆಯು ತಳವೂರಲಿಕ್ಕೆ ಕಾರಣವಾಯಿತು. ಡಚ್ಚರ ಆಕುಂಚಿತ ವ್ಯಾಪಾರೀ ಧೋರಣದ ಮೂಲಕ ಅವರ ಸತ್ತೆಯು ಲೋಲಾಡಹತ್ತಿತು. ಕ್ರೂರತನದಲ್ಲಿ ಅವರು ಪೋರ್ತುಗೀಜರನ್ನು ಕೂಡ ಮೀರಿದರು. ಅದರಿಂದ ಅವರ ವಿಷಯವಾಗಿ ಏತದ್ದೇಶೀಯ ಜನರಲ್ಲಿ ಅಪ್ರೀತಿಯು ಹೆಚ್ಚಿತು; ಅಲ್ಲದೆ ಅದೇ ಕಾಲಕ್ಕೆ ಉಳಿದ ನೌಕಾಯನ ವಿಶಾರದ ರಾಷ್ಟ್ರಗಳು ಮುಂದರಿದವು. ಡಚ್ಚರಾಷ್ಟ್ರದಲ್ಲಿ ಅತ್ಯಲ್ಪ ಜನರಿದ್ದು, ಪೂರ್ವಕಡೆಯ ಅವರ ರಾಜ್ಯಸತ್ತೆಯು ತೀರ ಆಕುಂಚಿತ ಸ್ವರೂಪದ್ದಾಗಿತ್ತು. ಅದರಿಂದ ಅವರು ಇಂಗ್ಲಿಷರೆದುರಿಗೆ ಸ್ಥಿರವಾಗಿ ಉಳಿಯದಾದರು. ೧೭೫೯ರಲ್ಲಿ ಕ್ಲೈವನು ಡಚ್ಚರನ್ನು ಚಿನಸುರಾ ಎಂಬಲ್ಲಿ ಸಂಪೂರ್ಣವಾಗಿ ಸೋಲಿಸಿದನು. ಅಂದಿನಿಂದ ಹಿಂದುಸ್ತಾನದಲ್ಲಿ ಡಚ್ಚರ ಆಧೀನವಾದ ನಾಡು ಉಳಿಯಲೇ ಇಲ್ಲ. ಡಚ್ಚರ ತರುವಾಯ ಇಂಗ್ಲಿಷ ಮತ್ತು ಫ್ರೆಂಚರೊಳಗೆ ಇಲ್ಲಿಯ ವ್ಯಾಪಾರದ ಬಗ್ಗೆ ಕಲಹಕ್ಕೆ ಪ್ರಾರಂಭವಾಯಿತು. ಕಡೆಗೆ ಫ್ರೆಂಚರೂ ಪರಾಭವ ಹೊಂದಿ ಹೋದ ಬಳಿಕ, ಇಂಗ್ಲಿಷರೇ ಗಂಡುಗಲಿಗಳಾಗಿ ಇಲ್ಲಿ ಸಂಚರಿಸಲಾರಂಭಿಸಿದರು.

ಹಿಂದುಸ್ತಾನಕ್ಕೆ ಇಂಗ್ಲಿಷರು ಯಾವಾಗ ಬಂದರೆಂಬದನ್ನು ನೋಡಹೋದರೆ ೯ನೇ ಶತಕದಲ್ಲಿ ಆಲ್‌ಫ್ರೇಡರಾಜನು ಕಳಿಸಿದ ಆತನ ಪ್ರತಿನಿಧಿಯೇ ಇಲ್ಲಿಗೆ ಎಲ್ಲಕ್ಕೂ ಮೊದಲು ಬಂದ ಇಂಗ್ಲಿಷನೆನ್ನಬಹುದು. ಆ ಬಳಿಕ ೬-೭ ನೂರು ವರ್ಷಗಳಿಗೆ ಅಂದರೆ ೧೬ನೇ ಶತಕದಲ್ಲಿ ಸರ ಜಾರ್ಜ ಮುಂಡೇವ್ಹಿಲನೆಂಬ ಇಂಗ್ಲಿಷನು ಹಿಂದುಸ್ತಾನಕ್ಕೆ ಬಂದನು. ಐತಿಹಾಸಿಕ ದೃಷ್ಟಿಯಿಂದ ಆ ಇಬ್ಬರು ಇಂಗ್ಲಿಷರ ಆಗಮನವು ವಾದಗ್ರಸ್ತವಾಗಿದೆ; ಆದರೆ ಮುಂಡೇವ್ಹಿಲನು ಹಿಂದುಸ್ತಾನದ ಪ್ರವಾಸದ ಬಗ್ಗೆ ಬರೆದ ಪುಸ್ತಕವು ೧೪೯೯ರಲ್ಲಿ ಲಂಡನ್ನದಲ್ಲಿ ಛಾಪಿಸಲ್ಪಟ್ಟಿತೆಂದೂ, ಅದೇ ಇಂಗ್ಲಂಡದ ಛಾಪಖಾನೆಯಲ್ಲಿ ಎಲ್ಲಕ್ಕೂ ಮೊದಲು ಛಾಪಿಸಿದ ಪುಸ್ತಕವೆಂದೂ ಜನರನ್ನುತ್ತಿರುವದು ಮಾತ್ರ ನಿಜವು. ಈ ಸಂಗತಿಯು ನಿಜವಿದ್ದದ್ದೇ ಆದರೆ, ಇಂಗ್ಲಿಷರು ಛಾಪಿಸಿದ ಮೊಟ್ಟಮೊದಲಿನ ಆ ಪುಸ್ತಕವು ಹಿಂದುಸ್ತಾನಕ್ಕೆ ಸಂಬಂಧಿಸಿದ್ದೇ ಆಗಿರುವ ಯೋಗಾಯೋಗವು ವಿಲಕ್ಷಣವಾದದ್ದೇ ಸರಿ! ಮೇಲೆ ವರ್ಣಿಸಿದ ಆ ಇಂಗ್ಲಿಷರ ಆಗಮನವು ನಿಜವೆಂದು ತಿಳಿದರೂ ಅವರು ಇಲ್ಲಿಗೆ ಬಂದು ಈ ದೇಶವನ್ನು ನೋಡಿ ಹೋಗಿರಬಹುದು ಮಾತ್ರ; ಆದರೆ ಆಧುನಿಕ ಕಾಲದಲ್ಲಿ ಹಿಂದುಸ್ತಾನಕ್ಕೆ ನಿಜವಾಗಿ ಬಂದವನೂ ಇಲ್ಲಿ ವಸತಿ ಮಾಡಿಕೊಂಡಿದ್ದವನೂ ಆದ ಮೊಟ್ಟ ಮೊದಲಿನ ಇಂಗ್ಲಿಷ ಗೃಹಸ್ಥನೆಂದರೆ, ಫಾದರ ಟಾಮಸ ಸ್ಟೀಫನ್ನನೇ ಸರಿ, ೧೫೭೯ ರ ಆಕ್ಟೋಬರ ತಿಂಗಳಲ್ಲಿ ಸ್ಟಿಫನ್ನನು ಕ್ರಿಸ್ತಿಧರ್ಮಪ್ರಸಾರಕ್ಕಾಗಿಯೂ, ಸಾಧಿಸಿದರೆ ವ್ಯವಹಾರವನ್ನು ಮಾಡಬೇಕೆಂದೂ ಉದ್ದೇಶಗಳನಿಟ್ಟುಕೊಂಡು ಗೋವೆಗೆ ಬಂದನು. ಅಂದಿನಿಂದ ಅವನ ಆಯುಷ್ಯವೆಲ್ಲ ಹಿಂದುಸ್ತಾನದಲ್ಲಿಯೇ ಖರ್ಚಾಯಿತು. ಅವನು ಇಲ್ಲಿಯ ಲೋಕಸ್ಥಿತಿಯ ಹಾಗು ವ್ಯಾಪಾರದ ಮನೋರಂಜಕ ಸಂಗತಿಗಳನ್ನು ವಿಲಾಯತಿಗೆ

ಬರೆಬರೆದು ಕಳಿಸುತ್ತಿದ್ದನು. ಅವನು ಸಾಷ್ಟಿ ಅಂದರೆ ಠಾಣೆ ಎಂಬಲ್ಲಿ ವಾಸಿಸಿ, ಹಿಂದೂಜನರಿಗೆ ಉಪದೇಶ ಮಾಡಿ, ಅವರನ್ನು ಕುಲಗೆಡಿಸಿ, ಕ್ರಿಸ್ತೀಧರ್ಮವನ್ನು ಪ್ರಸಾರ ಮಾಡುವವದರಲ್ಲಿಯೇ ಎಷ್ಟೋ ವರ್ಷಗಳನ್ನು ಕಳೆದನು. ಸ್ಟೀಫನ್ನ ಸಾಹೇಬನು 'ಕ್ರಿಸ್ತಪುರಾಣ'ವೆಂಬ ಹೆಸರಿನ ಕ್ರಿಸ್ತನ ವರ್ಣನಪರವಾದ ಒಂದು ಗ್ರಂಥವನ್ನು ಕೊಂಕಣೀ-ಮರಾಠೀ ಭಾಷೆಯಲ್ಲಿ, ಆದರೆ ರೋಮನ್‌ಲಿಪಿಯಲ್ಲಿ ಉತ್ಕೃಷ್ಟವಾಗಿ ಬರೆದನು. ಮರಾಠೀ-ಕೊಂಕಣೀ ಭಾಷೆಯ ವ್ಯಾಕರಣವನ್ನು ಆ ಸಾಹೇಬಬಹದ್ದೂರನು ಪೋರ್ತುಗೀಜ ಭಾಷೆಯಲ್ಲಿ ಬರೆದನು. ೧೫೮೩ರಲ್ಲಿ ರಾಲ್ಫ ಫಿಚ್ಚ ಎಂಬ ಹೆಸರಿನ ಇಂಗ್ಲಿಷನು ಭೂಮಾರ್ಗದಿಂದ ಇರಾಣೀ ಅಖಾತದ ವರೆಗೆ ಬರಲು, ಅಲ್ಲಿಯ ಪೋರ್ತುಗೀಜರು ಅವನನ್ನು ಸೆರೆಹಿಡಿದು ಗೋವೆಗೆ ಕಳಿಸಿದರು. ಅವನು ಹಿಂದುಸ್ತಾನದಿಂದ ಮರಳಿ ವಿಲಾಯತಿಗೆ ಹೋದ ಬಳಿಕ, ಅವನು ಹೇಳಿದ ಇಲ್ಲಿಯ ಜನರ ಹಾಗು ಸಂಪತ್ತಿನ ವಿಷಯದ ಮನೋರಂಜಕ ಸಂಗತಿಗಳನ್ನು ಕೇಳಿದ ಮೇಲೆ ಹಿಂದುಸ್ತಾನದ ವಿಷಯಕವಾಗಿ ಅಲ್ಲಿಯ ಇಂಗ್ಲಿಷ ಜನರಲ್ಲಿ ಔತ್ಸುಕ್ಯದ ಕಲ್ಪನೆಗಳುಂಟಾದವು. ಮೂರು ವರ್ಷಗಳ ತರುವಾಯ ಅಂದರೆ ೧೫೮೬ರಲ್ಲಿ ಟಾಮಸ ಕವೆಂಡಿಶ್ ಎಂಬ ಹೆಸರಿನ ಇಂಗ್ಲಿಷನು ಭೂಪ್ರದಕ್ಷಿಣೆ ಮಾಡುತ್ತ ಮಾಡುತ್ತ ಹಿಂದುಸ್ತಾನಕ್ಕೆ ಬಂದಿದ್ದನು. ಅವನು ಮರಳಿ ವಿಲಾಯತಿಗೆ ಹೋದನಂತರ, ಅವನ ಸಹಾಯದಿಂದ ಲಂಡನ್ನದ ಪ್ರಮುಖ ವ್ಯಾಪಾರಿಗಳು ಒಂದು ಅರ್ಜಿಯನ್ನು ಬರೆದು, ಅದನ್ನು ಆಗಿನ ಅಲ್ಲಿಯ ಸಾಮ್ರಾಜ್ಞಿಯಾದ ಎಲಿಜಾಬೇಥಳ ಕಡೆಗೆ ಕಳಿಸಿದರು. ಅಂದಿನಿಂದ ಪೂರ್ವದೇಶಗಳಲ್ಲಿ ವ್ಯಾಪಾರ ಮಾಡುವದಕ್ಕಾಗಿ ಆ ರಾಣಿಯು ತನ್ನ ಪ್ರಜೆಗಳಿಗೆ ಅಪ್ಪಣೆಯನ್ನಿತ್ತಳು. ಮುಂದೆ ತುಸ ವರ್ಷಗಳಲ್ಲೇ ಅಂದರೆ ೧೬೦೦ರಲ್ಲಿ ಇಂಗ್ಲಿಷ ಈಸ್ಟ ಇಂಡಿಯಾ ಕಂಪನಿಯು ಸ್ಥಾಪಿಸಲ್ಪಟ್ಟಿತು. ಇದರ ಮುಂದಿನ ವರ್ಷವೇ ಎಲಿಜಾಬೇಥರಾಣಿಯ ಮುಖಾಂತರಅಲ್ಲಿಯ ವ್ಯಾಪಾರಿಗಳು ಮಿಲನಹಾಲ್ ಎಂಬ ಹೆಸರಿನ ಸಾಹಸೀ ಇಂಗ್ಲಿಷನನ್ನು ಅಕಬರ ಬಾದಶಹನೊಡನೆ ವ್ಯಾಪಾರ ವಿಷಯಕವಾಗಿ ಮಾತನಾಡುವದಕ್ಕೆಂದು ಹಿಂದುಸ್ತಾನಕ್ಕೆ ಕಳಿಸಿದ್ದರು. ಅವನು ತನ್ನ ಕೆಲಸವನ್ನು ಸಮಾಧಾನಕರವಾಗಿ ಈಡೇರಿಸಿಕೊಂಡು ೧೬೦೨ರಲ್ಲಿ ಸ್ವದೇಸಕ್ಕೆ ಹಿಂದಿರುಗಿದನು. ಆಗ ಅವನ ಮುಖಾಂತರ ದಿಲ್ಲೀ ಬಾದಶಹನ ವೈಭವದ, ಹಿಂದುಸ್ತಾನದೊಳಗಿನ ಸುಧಾರಣೆಗಳ ಹಾಗು ಸಂಪತ್ತಿಯ ವಿಶೇಷ ಪ್ರಕಾರದ ಕಲ್ಪನೆಯು ಅಲ್ಲಿಯ ಇಂಗ್ಲಿಷ ಜನರಲ್ಲಿ ಉಂಟಾಯಿತು.

ಎಲಿಜಾಬೇಥರಾಣಿಯು ಅಕಬರ ಬಾದಶಹನಿಗೂ ಇತ್ತಕಡೆಯ ಬೇರೆ ರಾಜರಿಗೂ ಕೊಟ್ಟ ಪತ್ರಗಳು ಓದತಕ್ಕಂಥವಾದ್ದರಿಂದ ಅವುಗಳೊಳಗಿನ ಮುಖ್ಯ ಮುಖ್ಯ ಸಂಗತಿಗಳನ್ನಷ್ಟೇ ಇಲ್ಲಿ ಕೊಡುತ್ತೇವೆ:—

"ಸರ್ವಶಕ್ತಿಮಂತನಾದ ದೇವರು ಲೋಕದಲ್ಲಿ ಉತ್ತಮ ವಸ್ತುಗಳನ್ನು ನಿರ್ಮಿಸಿ ಎಲ್ಲ ಕಡೆಗೂ ಸುವ್ಯವಸ್ಥೆಯನ್ನು ನೆಲೆಸಿರುತ್ತಾನೆ; ಎಲ್ಲ ಉತ್ತಮ

ಪದಾರ್ಥಗಳು ಆ ದೇವರ ಅಪ್ಪಣೆಯ ಮೇರೆಗೆ ಪೃಥ್ವಿಯೊಳಗಿನ ಸಕಲ ರಾಷ್ಟ್ರಗಳಿಗೂ ದೊರೆತು, ಈಶ್ವರನ ಔದಾರ್ಯದ ಲಾಭವು ಎಲ್ಲರಿಗೂ ಸಮವಾಗಿ ಆಗಬೇಕೆಂಬುದೇ ಈಶ್ವರೀ ಸಂಕೇತವಿದ್ದಂತೆ ತೋರುತ್ತದೆ. ಇದರಿಂದ ದೂರ ದೂರದ ದೇಶದೊಡನೆ ವ್ಯಾಪಾರ ಬೆಳೆಯುವದಲ್ಲದೆ, ಭಿನ್ನ ಭಿನ್ನ ಜನಾಂಗಗಳಲ್ಲಿ ಸ್ನೇಹಭಾವವೂ ಹೆಚ್ಚುವದು. ಪರರಾಷ್ಟ್ರದ ಜನರು ನಿಮ್ಮಲ್ಲಿಗೆ ಬಂದರೆ, ನೀವು ಅವರನ್ನು ಚನ್ನಾಗಿ ಸತ್ಕರಿಸುತ್ತಿರುವಿರೆಂಬ ಸಂಗತಿಯು ನಮ್ಮ ದೇಶದ ವ್ಯಾಪಾರಿಗಳ ಮುಖಾಂತರ ತಿಳಿದುದರಿಂದ ಅವರಿಗೆ ನಿಮ್ಮ ದೇಶಕ್ಕೆ ಹೋಗಲಿಕ್ಕೆ ಅಪ್ಪಣೆಯನ್ನೀಯಲಿಕ್ಕೆ ನಮಗೆ ತುಂಬಾ ಸಂತೋಷವೆನಿಸುತ್ತದೆ. ಅವರನ್ನು ಚನ್ನಾಗಿ ಕಂಡರೆ, ಅವರು ನಡೆ-ನುಡಿಯಲ್ಲಿ ಸಭ್ಯರೆಂದು ತಮಗೆ ಅನಿಸಬಹುದೆಂದೂ, ಅವರು ತಮ್ಮ ದೇಶಕ್ಕೆ ವ್ಯಾಪಾರಕ್ಕಾಗಿ ಬಂದ ಬಗ್ಗೆ ತಮಗೆ ಕೆಡಕೆನಿಸದೆ ಸಂತೋಷವೇ ಆಗಬಹುದೆಂದೂ ನಾವು ಸಂಪೂರ್ಣ ನಂಬಿದ್ದೇವೆ. ಸ್ಪೇನ ಹಾಗು ಪೋರ್ತುಗೀಜ ಜನರು ಈ ಮೊದಲೇ ಇತ್ತಕಡೆಯ ಮಾಲನ್ನು ತಮ್ಮಲ್ಲಿಗೆ ವ್ಯಾಪಾರಕ್ಕಾಗಿ ತರುತ್ತಿರುವರು; ಆದರೆ ಆ ಜನರು ವ್ಯಾಪಾರದ ಬಗ್ಗೆ ನಮ್ಮ ದೇಶದವರಿಗೂ, ಬೇರೆ ದೇಶದವರಿಗೂ ವಿನಾಃಕಾರಣ ತೊಂದರೆ ಕೊಡುತ್ತಿರುತ್ತಾರೆ. ನಿಜವಾಗಿ ನೋಡಿದರೆ, ಅವರು ಹಿಂದುಸ್ತಾನಕ್ಕೆ ಬರಿಯ ವ್ಯಾಪಾರಕ್ಕೆಂದು ಹೋಗಿರುವದಿಲ್ಲ. ಅತ್ತಕಡೆಯ ಎಲ್ಲ ದೇಶಗಳ ಒಡೆಯರೂ, ಬಾದಶಹರೂ ತಾವೇ ಎಂದು ಅವರು ತಿಳಿದುಕೊಂಡಿರುತ್ತಾರೆ; ಹಾಗು ಅತ್ತಕಡೆಯ ಜನರೆಲ್ಲ ತಮ್ಮ ಪ್ರಜೆಗಳೆಂದು ಅವರು ಇತ್ತ ಕಡೆಗೆ ಹೇಳಿಕೊಳ್ಳುತ್ತಿರುತ್ತಾರೆ. ಇಷ್ಟೇ ಅಲ್ಲ, ಅವರು ತಮ್ಮ ಪತ್ರವ್ಯವಹಾರದಲ್ಲಿ ಕೂಡ ಹಾಗೆಯೇ ಸ್ಪಷ್ಟವಾಗಿ ಬರೆಯುತ್ತಿರುತ್ತಾರೆ. ನಮ್ಮ ದೇಶದ ಯಾವ ಜನರು ತಮ್ಮಲ್ಲಿಯ ವ್ಯಾಪಾರದ ಸೌಖ್ಯ ಉದ್ದೇಶಕ್ಕಾಗಿಯೇ ತಮ್ಮ ಕಡೆಗೆ ಬಂದಿರುವರೋ, ಅವರಿಗೆ ತಾವು ತಮ್ಮ ದೇಶದಲಿ ಇಂಬುಗೊಡುವಿರೆಂದೂ, ನಮ್ಮ ವ್ಯಾಪಾರವನ್ನೂ ಸ್ನೇಹದ ಒಳಿಕೆಯನ್ನೂ ಹೆಚ್ಚಿಸಲಿಕ್ಕೆ ಕಾರಣರಾದೀರೆಂದೂ ನಮ್ಮ ಅಭಿಲಾಷೆಯಿದೆ. ನಮ್ಮ ಕಡೆಯ ಈ ಪತ್ರವನ್ನು ತಂದ ಗೃಹಸ್ಥರು ನಿಮ್ಮೊಡನೆ ಯಾವ ಶರ್ತು-ಕರಾರಗಳನ್ನು ಮಾಡಿಕೊಳ್ಳುವರೋ, ನಾವು ಅದಕ್ಕೆ ಸಂಪೂರ್ಣವಾಗಿ ಒಪ್ಪಿಕೊಂಡು, ಅದರಂತೆ ಇಮಾನದಿಂದ ನಡೆಯುತ್ತೇವೆ; ಹಾಗು ತಮ್ಮ ಆ ಅಮೂಲ್ಯವಾದ ಉಪಕಾರವನ್ನು ಸಂತೋಷದಿಂದ ತೀರಿಸುವ ಪ್ರಯತ್ನ ಮಾಡುತ್ತೇವೆ.''

೧೬೦೮ರಲ್ಲಿ ಕ್ಯಾಪ್ಟನ್ ಹಾಕಿನ್ಸ ಎಂಬ ಹೆಸರಿನ ಇಂಗ್ಲಿಷನು ದಿಲ್ಲೀ ಬಾದಶಹನ ಭೆಟ್ಟಿಗೆ ಹೋದನು. ಇಂಗ್ಲಿಷ ಕಂಪನಿಯವರು ಸುರತದಲ್ಲಿ ವ್ಯಾಪಾರ ಮಾಡಬಹುದೆಂಬ ಅಪ್ಪಣೆಯು ಅವನಿಗೆ ಬಾದಶಹನಿಂದ ಸಿಕ್ಕಿತು. ೧೬೧೧ರಲ್ಲಿ ಕಾರೋಮಂಡಲದ ದಂಡೆಯಲ್ಲಿ ಕ್ಯಾಪ್ಟನ್ ಹಿಪಾನ್‌ನೆಂಬ ಇಂಗ್ಲಿಷನು ಮಚ್ಛಲೀಪಟ್ಟಣದ ಬಳಿಯ ಪೆಟ್ಟಾಪುಟ್ಟಿ ಎಂಬಲ್ಲಿ ಇಂಗ್ಲಿಷ ವಖಾರವನ್ನು ಸ್ಥಾಪಿಸಿದನು. ಹಾಕಿನ್ಸನ ತರುವಾಯ ಹಲವು ಇಂಗ್ಲಿಷ ವ್ಯಾಪಾರಿಗಳು ಮೊಗಲ ದರ್ಬಾರಿಗೆ ಬಂದಿದ್ದರು. ೧೬೧೧ರಿಂದ

೧೬೧೪ರ ವರೆಗೆ ಇಂಗ್ಲಿಷ ಮತ್ತು ಪೋರ್ತುಗೀಜರ ಹಡಗುಪಡೆಗಳ ಸಣ್ಣ-ಪುಟ್ಟ ಕಾಳಗಗಳಾದವು. ಅವುಗಳಲ್ಲಿ ಇಂಗ್ಲಿಷರೇ ಜಯಶಾಲಿಗಳಾದರು. ೧೬೧೬ ರಲ್ಲಿ ಕ್ಯಾಪ್ಟನ್ ಕೀಲಿಂಗ ಎಂಬವನು ಕಾಲೀಕತ್ತಿಗೆ ಹೋಗಿ, ಝಾಮೊರಿನ್ನನ ಕೂಡ ವ್ಯಾಪಾರೀ ಒಪ್ಪಂದವನ್ನು ಮಾಡಿಕೊಂಡನು. ೧೬೧೨ನೇ ಇಸ್ವಿಯಲ್ಲಿ ವಿಲಾಯತಿಯೊಳಗೆ ಸಾಮೂಹಿಕ ಬಂಡವಾಳದ ಪದ್ಧತಿಯು ಪ್ರಾರಂಭವಾಯಿತು. ಅದರಿಂದ ವ್ಯಾಪಾರಕ್ಕೆ ಬೇಕಾದಷ್ಟು ಬಂಡವಾಳವು ಕೂಡಿ, ಭರಭರಾಟೆಯು ಪ್ರಾಪ್ತವಾಯಿತು. ಇದೇ ಸಮಯಕ್ಕೆ ಕ್ಯಾಪ್ಟನ್ ಹೌಟನ್ನನೆಂಬ ಇಂಗ್ಲಿಷ ವ್ಯಾಪಾರಿಯು ಸುರತಕ್ಕೆ ಬಂದನು. ಅವನು ಅಲ್ಲಿಯ ವ್ಯಾಪಾರೀ ಅಧಿಕಾರಿಯ ನೆರವಿನಿಂದ ಬಡೋದೆ, ಅಹಮ್ಮದಾಬಾದ, ಗುಜರಾಥ ಮುಂತಾದ ಪ್ರಾಂತಗಳಲ್ಲಿ ಸಂಚರಿಸಿ, ಅರಿವೆ, ಹತ್ತಿ, ನೀಲಿ ಮುಂತಾದ ಜಿನಸುಗಳ ವ್ಯಾಪಾರವನ್ನು ಹೆಚ್ಚಿಸುವ ಏರ್ಪಾಟು ಮಾಡಿದನು. ೧೬೧೪ರಲ್ಲಿ ಇಂಗ್ಲಂಡದ ಅರಸನಾದ ಜೇಮ್ಸನಿಂದ ಸರ ಥಾಮಸ ನೆಂಬ ವಿದ್ವಾಂಸ ಹಾಗು ಹುರುಪಿನ ವಕೀಲನು ದಿಲ್ಲಿಯ ಜಹಾಂಗೀರ ಬಾದಶಹನ ಕಡೆಗೆ ಕಳಿಸಲ್ಪಟ್ಟನು; ಹಾಗು ಆ ವಕೀಲನ ಮಧ್ಯಸ್ತಿಕೆಯಿಂದ ಆ ಇಬ್ಬರು ಅರಸರಲ್ಲಿ ಒಪ್ಪಂದದ ಶರ್ತುಗಳು ಗೊತ್ತಾದವು; ಆದರೆ ದರ್ಬಾರೀ ಜನರ ಧೂರ್ತತನದ ಮೂಲಕ ಆ ಒಪ್ಪಂದದ ಕಾಗದದ ಮೇಲೆ ಬಾದಶಹನ ದಸ್ಕತ್ತಾಗಲಿಲ್ಲ. ಆದರೂ ಶಹಾಜಾದನ ಮಧ್ಯಸ್ತಿಕೆಯ ಮೂಲಕ ಇಂಗ್ಲಿಷರಿಗೆ ಸುರತದಲ್ಲಿ ತಳವೂರಿ ನಿಲ್ಲಲಿಕ್ಕೂ, ಈ ದೇಶದಲ್ಲಿ ವ್ಯಾಪಾರಕ್ಕೆಂದು ಸಂಚರಿಸಲಿಕ್ಕೂ ಮತ್ತು ಮೊಗಲರ ದರ್ಬಾರದಲ್ಲಿ ಇಂಗ್ಲಿಷರ ವಕೀಲನನ್ನಿಡಲಿಕ್ಕೂ ಅನುವು ದೊರೆಯಿತು. ಅವನು ಒಂದು ವರ್ಷದ ವರೆಗೆ ಹಿಂದುಸ್ತಾನದಲ್ಲಿದ್ದ ಬಳಿಕ "ವ್ಯಾಪಾರವಿಷಯಕವಾದ ತಮ್ಮ ಇಚ್ಛೆಯು ಸಫಲವಾಗಲಿಕ್ಕೆ ಅಡ್ಡಿಯಿಲ್ಲ; ಆದರೆ ಬಾದಶಹನೊಡನೆ ಸಮಭಾವದ ಕಾಯಮ ಒಪ್ಪಂದವಾಗುವದು ಮಾತ್ರ ಶಕ್ಯವಿರುವದಿಲ್ಲ. ಮೊಗಲರಿಗೆ ಸಹಾಯ ಮಾಡುವ ಹಾಗು ಕೋಟೆ-ಕೊತ್ತಳಗಳನ್ನು ಕಟ್ಟಿಕೊಂಡು ಸಮುದ್ರ ದಂಡೆಯ ಸಂರಕ್ಷಣ ಮಾಡಲೆಳಿಸುವ ಬೇತುಗಳು ಉಪಯುಕ್ತವಾಗುವದಿಲ್ಲ. ವ್ಯಾಪಾರ ಹಾಗು ಯುದ್ಧ ಇವೆರಡು ಸಂಗತಿಗಳು ಪರಸ್ಪರ ವಿರುದ್ಧವಾದವುಗಳು. ಸಮುದ್ರದ ಮೇಲೆ ಶಾಂತರೀತಿಯಿಂದ ವ್ಯಾಪಾರ ಮಾಡಿ ಸಿಕ್ಕಷ್ಟೇ ಹೆಚ್ಚಾದ ಉಳಿತಾಯವೆಂದು ತಿಳಿಯುವ ಹೇತುವನ್ನಿಟ್ಟುಕೊಳ್ಳುವದು ವಿಹಿತವಾಗಿದೆ." ಎಂಬ ನಿಶ್ಚಿತ ಸಂಗತಿಯನ್ನು ತಮ್ಮ ಅರಸನಿಗೆ ತಿಳಿಸಿದನು.

ಎರಡು ವರ್ಷಗಳ ವರೆಗೆ ಸರ್ ಥಾಮಸನು ಮೊಗಲರ ದರ್ಬಾರಿನಲ್ಲಿದ್ದ ಬಳಿಕ ಅವನು ಬಾದಶಹನಿಂದ ಜೇಮ್ಸ ರಾಜನಿಗೊಂದು ಪತ್ರವನ್ನು ಬರೆಸಿಕೊಂಡನು. ತಾವು ಇಂಗ್ಲಿಷ ವ್ಯಾಪಾರಸ್ಥರ ಪರಾಮರ್ಷವನ್ನು ಚನ್ನಾಗಿ ತಕ್ಕೊಳ್ಳುವೆವೆಂದು ಬಾದಶಹನು ಆ ಪತ್ರದಲ್ಲಿ ಭಾಷೆಕೊಟ್ಟಿದ್ದನು. ಕ್ರಿ. ಶ. ೧೬೧೯ರಲ್ಲಿ ಕ್ಯಾಪ್ಟನ್ ಕೀಲಿಂಗನು ದಕ್ಷಿಣ ಹಿಂದುಸ್ತಾನದೊಳಗಿನ ಕ್ರಾಂಗೆನೂರದಲ್ಲಿ ತಮ್ಮ ವಖಾರ

ವನ್ನು ಇಡಲಿಕ್ಕೆ ಪ್ರಯತ್ನಪಟ್ಟನು; ಮತ್ತು ಝಾಮೋರಿನ್ನನ ಕೃಪೆಯಿಂದ ಆ ಕ್ರಂಗನೂರ ಕೋಟೆಯೂ ಇಂಗ್ಲಿಷರಿಗೆ ದೊರೆಯತಕ್ಕದ್ದಿತ್ತು; ಆದರೆ ಅಲ್ಪಾವಕಾಶದಲ್ಲಿಯೇ ಕೀಲಿಂಗನು ಅಲ್ಲಿ ನೆಲೆಗೊಳ್ಳುವದನ್ನು ರಹಿತಪಡಿಸಿ, ಕಾಲಿಕತ್ತ ಬಂದರದಲ್ಲಿ ತಮ್ಮ ವಖಾರನ್ನು ಇಟ್ಟನು. ಇದೇ ವರ್ಷ ಥಾಮಸ ಕೇರೀಜ ಇವನನ್ನು ಸುರತದ ವಖಾರಿನ ಮೊದಲನೇ ಗವರ್ನರನನ್ನಾಗಿ ನೇಮಿಸಿದರು. ೧೬೨೬ರಲ್ಲಿ ಇಂಗ್ಲಿಷ ಮತ್ತು ಡಚ್ಚರು ಸೇರಿ ಮುಂಬಯಿ ಪಟ್ಟಣದಲ್ಲಿ ತಮ್ಮ ಠಾಣ್ಯವನ್ನು ಸ್ಥಿರಪಡಿಸಬೇಕೆಂದು ಆಲೋಚಿಸಿದ್ದರು; ಆದರೆ ಆಗ ಅದು ಈಡೇರಲಿಲ್ಲ.

ಯುರೋಪಿಯನ್ ವ್ಯಾಪಾರಿಗಳು ಬಹು ದೂರದ ನಮ್ಮ ಹಿಂದುಸ್ಥಾನಕ್ಕೆ ಬರುವ ಪ್ರಯತ್ನವನ್ನು ಕೈಕೊಂಡದ್ದನ್ನು ಪರ್ಯಾಲೋಚಿಸಿದರೆ, ಇಲ್ಲಿ ಅಂಥ ಸುಲಭಸಾಧ್ಯವಾದ ಭಕ್ಷ್ಯವೇನಾದರೂ ಇದ್ದಿರಬೇಕೆಂಬ ಕಲ್ಪನೆಯು ಸ್ವಾಭಾವಿಕವಾಗಿಯೇ ಹುಟ್ಟುತ್ತಿದ್ದುದು ಸಟೆಯಾಗಿರಲಿಲ್ಲ.

ಆ ವ್ಯಾಪಾರಗಳಲ್ಲಿ ಮುಖ್ಯರಾದ ಇಂಗ್ಲಿಷರೂ ಡಚ್ಚರೂ ಪ್ರಾಟೆಸ್ಟಂಟ ಧರ್ಮಿಗಳು; ಪೋರ್ತಗೀಜರು ರೋಮನ್ ಕ್ಯಾಥೋಲಿಕರು; ಮತ್ತು ಯುರೋಪದೊಳಗೆ ತತ್ಸಮಯದಲ್ಲಿ ಧಾರ್ಮಿಕ ಪಂಗಡಗಳು ನೆಲೆಗೊಂಡಿದ್ದರಿಂದ, ಹಿಂದುಸ್ಥಾನದೊಳಗಿನ ಇಂಗ್ಲಿಷರೂ, ಡಚ್ಚರೂ ಸಹಕಾರತೆಯಿಂದ ನಡೆಯುತ್ತಿದ್ದರು. ಆ ಎರಡೂ ಜನಾಂಗದವರು ಪೋರ್ತುಗೀಜರನ್ನು ದ್ವೇಷಿಸಹತ್ತಿದ್ದರು. ೧೬೧೫ರಲ್ಲಿ ಇತ್ತ ಕಡೆಯ ವ್ಯಾಪಾರದಲ್ಲಿ ಡಚ್ಚರ ೫೧ ಹಡಗುಗಳು ತೊಡಗಿದ್ದು, ಅವರ ೧೩ಲಕ್ಷ ಪೌಂಡು (೧ಕೋಟಿ, ೩೦ಲಕ್ಷ ರೂಪಾಯಿ)ಬಂಡವಲು ತೊಡಗಿಕೊಂಡಿದ್ದಿತು. ಇದೇ ವರ್ಷ ಇಂಗ್ಲಿಷರ ವ್ಯಾಪಾರವಾದರೂ ಹೆಚ್ಚಾಗಿದ್ದು, ಬರಿಯ ಅವರ ಎರಡು ಹಡಗುಗಳ ಮಾಲಿಗಾಗಿ ಅವರು ೧ಲಕ್ಷ೪೦ ಸಾವಿರರೂಪಾಯಿ ಜಕಾತಿಯನ್ನು ಕೊಡಬೇಕಾಯಿತು; ಮತ್ತು ೧೬೧೬ರೊಳಗಿನ ಅವರ ಒಂದೇ ಒಂದು ಹಡಗದೊಳಗಿನ ಮಾಲಿನ ಬೆಲೆಯು ೧೪ಲಕ್ಷ ರೂಪಾಯಿಗಳೆಂದು ಗೊತ್ತು ಮಾಡಲ್ಪಟ್ಟಿತ್ತು. ಇಂಗ್ಲಿಷರು ಹಿಂದುಸ್ಥಾನದ ತಮ್ಮ ಮೊಟ್ಟಮೊದಲಿನ ಸಾರಿಗೆಗೆ ೬ಲಕ್ಷ೮೩ ಸಾವಿರ ರೂಪಾಯಿಗಳ ಬಂಡವಲವನ್ನು ಕೂಡಿಸಬೇಕಾಯಿತು. ಆ ಸಾರಿಗೆಯಲ್ಲಿ ೪ ಹಡಗಗಳೂ ೪೮೦ ಜನರೂ ಇದ್ದರು. ಆ ಸಾರಿಗೆಯಲ್ಲಿ ಅವರಿಗೆ ಹೇರಳವಾಗಿ ಲಾಭವಾಯಿತು. ಅವರು ೩೦ ಸಾವಿರ ರೂಪಾಯಿಗಳಿಗೆ ಕೊಂಡ ಲವಂಗಗಳು ೩ ಲಕ್ಷ ೬೦ ಸಾವಿರ ರೂಪಾಯಿಗಳಿಗೆ ಮಾರಲ್ಪಟ್ಟವು! ಅವರ ಮೊದಲಿನ ಒಂಬತ್ತು ಸಾರಿಗೆಗಳಲ್ಲಿ ೪೬ ಲಕ್ಷ ಬಂಡವಲವು ತೊಡಗಿತ್ತು. ಆ ಬಂಡವಲಿಗೆ ೧೦೦ಕ್ಕೆ ೨೦೦ರಂತೆ ಲಾಭವಾಯ್ತು! ೧೬೧೨ರಲ್ಲಿ ಇಂಗ್ಲಂಡದೊಳಗೆ ವ್ಯಾಪಾರಕ್ಕೆಂದು ಸಾಮೂಹಿಕ ಬಂಡವಲವು ಕೂಡಿಸಲ್ಪಟ್ಟಿತು. ಆಗ ಆ ರಕಮು ೧ ಕೋಟಿ ೬೨ ಲಕ್ಷ ರೂಪಾಯಿ ಆಗಿತ್ತು. ಅದನ್ನು ೯೩೪ ಜನರೇ ಕೂಡಿಸಿದ್ದರು. ಶ್ರೀ ಶಿವಾಜಿಯು ಅವತರಿಸುವದಕ್ಕೆ ೬ ವರ್ಷ ಮುಂಚೆ ಇಂಗ್ಲಿಷ ಕಂಪನಿಯುವರು ತಮ್ಮ ೧೬೦೧ರಿಂದ ೧೬೨೧ರ

ವರೆಗಿನ ೨೦ ವರ್ಷಗಳ ಅಢಾವೆಯನ್ನು ಪಾರ್ಲಿಮೆಂಟಿಗೆ ಸಾದರಗೊಳಿಸಿದ್ದರು. ಆ ಲೆಕ್ಕದಿಂದ ತಿಳಿಯುವದೇನಂದರೆ, ಆ ಅವಧಿಯಲ್ಲಿ ಅವರ ೮೬ ಹಡಗುಗಳು ವ್ಯಾಪಾರಕ್ಕಾಗಿ ದೇಶಾವರಿಗೆ ಕಳಿಸಲ್ಪಟ್ಟಿದ್ದವು. ಅವುಗಳಲ್ಲಿ ೩೬ ಮರಳಿ ಬಂದವು. ೯ ಮುಳುಗಿಹೋದವು. ೫ ಕೆಟ್ಟುಹೋದವು. ೧೧ ಶತ್ರುಗಳ ಕೈಸೇರಿದವು. ೨೫ ಹಡಗುಗಳು ಹಿಂದುಸ್ತಾನದಲ್ಲಿ ಮಾಲು ತುಂಬಿಕೊಳ್ಳುವದರಲ್ಲಿದ್ದವು. ಹಾಗೆಯೇ ಆ ೨೦ ವರ್ಷಗಳ ಅವಧಿಯಲ್ಲಿ ರೋಖ ಹಣ ಮತ್ತು ವಿಲಾಯತಿಯ ಮಾಲು ಕೂಡಿ ೯೧ ಲಕ್ಷ ೩೮ ಸಾವಿರ ರೂಪಾಯಿಗಳನ್ನು ಇಂಗ್ಲಂಡದಿಂದ ಹೊರಗೆ ರವಾನಿಸಲ್ಪಟ್ಟಿತ್ತು. ಆದರೊಳಗೆ ೩೬ ಹಡಗಗಳಲ್ಲಿ ತುಂಬಿ ತಂದ ಮಾಲಿನ ಕೊಂಡ ಬೆಲೆಯು ೩೭ ಲಕ್ಷ ೫೨ ಸಾವಿರ ರೂಪಾಯಿಯಾಗಿದ್ದು, ಅದನ್ನು ಇಂಗ್ಲಂಡದಲ್ಲಿ ಮಾರಿದಾಗ್ಗೆ ಆದರ ಬೆಲೆಯು ೨ ಕೋಟಿ ೮೬ ಸಾವಿರ ರೂಪಾಯಿಗಳು, ಅಂದರೆ ೩೭ ಲಕ್ಷಕ್ಕೆ ೧ ಕೋಟಿ ೫೩ ಲಕ್ಷ ರೂಪಾಯಿ ಲಾಭವಾಯಿತು!

೧೬೧೮ರಲ್ಲಿ ಅಂದರೆ ಶಿವಾಜಿಯು ಅವತರಿಸಿರುವ ಪೂರ್ವದಲ್ಲಿ ೯ ವರ್ಷ ಇಂಗ್ಲಿಷರು ಹಿಂದುಸ್ತಾನದೊಳಗಿನ ತಮ್ಮ ವ್ಯಾಪಾರವನ್ನು ಚನ್ನಾಗಿ ಸ್ಥಿರಗೊಳಿಸಿದ್ದರು. ಇಷ್ಟೇ ಅಲ್ಲ, ಮೊಗಲಾಯಿಯೊಳಗಿನ ಅವ್ಯವಸ್ಥೆಯನ್ನು ಕಂಡು, ತಮ್ಮ ವ್ಯಾಪಾರೀ ಧೋರಣವನ್ನು ಒಳ್ಳೇ ಒತ್ತರದಿಂದ ಅಮಲಿನಲ್ಲಿ ತರುವೆವೆಂದು ಅವರಿಗೆ ಆತ್ಮಪ್ರತ್ಯಯವೂ ಬರಹತ್ತಿತ್ತು. ಆ ವರ್ಷ ಸರ ಥಾಮಸ ರೋನು ತನ್ನ ವಾರ್ಷಿಕ ರೀಪೋರ್ಟಿನಲ್ಲಿ ಬರೆದಿಟ್ಟದ್ದೇನಂದರೆ:—

"ಅವಶ್ಯವಿದ್ದಷ್ಟು ಹುಕುಮುಗಳು ದೊರೆದಿರುತ್ತವೆ; ಮತ್ತು ಇನ್ನುಳಿದವುಗಳು ದೊರೆಯತಕ್ಕವುಗಳಾಗಿವೆ. ಬಾದಶಹನ ಕೃಪೆಯೇ ಕಾಯಿದೆಯಾಗಿದ್ದು, ಇಲ್ಲಿಯ ಎಲ್ಲ ದರ್ಬಾರೀ ವ್ಯವಹಾರವು ದುಡ್ಡಿನಿಂದ ನಡೆಯುತ್ತಿದೆ. ಈ ಜನರೊಡನೆ ಸೌಮ್ಯತನದಿಂದ ನಡೆದು ಸಾಗುವಂತಿಲ್ಲ. ಇವರಿಗೆ ನಮ್ಮ ಬೇಜಾರು ಬಂದಿದೆ. ಇವರ ಸಧನ ಬಂದರಗಳನ್ನು ಬಿಕ್ಕೆಗೆ ಹಚ್ಚಿ, ನಾವು ಇವರ ವ್ಯಾಪಾರವನ್ನೆಲ್ಲ ಮಣ್ಣುಗೂಡಿಸಿ ಬಿಟ್ಟಿರುತ್ತೇವೆ. ನಾವು ಇವರೊಡನೆ ಎಷ್ಟು ಒಗರಿನಿಂದ ನಡೆಯುವೆವೋ, ಅಷ್ಟು ಕೃತಕಾರ್ಯರಾಗುತ್ತ ಹೋಗುನೆವು. ಈ ಜನರನ್ನು ಹದನಾದ ಕತ್ತಿಯ ತುದಿಯ ಮೇಲೆ ಕುಣಿಸುತ್ತಿರಬೇಕು; ಅಂದರೇ ಇವರು ಎಣಿಕೆಗೆ ಬರತಕ್ಕವರು. ನಮ್ಮ ಬೇಡಿಕೆಗಳನ್ನು ಅಧಿಕಾರಿಗಳು ಮನ್ನಿಸದಿದ್ದರೆ, ಏತದ್ದೇಶಿಯ ವ್ಯಾಪಾರಿಗಳ ಹಡಗುಗಳನ್ನು ಅಸಿಮುಸಿ ನೋಡದೆ ಆಕ್ರಮಿಸಿ, ನಮ್ಮ ಧ್ಯೇಯವನ್ನು ಸಾಧಿಸಿಕೊಳ್ಳಬೇಕು."

———



೩ನೆಯ ಪರಿಚ್ಛೇದ

## ಶಿವಾಜಿಯ ಕಾಲದ ಇಂಗ್ಲಿಷರು

—)(-()()-)(—

ಹಿಂದಿನ ಪರಿಚ್ಛೇದದಲ್ಲಿ ಹೇಳಿದಂತೆ ೧೭ನೆಯ ಶತಕದ ಮಧ್ಯಭಾಗದಲ್ಲಿ ಮರಾಟರೂ ಇಂಗ್ಲಿಷರೂ ತಂತಮ್ಮ ಚಳವಳಿಯನ್ನು ಮಾಡಹತ್ತಿದ್ದರಿಂದ, ಅವರಿಬ್ಬರಿಗೂ ಬೇಗನೆ ಎಲ್ಲಿಯಾದರೂ ಭೆಟ್ಟಿಯಾಗುವದು ಅನಿವಾರ್ಯವಾಗಿತ್ತು. ಈ ಭೆಟ್ಟಿಯು ಶಾಂತತೆಯಿಂದ ಆಗುವ ಸಂಭವವಿರಲಿಲ್ಲ. ಮೊಗಲರೂ ಇಂಗ್ಲಿಷರೂ ಪರಸ್ಪರರನ್ನು ಶಾಂತರೀತಿಯಿಂದ ಭೆಟ್ಟಿಯಾದ ಕಾರಣವೇನಂದರೆ, ಮೊಗಲರು ಸತ್ತಾಧೀಶರಾಗಿದ್ದರು. ಇಂಗ್ಲಿಷರು ಅವರಿಂದ ವ್ಯಾಪಾರದ ಪರವಾನಿಗೆಯನ್ನೂ ರಿಯಾಯತಿಗಳನ್ನೂ ಹೊಂದಬೇಕಿತ್ತು; ಮತ್ತು ಮೊಗಲರಿಗೂ ತಮ್ಮ ದುಂದುಗಾರಿಕೆಗಾಗಿ ಇಂಗ್ಲಿಷರಿಂದ ವಿಲಾಯತಿಯ ಮೋಹಕ ವಸ್ತು-ಒಡವೆಗಳನ್ನೂ ವ್ಯಾಪಾರೀ ಮಾಲಿನ ಮೇಲಿನ ಸುಂಕವನ್ನೂ ಪಡೆಯಬೇಕಿತ್ತು. ಇಂಗ್ಲಿಷರು ಮೊಗಲರೆದುರಿಗೆ ಕೈಕಟ್ಟಿಕೊಂಡು ನಮ್ರಭಾವದಿಂದ ನಡೆಯುತ್ತಿದ್ದರು. ಮೊಗಲರಾದರೂ ಇವರ ಮೇಲೆ ಉಪಕಾರ ಮಾಡುತ್ತಿರುವೆವೆಂಬ ಆಢ್ಯತೆಯ ಭಾವನೆಯಿಂದ ಸೆಟೆಸೆಟೆದು ನಡೆಯುತ್ತಿದ್ದರು. ಆಢ್ಯತೆ ಹಾಗು ನಮ್ರತೆ ಇವುಗಳಲ್ಲೆಂದಾದರೂ ಬಡಿದಾಟವಾಗುವ ಸಂಭವವಿದೆಯೆ? ಆದರೆ ಮರಾಟರಿಗೂ ಇಂಗ್ಲಿಷರಿಗೂ ಈ ತರದ ಪ್ರತ್ಯಕ್ಷ ಸಂಬಂಧವೇನೂ ಇರಲಿಲ್ಲ; ಅಲ್ಲದೆ ಇದೇ ಕಾಲಕ್ಕೆ ಮರಾಟರು ಮೊಗಲರೊಡನೆ ಪ್ರತ್ಯಕ್ಷ ಯುದ್ಧಕ್ಕೆ ಸನ್ನದ್ಧರಾಗಿ ನಿಂತಿದ್ದರು. ಯುದ್ಧವೆಂದ ಮೇಲೆ ಯಾವನಿಗೆ ಹೇಗೆ ಲಾಗ ಸಾಧಿಸುವದೋ, ಹಾಗೆ ಅವನು ಹಾಕತಕ್ಕವನೇ. ಮರಾಟರಲ್ಲಿ ಮೊಗಲರೊಡನೆ ಎದುರಾಗಿ ನಿಂತು ಕಾದುವಷ್ಟು ಸೈನ್ಯವಿರಲಿಲ್ಲ; ಮತ್ತು ಮೊಗಲರು ಸ್ಥೂಲರೂ ಒಣ ಹೆಮ್ಮೆಯವರೂ ಆಗಿದ್ದ ಮೂಲಕ, ಚಪಲರೂ ನಿಗರ್ವಿಗಳೂ ಆದ ಮರಾಟರು ಸಂಧಿಸಾಧಿಸಿದಲ್ಲಿ ಮೊಗಲರ ಮೇಲೆ ಏರಿಹೋಗಲಿಕ್ಕೂ, ಅವರ ಅನ್ನ ಸಾಮುಗ್ರಿಗಳನ್ನು ಸುಲಿಯಲಿಕ್ಕೂ, ಬೊಕ್ಕಸವನ್ನು ಲೂಟಿ ಮಾಡಲಿಕ್ಕೂ ಲಷ್ಕರೀ ಹೊಂಚಿನ ಮೇರೆಗೆ ಶಕ್ಯವೂ ಇಷ್ಟವೂ ಆಗಿತ್ತು. ಮೊಗಲರು ಮರಾಟರ ರಾಜಕೀಯ ಸ್ವಾತಂತ್ರ್ಯವನ್ನು ಸುಲಿದು ಸೂರೆಗೊಂಡ ಮಾನದಿಂದ, ಮರಾಟರು ಮೊಗಲರ ಬೊಕ್ಕಸಗಳನ್ನು ಸುಲಿದದ್ದು ಅಷ್ಟು ನಿಂದ್ಯವಲ್ಲವೆಂದು ಹೇಳಬಹುದು. ಮೇಲೆ ವಿವರಿಸಿದಂತೆ ಮೊಗಲ-ಮರಾಟರ ನಡುವೆ ಯುದ್ಧವು ನಡೆದ ಕಾಲಕ್ಕೆ ಇಂಗ್ಲಿಷರು ಮೊಗಲರ ಆಶ್ರಯದಿಂದ ಮುಂದೆ ಬರುವ ಹವಣಿಕೆಯಲ್ಲಿದ್ದರಾದ್ದರಿಂದ, ಕ್ವಚಿತ್ ಪ್ರಸಂಗಗಳಲ್ಲಿ ಅವರೂ ಮರಾಟ ಉಪಟಳಕ್ಕೆ ಗುರಿಯಾಗಬೇಕಾಯಿತು.

ಆ ಕಾಲಕ್ಕೆ ಮರಾಟರ ಆಧಿಪತ್ಯವು ಶಿವಾಜಿಯ ಪರಾಕ್ರಮದ ಮೂಲಕ ಆವನ ಕಡೆಗೆ ಬಂದಿತ್ತು. ನಿಜಾಮಶಾಹಿಯು ನಾಶವಾದ ಮೂಲಕ ಶಹಾಜಿಯು

ವಿಜಾಪುರದವರಲ್ಲಿ ಚಾಕರಿಗೆ ನಿಂತುಕೊಂಡನು; ಮತ್ತು ೧೬೩೭ರಲ್ಲಿ ದೊಡ್ಡ ದಂಡಿನೊಡನೆ ಅವನು ದಕ್ಷಿಣ ಹಿಂದುಸ್ಥಾನಕ್ಕೆ ವಿಜಾಪುರದ ವತಿಯಿಂದ ಸಾಗಿ ಹೋದನು. ಶಹಾಜಿಯು ಅತ್ತ ಕಡೆಗೆ ಹೋದವನು ಅತ್ತೇ ತೊಡಗಿಕೊಂಡು ಬಿಟ್ಟನು. ಮುಂದೆ ೨೦ ವರ್ಷಗಳ ವರೆಗೆ ಅವನು ಕರ್ನಾಟಕದಲ್ಲಿಯೇ ಇದ್ದನು. ಅವನು ನಡುನಡುವೆ ಮಹಾರಾಷ್ಟ್ರಕ್ಕೆ ಹೋಗುತ್ತಿದ್ದನು; ಆದರೆ ೧೬೩೬ರ ನಂತರ ಪುಣೇದ ಕಡೆಗೆ ಶಹಾಜಿಯು ಎಂದೂ ಕಾಯಮವಾಗಿ ನಿಲ್ಲಲಿಲ್ಲ. ಶಹಾಜಿಯು ತನ್ನ ಜಹಾಗೀರಿನಂತೆ ತನ್ನ ಹೆಂಡತಿ ಜಿಜಾಬಾಯಿ ಹಾಗು ಮಗ ಶಿವಾಜಿ ಇವರನ್ನೂ ತ್ಯಾಗಮಾಡಿ, ಹೊಸ ಲಗ್ನವನ್ನು ಮಾಡಿಕೊಂಡು, ಹಾಗು ಹೊಸ ಹೊಸ ಜಹಗೀರುಗಳನ್ನು ಸಂಪಾದಿಸಿ, ಹೆಚ್ಚು ಐಶ್ವರ್ಯವಂತನಾಗಿ ಕಾಲ ಹರಣ ಮಾಡುವ ನಿಶ್ಚಯವನ್ನೇ ಮಾಡಿದಂತೆ ತೋರುತ್ತಿತ್ತು. ಶಿವಾಜಿಗಾದರೂ ತಂದೆಯ ಅಪತ್ಯವತ್ಸಲತೆಯು ಲಭಿಸದಿದ್ದರೂ, ಆತನ ಜಹಗೀರು ದೊರೆಯುತ್ತಿತ್ತು; ಹಾಗೂ ತನ್ನ ತೇಜಸ್ವಿಯಾದ ತಾಯಿಯ ಆಶೀರ್ವಾದಕ್ಕೆ ಸ್ವಂತದ ಉಜ್ವಲವಾದ ಮಹತ್ವಾಕಾಂಕ್ಷೆಯನ್ನು ಜೊತೆಗೊಳಿಸಿ, ಬೀಜದಿಂದ ವೃಕ್ಷವನ್ನು ಬೆಳೆಸಿದಂತೆ, ಆ ಪುಟ್ಟ ಜಹಗೀರಿನೊಳಗಿಂದಲೇ ಹಿಂದುಪದಪಾತಶಾಹಿಯನ್ನು ನಿರ್ಮಾಣಗೊಳಿಸಿ, ಅವನು ತನ್ನ ತಂದೆಯನ್ನು ತಲೆ ಕೆಳಗೆ ಹಾಕುವಂತೆ ಮಾಡುವ ಆಕಾಂಕ್ಷೆಯನ್ನು ಧರಿಸಿದನು; ಹಾಗೂ ಈಶಕೃಪೆಯಿಂದ ಅವನು ಅದನ್ನು ಸಂಪೂರ್ತಿಗೊಳಿಸಿದನು; ಆದರೆ ಶಿವಾಜಿಯ ಸಂಪೂರ್ಣ ಇತಿಹಾಸವನ್ನು ನಿವೇದಿಸುವ ಸ್ಥಳವಿದಲ್ಲವಾದುದರಿಂದ, ಈ ಮುಂದಿನ ಸಂಗತಿಗಳಲ್ಲಿ ಅವನ ಚರಿತ್ರದ ಹಲಕೆಲವು ಸಂಗತಿಗಳನ್ನು ಅತಿ ಸಂಕ್ಷಿಪ್ತವಾಗಿಯೇ ವಿವೇಚಿಸಬೇಕಾಗಿದೆ.

ಶಿವಾಜಿಯು ತುಸ ದೊಡ್ಡವನಾದ ಕೂಡಲೆ ಅವನು ತನ್ನ ಜಹಗೀರಿನ ಬಂದೋಬಸ್ತನ್ನಿಡಬೇಕಾಯಿತು; ಮತ್ತು ಹಾಗೆ ಮಾಡುವಾಗ ಜಹಗೀರಿನ ಸರಹದ್ದಿನಲ್ಲಿರುವ ಕಿಲ್ಲೆದಾರರೊಡನೆ ಅವನು ಮೊದಲು ಕಾದಬೇಕಾಯಿತು. ರಾಜ್ಯಕ್ರಾಂತಿಯ ಸಂಧಿಪ್ರಕಾಶದ ಕಾಲವದಾದ್ದರಿಂದ ಆ ಕಿಲ್ಲೇದಾರರಿಗೆ ಚನ್ನಾಗಿಯೇ ಕೈಸಾಧಿಸಿತ್ತು. ಆ ಕೋಟೆಗಳು ಯಾರ ವಶದಲ್ಲಿಯೂ ಉಳಿದಿರಲಿಲ್ಲ. ಅವುಗಳ ಮೇಲೆ ಯಾವ ಮುಸಲ್ಮಾನ ಬಾದಶಹನ ದಂಡೂ ಇರಲಿಲ್ಲ. ಆದರಿಂದ ಯಾರಿಗೆ ಯಾವ ದುರ್ಗವು ಹಸ್ತಗತವಾಯಿತೋ, ಅವರೇ ಅದನ್ನು ಕೈವಶ ಮಾಡಿಕೊಂಡು, ಮತ್ತೆ ಸುತ್ತಮುತ್ತಲಿನ ನಾಡನ್ನು ಸುಲಿಯುತ್ತ ತಮ್ಮ ನಿರ್ವಾಹ ಸಾಗಿಸುತ್ತ ತಮ್ಮ ಸ್ವಾತಂತ್ರ್ಯವನ್ನು ಕಾದುಕೊಳ್ಳುತ್ತಿದ್ದರು. ಶಿವಾಜಿಯು ಇಂಥ ದುರ್ಗಾಧಿಪತಿಗಳನ್ನು ಗೆಲ್ಲುವನು; ಅವರನ್ನು ತನ್ನ ಹಸ್ತಕರನ್ನಾಗಿ ಮಾಡಿಕೊಳ್ಳುವನು; ಈ ಉದ್ಯೋಗದಿಂದ ಶಿವಾಜಿಗೆ ರಾಜಕಾರಣದ ಮತ್ತು ಯುದ್ಧಕೌಶಲ್ಯದ ಉಚ್ಚ ಶಿಕ್ಷಣವು ದೊರೆಯಿತು. ಆ ಕಿಲ್ಲೇದಾರರ ಚರಿತ್ರಕ್ರಮದಿಂದಲೇ ದುರ್ಗಗಳನ್ನು ಸಂಪಾದಿಸುವ ಇಚ್ಛೆಯು ಶಿವಾಜಿಯಲ್ಲಿ ಹುಟ್ಟಿತು. ತನ್ನ ವಯಸ್ಸಿನ ೧೯ನೇ

ವರ್ಷವೇ ಶಿವಾಜಿಯು ತೋರಣಗಡವನ್ನು ಗೆದ್ದುಕೊಂಡು ಸ್ವರಾಜ್ಯಸ್ಥಾಪನೆಯ ತೋರಣವನ್ನು ನಿಲ್ಲಿಸಿದನು! ಹೊಸ ಹೊಸ ದುರ್ಗಗಳನ್ನು ಗೆದ್ದುಕೊಳ್ಳುವದರಿಂದಲೂ ಕಟ್ಟಿಸುವದರಿಂದಲೂ ಅವನ ಆತ್ಮಪ್ರತ್ಯಯವು ಹೆಚ್ಚಿತು. ಇತ್ತ ಶಹಾಜಿಯು ವಿಜಾಪುರ ಬಾದಶಹನಿಂದ ಕರ್ನಾಟಕದಲ್ಲಿ ಜಹಗೀರನ್ನು ದೊರಕಿಸಿದ ವರ್ಷವೇ, ಅತ್ತ ಮಾಳವದಲ್ಲಿ ಶಿವಾಜಿಯು ವಿಜಯದುರ್ಗ, ಸುವರ್ಣದುರ್ಗ, ರತ್ನಾಗಿರಿ ಮುಂತಾದ ದುರ್ಗಗಳನ್ನು ಗೆದ್ದು, ತಂದೆಯ ಹೊಸ ಜಹಗೀರಿಗಿಂತ ದೊಡ್ಡ ಹಾಗು ಕೇವಲ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನು. ಆತನ ದರ್ಪವು ನಾಲ್ಕೂ ಕಡೆಗೆ ಹಬ್ಬಿತು. ೧೬೪೮ರಲ್ಲಿ ಖುದ್ದ ವಿಜಾಪುರ ಬಾದಶಹನ ೬-೭ ನೂರು ಜನ ಪಠಾಣರು ಶಿವಾಜಿಯ ಬಳಿಗೆ ಚಾಕರಿ ಬೇಡ ಬಂದರು; ಹಾಗು ಅವನು ಅವರನ್ನು ತನ್ನಲ್ಲಿಟ್ಟುಕೊಂಡನು. ಬಾದಶಹನು ಶಿವಾಜಿಯ ಆ ಕೃತಿಗೆ ಬಂಡುಗಾರಿಕೆಯೆಂದು ನಿಶ್ಚಯಿಸಿ, ಆ ಬಗ್ಗೆ ಶಹಾಜಿಯ ಮುಖಾಂತರ ಶಿವಾಜಿಯನ್ನು ಹಾದಿಗೆ ತರುವ ಪ್ರಯತ್ನ ನಡೆಸಿದನು; ಅದು ಸಾಧಿಸದ ಮೂಲಕ ಬಾದಶಹನು ಶಿವಾಜಿಯ ಮೇಲೆ ತನ್ನ ದಂಡನ್ನು ಕಳಿಸಲಾರಂಭಿಸಿದನು. ಆಗ ಶಿವಾಜಿಯು ನೆವಮಾತ್ರವಾಗಿ ಮೊಗಲರ ಸರದಾರಿಕೆಯನ್ನು ಒಪ್ಪಿಕೊಂಡು, ಅವರ ಸಹಾಯದಿಂದ ವಿಜಾಪುರದೊಡನೆ ಯುದ್ಧವನ್ನಾರಂಭಿಸಿದನು. ಈ ಯುದ್ಧವು ೧೬೫೯ರಿಂದ ೧೬೬೨ರ ವರೆಗೆ ನಡೆಯಿತು. ಈ ಮಧ್ಯದಲ್ಲಿ ಶಿವಾಜಿಯು ಅಫಝುಲ್ಲಖಾನನನ್ನು ಕೊಂದನು; (೧೬೫೯)ಕೊಂಕಣ ಪ್ರಾಂತವನ್ನು ಗೆದ್ದು, ಹಡಗುಪಡೆಯನ್ನು ನೆಲೆಗೊಳಿಸಿದನು; ಮತ್ತು ಕಲ್ಯಾಣದಿಂದ ಗೋವೆಯವರೆಗಿನ ಹಾಗು ಭೀಮಾನದಿಯಿಂದ ವಾರಣಾ ನದಿಯವರೆಗಿನ ಸರಾಸರಿ ೧೫೦ ಮೈಲು ಉದ್ದ ೧೦೦ ಮೈಲು ಅಗಲವಾದ ಪ್ರದೇಶವನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿದನು. ಇನ್ನು ಶಿವಾಜಿಯು ತಮಗೆ ಹಣಿಯುವದಿಲ್ಲೆಂದು ತಿಳಿದು, ವಿಜಾಪುರದ ಬಾದಶಹನು ಶಹಾಜಿಯ ಮಧ್ಯಸ್ತಿಕೆಯಿಂದ ಅವನೊಡನೆ ಒಪ್ಪಂದವನ್ನು ಮಾಡಿಕೊಳ್ಳಬೇಕಾಯಿತು. (೧೬೬೨) ಇತ್ತ ವಿಜಾಪುರದ ಕಡೆಯ ಯುದ್ಧದಿಂದ ಮುಕ್ತವಾದೊಡನೆ ಶಿವಾಜಿಯು ಅತ್ತ ಮೊಗರ ಮೇಲೆ ದಾಳಿಯನ್ನಿಕ್ಕ ಹತ್ತಿದನು. ಒಬ್ಬ ಬಾದಶಹನನ್ನು ಹಣ್ಣಿಗೆ ತಂದದ್ದರಿಂದ ಇನ್ನೊಬ್ಬನನ್ನಾದರೂ ಸಹಜವಾಗಿ ಹಣ್ಣಿಗೆ ತರಬಹುದೆಂಬ ಉಮೇದು ಶಿವಾಜಿಯಲ್ಲಿ ಉಂಟಾಗಿತ್ತು; ಆದರೆ ೧೬೬೧ರಲ್ಲಿ ಮೊಗಲರ ದಂಡಿನವರು ಶಿವಾಜಯ ವಶದೊಳಗಿನ ಕಲ್ಯಾಣ ಮತ್ತು ಭಿವಂಡಿ ದುರ್ಗಗಳನ್ನು ಗೆದು ಕೊಂಡು ಅವನೊಡನೆ ತಾವಾಗಿಯೇ ನ್ಯಾಯ ತೆಗೆದಿದ್ದರು. ಆದರಿಂದ ಅಂದಿನಿಂದ ಶಿವಾಜಿಯು ಮೊಗಲರೊಡನೆ ಕಾದಹತ್ತಿ, ೧೬೬೨-೬೫ರ ವರೆಗೆ ಒಂದೇಸವನೆ ಕಾದುತ್ತಲೇ ಇದ್ದನು. ಇರಲಿ.

ಶಿವಾಜಿಗೂ ಇಂಗ್ಲಿಷರಿಗೂ ಸಂಬಂಧ ಉಂಟಾದ ಕಾಲವೆಂದರೆ, ಶಿವಾಜಿಯು ವಿಜಾಪುರದವರೊಡನೆಯೂ ಮೊಗಲರೊಡನೆಯೂ ಕಾದುತ್ತಿರುವಾಗಲೆ ಉಂಟಾಯಿತು. ವಿಜಾಪುರದವರೊಡನೆ ಯುದ್ಧವು ನಡೆದಾಗ ಶಿವಾಜಿಯು ೧೬೪೮ರಲ್ಲಿ

ರಾಜಾಪುರವನ್ನು ಮುತ್ತಿದನು. ಈ ಮುತ್ತಿಗೆಯಿಂದ ಇಂಗ್ಲಿಷರಿಗೆ ಮರಾಟರ ದರ್ಪವು ಚೆನ್ನಾಗಿಯೇ ಗೊತ್ತಾಯಿತು. ಆ ಕಾಲಕ್ಕೆ ರಾಜಾಪುರದಲ್ಲಿ ಇಂಗ್ಲಿಷರ ವಖಾರಿತ್ತು. ಆಗ ಶಿವಾಜಿಯ ಕಣ್ಣು ವಿಶೇಷವಾಗಿ ಮೊಗಲರ ಮೇಲೆಯೇ ಇದ್ದರೂ, ಇಂಗ್ಲಿಷರ ಮೇಲೆಯೂ ಅವನ ವಕ್ರದೃಷ್ಟಿಯು ಅಲ್ಪಸ್ವಲ್ಪವಾಗಿ ಬೀಳಹತ್ತಿತ್ತು. ಅದಕ್ಕೆ ಕಾರಣವೇನಂದರೆ:—

ರಾಂಗಣಾ ಎಂಬಲ್ಲಿ ವಿಜಾಪುರಬಾದಶಹನ ದಂಡನ್ನು ಸೋಲಿಸಿದ ಬಳಿಕ ಶಿವಾಜಿಯು ರಾಜಾಪುರಕ್ಕೆ ಹೋದನು. ರಾಜಾಪುರದಲ್ಲಿ ಇಂಗ್ಲಿಷರ ವಖಾರಿದ್ದು, ಆ ಇಂಗ್ಲಿಷರು ಪನ್ಹಾಳಗಡದ ಮೇಲೆ ಮುತ್ತಿಗೆ ಹಾಕಿದ್ದ ಮುಸಲ್ಮಾನರಿಗೆ ಮದ್ದು-ಗುಂಡುಗಳನ್ನು ಪೂರೈಸುತ್ತಿದ್ದರೆಂಬ ಸಂಶಯವು ಶಿವಾಜಿಗೆ ಬಂದಿತ್ತು. ಅದರಿಂದ ಅವನು ಇಂಗ್ಲಿಷರ ಆ ವಖಾರನ್ನು ಸುಲಿಯುವದಕ್ಕಿಂತ ತನ್ನ ವೈರಿಗಳಿಗೆ ಸಹಾಯ ಮಾಡುವ ಇವರಿಗ ಚೆನ್ನಾಗಿ ಕೈತೋರಿಸಬೇಕೆಂಬ ಹೇತುವುಳ್ಳವನಾಗಿದ್ದನು. ಖುದ್ದ ರಾಜಾಪುರದೊಳಗಿನ ಹಣವನ್ನು ವಸೂಲ ಮಾಡಿಕೊಂಡ ನಂತರ ಶಿವಾಜಿಯು ಅಲ್ಲಿಯ ಇಂಗ್ಲಿಷರ ವಖಾರನ್ನು ಸುಲಿದನು; ಹಾಗು ಅಲ್ಲಿಯ ಇಂಗ್ಲಿಷ ವರ್ತಕರನ್ನೆಲ್ಲ ಸೆರೆಹಿಡಿದು, ಒಂದು ಗುಡ್ಡಗಾಡ ದುರ್ಗದಲ್ಲಿ ೨ ವರ್ಷಗಳ ವರೆಗೆ ಸೆರೆಯಲ್ಲಿಟ್ಟನು. ರಾಜಾಪುರದ ಸುಲಿಗೆಯಲ್ಲಿ ೧೦ ಸಾವಿರ ಹೊನ್ನುಗಳ ಹಾನಿಯಾಯಿತೆಂಬ ನೆವದಿಂದ ಇಂಗ್ಲಿಷರು ಅಲ್ಲಿಯ ತಮ್ಮ ವಖಾರನ್ನು ತೆಗೆದುಬಿಟ್ಟರು. ಶಿವಾಜಿಯ ಕಡೆಯವರು ತಾವು ಇಂಗ್ಲಿಷರ ವಖಾರು ಸುಲಿದದ್ದನ್ನು ಒಪ್ಪಲಿಲ್ಲ. ಹೇಗೆಯೇ ಇರಲಿ, ಶಿವಾಜಿಗೂ ಇಂಗ್ಲಿಷರಿಗೂ ಪ್ರಥಮ ಸಂಬಂಧವುಂಟಾದದ್ದು ಹೀಗೆ ಉಂಟಾಯಿತು! ಅದರಿಂದ ಇಂಗ್ಲಿಷರು ಶಿವಾಜಿಗೆ ಥರಗುಟ್ಟಿ ನಡುಗಹತ್ತಿದರು. ರಾಜಾಪುರದ ಸುಲಿಗೆಯ ಆ ವೃತ್ತಾಂತವು ಮುಂದೆ ಸುರತಿಗ ತಿಳಿಯಿತು. ಅದರಿಂದ ಶಿವಾಜಿಯು ಸುರತವನ್ನೂ ಸುಲಿಯುವನೇನೆಂಬ ಅಂಜಿಕೆಯು ಅಲ್ಲಿಯ ಇಂಗ್ಲಿಷರಿಗೆ ಉಂಟಾಯಿತು. "ಎಲ್ಲಿ ನೋಡಿದಲ್ಲಿ ಶಿವಾಜಿಯೇ ಶಿವಾಜಿಯು! ಎಂಥ ಪ್ರಸಂಗ ಬಂದರೂ ಅವನು ಅದಕ್ಕೆ ಸಿದ್ಧನೇ" ಎಂಬೀ ಬಗೆಯ ಉದ್ಗಾರಗಳು ಆಗಿನ ಅಲ್ಲಿಯ ಇಂಗ್ಲಿಷರ ಮುಖೋದ್ಗತಗಳಾಗಿದ್ದವು. ಶಿವಾಜಿಯು ತಮ್ಮನ್ನು ಎಲ್ಲಿ ಮುತ್ತುವನೋ ಎಂಬ ಸುರತದ ಇಂಗ್ಲಿಷರ ಅಂಜಿಕೆಯು ಮುಂದ ೨-೩ ವರ್ಷಗಳ ನಂತರ ದಿಟವಾಗಿ ಪರಿಣಮಿಸಿತು.

೧೬೭೬ರಲ್ಲಿ ಸಿದ್ದೀ ಯಾಕೂಬಖಾನನು ಇಂಗ್ಲಿಷರೊಡನೆ ಸಂಧಾನ ನಡೆಸಿದವೇನೆಂದರ:—"ಡಚ್ಚರು ರಾಜಾಪುರದಲ್ಲಿ ವಖಾರನ್ನಿಕ್ಕಬಾರದೆಂದು ನಿಮ್ಮ ಇಚ್ಛೆಯಿದೆ. ಶಿವಾಜಿಯ ಉಪಟಳವು ನಮಗಾಗಬಾರದೆಂದು ನಮ್ಮ ಇಚ್ಛೆಯಿದೆ. ಆದ್ದರಿಂದ ನಾವೂ ನೀವೂ ಕೂಡಿ ಉಭಯತರ ಸಂರಕ್ಷಣೆಯ ಒಡಂಬಡಿಕೆಯನ್ನು ಮಾಡಿಕೊಳ್ಳೋಣ. ನಾನು ಡಚ್ಚರಿಗೆ ರಾಜಾಪುರದಲ್ಲಿ ವಖಾರನ್ನಿಕ್ಕಗೊಡುವದಿಲ್ಲ; ನೀವೂ ಶಿವಾಜಿಯ ವಿರುದ್ಧವಾಗಿ ನನಗೆ ಸಹಾಯ ಮಾಡತಕ್ಕದ್ದು" ಆದರೆ ಸುರತದ

ಗವರ್ನರನು ಸಿದ್ದಿಯ ಆ ಕರಾರುಗಳಿಗೆ ಒಪ್ಪಲಿಲ್ಲ. ಈ ಬಗೆಯ ಒಡಂಬಡಿಕೆಯಾದ ಸಂಗತಿಯು ಶಿವಾಜಿಗೆ ತಿಳಿದರೆ, ಅವನು ಕೂಡಲೆ ನಮ್ಮ ಮೇಲೆ ಶಸ್ತ್ರವನ್ನೆತ್ತ ಬಹುದೆಂದೂ ಮತ್ತು ಅದರಿಂದ ನಮ್ಮ ಸಂರಕ್ಷಣವಾಗದೆ, ನಾಶ ಮಾತ್ರ ಖಂಡಿತ ವಾಗಿ ಆದೀತೆಂದೂ ಪ್ರೌಢವಿಚಾರವನ್ನು ತಾಳಿ, ಇಂಗ್ಲಿಷರು ಸಿದ್ದಿಯ ಕೂಡ ಒಪ್ಪಂದ ವನ್ನು ಮಾಡಿಕೊಳ್ಳಲಿಲ್ಲ; ಆದರೆ ಸಿದ್ದಿಗೆ ಸಾಕಷ್ಟು ಲಂಚ ಕೊಟ್ಟು, ರಾಜಾಪುರ ದಲ್ಲಿ ಡಚ್ಚರ ವಖಾರವು ನೆಲೆಗೊಳ್ಳದಂತೆ ಅವರು ಅವನಿಂದ ಪ್ರತಿಬಂಧ ಮಾಡಿಸ ಲಿಕ್ಕೆ ತಪ್ಪಲಿಲ್ಲ.

ರಾಜಾಪುರದ ನಂತರ ಶಿವಾಜಿಗೂ ಇಂಗ್ಲಿಷರಿಗೂ ಸುರತದಲ್ಲಿ ಭೆಟ್ಟಿ ಯಾಯಿತು. ರಾಜಾಪುರದಲ್ಲಿಯು ಇಂಗ್ಲಿಷರು ವಿಜಾಪುರದ ಬಾದಶಹನ ಆಶ್ರಯ ದಲ್ಲಿ ಹೇಗೆ ವಖಾರವನ್ನಿಟ್ಟಿದ್ದರೋ, ಹಾಗೆಯೇ ಸುರತದಲ್ಲಿ ಮೊಗಲರ ಆಶ್ರಯದಲ್ಲಿ ಅವರು ತಮ್ಮ ವಖಾರವನ್ನಿಟ್ಟಿದ್ದರು. ಸುರತವು ಇಂಗ್ಲಿಷ ವ್ಯಾಪಾರದ ಮೊಟ್ಟ ಮೊದಲಿನ ಬಂದರವಾಗಿದ್ದು, ಅಲ್ಲಿ ಅವರ ಅಗಣಿತವಾದ ವ್ಯಾಪಾರೀ ಮಾಲು ಬಂದು ಇಳಿಯುತಿತ್ತು; ಮತ್ತು ಮೊಗಲರಿಗೆ ಆ ಮಾಲಿನ ಮೇಲಿನ ಸುಂಕವೂ ಹೇರಳ ವಾಗಿ ದೊರಕುತ್ತಿತ್ತು. ಶಿವಾಜಿಗೆ ಸಿರಿಯ ಆ ತವರುಮನೆಯನ್ನು ಸುಲಿಯುವದು ಯುಕ್ತವೆನಿಸಿದ್ದು ಆಶ್ಚರ್ಯದ ಸಂಗತಿಯಲ್ಲ. ೧೬೬೪ಕ್ಕಿಂತ ಮೊದಲು ಸಹ ಅವನು ಸುರತದ ಕಡೆಗೆ ಒಮ್ಮೆ ದಾಳಿಯನ್ನಿಕ್ಕಿದಂತೆ ತಿಳಿಯುತ್ತದೆ. ೧೬೬೪ನೇ ಫೇಬ್ರು ವಾರಿ ೯ನೇ ತಾರೀಖಿನ ಪತ್ರದಲ್ಲಿ ಇಂಗ್ಲಿಷ ವಖಾರಿನ ಗವರ್ನರನು ವಿಲಾಯತಿಗೆ ಹೀಗೆ ಬರೆದು ಕಳಿಸಿದಂತೆ ತಿಳಿದುಬರುತ್ತದೆ:—"ರಾಯಲ್ ಮರ್ಚಂಟ ಮತ್ತು ಆಫ್ರಿಕನ್ ಈ ಹಡಗುಗಳು ವಿಲಾಯತಿಗಾಗಿ ಇಲ್ಲಿಂದ ತಾ. ೨೮-೧-೧೬೬೪ಕ್ಕೆ ಹೊರ ಟವು. ಅವು ಇಷ್ಟು ತಡವಾಗಿ ಹೊರಡಲಿಕ್ಕೆ ಕಾರಣವೇನಂದರೆ, ಶಿವಾಜಿಯು ಸುರ ತದ ಮೇಲೆ ದಾಳಿಯನ್ನಿಕ್ಕಿ ಪಟ್ಟಣವನ್ನು ಸುಲಿದನು. ಈ ದಾಳಿಯಿಂದ ಇತ್ತ ಕಡೆಯ ಉದ್ಯೋಗ-ಧಂದೆಗಳು ಎಷ್ಟೋ ದಿನಗಳ ವರೆಗೆ ನಿಂತುಹೋಗಿದ್ದು, ಹಡಗುಪಡೆಗಳೊಳಗಿನ ಮಾಲನ್ನು ಬಂದರಕ್ಕಿಳಿಸುವದು ತೊಂದರೆಯ ಕೆಲಸವಾ ಗಿತ್ತು. ನಮ್ಮ ಮೊದಲಿನ ಪತ್ರದ ನಂತರ, ಶಿವಾಜಿಯು ಮತ್ತೆ ಬಂದ ಹೂಲಿ ಎದ್ದಿತ್ತು. ಈ ಕಾಲಕ್ಕೆ ಆ ಮೊದಲಿಗಿಂತಲೂ ಜನರಲ್ಲಿ ಹೆಚ್ಚಾಗಿ ಗೊಂದಲವುಂಟಾ ಯಿತು. ಜನರು ಮನೆಮಾರುಗಳನ್ನು ತೊರೆದು ಹೊರಟು ಹೋದರು. ಅವರು ತಮ್ಮ ವಸ್ತು-ಒಡವೆ, ವ್ಯಾಪಾರೀ ಜೀನಸು ಮುಂತಾದವುಗಳನ್ನು ದುರ್ಗದೊಳಗೆ ತುಂಬಿ ಇಟ್ಟರು. ಎಷ್ಟೋ ಜನರಂತೂ ಅವುಗಳನ್ನು ಕೋಟೆಯ ಸುತ್ತಲಿನ ಕಂದಕ ಗಳಲ್ಲಿ ಸಹ ಹುಗಿದಿಟ್ಟರು! ಹಾಗು ಎಷ್ಟೋ ದೊಡ್ಡ ದೊಡ್ಡ ಪಾತ್ರೆ-ಪಡಗಗಳನ್ನು ಹೊಳೆಯಲ್ಲಿ ಚಲ್ಲಿಕೊಟ್ಟಿದ್ದರು! ಶಿವಾಜಿಯು ಎಷ್ಟೋ ಜನರ ಕೈಕಾಲುಗಳನ್ನು ತುಂಡರಿಸಿದ ಹೂಲಿಯಿದ್ದದ್ದರಿಂದ, ಅವನ ಕ್ರೂರತನಕ್ಕೆ ಅಂಜಿ, ಬಾದಶಹನು ತನ್ನ ದಂಡನ್ನು ಸಂರಕ್ಷಣೆಯ ಸಲುವಾಗಿ ಇತ್ತ ಕಳಿಸಿ ಕೊಡದಿದ್ದರೆ ಇಲ್ಲಿಯ ಜನರು

ಶಿವಾಜಿಯು ಆ ಹೂಲಿಯನ್ನು ಕೇಳಿದ ಕೂಡಲೆ ಊರಬಿಟ್ಟು ಹೋಗುವ ಬೇಕಿನಲ್ಲಿದ್ದರು."

ಇ. ಸ. ೧೬೬೪ರ ಜನೇವರಿ ತಿಂಗಳಲ್ಲಿ ಶಿವಾಜಿಯು ಸುರತವನ್ನು ಸುಲಿದನು. ಆಗ ಸುರತದ ಮೊಗಲ ಗವರ್ನರನಿಗೆ ನಗರ ಸಂರಕ್ಷಣೆಗಾಗಿ ಇಂಗ್ಲಿಷರ ತೋಫುಗಳ ನೆರವು ಚನ್ನಾಗಿ ಆಯಿತು ವಾಸ್ತವಿಕವಾಗಿ ಶಿವಾಜಿಯು ಸುರತದೊಳಗಿನ ಇಂಗ್ಲಿಷ ಇಲ್ಲವೆ ಡಚ್ಚರನ್ನು ಸುಲಿಯಬೇಕೆಂದು ಹೋದವನಲ್ಲ; ಅವನು ಮುಖ್ಯತಃ ಅಲ್ಲಿಯ ಮೊಗಲರನ್ನು ಮುರಿಯಬೇಕೆಂದು ದಾಳಿಯನ್ನಿತ್ತನು. ಆದರೂ ಅಲ್ಲಿಯ ಪಾಶ್ಚಿಮಾತ್ಯರು ತಂತಮ್ಮ ಸಂರಕ್ಷಣೆಯ ವ್ಯವಸ್ಥೆಯನ್ನು ಮಾಡಿಟ್ಟು ಕೊಂಡಿದ್ದರು. ಇಷ್ಟೇ ಅಲ್ಲ, ಅವರು ಮೊಗಲರಿಗೂ ಕೂಡ ಸಹಾಯ ಮಾಡಿದರು. ಸುರತದೊಳಗಿನ ಕಂಪನಿಯ ವಖಾರವನ್ನು ಸಂರಕ್ಷಿಸುವ ಸಲುವಾಗಿ ಈಸ್ಟ ಇಂಡಿಯಾ ಕಂಪನಿಯವರು ಅಲ್ಲಿಯ ಪ್ರೆಸಿಡೆಂಟನಾಗಿದ್ದ ಸರ ಜಾರ್ಜ ಆಕ್ಸೆಂಡನ್ ಎಂಬವನಿಗೆ ಸುವರ್ಣಪದಕವನ್ನೂ, ಎರಡು ನೂರು ಬಂಗಾರದ ನಾಣ್ಯಗಳನ್ನೂ ಬಕ್ಷೀಸು ಕೊಟ್ಟರು; ಹಾಗು ದಿಲ್ಲಿಯ ಔರಂಗಜೇಬ ಬಾದಶಹನು ಆ ಪ್ರೆಸಿಡೆಂಟನಿಗೆ ಕೃತಜ್ಞತಾ ಪೂರ್ವಕವಾಗಿ ಬಹುಮಾನದ ಪೋಷಾಕನ್ನು ಕಳಿಸಿದ್ದಲ್ಲದೆ; ಕಂಪನಿಯ ಮಾಲಿನ ಮೇಲಿನ ಕೆಲ ಸುಂಕವನ್ನೂ ಮಾಫ ಮಾಡಿದನು.

ಮುಂದಿನ ವರ್ಷ ಶಿವಾಜಿಯು ೮೫ ದೊಡ್ಡ ಹಾಗು ೩ ಸಣ್ಣ ಹಡಗುಗಳೊಡನೆ ಕಾರವಾರವನ್ನು ಮುತ್ತಿದನು. ಅಲ್ಲಿಯೂ ಇಂಗ್ಲಿಷರ ವಖಾರವಿದ್ದಿತು. ಕಾರವಾರ ಬಂದರವು ಸುರಕ್ಷಿತವಲ್ಲದ್ದರಿಂದ ಬೇಗನೆ ಒಡಂಬಡಿಕೆಯಾಯಿತು. ಶಿವಾಜಿಗೆ ಕೊಡಲೊಪ್ಪಿದ ಕಪ್ಪದ ಹಣದಲ್ಲಿ ಇಂಗ್ಲಿಷರು ತಮ್ಮ ಪಾಲಿನ ೧೧೨ ಪೌಂಡುಗಳನ್ನು ಆಗಲೆ ಕೊಟ್ಟುಬಿಟ್ಟರು!

ಸನ್ ೧೬೭೦ರಲ್ಲಿ ಶಿವಾಜಿಯು ಮತ್ತೆ ಸುರತವನ್ನು ಮುತ್ತಿದನು. ಈ ಕಾಲಕ್ಕೆ ಆತನ ೧೫೦೦೦ ಸೈನ್ಯವು ಪಟ್ಟಣವನ್ನು ಕೈವಶಮಾಡಿಕೊಂಡಿತು. ಎಷ್ಟೋ ಜನ ಇಂಗ್ಲಿಷ ವ್ಯಾಪಾರಿಗಳು ಈ ದಾಳಿಯಲ್ಲಿ ಜೀವಕ್ಕೆರವಾದರು; ಮತ್ತೂ ಎಷ್ಟೋ ವ್ಯಾಪಾರೀ ಮಾಲು ಸುಲಿಯಲ್ಪಟ್ಟಿತು. ಈ ಕಾಲಕ್ಕೆ ಶಿವಾಜಿಯು ಡಚ್ಚವ್ಯಾಪಾರಿಗಳಿಗೆ ತೊಂದರೆ ಕೊಡಲಿಲ್ಲ. ಫ್ರೇಂಚರ ವಖಾರೂ ಆ ಕಾಲಕ್ಕೆ ಅಲ್ಲಿ ಇತ್ತು. ಆವರ ತಕರಾರು ನಡೆಯದೆ ಅವರು ಶಿವಾಜಿಗೆ ತಮ್ಮ ಹದ್ದಿನೊಳಗಿಂದ ಸುಮ್ಮನೆ ದಾರಿ ಕೊಡಬೇಕಾಯಿತು. ಈ ದಾಳಿಯಲ್ಲಿ ಶಿವಾಜಿಗೆ ಹೇರಳವಾದ ದುಡ್ಡೂ ಮಾಲೂ ದೊರೆತವು.

ಈ ಮುಂದೆ ಶಿವಾಜಿಗೂ ಇಂಗ್ಲಿಷರಿಗೂ ೧೬೭೩ರಲ್ಲಿ ಹುಬ್ಬಳ್ಳಿಯಲ್ಲಿ ಗಂಟು ಬಿದ್ದಿತು. ಇಲ್ಲಿಯೂ ಇಂಗ್ಲಿಷರ ಒಂದು ವಖಾರವಿತ್ತು. ಈ ದಾಳಿಯಿಂದ ಇಂಗ್ಲಿಷರಿಗೆ ಸರಾಸರಿ ೭೫ ಸಾವಿರದ ಹಾನಿಯಾಯಿತೆಂದು ಕಂಪನಿಯವರ ಅಂಬೋಣವಿದೆ. ಈ ಹಾನಿಯನ್ನು ತುಂಬಿಕೊಡಬೇಕೆಂದು ಕಂಪನಿಯವರು ಶಿವಾಜಿಯ ಕಡೆಗೆ

ಮಾತು ನಡೆಸಿದರು. ನಿಮ್ಮ ಹಾನಿಯಾಗಿದ್ದರೆ ಕಿರುಕುಳ ಹಾನಿಯಾಗಿರಬೇಕು; ಅದರಿಂದ ಅದನ್ನು ತುಂಬಿಕೊಡಲಿಕ್ಕೆ ಸಾಧ್ಯವಿಲ್ಲೆಂದು ಈ ಸಾರೆಯೂ ಶಿವಾಜಿಯು ಅವರಿಗೆ ತಿಳಿಸಿದನು. ಹುಬ್ಬಳ್ಳಿಯಲ್ಲಿಯೂ ಶಿವಾಜಿಯು ಇಂಗ್ಲಿಷರನ್ನೇ ಸುಲಿಯ ಬೇಕೆಂದು ಬಂದವನಲ್ಲ; ಕೇವಲ ಮೊಗಲರ ಮೇಲೆಯೇ ದಾಳಿಯಿಕ್ಕುವದಕ್ಕೆಂದು ಬಂದಿದ್ದನು. ಆದರೂ ಆ ಕಾಲಕ್ಕೆ ಪಟ್ಟಣದಲ್ಲಿ ಎಲ್ಲ ದೇಶದ ವ್ಯಾಪಾರಿಗಳು ಇರುತ್ತಿದ್ದದರಿಂದ ಅವರೆಲ್ಲರ ಮಾಲೂ ಲೂಟಿ ಮಾಡಲ್ಪಟ್ಟಿತು; ಉಳಿದ ವ್ಯಾಪಾರಿಗಳೊಡನೆ ಇಂಗ್ಲಿಷ ವ್ಯಾಪಾರಿಗಳ ಮಾಲೂ ಲೂಟಿಯಾಯಿತು. ರಾಜಾಪುರ ಹಾಗು ಹುಬ್ಬಳ್ಳಿಗಳಲ್ಲಾದ ತಮ್ಮ ಹಾನಿಯನ್ನು ತುಂಬಿಕೊಡಬೇಕೆಂದು ಮುಂಬಯಿಯ ಡೆಪ್ಯೂಟಿ ಗವರ್ನರನಾದ ಆ್ಯನಜಿಯರನು ಬಹು ದಿನಗಳ ವರೆಗೆ ಶಿವಾಜಿಗೆ ಕೇಳಿಯೇ ಕೇಳುತ್ತಿದ್ದನು; ಆದರೆ ಆ ಬೇಡಿಕೆಯು ಸರಿಯಾಗಿದೆಯೆಂದು ಶಿವಾಜಿಯು ಒಮ್ಮೆಯೂ ಒಪ್ಪಲಿಲ್ಲ. ಆದರೂ ಶಿವಾಜಿಗೆ ಜಂಜೀರಾದ ಸಿದ್ದಿಯ ಮೇಲೆ ಏರಿಹೋಗುವದಕ್ಕೆ ಇಂಗ್ಲಿಷರ ನೆರವು ಸಿಕ್ಕರೆ ಬೇಕಾಗಿದ್ದಿತು. ಅದರಿಂದ-"ಈ ಮೊದಲು ಆದದ್ದು ಆಗಿ ಹೋಯಿತು; ಆದರೆ ಇನ್ನು ನನ್ನಿಂದ ನಿಮಗೆಂದೂ ಉಪಟಳವಾಗದು." ಎಂದು ಅವನು ಅವರಿಗೆ ಆಗ ಅಭಿವಚನವನ್ನಿತ್ತನು; ಹಾಗು ನೀವು ಮತ್ತೆ ರಾಜಾಪುರಕ್ಕೆ ಹೋಗಿ ಅಲ್ಲಿ ವಖಾರವನ್ನಿಟ್ಟರೆ, ನಾನು ಅದಕ್ಕೆ ಅಡ್ಡಿ ಮಾಡುವದಿಲ್ಲೆಂದೂ ಹೇಳಿದನು; ಆದರೆ ಇಂಗ್ಲಿಷರಿಗೆ ಹಾಗೆ ಮಾಡಲು ಒಮ್ಮೆಲೆ ಧೈರ್ಯವುಂಟಾಗಲಿಲ್ಲ. ಸಿದ್ದಿಯ ವಿರುದ್ಧ ಶಿವಾಜಿಗೆ ಸಹಾಯ ಮಾಡುವದು ಅವರಿಗೆ ಗಡಚೆನಿಸಿತು. ಯಾಕಂದರೆ, ಮುಂಬಯಿಯಿಂದ ಜಂಜೀರವು ತೀರ ಹತ್ತರವಿದ್ದ ಮೂಲಕ, ತಾವು ಈಗ ಶಿವಾಜಿಗೆ ನೆರವಾದರೆ, ಮುಂದೆ ತಮ್ಮ ಮುಂಬಯಿಯನ್ನು ಸಿದ್ದಿಯ ಹಡಗು ಪಡೆಯು ಯಾವಾಗ ಮುತ್ತೀತೆಂಬದರ ನೇಮವಿರಲಿಲ್ಲ. ಅದರಿಂದ ಅವರು:—"ನಾವೇನು, ಹೇಳಿಕೇಳಿ ವ್ಯಾಪಾರಿಗಳು! ನಮಗೆ ಈ ಯುದ್ಧಗಳ ಉಪಸರ್ಗವೇತಕ್ಕೆ? ಕೇವಲ ನಮ್ಮ ಸಂರಕ್ಷಣದ ಹೊರತು ಮಿಕ್ಕ ಯುದ್ಧದ ಹವ್ಯಾಸದಲ್ಲಿ ನಾವು ಬೀಳಲಿಚ್ಛಿಸುವದಿಲ್ಲ" ಎಂದು ಹೇಳಿ ಆ ಪ್ರಸಂಗವನ್ನು ನೀಗಿದರು. ಆದರೂ ತಮ್ಮ ಆ ಮೊದಲಿನ ಹಾನಿ ಕೇಳುವದನ್ನು ಮಾತ್ರ ಅವರು ಬಿಡಲಿಲ್ಲ. ೧೬೭೩ರ ಮೇ ತಿಂಗಳಲ್ಲಿ ನಿಕಲ್ಸ ಎಂಬ ಹೆಸರಿನ ಇಂಗ್ಲಿಷ ವ್ಯಾಪಾರಿಗಳ ವಕೀಲನು ಸಂಭಾಜಿಯ ಮುಖಾಂತರ ಶಿವಾಜಿಯ ಭೆಟ್ಟಿಗೆ ಬಂದನು; ಆದರೆ ಆ ಭೆಟ್ಟಿಯಿಂದ ವಿಶೇಷ ಪ್ರಯೋಜನವೇನೂ ಆಗಲಿಲ್ಲ.

೧೬೭೪ರಲ್ಲಿ ಮರಾಟರ ೧೦ ಸಾವಿರ ಸೈನ್ಯವು ಸಾಷ್ಟಿಗೆ ಬಂದಿತು; ಹಾಗು ವಸಯಿ ಪ್ರಾಂತದೊಳಗಿಂದ ಚೌಥಾಯಿಯನ್ನು ವಸೂಲ ಮಾಡತೊಡಗಿತು. ಅದರಿಂದ ಮುಂಬಯಿಯ ಇಂಗ್ಲಿಷರು ಹೆಚ್ಚಾಗಿ ಬೆದರಿದರು. ಇದರ ಪರಿಣಾಮದಿಂದ ಅದೇ ವರ್ಷದಲ್ಲಿ ರಾಯಗಡದಲ್ಲಾದ ಶಿವಾಜಿಯ ಪಟ್ಟಾಭಿಷೇಕಕ್ಕೆ ಇಂಗ್ಲಿಷರ ಕಡೆಯಿಂದ ಹೆನರಿ ಆಕ್ಸೆಂಡನು ಇಬ್ಬರು ಪ್ರತಿಷ್ಠಿತ ಇಂಗ್ಲಿಷ ವ್ಯಾಪಾರಸ್ಥರೊಡನೆ

ಮುಂಬಯಿಯಿಂದ ರಾಯಗಡಕ್ಕೆ ಹೋಗಿ ಶಿವಾಜಿಯನ್ನು ಅಭಿವಂದಿಸಿ, ಅವನಿಗೆ ನಜರಾಣೆಯನ್ನು ಕೊಟ್ಟನು. ಈ ಕಾಲಕ್ಕೆ ಶಿವಾಜಿಗೂ ಇಂಗ್ಲಿಷರಿಗೂ ಶಾಂತತನ ದಿಂದ ನಿಕಟ ಪರಿಚಯವಾಗಿ, ಉಭಯತರಲ್ಲಿ ಒಪ್ಪಂದವೂ ಆಯಿತು ಆ ಒಪ್ಪಂ ದದ ಕಾಗದದ ಮೇಲೆ ೬ನೇ ಎಪ್ರಿಲ ೧೬೭೪ನೇ ದಿವಸ ಉಭಯ ಪಕ್ಷದವರ ಸಹಿ ಗಳಾದವು. ಆ ಒಡಂಬಡಿಕೆಯು ೨೦ ಕಲಮಿನದಾಗಿದ್ದು, ಅವುಗಳೊಳಗಿನ ಈ ಕೆಳ ಗಿನ ನಾಲ್ಕು ಕಲುಮುಗಳು ಪ್ರಾಮುಖ್ಯವಾಗಿರುತ್ತವೆ:—

(೧) ರಾಜಾಪುರದೊಳಗೆ ಇಂಗ್ಲಿಷರಿಗಾದ ಮುಖ್ಯ ಹಾನಿಯನ್ನು ಶಿವಾಜಿಯು ತುಂಬಿಕೊಡಬೇಕು. ರಾಜಾಪೂರ, ದಾಭೋಳ, ಚೌಲ ಹಾಗು ಕಲ್ಯಾಣಗಳಲ್ಲಿ ವಖಾರವನ್ನಿಕ್ಕಲಿಕ್ಕೆ ಇಂಗ್ಲಿಷರಿಗೆ ಪರವಾನಿಗೆಯಿರಬೇಕು. ಇಂಗ್ಲಿಷರು ಶಿವಾ ಜಿಯ ಕೈಕೆಳಗಿನ ಎಲ್ಲ ದೇಶಗಳಲ್ಲಿ ವ್ಯಾಪಾರ ಮಾಡತಕ್ಕದ್ದು. ಮಾಲಿನ ಖರೀದಿ-ವಿಕ್ರಿಗಳನ್ನು ತಮ್ಮ ವ್ಯಾಪಾರೀಭಾವಕನುಸರಿಸಿ ಮಾಡಿಕೊಳ್ಳಬಹುದು. ದರಗಳ ಬಗ್ಗೆ ಶಿವಾಜಿಯು ಅವರನ್ನು ಒತ್ತಾಯಪಡಿಸಕೂಡದು.

(೨) ಶಿವಾಜಿಯ ನಾಡಿನೊಳಗೆ ತಂದ ಮಾಲಿನ ಬಗ್ಗೆ ಮಾಲಿನ ಬೆಲೆಯ ಮೇಲೆ ೧೦೦ಕ್ಕೆ ೨॥ಯಂತೆ ಶಿವಾಜಿಗೆ ಸುಂಕ ಕೊಡಬೇಕು.

(೩) ಇಂಗ್ಲಿಷರು ಹಾಗು ಶಿವಾಜಿ ಈ ಉಭಯತರ ನಾಣ್ಯಗಳು ಪರಸ್ಪರರ ನಾಡಿನಲ್ಲಿ ನಡೆಯತಕ್ಕದ್ದು.

(೪) ಪರಸ್ಪರರು ಪರಸ್ಪರರಿಂದ ತಕ್ಕೊಂಡ ಹಡಗುಗಳನ್ನು ಮರಳಿ ಕೊಡ ಬೇಕು.

ರಾಜಾಪುರದ ಹಾನಿಯ ಬಗ್ಗೆ ೧೦,೦೦೦ ಮೊಹರುಗಳೆಂದು ಗೊತ್ತಾಗಿದ್ದು, ಅವು ಇಂಗ್ಲಿಷರಿಗೆ ಪ್ರತ್ಯಕ್ಷವಾಗಿ ದೊರೆಯದೆ, ಮುಂದೆ ಮೂರುವರ್ಷಗಳಲ್ಲಿ ಪ್ರತಿ ವರ್ಷ ೫೦೦೦ ಮೊಹರುಗಳ ಬೆಲೆಯಂತೆ ೧೫೦೦೦ ಮೊಹರುಗಳ ಮಾಲನ್ನು ಇಂಗ್ಲಿ ಷರು ಶಿವಾಜಿಯಿಂದ ಕೊಂಡುಕೊಳ್ಳಬೇಕು. ಆ ಬಗ್ಗೆ ಇಂಗ್ಲಿಷರು ಬರೇ ೭೫೦೦ ಮೊಹರುಗಳನ್ನು ನಗದು ಕೊಡಬೇಕು. ಉಳಿದ ೭೫೦೦ ಮೊಹರುಗಳನ್ನು ಇಂಗ್ಲಿ ಷರು ರಾಜಾಪುರದಲ್ಲಿ ವಖಾರವನ್ನಿಟ್ಟ ನಂತರ ಕ್ರಮೇಣ ಶಿವಾಜಿಗೆ ಮುಟ್ಟಿಸತಕ್ಕದ್ದು ಗೆದ್ದುಕೊಂಡ ಹಡಗುಗಳನ್ನು ಮರಳಿ ಕೊಡುವ ಕರಾರಿಗೆ ಶಿವಾಜಿಯು ಒಳ್ಳೇ ಕಷ್ಟ ದಿಂದ ಒಪ್ಪಿಕೊಂಡನು. ಯಾಕಂದರೆ, ಯುದ್ಧದಲ್ಲಿ ಸಂಪಾದಿಸಿದ ಸುಲಿಗೆಯ ಮೇಲೆ ರಾಜನ ವಿಶೇಷ ತರದ ಹಕ್ಕೂ ಪ್ರೇಮವೂ ಇರುತ್ತದೆ. ಇಂಗ್ಲಿಷ ಟಂಕ ಸಾಲೆಯ ನಾಣ್ಯಗಳ ಬಗ್ಗೆ ಶಿವಾಜಿಯು ಒಮ್ಮೆಲೆ ಸಮ್ಮತಿಯನ್ನೀಯಲಿಲ್ಲ. ಆ ನಾಣ್ಯಗಳಲ್ಲಿಯ ನಿಜವಾದ ಬೆಳ್ಳಿ-ಬಂಗಾರಗಳ ಬೆಲೆಯಷ್ಟೇ ಅವುಗಳ ಬೆಲೆಯನ್ನು ಮನ್ನಿಸಬೇಕು; ಅವುಗಳ ಮೇಲೆ ಬರೆದ ಬೆಲೆಯನ್ನು ಹಿಡಿಯಬಾರದು, ಎಂದು ಶಿವಾಜಿಯು ಅಂಬೋಣವಿದ್ದಿತು: ಆದರೆ ಕಡೆಗೆ ಈ ಎರಡೂ ಕರಾರುಗಳ ವಿಷ ಯದ ತನ್ನ ಆಗ್ರಹವನ್ನು ಅವನು ಬಿಟ್ಟುಬಿಡಬೇಕಾಯಿತು. ಒಪ್ಪಂದದಲ್ಲಿ ಗೊ-

ತ್ತಾದ ಮೇರೆಗೆ ಇಂಗ್ಲಿಷರು ರಾಜಾಪುರದಲ್ಲಿ ಮತ್ತೆ ತಮ್ಮ ವಖಾರವನ್ನು ಸ್ಥಾಪಿಸಿದರು; ಆದರೆ ಅದರಿಂದ ಅವರಿಗೆ ವಿಶೇಷ ಲಾಭವಾಗಲಿಲ್ಲ.

ಸನ್ ೧೬೭೪ರಲ್ಲಿ ೫೭ ಹಡಗುಗಳನ್ನೂ, ನಾಲ್ಕು ಸಾವಿರ ದಂಡನ್ನೂ ತಕ್ಕೊಂಡು ಪನವೇಲದ ಮೇಲೂ, ಸಿದ್ದೀ ಕಾಸೀಮನ ಮೇಲೂ ದಾಳಿ ಇಡಬೇಕೆಂದು ಶಿವಾಜಿಯು ವಿಚಾರವಿದ್ದಿತು; ಆದರೆ ಇಂಗ್ಲಿಷರು ಮಧ್ಯಸ್ಥಿಕೆ ಮಾಡಿ ಸಿದ್ದಿಯನ್ನು ರಕ್ಷಿಸಿದರು. ತಾವು ವ್ಯಾಪಾರಿಗಳು; ತಮಗೆ ಹೆರವರ ಜಗಳದಲ್ಲಿ ಬೀಳುವ ಕಾರಣವೇನು? ಹೀಗೆಂದು ಇಂಗ್ಲಿಷರು ತ್ರಯಸ್ಥರಾಗಿರುವ ವಿಚಾರವನ್ನು ಮಾಡುತ್ತಿದ್ದರು; ಆದರೆ ಆ ವಿಚಾರದಂತೆ ಆಚಾರ ಮಾತ್ರ ಅವರಿಂದ ಬಹುಶಃ ಆಗುತ್ತಿರಲಿಲ್ಲ. ಜಂಜೀರೆಯಿಂದ ಮುಂಬಯಿಯ ವರೆಗಿನ ಸಮುದ್ರದಂಡೆಯಲ್ಲಿ ಮರಾಟರ ಹಾಗು ಸಿದ್ದಿಯ ಹಡಗುಪಡೆಗಳಲ್ಲಿ ಯಾವಾಗಲೂ ಯುದ್ಧವು ನಡೆವೇ ನಡೆಯುತ್ತಿತ್ತು. ಮುಂಬಯಿಯ ಬಂದರವು ಇಂಗ್ಲಿಷರ ವಶದಲ್ಲಿದ್ದ ಮೂಲಕ ಸಿದ್ದಿಯ ಹಡಗುಪಡೆಯು ಮರಾಟರ ನಾಡಿನ ಮೇಲೆ ಕದ್ದು ಮುಚ್ಚಿ ದಾಳಿ ಮಾಡಿ ಬಂದು, ಇಲ್ಲವೆ ಸಮುದ್ರದಂಡೆಯ ಪ್ರಜೆಗಳನ್ನು ಹಿಂಸಿಸಿ ಬಂದು ಮುಂಬಯಿ ಬಂದರದಲ್ಲಿ ಆಶ್ರಯ ಹೊಂದುತ್ತಿದ್ದಿತು. ಇದರಿಂದ ಇಂಗ್ಲಿಷರು ಸಿದ್ದಿಗೆ ಒಳಗಿಂದೊಳಗೇ ಅನುಕೂಲರಾಗಿರುವರೆಂದು ಶಿವಾಜಿಗೆ ಮೇಲಿಂದ ಮೇಲೆ ಸಂಶಯವುಂಟಾಗುತ್ತಿತ್ತು. ಒಮ್ಮೆಯಂತೂ, ನೀವು ಸಿದ್ದಿಯ ಬಂದೋಬಸ್ತನ್ನು ಮಾಡದಿದ್ದರೆ ಕಷ್ಟಕ್ಕೊಳಗಾಗಬೇಕಾದೀತೆಂಬ ಸಂಗತಿಯ ಸ್ಪಷ್ಟವಾದ ನಿರೂಪವನ್ನು ಶಿವಾಜಿಯು ಇಂಗ್ಲಿಷರ ಪ್ರೆಸಿಡೆಂಟನಿಗೆ ಕಳಿಸಿ ಅವನನ್ನು ಬೆದರಿಸಿದ್ದನು ಸಹ. ಆಗ ಇಂಗ್ಲಿಷರು ತಮ್ಮ ತ್ರಯಸ್ಥವೃತ್ತಿಯನ್ನು ಬದಿಗಿರಿಸಿ, ಸಿದ್ದಿಯ ಬಂದೋಬಸ್ತನ್ನು ಮೊದಲು ಮಾಡಬೇಕಾಯಿತು. ಸಿದ್ದಿಯ ತೊಂದರೆಯ ಮೂಲಕ ಮರಾಟರ ಸೈನ್ಯವು ಒಂದೆರಡು ಸಾರೆ ಮುಂಬಯಿಯ ಮೇಲೆ ದಾಳಿಯುನ್ನಿಕ್ಕುವ ಪ್ರಸಂಗ ಬಂದಿತ್ತು; ಆದರೆ ಅದು ನಿವಾರಣವಾಯಿತು. ೧೬೭೮ನೇ ಎಪ್ರೀಲ ತಿಂಗಳಲ್ಲಿ ಶಿವಾಜಿಯ ನಾಡಿನಲ್ಲಿ ಕೈಸೆರೆ ಹಿಡಿದ ಎಷ್ಟೋ ಜನ ಹಿಂದುಗಳನ್ನು ಸಿದ್ದಿಯು ಮುಂಬಯಿಯ ಬಂದರಿನಲ್ಲಿ ಗುಲಾಮರೆಂದು ಮಾರಲಿಕ್ಕೆ ಹತ್ತಿದನು. ಆಗ ಇಂಗ್ಲಿಷರು ಅವರಲ್ಲಿಯ ೨೧ ಜನ ಹಿಂದುಗಳ ಪತ್ತೆ ಹಚ್ಚಿ, ಅವರನ್ನು ಆ ಗುಲಾಮಗಿರಿಯ ಸಂಕಟದಿಂದ ಪಾರುಮಾಡಿಬಿಟ್ಟರು. ೧೬೭೯ರಲ್ಲಿ ಪಶ್ಚಿಮ ಸಮುದ್ರದಂಡೆಯ ಮೇಲಿನ ಹಡಗುಪಡೆಯನ್ನು ಕಡಿಮೆಮಾಡಬೇಕೆಂದು ಕಂಪನಿಯ ಬೋರ್ಡಿನವರು ನಿಶ್ಚಯಿಸಿದರು. ಅದರಿಂದ ಮುಂಬಯಿಯ ಇಂಗ್ಲಿಷರಿಗೆ ಮರಾಟರ ಅಂಜಿಕೆಯು ಹೆಚ್ಚಿತು; ಆದರೆ ಮುಂದೆ ತುಸ ದಿವಸಗಳಲ್ಲಿಯೇ ಶಿವಾಜಿಯು ತೀರಿಕೊಳ್ಳಲು, ಅವರ ಅಂಜಿಕೆಯು ಸಹಜವಾಗಿಯೇ ಕಡಿಮೆಯಾಯಿತು.

ಶಿವಾಜಿ ಹಾಗು ಇಂಗ್ಲಿಷರು ಇವರ ಸಂಬಂಧದ ಸಂಗತಿಯು ಇತ್ತೀಚೆಗೆ ಇತಿಹಾಸ ಸಂಶೋಧಕರು ಪ್ರಸಿದ್ಧಿಸಿದ ಕಾಗದ-ಪತ್ರಗಳಿಂದ ಹೆಚ್ಚಾಗಿ ಉಪ

ಲಬ್ಧವಾಗುವದಿಲ್ಲ. ಬಖರಗಳಲ್ಲಂತೂ ಇಂಗ್ಲಿಷರ ಹೆಸರು ಕೂಡ ಹೆಚ್ಚಾಗಿ ಸಿಗುವದಿಲ್ಲ. ಅಂದಮೇಲೆ ಅವುಗಳಲ್ಲಿ ಇವರ ಯಾವುದೊಂದು ವ್ಯವಹಾರದ ಸಾಧಾರಣ ಸಂಗತಿಯು ದೊರಕುವದು ಅಶಕ್ಯವೇ ಸರಿ; ಆದರೆ ಶಿವಾಜಿಯ ಕಾಲದಲ್ಲಿ ಇತ್ತ ಕಡೆಗಿದ್ದ ಇಂಗ್ಲಿಷ ಕಂಪನಿಯ ಸರಕಾರೀ ಕಾಗದ-ಪತ್ರಗಳು ಅವರಲ್ಲಿ ಸಿಗುತ್ತಿದ್ದು, ಅವುಗಳಲ್ಲಿಯ ಎಷ್ಟೋ ಕಾಗದ-ಪತ್ರಗಳು ಮುದ್ರಣಗೊಂಡಿರುತ್ತವೆ. ಆ ಕಾಗದ-ಪತ್ರಗಳ ಹಾಗು ಇತರ ಮಾಹಿತಿಯ ಆಧಾರದಿಂದ ಇಂಗ್ಲಿಷ ಇತಿಹಾಸಕಾರರು ಆ ವಿಷಯದ ಮೇಲೆ ಪ್ರಬಂಧಗಳನ್ನು ಬರೆದಿರುತ್ತಾರೆ. ಅವುಗಳಲ್ಲಿ ಮಾತ್ರ ಹೆಚ್ಚು ಮಾಹಿತಿಯು ದೊರಕುತ್ತದೆ. ಆ ಮಾಹಿತಿಯಿಂದ ಒಂದು ನಿಷ್ಕರ್ಷ ಹೊರಡುವದೇನಂದರೆ, ಶಿವಾಜಿಗೂ ಇಂಗ್ಲಿಷರಿಗೂ ಎಷ್ಟು ಕಾಲದವರೆಗೆ ಸಂಬಂಧವುಂಟಾಗಿದ್ದಿತೋ, ಅದುವರೆಗೆ ಶಿವಾಜಿಯು ಇಂಗ್ಲಿಷರ ಮೇಲೆ ತನ್ನ ವರ್ಚಸ್ಸನ್ನು ಚನ್ನಾಗಿ ಕೂರಿಸಿದ್ದನು; ಮತ್ತು ಆಗ ಇಂಗ್ಲಿಷರಾದರೂ ಶಿವಾಜಿಗೆ ಅಂಜಿ, ಮರ್ಯಾದೆಯಿಂದ ನಡೆಯುತ್ತಿದ್ದರು. ಇನ್ನು ಎಷ್ಟೋ ಕಡೆಗೆ ಇಂಗ್ಲಿಷ ಗ್ರಂಥಕಾರರು ಬರೆದಿರುವದೇನಂದರೆ:—"ಇಂಗ್ಲಿಷರೆದುರಿಗೆ ಶಿವಾಜಿಯ ಆಟವೇನೂ ನಡೆಯುತ್ತಿರಲಿಲ್ಲ; ಅವನು ಇರುವವರೆಗೆ ಸೋತೇ ನಡೆಯಬೇಕಾಯಿತು" ಆದರೆ ಅದೇ ಗ್ರಂಥಕಾರರು ಬರೆದಿರುವ ಆ ಪ್ರಬಂಧಗಳನ್ನು ಸಮಗ್ರವಾಗಿ ಓದಿದರೆ, ಅವರ ಈ ಅನುಮಾನದ ಖಂಡನವು ಸಹಜವಾಗಿಯೇ ಆಗಿಹೋಗುತ್ತದೆ. ರಾ. ಸರದೇಸಾಯಿ ಎಂಬ ಸುಪ್ರಸಿದ್ಧ ಇತಿಹಾಸ ಸಂಶೋಧಕರು ಈ ವಿಷಯದ ಇಂಗ್ಲಿಷ ಗ್ರಂಥಗಳನ್ನು ಪರಿಶ್ರಮಪೂರ್ವಕವಾಗಿ ಪರ್ಯಾಲೋಚಿಸಿ ತಮ್ಮ "ಮರಾಠೀ ರಿಯಾಸತ" ಎಂಬ ಪುಸ್ತಕದಲ್ಲಿ ಇದೇ ವಿಷಯದ ಬಗ್ಗೆ ಕೆಲವು ಪಾನುಗಳನ್ನು ತುಂಬಿರುತ್ತಾರೆ. ಅದರೊಳಗಿನ ಕೆಲ ಭಾಗವನ್ನು ಇಲ್ಲಿ ಅವತರಿಸುವೆವು:—

"ಶಿವಾಜಿಯಿಂದ ತಮಗೆ ಉಪದ್ರವವಾಗಿದ್ದರೂ ಇಂಗ್ಲಿಷ ವ್ಯಾಪಾರಿಗಳು ಅವನಿಗೆ ಸನ್ಮಾನಪೂರ್ವಕವಾದ ದೊಡ್ಡಿಸ್ತಿಕೆಯನ್ನು ಕೊಡಲೇಬೇಕಾಗಿದ್ದಿತು. ಇಂಗ್ಲಿಷರು ಧಾನ್ಯ ಸಾಮುಗ್ರಿಗಳನ್ನೂ ಉರವಲು ಕಟ್ಟಿಗೆಗಳನ್ನೂ ಶಿವಾಜಿಯ ನಾಡಿನಿಂದಲೇ ಪಡೆಯಬೇಕಾಗಿತ್ತು. ಅಂತೆಯೇ ಶಿವಾಜಿಯು ಸುರತದಲ್ಲಿ ತಮಗೆ ತೊಂದರೆ ಕೊಡುತ್ತಿದ್ದರೂ ಮುಂಬಯಿಯ ಇಂಗ್ಲಿಷರು ಅವನ ಬಾಲ ಬಡಿಯುತ್ತಿದ್ದರು. ೧೬೭೨ರಲ್ಲಿ ಶಿವಾಜಿಯು ಕುಲಾಬಾ ಜಿಲ್ಹೆಯೊಳಗಿನ ಘೋಡ ಬಂದರದ ಪೋರ್ತುಗೀಜರ ವಸಾಹತವನ್ನು ಹಸ್ತಗತಮಾಡಿಕೊಳ್ಳುವ ಪ್ರಯತ್ನ ಮಾಡಿದನು. ಆಗಂತೂ ಮುಂಬಯಿಯ ಇಂಗ್ಲಿಷರು ತೀರ ಬೆದರಿ ಬೆಂಡಾಗಿ, ಆತನ ಮನವೊಲಿಸಿ, ಅವನೊಡನೆ ಒಡಂಬಡಿಕೆಮಾಡಿಕೊಳ್ಳುವದಕ್ಕೆಂದು ಮಿಸ್ಟರ ಉಸ್ಟಿಕ ಎಂಬವನನ್ನು ಶಿವಾಜಿಯ ಕಡೆಗೆ ಕಳುಹಿಸಿದರು. ಆಗ ಒಪ್ಪಂದ ಮಾಡಿಕೊಳ್ಳುವದು ಶಿವಾಜಿಗೂ ಲಾಭದಾಯಕವಾಗಿತ್ತು; ಯಾಕಂದರೆ, ಇಂಗ್ಲಿಷರ ವ್ಯಾಪಾರದ ಮೂಲಕ ಶಿವಾಜಿಯು ಗೆದ್ದುಕೊಂಡ ನಾಡಿನ ಹುಟ್ಟುವಳಿಯು ಹೆಚ್ಚಾಗಿ ಬೆಲೆಗಾಣ

ಹತ್ತಿತ್ತು; ಅಲ್ಲದೆ ಅವರು ಮೊಗಲರನ್ನು ಅವರ ಕಾರ್ಯದಿಂದ ಮುಂದೆ ಬರಗೊಡು ವಂತಿರಲಿಲ್ಲ. ಈ ಎಲ್ಲ ಕಾರಣಗಳ ಮೂಲಕ ಶಿವಾಜಿಯು ಒಪ್ಪಂದಕ್ಕೆ ಒಪ್ಪಿದನು. ಉಸ್ಟಿಕನು ಆ ಮೊದಲಿನ ತಮ್ಮ ಹಾನಿಯ ಬಾಬತು ೩೨ ಸಾವಿರ ಪಗೋಡನ್ನು ಕೇಳಿದನು. ಅದಕ್ಕೆ ಮಾತ್ರ ಶಿವಾಜಿಯು ಸಮ್ಮತಿಸಲಿಲ್ಲ. ನೀವು ರಾಜಾಪುರ ದಲ್ಲಿ ಮತ್ತೆ ನಿಮ್ಮ ವಖಾರವನ್ನಿಡಬೇಕು; ಹಾಗು ಜಂಜೀರೆಯ ಸಿದ್ದಿಯನ್ನು ಬೊಗ್ಗುಬಡಿಯುವ ಕೆಲಸದಲ್ಲಿ ನಮಗೆ ನೆರವಾಗಬೇಕು; ಅಂದರೆ ನಾವು ಇನ್ನು ಮುಂದೆ ನಿಮ್ಮ ಉಸಾಬರಿಗೆ ಬರದೆ, ನಿಮ್ಮೊಡನೆ ಸ್ನೇಹದಿಂದ ನಡೆದುಕೊಳ್ಳುವೆವು, ಎಂದು ಶಿವಾಜಿಯು ಆ ಇಂಗ್ಲಿಷರ ವಕೀಲನಿಗೆ ತಿಳಿಸಿದನು. ಇವೆರಡೂ ಕರಾರು ಗಳು ಇಂಗ್ಲಿಷರಿಗೆ ಸಮ್ಮತವಾಗಲಿಲ್ಲ. ಮತ್ತೊಮ್ಮೆ ೧೬೭೩ರ ಮೇ ತಿಂಗಳಲ್ಲಿ ನಿಕಲ್ಸ ಎಂಬ ಹೆಸರಿನ ವಕೀಲನು ಇಂಗ್ಲಿಷರ ಕಡೆಯಿಂದ ಶಿವಾಜಿಯ ಭೆಟ್ಟಿಗೆ ಬಂದನು. ಆತನು ಸಂಭಾಜಿಯ ಮುಖಾಂತರ ಶಿವಾಜಿಗೆ ಭೆಟ್ಟಿಯಾದನು; ಆದರೆ ಆ ಭೆಟ್ಟಿಯಿಂದ ವಿಶೇಷ ಪ್ರಯೋಜನವೇನೂ ಆಗಲಿಲ್ಲ.

ಶಿವಾಜಿಗೆ ಎಲ್ಲ ಕಡೆಗೂ ವಿಜಯವು ದೊರೆತ ಮೂಲಕ ಅವನ ಕೆಲಸಗಳು ಎಲ್ಲ ಮರಾಟರಿಗೂ ಸೇರಹತ್ತಿದವು; ಮತ್ತು ಅವರ ಸಮ್ಮತಿಯಿಂದ ಶಿವಾಜಿಯು ೧೬೭೪ರಲ್ಲಿ ಯಥಾವಿಧಿಯಿಂದ ರಾಜ್ಯಪದವನ್ನು ಸ್ವೀಕರಿಸಿದನು. ಆ ಸಮಾರಂಭಕ್ಕೆ ಹೆನರಿ ಆಕ್ಸೆಂಡೆನ್ ಎಂಬ ಮುಂಬಯಿಯ ಡೆಪುಟಿ ಗವರ್ನರನು ಹಾಜರಿದ್ದನು. ಈಸ್ಟ ಇಂಡಿಯಾ ಕಂಪನಿಯ ವತಿಯಿಂದ ಬೇರೆ ಇಬ್ಬರು ಇಂಗ್ಲಿಷ ವ್ಯಾಪಾರಿಗಳನ್ನು ಸಂಗಡ ಕರೆದುಕೊಂಡು ಆತನು ಶಿವಾಜಿಯ ಪಟ್ಟಾಭಿಷೇಕದ ಸಮಾರಂಭಕ್ಕೆ ರಾಯ ಗಡಕ್ಕೆ ಹೋಗಿದ್ದನು. ಸಾಧಿಸಿದರೆ ಆ ಕಾಲಕ್ಕೆ ಶಿವಾಜಿಯೊಡನೆ ಒಪ್ಪಂದ ಮಾಡಿ ಕೊಳ್ಳಬೇಕೆಂದು ಆಕ್ಸೆಂಡನ ಆಲೋಚನೆ ಇದ್ದಿತು. ಈ ಕೆಲಸಕ್ಕಾಗಿ ಕಂಪನಿಯ ಆ ವಕೀಲರು ೧೬೭೪ಳನೇ ಎಪ್ರೀಲ ತಿಂಗಳ ಕೊನೆಗೆ ಮುಂಬಯಿಯಿಂದ ಹಡಗ ವನ್ನೇರಿ ಹೊರಟರು. ಅವರು ಮೊದಲು ಚೌಲಕ್ಕೆ ಹೋಗಿ, ಅಲ್ಲಿಂದ ರೋಹೈಗೆ ತಲುಪಿದರು. ರೋಹೈಯಿಂದ ಮೇಣೆಯನ್ನು ಮಾಡಿಕೊಂಡು ಅವರು ನಿಜಾಮ ಪುರಕ್ಕೆ ಬಂದರು. ಐದನೇ ದಿವಸ ರಾಯರೀ ಗುಡ್ಡದ ಇಳುಕಲಿನಲ್ಲಿರುವ ಪಾಚಾಡ ಎಂಬ ಹಳ್ಳಿಯಲ್ಲಿ ಅವರು ವಸತಿ ಮಾಡಿದರು. ಆಗ ಶಿವಾಜಿಯು ಪ್ರತಾಪಗಡ ದಲ್ಲಿದ್ದುದರಿಂದ, ಆ ಇಂಗ್ಲಿಷ ವಕೀಲರು ಆ ಪಾಚಾಡ ಗ್ರಾಮದಲ್ಲಿಯೇ ಕೆಲ ದಿನ ಗಳನ್ನು ಕಳೆಯಬೇಕಾಯಿತು. ನಾರಾಯಣಜೀ ಪಂಡಿತನೆಂಬ ಹೆಸರಿನ ಒರ್ವ ಶಿವಾಜಿಯ ಚಾಣಾಕ್ಷ ಸೇವಕನು ಅವರಿಗೆ ಪಾಚಾಡದಲ್ಲಿ ಭೆಟ್ಟಿಯಾದನು. ಅವನು ಶಿವಾಜಿಯ ಉದ್ದೇಶಗಳನ್ನು ಆ ಇಂಗ್ಲಿಷರಿಗೆ ಚೆನ್ನಾಗಿ ತಿಳಿಸಿಕೊಟ್ಟನು. "ಜಂಜೀ ರೆಯ ಸಿದ್ದಿಯೊಡನೆ ಒಡಂಬಡಿಕೆ ಮಾಡಿಕೊಳ್ಳಬೇಕು; ಶಿವಾಜಿಯು ಅವನನ್ನು ಬೊಗ್ಗುಬಡೆಯುವ ಪ್ರಯತ್ನ ಮಾಡಲಾಗದು; ಅದರಂತೆ ಶಿವಾಜಿಯು ತಮಗೆ ವ್ಯಾಪಾರದ ರಿಯಾಯತಿಗಳನ್ನು ಕೊಟ್ಟು ಉಭಯತರ ಲಾಭಮಾಡಿಕೊಳ್ಳಬೇಕು"

ಎಂದು ಇಂಗ್ಲಿಷ ವಕೀಲರ ಅಂಬೋಣವಿದ್ದಿತು. ನಾರಾಯಣಜಿಯು ಆ ವಕೀಲರಿಗೆ ಸಲಹೆ ಕೊಟ್ಟನೇನಂದರೆ:--"ಸಿದ್ದಿಯ ವಿಷಯವಾಗಿ ನೀವು ಶಿವಾಜಿಯೊಡನೆ ಮಾತು ಬೆಳೆಸಿದರೆ ಅದರಿಂದ ನಿಮ್ಮ ಎಲ್ಲ ಬೇತುಗಳೂ ವಿಫಲವಾಗುವವು. ಸಿದ್ದಿಯನ್ನು ಸಂಪೂರ್ಣವಾಗಿ ನಾಶಗೊಳಿಸಬೇಕೆಂಬದೇ. ಶಿವಾಜಿಯ ಕೃತನಿಶ್ಚಯವಾದುದರಿಂದ ಅವನು ನಿಮ್ಮ ಈ ಕರಾರಿಗೆ ಒಪ್ಪಲಾರನು. ಇನ್ನು ವ್ಯಾಪಾರ ವಿಷಯದ ನಿಮ್ಮ ಬೇಡಿಕೆಯು ಸರಿಯಾಗಿರುತ್ತದೆ. ತನ್ನ ರಾಜ್ಯದೊಳಗಿನ ವ್ಯಾಪಾರ-ಉದ್ದಿಮೆಗಳನ್ನು ಹೆಚ್ಚಿಸುವ ಇಚ್ಛೆಯು ಶಿವಾಜಿಗೂ ಇರುತ್ತದೆ. ಇದುವರೆಗೆ ಬರಿಯ ರಣಸಂಗ್ರಾಮ ಗಳಲ್ಲೇ ಕಾಲಕಳೆಯಬೇಕಾದುದರಿಂದ ಅವನಿಗೆ ಇತ್ತ ಲಕ್ಷ್ಯಕೊಡಲಿಕ್ಕೆ ಆಗಿರಲಿಲ್ಲ. ಇನ್ನು ಬೇಗನೆ ರಾಜ್ಯಾಭಿಷೇಕವಾಯಿತೆಂದರೆ, ಅವನು ರಾಜ್ಯವ್ಯವಸ್ಥೆಯ ಕೆಲಸ ವನ್ನೇ ಪ್ರಾಮುಖ್ಯವಾಗಿ ಮಾಡಬೇಕೆಂದಿರುತ್ತಾನೆ." ನಾರಾಯಣಜಿಯ ಧೂರ್ತ ತನವೂ ಅಧಿಕಾರವೂ ವಿಶೇಷವಾಗಿರುವದೆಂದು ಇಂಗ್ಲಿಷ ವಕೀಲನ ನಿದರ್ಶಕ್ಕೆ ಬಂದುದರಿಂದ, ಅವನು ನಾರಾಯಣಜಿಗೆ ಒಂದು ಅಮೂಲ್ಯವಾದ ಉಂಗುರವನ್ನು ಕಾಣಿಕೆಯಾಗಿ ಕೊಟ್ಟನು.

ತಾ|| ೨೫ನೇ ಮೇಗೆ ಶಿವಾಜಿಯು ರಾಯಗಡಕ್ಕೆ ಮರಳಿ ಬಂದನಂತರ ಇಂಗ್ಲಿ ಷರ ವಕೀಲರು ದುರ್ಗವನ್ನೇರಿ ಹೋದರು. ಅರಮನೆಯಿಂದ ಒಂದು ಮೈಲಿನ ಮೇಲೆ ಆ ವಕೀಲರಿಗೆ ಇಳಿದುಕೊಳ್ಳುವದಕ್ಕೆ ಬಂಗ್ಲೆಯನ್ನು ಕೊಟ್ಟಿದ್ದರು. ಅವರು ಅಲ್ಲಿ ಒಳ್ಳೇ ಸೌಖ್ಯದಿಂದ ಇರಲಾರಂಭಿಸಿದರು. ಶಿವಾಜಿಯು ಆಗ ಒಳ್ಳೇ ಗಡಿಬಿಡಿಯಲ್ಲಿ ದ್ದನು. ಆದರೂ ಆ ವಕೀಲರು ಬಂದನಂತರ ನಾಲ್ಕು ದಿನಗಳ ಮೇಲೆ ಅವನು ನಾರಾಯಣಜಿಯ ಮುಖಾಂತರ ಅವರಿಗೆ ಭೆಟ್ಟಿಕೊಟ್ಟನು. ವ್ಯಾಪಾರವೃದ್ಧಿಯ ಸಂ- ಬಂಧದ ಆ ಇಂಗ್ಲಿಷ ವಕೀಲರ ಸಲಹೆಯು ಶಿವಾಜಿಗೆ ಬಹು ಮಾನ್ಯವಾಯಿತು; ಮತ್ತು ಆ ಸಂಬಂಧವಾಗಿ ಚೆನ್ನಾಗಿ ಚರ್ಚಿಸಿ, ಒಪ್ಪಂದದ ಕರಾರುಗಳನ್ನು ಗೊತ್ತುಪಡಿಸಬೇ ಕೆಂದು ಮೋರೋಪಂತ ಪಿಂಗಳೆ ಎಂಬ ಹೆಸರಿನ ತನ್ನ ಸುಪ್ರಸಿದ್ಧ ಪೇಶ್ವೆಯ ಕಡೆಗೆ ಆ ಕೆಲಸವನ್ನು ವಹಿಸಿದನು. ಇಂಗ್ಲಿಷ ವಕೀಲರು ಶಿವಾಜಿಗೆ ಸಮರ್ಪಿಸಲಿಕ್ಕೆ ತಂದ ಕಾಣಿಕೆಗಳನ್ನು ಅವರು ಹೇಗೆ ಅರ್ಪಿಸಬೇಕೆಂಬದನ್ನು ಮುಂದೆರಡು ದಿನಗಳ ವರೆಗೆ ಪೇಶ್ವೆಯು ನಾರಾಯಣಜಿಯ ಕೂಡ ಚರ್ಚಿಸಿ ಗೊತ್ತುಪಡಿಸಿದನು. ಕಡೆಗೆ ಆ ಕಾಣಿಕೆಗಳು ಮೋರೋಪಂತ ಪೇಶ್ವೆಯ ಮುಖಾಂತರವೇ ಶಿವಾಜಿಗೆ ಅರ್ಪಿಸಲ್ಪಟ್ಟವು. ಅದರಂತೆ ಶಿವಾಜಿಯ ಕೈಕೆಳಗಿನ ದೊಡ್ಡ ದೊಡ್ಡ ದರ್ಬಾರಿಗಳಿಗೂ ಯೋಗ್ಯ ಪುರ ಸ್ಕಾರ ಮಾಡುವದು ವಿಹಿತವೆಂದು ನಾರಾಯಣಜಿಯು ಆ ವಕೀಲರಿಗೆ ನಿವೇದಿಸಿದನು. ಅದರಂತೆ ಅವರು ಎಲ್ಲರಿಗೂ ಪೋಷಾಕು ಮುಂತಾದವುಗಳನ್ನು ಅರ್ಪಿಸಿದರು. ಕಡೆಗೆ ನಾರಾಯಣಜಿಯ ಮುಖಾಂತರವಾಗಿಯೇ ಒಪ್ಪಂದದ ಕರಾರುಗಳನ್ನು ಶಿವಾಜಿಯು ಆ ವಕೀಲರಿಗೆ ತಿಳಿಸಿದನು. ಪಟ್ಟಾಭಿಷೇಕ ದಿನದ ದೊಡ್ಡ ದರ್ಬಾರಿಗೆ ಇಂಗ್ಲಿಷರ ಕಡೆಯ ಒಬ್ಬ ಪ್ರತಿಷ್ಠಿತ ವಕೀಲನು ಬಂದಿದ್ದನು. ಆ ದರ್ಬಾರದ ಚಿತ್ತವೇಧಕ

ವರ್ಣನೆಯನ್ನು ಅವನು ಬರೆದಿಟ್ಟಿರುತ್ತಾನೆ. ಅಭಿಷೇಕದ ನಂತರ ಕೆಲ ದಿನಗಳಿಗೆ ಒಪ್ಪಂದವಾಯಿತು. ಆ ಒಪ್ಪಂದಕ್ಕೆ ಶಿವಾಜಿಯು ಕಡೆಯ ಎಲ್ಲ ಅಧಿಕಾರಿಗಳ ಸಹಿ-ಮೋಹರುಗಳಾದ ಮೇಲೆ ಇಂಗ್ಲಿಷ ವಕೀಲರು ರಾಯಗಡದಿಂದ ಹಿಂದಿರುಗಿದರು. ಅವರು ಆ ವರ್ಷದ ನೂಲಹುಣ್ಣಿವೆಯ ಸಮಯಕ್ಕೆ ಮುಂಬಯಿಗೆ ಬಂದರು.

ಶಿವಾಜಿಯ ಹಡಗುಪಡೆಯು ಎಷ್ಟು ದೊಡ್ಡದಿತ್ತೆಂಬ ಬಗ್ಗೆ ಕಾರವಾರದ ಇಂಗ್ಲಿಷ ವ್ಯಾಪಾರಸ್ಥರು ಇ. ಸ. ೧೬೭೫ರಲ್ಲಿ ಉಲ್ಲೇಖಿಸಿರುತ್ತಾರೆ. ಅದರಿಂದ ತಿಳಿದು ಬರುವದೇನಂದರೆ, ಆಗ ತೀರ ಕನಿಷ್ಠವೆಂದರೂ ೮೫ ನೌಕೆಗಳೂ ೩ ದೊಡ್ಡ ಹಡಗುಗಳೂ ಶಿವಾಜಿಯ ಸ್ವಾಧೀನದಲ್ಲಿದ್ದವು. ಆಗಿನ ಕಾಲದ ಯುರೋಪದೊಳಗಿನ ಒಳ್ಳೇ ಬಲಿಷ್ಠ ರಾಷ್ಟ್ರಗಳಿಗೂ ಕೂಡ ಶಿವಾಜಿಯ ಆ ಹಡಗುಪಡೆಯ ಬಗ್ಗೆ ಅಂಜಿಕೆಯುಂಟಾಗಿದ್ದಿತು; ಆದರೆ ಶಿವಾಜಿಯ ನೌಕೆಗಳು ಬಹಳ ದೊಡ್ಡವಿರಲಿಲ್ಲೆಂದು ಇಂಗ್ಲಿಷರ ಅನುಮಾನವಿದೆ.

ಪಶ್ಚಿಮಸಮುದ್ರ ದಂಡೆಯಲ್ಲಿ ಇಂಗ್ಲಿಷರು ಸ್ವಸ್ಥವಾಗಿ ಕುಳ್ಳಿರದೆ, ಸಾಧಿಸಿದಷ್ಟು ಲಾಗವನ್ನು ಸಣ್ಣಾಗಿ ಸಾಧಿಸುತ್ತಲೇ ಇದ್ದರು. ಅವರು ಜಿಂಜೀರೆಯ ಸಿದ್ದಿಯ ಕೂಡ ಹೆಚ್ಚಾಗಿ ವ್ಯವಹಾರ ನಡೆಸಿದ್ದರು. ಶಿವಾಜಿಯ ನಾಡಿನ ಮೇಲೆ ದಾಳಿಯಿಕ್ಕಲಿಕ್ಕಿರುವ ತನ್ನ ಹಡಗುಪಡೆಗೆ ಮುಂಬಯಿ ಬಂದರದಲ್ಲಿ ಬೀಡುಬಿಡುವ ಅಪ್ಪಣೆ ಕೊಡಬೇಕೆಂದು ಸಿದ್ದಿಯು ಇಂಗ್ಲಿಷರನ್ನು ಆಗಾಗ್ಗೆ ಕೇಳುತ್ತಿದ್ದನು; ಆದರೆ ಇಂಗ್ಲಿಷರಿಗೆ ಶಿವಾಜಿಯ ಹೆದರಿಕೆಯಿದ್ದದರಿಂದ ಅವರು ಸಿದ್ದಿಗೆ ಬಹಿರಂಗವಾಗಿ ಆಶ್ರಯ ಕೊಡುತ್ತಿದ್ದಿಲ್ಲ ಇನ್ನು ಸಿದ್ದಿಗೆ ಆಶ್ರಯ ಕೊಡದಿದ್ದರೆ ವಿರುದ್ಧ ದಿಸೆಯಿಂದ ಅವರು ಮೊಗಲ ಬಾದಶಹನ ರೋಷಕ್ಕೆ ಪಾತ್ರವಾಗಬೇಕಾಗುತ್ತಿತ್ತು. ಸನ್ ೧೬೭೭ರಲ್ಲಿ ಸಬೂಳ ಸಿದ್ದಿಯು ಜುಲುಮೆಯಿಂದ ಮುಂಬಯಿ ಬಂದರದಲ್ಲಿ ತಳವೂರಿಕೊಂಡು, ಅಲ್ಲಿಂದ ಶಿವಾಜಿಯ ಕುರ್ಲಾ ಮುಂತಾದ ನಾಡಿಗೆ ಉಪದ್ರವ ಕೊಡಲಾರಂಭಿಸಿದನು. ಆ ಸಿದ್ದಿಯು ದ್ರವ್ಯದಿಂದ ಒಬ್ಬ ಬ್ರಾಹ್ಮಣನನ್ನು ವಶಪಡಿಸಿಕೊಂಡು, ಅವನ ಕೈಕೆಳಗೆ ಕೆಲವು ಹಡಗುಗಳನ್ನೂ ಹೇರಳವಾದ ದ್ರವ್ಯವನ್ನೂ ಕೊಟ್ಟು ಶಿವಾಜಿಯ ನಾಡೊಳಗಿನ ಬಹುಜನ ಪ್ರಮುಖ ಬ್ರಾಹ್ಮಣರನ್ನು ವಶಪಡಿಸಿಕೊಂಡು ಬರುವ ಸಲುವಾಗಿ ಕಳುಹಿಸಿದನು. ಹಾಗೆ ಹಿಡಕೊಂಡು ಬಂದ ಬ್ರಾಹ್ಮಣರನ್ನು ಸಿದ್ದಿಯು ಬಗೆಬಗೆಯಿಂದ ಗೋಳಾಡಿಸಿದನು. ಇದು ಶಿವಾಜಿಗೆ ತಿಳಿಯಲು, ಸಿದ್ದಿಗೆ ಆಶ್ರಯ ಕೊಟ್ಟ ಬಗ್ಗೆ ಅವನು ಇಂಗ್ಲಿಷರ ಮೇಲೆ ಚನ್ನಾಗಿ ಹರಿಹಾಯ್ದನು. ಕೂಡಲೆ ಇಂಗ್ಲಿಷ ಕಂಪನಿಯ ಪ್ರೆಸಿಡೆಂಟನು ಶಿವಾಜಿಯ ನಾಡಿಗೆ ಉಪದ್ರವ ಕೊಡುತ್ತಿದ್ದ ೧೧ಜನರನ್ನು ಸೆರೆಹಿಡಿದು ಅವರಲ್ಲಿಯ ಮೂವರಿಗೆ ದೇಹಾಂತ ಶಿಕ್ಷೆ ಕೊಟ್ಟನಲ್ಲದೆ, ಉಳಿದವರನ್ನು ಗುಲಾಮರನ್ನಾಗಿ ಮಾಡಿ ಆಫ್ರಿಕೆಯ ಪಶ್ಚಿಮ ದಂಡೆಯೊಳಗಿನ ಸೆಂಟಹೇಲನಾ ಎಂಬಲ್ಲಿಗೆ ಕಳಿಸಿ ಕೊಟ್ಟನು. ಸಿದ್ದಿಯು ಮರುವರ್ಷವೂ ಅದರಂತೆಯೇ ಮತ್ತೆ ಎಷ್ಟೋ ಜನ

ಬ್ರಾಹ್ಮಣರನ್ನು ಹಿಂಸಿಸಿದನು. ಸಿದ್ದಿಯ ವಕ್ರದೃಷ್ಟಿಯು ಹೆಚ್ಚಾಗಿ ಬ್ರಾಹ್ಮಣರ ಮೇಲೆಯೇ ಇದ್ದಿತು!

ಯಾಕಂದರೆ, ಶಿವಾಜಿಗೆ ಬ್ರಾಹ್ಮಣರೇ ಚೆನ್ನಾಗಿ ಸಹಾಯ ಮಾಡುತ್ತಿದ್ದರು. ಬೇರೆ ಕೆಲಸಗಳ ಮೂಲಕ ಮುಂದೆ ಸಿದ್ದಿಯ ಸೇಡು ತೀರಿಸಿಕೊಳ್ಳುವ ಕೆಲಸವು ಹಾಗೆಯೇ ಉಳಿಯಿತು. ೧೬೭೦ರ ಎಪ್ರೀಲ ತಿಂಗಳಲ್ಲಿ ಸಿದ್ದಿಯು ಶಿವಾಜಿಯ ಪ್ರಾಂತದೊಳಗಿನ ಕೆಲ ಜನರನ್ನು ಸೆರೆಹಿಡಿದು ತಂದು ಮುಂಬಯಿ ಬಂದರಲ್ಲಿ ಮಾರಹತ್ತಿದನು. ಇದು ಇಂಗ್ಲಿಷರಿಗೆ ತಿಳಿಯುತ್ತಲೆ, ಅವರು ೨೧ ಜನರನ್ನು ಸಿದ್ದಿಯಿಂದ ಬಿಡುಗಡೆ ಮಾಡಿಸಿ ಅವರವರ ಊರಿಗೆ ಕಳುಹಿಸಿಕೊಟ್ಟರು. ಹೀಗಿದ್ದರೂ ಇಂಗ್ಲಿಷರು ಸಿದ್ದಿಗೆ ತಮ್ಮ ಬಂದರದಲ್ಲಿ ಆಶ್ರಯ ಕೊಡುತ್ತಿರುವದು ಶಿವಾಜಿಗೆ ರುಚಿಸುತ್ತಿರಲಿಲ್ಲ. ಸಿದ್ದಿ ಹಾಗು ಇಂಗ್ಲಿಷರು ಇವರಿಬ್ಬರನ್ನೂ ಚೆನ್ನಾಗಿ ಹಣ್ಣಿಗೆ ತರಬೇಕೆಂದು ಶಿವಾಜಿಯು ೧೬೭೯ರ ಅಚ್ಚ ಮಳೆಗಾಲದಲ್ಲಿ ಮುಂಬಯಿಗೆ ಸಮೀಪವಾದ ಸಮುದ್ರದೊಳಗಿನ ಖಾಂದೇರಿ ಎಂಬ ದ್ವೀಪವನ್ನು ಆಕ್ರಮಿಸಿದನು. ಖಾಂದೇರಿಯು ಕೈವಶವಾದಾಗಿನಿಂದ ಶಿವಾಜಿಗೆ ಸಿದ್ದಿ ಹಾಗು ಇಂಗ್ಲಿಷರ ಮೇಲೆ ಚನ್ನಾಗಿ ವರ್ಚಸ್ಸನ್ನಿಡಲು ಅನುಕೂಲವಾಯಿತು ಶಿವಾಜಿಯು ಖಾಂದೇರಿಯನ್ನು ಗೆದ್ದುಕೊಂಡದ್ದರಿಂದ ಇಂಗ್ಲಿಷರಿಗೆ ಬಲು ವೈಷಮ್ಯವೆನಿಸಿತು. ಮುಂಬಯಿ ಬಂದರವೊಡನೆ ಖಾಂದೇರಿ ಮೊದಲಾದವುಗಳನ್ನು ಪೋರ್ತುಗೀಜರು ತಮಗೇ ಕೊಟ್ಟಿರುತ್ತಾರೆಂದು ಇಂಗ್ಲಿಷರು ತಮ್ಮ ಹಕ್ಕು-ಬಾಧ್ಯತೆಗಳನ್ನು ತೋರಿಸಲುಪಕ್ರಮಿಸಿದರು; ಆದರೆ ಇಂಗ್ಲಿಷರ ಈ ಮಾತು-ಕಥೆಗಳು ವಸಯಿಯೊಳಗಿನ ಪೋರ್ತುಗೀಜರಿಗೆ ತಿಳಿಯಲು, ಅವರು ಅದನ್ನು ತಿರಸ್ಕರಿಸಿದರು; ಇಷ್ಟೇ ಅಲ್ಲ, ಖಾಂದೇರಿ ಮುಂತಾದವುಗಳು ತಮ್ಮವೇ ಎಂದು ಅವರು ಅನ್ನತೊಡಗಿದರು. ಮುಂದೆ ಇಂಗ್ಲಿಷರು ಸಿದ್ದಿಯೊಡನೆ ಸಖ್ಯಬೆಳಿಸಿ ಖಾಂದೇರಿಯೊಳಗಿನ ಶಿವಾಜಿಯ ಹಡಗುಪಡೆಯ ಮೇಲೆ ದಾಳಿಯನ್ನಿಕ್ಕಿದರು. ಶಿವಾಜಿಯ ಕಡೆಯವರು ಶಾಂತತನವನ್ನು ತಾಳಿ, ಇಂಗ್ಲಿಷರನ್ನೆಲ್ಲ ತಮ್ಮ ಆ ಖಾಂದೇರಿ ದ್ವೀಪಕ್ಕೆ ಬರಗೊಟ್ಟರು; ಹಾಗು ಅಲ್ಪಾವಕಾಶದಲ್ಲಿಯೇ ಅವರೆಲ್ಲರ ಶಿರಚ್ಛೇದಗೊಳಿಸಿದರು! ಆ ಬಳಿಕ ರಿವ್ಹಿಂಜ ಎಂಬಭಿಧಾನದ ಇಂಗ್ಲಿಷನ ೧೫ ತೋಫಿನ ಹಡಗವೂ ೨೦೦ ಜನ ಸಹಾಯಕರಿದ್ದ ಬೇರೆ ನೌಕೆಗಳೂ ಖಾಂದೇರಿಯ ಬಳಿಯಲ್ಲಿ ಮರಾಟರಿಗೆ ಎದುರಾಗುವ ಸಲುವಾಗಿ ಅದೇ ವರ್ಷದ ಅಕ್ಟೋಬರ ತಿಂಗಳಲ್ಲಿ ಬಂದವು. ಕ್ಯಾಪ್ಟನ್ ಮಿಂಚಿನ್ ಮತ್ತು ಕೆಗ್ವಿನ್ನರು ಆ ಹಡಗಿನ ಮುಖ್ಯಸ್ಥರಾಗಿದ್ದರು. ಆಗ ಇಂಗ್ಲಿಷರಿಗೂ-ಮರಾಟರಿಗೂ ನಿಕರದ ಕಾಳಗವಾಗಿ, ಉಭಯ ಪಕ್ಷಕ್ಕೂ ಹೆಚ್ಚಾಗಿ ಹಾನಿಯಾಯಿತು; ಆದರೂ ಯಾವ ಖಾಂದೇರಿ ನಡುಗಡ್ಡೆಯ ಮೇಲೆ ಬಹು ದಿನಗಳಿಂದ ಇಂಗ್ಲಿಷರ ದೃಷ್ಟಿಯಿದ್ದಿತೋ ಅದು ಅವರಿಗೆ ದೊರೆಯಲಿಲ್ಲ. ಆ ಕಾಳಗದಲ್ಲಿ ದೌಲತಖಾನನೆಂಬವನು ಶಿವಾಜಿಯ ಹಡಗುಪಡೆಯ ಮುಖ್ಯ ಅಧಿಕಾರಿಯಾಗಿದ್ದನು.

ಖಾಂದೇರಿ ಹಾಗು ಅದರ ಬಳಿಯ ಮತ್ತೊಂದು ಸಣ್ಣ ಉಂದೇರಿ ಎಂಬ ಶಿಲಾ

ಮಯ ದ್ವೀಪಗಳು ಒಂದರ ಬಳಿಯಲ್ಲೊಂದು ಕೇವಲ ಮುಕ್ಕಾಲು ಮೈಲಿನ ಅಂತರ ದಲ್ಲಿಯೇ ಇದ್ದು, ಮುಂಬಯಿಯಿಂದ ಹಡಗಿನಲ್ಲಿ ಕುಳಿತು ದಕ್ಷಿಣಕ್ಕೆ ತೆರಳುವಾಗ ದಾರಿಯಲ್ಲಿ ಹತ್ತುತ್ತವೆ. ಆಗ ಆ ದ್ವೀಪಗಳಲ್ಲಿ ಜನವಸತಿಯಿರಲಿಲ್ಲ; ಆದರೆ ಆ ನಡು ಗಡ್ಡೆಗಳಿಂದ ಇಂಗ್ಲಿಷರಿಗೆ ಉರವಲು ಕಟ್ಟಿಗೆಗಳು ಹೇರಳವಾಗಿ ದೊರಕುತ್ತಿದ್ದವು; ಹಾಗು ಮುಂಬಯಿ ಬಂದರಕ್ಕೆ ಬರುವ ಎಲ್ಲ ಹಡಗುಗಳ ಮೇಲೆ ಅಲ್ಲಿಂದ ಚೆನ್ನಾಗಿ ನಜರಿಡಲಿಕ್ಕೆ ಬರುತ್ತಿತ್ತು. ಆ ದ್ವೀಪಗಳನ್ನು ಕೈವಶ ಮಾಡಿಕೊಳ್ಳುವ ಸಲುವಾಗಿ ಇಂಗ್ಲಿಷರು ಬಗೆಬಗೆಯಿಂದ ಪ್ರಯತ್ನಿಸಿದರು. ಶಿವಾಜಿಯ ಕೂಡ ಕಾಳಗ ಮಾಡಿ ಅವುಗಳನ್ನು ಗೆದ್ದುಕೊಳ್ಳಬೇಕೆಂದು ಅವರು ಕೋರ್ಟಆಫ್‌ಡಾಯರೆಕ್ಟರರ ಅಪ್ಪಣೆ ಯನ್ನು ಮತ್ತೆ ಮತ್ತೆ ಕೇಳಿದರು. ಕೋರ್ಟ ಆಫ್ ಡಾಯರೆಕ್ಟರರು ಅವರ ಪ್ರತಿ ಯೊಂದು ಪತ್ರಕ್ಕೆ ಉತ್ತರ ಬರೆಯುತ್ತಿದ್ದರೇನಂದರೆ:—"ಖಾಂದೇರಿ-ಉಂದೇರಿಗಳ ಸಲುವಾಗಿ ನಮಗೆ ಕಾಳಗವು ಕರ್ತವ್ಯವಲ್ಲವೆಂಬದನ್ನು ನಿಮಗೆ ಆಗಾಗ್ಗೆ ತಿಳಿಸಿಯೇ ತಿಳಿಸಿರುತ್ತದೆ. ಮೇಲಾಗಿ ಈ ಪ್ರಕಾರ ಕಾಳಗಕ್ಕೆ ಸನ್ನದ್ಧರಾಗುವ ಬಿರುದು ನಮ್ಮ ದಿರುವದಿಲ್ಲ. ಅಲ್ಲದೆ ಅದರಿಂದ ನಮಗ ಲಾಭವೂ ಇಲ್ಲ; ಆದಕಾರಣ ನೀವು ಶಿವಾಜಿಯ ಕೂಡ ಕಾಳಗ ಹೂಡಬೇಡಿರೆಂದು ನಾವು ನಿಮಗೆ ಪುನಃ ಪುನಃ ಕಂಠಶೋಷಮಾಡಿ ಹೇಳುತ್ತೇವೆ" ಡಾಯರೆಕ್ಟರರ ಪತ್ರದಿಂದ ಏತದ್ದೇಶೀಯ ಜನರ ಮನಸ್ಸಿನ ಮೇಲೆ ಆದ ಪರಿಣಾಮವನ್ನು ಕಂಡು ಮುಂಬಯಿಯ ಇಂಗ್ಲಿಷರಿಗೆ ಕಡು ದುಃಖವೆನಿಸಿತು. ಕೂಡಲೆ ಅವರು ಈ ಕೆಳಗೆ ಬರೆದಂತೆ ಇಲ್ಲಿಯ ಜನರು ತಮ್ಮನ್ನು ಹಂಗಿಸುತ್ತಾ ರೆಂದು ವಿಲಾಯತಿಗೆ ಬರೆದು ತಿಳಿಸಿದರು.

ನಿಮ್ಮ ಜನರು (ಇಂಗ್ಲಿಷರು) ಇಷ್ಟು ಡೌಲನ್ನೇಕೆ ಹೇಳಿಕೊಳ್ಳುತ್ತಿರುವರು? ನೀವು ಪಡೆದ ವಿಜಯಗಳಾವವು? ನಿಮ್ಮ ಖಡ್ಗವು ಯಾವ ಮಹತ್ಕೃತ್ಯವನ್ನೆಸಗಿರು ವದು? ನಿಮ್ಮ ಅಪ್ಪಣೆಯನ್ನು ಅದಾರು ಮನ್ನಿಸುವರು? ನಿಮ್ಮಲ್ಲಿ ಅದಾವ ಹುರು ಳಿರುವದು? ಡಚ್ಚಜನರಂತೂ ನಿಮ್ಮ ಮೇಲೆ ಶಹವನ್ನಿಟ್ಟಿರುವರು! ಪೋರ್ತುಗೀಜರ ಕೃತ್ಯಗಳು ಕೆಲಮಟ್ಟಿಗಾದರೂ ಮನುಷ್ಯತ್ವಕ್ಕೆ ಹೋಲುವಂಥವಿರುತ್ತವೆ; ಆದರೆ ನಿಮ್ಮನ್ನು ಎಲ್ಲರೂ ಕಂಡ ಕಂಡ ಹಾಗೆ ಆಡಿಕೊಳ್ಳುತ್ತಾರೆ. ಮುಂಬಯಿ ಬಂದರ ವನ್ನು ನೀವು ಅದಾವ ಕಾಳಗ ಮಾಡಿ ಗೆದ್ದುಕೊಂಡಿರುತ್ತೀರಿ? ಅದನ್ನು ಸಂರ ಕ್ಷಿಸಿಕೊಳ್ಳುವ ಬಲವಾದರೂ ನಿಮ್ಮಲ್ಲಿಲ್ಲಿದೆ? ವಸ್ತುಸ್ಥಿತಿಯು ಹೀಗಿದ್ದು, ನೀವು ಸುಮ್ಮನೆ ಕಾಳಗಗಳ ಪೊಳ್ಳು ಹಂಬಲವನ್ನು ಧರಿಸಿ, ನಮ್ಮ ಮಹಾರಾಜರನ್ನು ಸರಿಗಟ್ಟುವ ಕಾರಣವೇನು?" ಆದರೆ ಈ ನುಡಿಗಳನ್ನು ದಿಟವೆಂದು ತೋರಿಸಿಕೊಡ ಲಿಕ್ಕೆ ಮರಾಟರ ಮುಂದಾಳುವಾದ ಶಿವಾಜಿಯು ಆ ಮುಂದೆ ಬದುಕಲಿಲ್ಲ. ಆದರೂ ಸಾಯುವ ಪೂರ್ವದಲ್ಲಿ ಅವನು ಇಂಗ್ಲಿಷರಿಗೆ ತನ್ನ ಆಶ್ರಯದಿಂದ ನಡೆಯಲಿಕ್ಕೆ ಹಚ್ಚಿದನು. ಖಾಂದೇರಿಯನ್ನು ಪಡೆಯುವ ಹಂಬಲವನ್ನು ಇಂಗ್ಲಿಷರು ಬಿಟ್ಟು ಬಿಟ್ಟರು. ಸಿದ್ದಿಯ ಸಹಾಯಕ್ಕಾಗಿ ಖಾಂದೇರಿಯ ಬಳಿಯಲ್ಲಿದ್ದ ತಮ್ಮ ಹಡಗುಪಡೆ

ಯನ್ನು ಹಿಂದಕ್ಕೆ ಕರೆಯಿಸಿಕೊಂಡರು; ಮತ್ತು ಇ. ಸ. ೧೬೮೦ನೇ ಮಾರ್ಚ ತಿಂಗಳಲ್ಲಿ ಶಿವಾಜಿಯ ವಕೀಲನ ಕೂಡ ಒಪ್ಪಂದ ಮಾಡಿಕೊಂಡರು; ಹಾಗು ೧೬೭೪ರ ಒಪ್ಪಂದವು ಮತ್ತೆ ಕಾಯಮವಾಗಿ ಮಾಡಲ್ಪಟ್ಟಿತು.

ಶಿವಾಜಿಯ ಅಂಜಿಕೆಯು ಇಂಗ್ಲಿಷರಿಗೆ ಎಷ್ಟಿತ್ತೆಂಬದರ ಉಲ್ಲೇಖವು ಈಸ್ಟ ಇಂಡಿಯಾ ಕಂಪನಿಯ ಇತಿಹಾಸದಲ್ಲಿ ಆಗಾಗ್ಗೆ ದೃಗ್ಗೋಚರವಾಗುತ್ತಿದೆ. ಯಾವನೊಬ್ಬ ಯಃಕಶ್ಚಿತ ಮರಾಟರ ಸರದಾರನು ಬಂದರೂ ಶಿವಾಜಿಯೇ ಬಂದನೆಂದು ಆಗಿನ ಇಂಗ್ಲಿಷರಿಗೆ ಅನಿಸುತ್ತಿತ್ತು. ಆಗ್ಗೆ 'ಶಿವಾಜಿ' ಎಂಬದೊಂದು ಸಾಮಾನ್ಯ ನಾಮವೇ ಆಗಿಹೋಗಿತ್ತು. ಸನ್ ೧೭೦೩ನೇ ಇಸವಿಯಲ್ಲಿ ಇಂಗ್ಲಿಷ ವ್ಯಾಪಾರಿಗಳು ಸುರತದ ಡಾಯರಿ (ದಿನವಹಿ)ಯಲ್ಲಿ ಬರೆದಿಟ್ಟಿರುವದೇನಂದರೆ:—"ಶಿವಾಜಿಯು ಮತ್ತೆ ಸುರತದ ಮೇಲೆ ಸಾಗಿಬರುವನು; ಆತನ ದಂಡಂತೂ ಮೊದಲಿನಿಂದಲೇ ಸುರತದ ಎಡಬಲಗಳಲ್ಲಿ ಗುಂಡುಗಳನ್ನು ಹಾರಿಸುತ್ತಿದೆ" ಎಂಬ ಅಂಜಿಕೆಯಿಂದಲೇ ಸುರತ ಪಟ್ಟಣವು ಹೆಚ್ಚು ಭದ್ರವಾಗಿ ಕಟ್ಟಲ್ಪಟ್ಟಿತು! ಆಗಿನ ಎಷ್ಟೋ ಜನ ಇಂಗ್ಲಿಷ ಕಂಪನಿಯ ಕಾರಕೂನರಿಗೆ ದಂಡಿನ ಶಿಪಾಯರ ಕೆಲಸವು ಹೇಳಲ್ಪಟ್ಟಿತ್ತು; ಅವರಲ್ಲಿಯ ಕೆಲವರು ಅದನ್ನು ಮಾಡಲಿಲ್ಲೆಂಬ ಶಿಕ್ಷೆಗೆ ಗುರಿಯಾಗಬೇಕಾಯಿತು. ಇಷ್ಟೆಲ್ಲ ಪ್ರಭಾವವು ಶಿವಾಜಿಯ ಹೆಸರಿನದೇ! ಬಂಗಾಲದೊಳಗಿನ ಇಂಗ್ಲಿಷ ವ್ಯಾಪಾರಸ್ಥರಂತೂ ಶಿವಾಜಿಯು ಅಮರ (ಚಿರಂಜೀವ)ನೆಂದೇ ಭಾವಿಸಿಕೊಂಡಿದ್ದರು! ಸನ್ ೧೬೮೦ರ ಎಪ್ರೀಲ ತಿಂಗಳಲ್ಲಿ ಶಿವಾಜಿಯು ಮರಣಹೊಂದಿದನೆಂಬ ಸಂಗತಿಯನ್ನು ಮುಂಬಯಿಯ ಇಂಗ್ಲಿಷ ಕಂಪನಿಯ ಪ್ರೆಸಿಡೆಂಟನು ಕಲಕತ್ತೆಗೆ ಬರೆದು ತಿಳಿಸಿದನು. ಆಗ್ಗೆ ಕಲಕತ್ತೆಯಿಂದ ಆ ಪತ್ರಕ್ಕೆ ಬಂದ ಉತ್ತರವೇನಂದರೆ:—"ಈ ಮೊದಲು ಶಿವಾಜಿಯು ಎಷ್ಟೋ ಸಾರೆ ಸತ್ತಿರುವದರಿಂದ, ಅವನು ಇನ್ನೂ ಅಮರನಾಗಿಯೇ ಇರುತ್ತಾನೆಂದು ಬಹು ಜನರಿಗೆ ಅನಿಸುತ್ತದೆ. ಆತನ ಮರಣವಾರ್ತೆಯು ಜನರಿಗೆ ಸಟಿಯಾಗಿ ತೋರುವ ಕಾರಣವೇನಂದರೆ, ಇದು ವರೆಗೆ ಅವನಿಗೆ ಎಲ್ಲೆಲ್ಲಿಯೂ ವಿಜಯವೇ ಪ್ರಾಪ್ತವಾಗಿದೆ; ಹಾಗು ಅವನ ಹಿಂದೆ ಅವನಷ್ಟು ಕಟ್ಟುಸಿಟ್ಟಾಗಿ ಕೆಲಸ ಮಾಡುವ ಅನ್ಯನಾವನೂ ಇರದ್ದರಿಂದ, ಮರಾಟರ ಗಂಡಾಂತರದೊಳಗಿಂದ ಪಾರಾದ ಪ್ರತ್ಯಕ್ಷ ಅನುಭವವು ನಮಗೆ ಬಂದಾಗಲೇ ಶಿವಾಜಿಯು ಸತ್ತದ್ದು ನಿಜವೆಂದು ನಾವು ನಂಬುತ್ತೇವೆ!"

ಯಾವ ಖಾಂದೇರಿ-ಉಂದೇರಿ ದ್ವೀಪಗಳ ಸಲುವಾಗಿ ಶಿವಾಜಿಗೂ ಇಂಗ್ಲಿಷರಿಗೂ ಸಂಬಂಧವುಂಟಾಗಿದ್ದಿತೋ, ಆ ನಡುಗಡ್ಡೆಗಳ ಇತಿವೃತ್ತವು ಹೀಗಿರುತ್ತದೆ. ಉಂದೇರಿ ಬಳಿಯ ಖಾಂದೇರೀ ದ್ವೀಪವು ಮುಂಬಯಿ ಬಂದರದೆಡೆಯಲ್ಲಿಯ ಒಂದು ಆಯಕಟ್ಟಿನ ದಂಡಿನ ಠಾಣ್ಯವಾಗಿರುತ್ತದೆ. ಅದರಿಂದ ಮರಾಟರೂ, ಇಂಗ್ಲಿಷರೂ, ಹಬಸಿಗಳೂ ಅದನ್ನು ತಮ್ಮ ತಮ್ಮ ಸ್ವಾಧೀನದಲ್ಲಿಟ್ಟು ಕೊಳ್ಳಲಿಕ್ಕೆ ಹವಣಿಸುತ್ತಿದ್ದರು. ತನ್ನ ಮರಣಕ್ಕೆ ಮೊದಲನೇ ವರ್ಷವೇ ಶಿವಾಜಿಯು ಅದನ್ನು ಹಸ್ತಗತ

ಮಾಡಿಕೊಂಡಿತದ್ದನು. ಅಲ್ಲಿಂದ ನೆಟ್ಟಗೆ ಹಬಸಿಗೆ-ಹಾಗು ಇಂಗ್ಲಿಷರು ಹಬಸಿಗೆ ಸಹಾಯವನ್ನಾಗಲಿ, ಆಶ್ರಯುವನ್ನಾಗಲಿ ಕೊಡುವರೆಂಬ ಸಂಶಯು ಬಂದಾಗೆಲ್ಲ ಇಂಗ್ಲಿಷರಿಗೆ-ಶಹ ಕೊಡಲಿಕ್ಕೆ ಶಿವಾಜಿಗೆ ಅನುಕೂಲವಾಗುತ್ತಿತ್ತು. ಇದೇ ಕಾರಣದ ಮೂಲಕ ಹಬಸಿ ಹಾಗು ಇಂಗ್ಲಿಷರಿಬ್ಬರೂ ಒಟ್ಟುಗೂಡಿದ್ದರು. ೧೬೭೯ರ ಅಗಸ್ಟ ತಿಂಗಳಲ್ಲಿ ಶಿವಾಜಿಯು ತನ್ನ ಕಡೆಯ ೩೦೦ ಜನ ದಂಡಾಳುಗಳೊಡನೆ ೩೦೦ ಜನ ಕೂಲಿಯಾಳುಗಳನ್ನೂ ಸಾಕಷ್ಟು ಮದ್ದು-ಗುಂಡು ಹಾಗು ಇತರ ಸಾಮಾನುಗಳನ್ನೂ ಖಾಂದೇರಿ ದ್ವೀಪಕ್ಕೆ ಅದನ್ನು ಸರಿಪಡಿಸಲಿಕ್ಕೂ, ಅಲ್ಲಿ ಕೋಟೆ-ಕೊತ್ತಳಗಳನ್ನು ಕಟ್ಟಿಸಲಿಕ್ಕೂ ಕಳಿಸಿದನು. ಅದನ್ನರಿತು ಮುಂಬಯಿಯ ಇಂಗ್ಲಿಷ ಕಂಪನಿಯ ಗವರ್ನರನು ಮೂಲು ಹೇರುವ ಮೂರು ನೌಕೆಗಳಲ್ಲಿ ನಾಲ್ವತ್ತು ಜನ ಇಂಗ್ಲಿಷ ಅಂಬಿಗರನ್ನು ಕಳಿಸಿ ಶಿವಾಜಿಗೆ ಪ್ರತಿಬಂಧಮಾಡಲಪ್ಪಣೆಯನ್ನಿತ್ತನು; ಆದರೆ ಇವರ ಉಪಯೋಗವೇನೂ ಆಗಲಿಲ್ಲ. ಹತ್ತು-ಹನ್ನೆರಡು ದಿವಸಗಳವರೆಗೆ ಇಂಗ್ಲಿಷರ ಆ ನೌಕೆಗಳು ಆ ಖಾಂದೇರಿ ದ್ವೀಪದ ಸುತ್ತುಮುತ್ತು ಅಡ್ಡಾಡಿ, ಬಂದ ದಾರಿಗ ಸುಂಕವಿಲ್ಲೆಂಬಂತೆ ಮುಂಬಯಿಗೆ ಮರಳಿ ಬಂದವು. ಕೂಡಲೆ ೧೬ ತೋಫಿನ ಒಂದು ಯುದ್ಧದ ಹಡಗವನ್ನು ಸಂಗಡ ಕೊಟ್ಟು, ಇಂಗ್ಲಿಷರು ಪುನಃ ಅದೇ ಜನರನ್ನು ಮುಂಬಯಿಯಿಂದ ಖಾಂದೇರಿಗ ಕಳಿಸಿದರು. ೧೯ನೇ ಸಪ್ಟಂಬರ ದಿವಸ ಮರಾಟರು ಇಂಗ್ಲಿಷರ ಆ ಹಡಗು ಪಡೆಯ ಒಬ್ಬ ಲೆಫ್ಟನೆಂಟನನ್ನು ಕೊಂದು, ಆರು ಜನ ಇಂಗ್ಲಿಷ ಅಂಬಿಗರನ್ನು ಸೆರೆ ಹಿಡಿದು ಆ ದ್ವೀಪಕ್ಕ ಒಯ್ದರು. ಇದೇ ಕಾಲಕ್ಕೆ ಚೌಲ ಎಂಬಲ್ಲಿ ಶಿವಾಜಿ ಕಡೆಯ ಯುದ್ಧದ ಹೊಸ ಹಡಗುಪಡಯು ಸಿದ್ಧವಾಗುತ್ತಿರುವದೆಂಬದನ್ನು ತಿಳಿದು, ಮುಂಬಯಿಯ ಇಂಗ್ಲಿಷರು ಬೇರೆಯವರ ಎಷ್ಟೋ ಹಡಗುಗಳನ್ನು ಬಾಡಿಗೆಯಿಂದ ತಂದು ತಮ್ಮದೊಂದು ದೊಡ್ಡ ಹಡಗುಪಡೆಯನ್ನು ಸಜ್ಜುಗೊಳಿಸಿದರು. ಆಗಿನ ಇಂಗ್ಲಿಷರ ಹಡಗುಪಡೆಯಲ್ಲಿ ೨೦೦ ಜನ ಇಂಗ್ಲಿಷ ಸಿಪಾಯಿಗಳಿದ್ದರು. ಆ ಉಭಯ ಪಕ್ಷದ ಹಡಗು ಪಡೆಗಳಲ್ಲಿ ೧೬ನೇ ಅಕ್ಟೋಬರ ೧೬೭೯ ನೇ ಇ. ದಿವಸ ದೊಡ್ಡ ಕಾಳಗವಾಗಿ ಇಂಗ್ಲಿಷರ ಪಕ್ಷಕ್ಕೆ ಸೋಲು ಉಂಟಾಯಿತು; ಆದರೂ ರಿವೆಂಜ ಎಂಬ ಹೆಸರಿನ ಅವರ ಹಡಗವು ಒಳ್ಳೇ ಸ್ಥೈರ್ಯವನ್ನು ತಾಳಿದ್ದರಿಂದಲೂ ಮರಾಟರ ಕಡೆಯ ಹಡಗು ಪಡೆಯೊಳಗಿನ ಐದು ನೌಕೆಗಳು ಮುಳುಗಿ ಹೋದದ್ದರಿಂದಲೂ ಅವರು ತಮ್ಮ ಹಡಗುಪಡೆಯನ್ನು ನಾಗೋಠಣದ ಒತ್ತಿನಲ್ಲಿ ಸೇರಿಸಿದರು.

ಇದೇ ಸಮಯಕ್ಕೆ ಶಿವಾಜಿಯ ಐದು ಸಾವಿರ ದಂಡು ಕಲ್ಯಾಣಕ್ಕೆ ಬಂದಿತು. ಅದು ಠಾಣೆಯ ಮೇಲಿಂದ ಮಾಹಿಮಕ್ಕೆ ಹೋಗಿ, ಅಲ್ಲಿಂದ ಮುಂಬಯಿ ಬಂದರದ ಮೇಲೆ ದಾಳಿಯನ್ನಿಕ್ಕುವ ಹವಣಿಕೆಯುಳ್ಳದ್ದಾಗಿತ್ತು; ಆದರೆ ಆ ದಂಡಿಗೆ ಠಾಣೆಯ ಮೇಲಿಂದ ಹಾಯ್ದು ಹೋಗಲಿಕ್ಕೆ ಪೋರ್ತುಗೀಜ ಸರಕಾರದ ಅಪ್ಪಣೆಯು ದೊರೆಯಲಿಲ್ಲ. ಇತ್ತ ಶಿವಾಜಿಯ ಕಡೆಯ ಮುಖ್ಯ ಹಡಗುಪಡೆಯು ಖಾಂದೇರಿಯ ಬಳಿಯಿಂದ ಹೊರಟು ಹೋಗಿದ್ದರೂ ಅವರ ಕಡೆಯ ಸಣ್ಣ-ಪುಟ್ಟ ನೌಕೆಗಳು ಇರುಳಿನ

ಅಂಧಕಾರದಲ್ಲಿ ಇಂಗ್ಲಿಷರ ಹಡಗುಪಡೆಯ ಕಣ್ಣು ತಪ್ಪಿಸಿ, ಖಾಂದೇರಿ ದ್ವೀಪದೊಳಗಿನ ಮರಾಟರಿಗೆ ಸಹಜವಾಗಿ ಸೀಧ-ಸಾಮಗ್ರಿಗಳನ್ನೊಯ್ದು ತಲುಪಿಸುತ್ತಿದ್ದವು. ಮುಂದೆ ಮರಾಟರು ಖಾಂದೇರಿಯ ದುರ್ಗದ ಮೇಲೆ ತೋಫುಗಳನ್ನು ಹೂಡಿ ಇಂಗ್ಲಿಷರ ಹಡಗುಪಡೆಯ ಮೇಲೆ ಗುಂಡಿನ ಮಳೆಗರೆಯಹತ್ತಿದರು. ಆಗ ಇಂಗ್ಲಿಷರ ಹಡಗುಪಡೆಯು ಅಲ್ಲಿಂದ ತಳ ಕಿತ್ತಿ ನಾಗೋಠಣದ ಒತ್ತಿನ ಮುಖಕ್ಕೆ ತಳವೂರಿ ನಿಂತಿತು. ನವಂಬರ ತಿಂಗಳಲ್ಲಿ ಹಬಸಿಯ ಹಡಗುಪಡೆಯು ಸುರತದ ಅಧಿಕಾರಿಗಳೊಡನೆ ಸಖ್ಯ ಬೆಳಿಸಿ ಸೀಧಾ ಸಾಮಗ್ರಿಗಳೊಡನೆ ಖಾಂದೇರಿಯ ಹತ್ತರ ಇಂಗ್ಲಿಷರ ಹಡುಗುಪಡೆಗೆ ಬಂದು ಕೂಡಿತು; ಆದರೆ ಹಬಸಿಯರಿಗಾಗಲಿ ಇಂಗ್ಲಿಷರಿಗಾಗಲಿ ಖಾಂದೇರಿ ದ್ವೀಪವು ತಮ್ಮೊಬ್ಬರ ಅಧೀನವೇ ಆಗಬೇಕೆಂದು ಅನಿಸುತ್ತಿದ್ದದರಿಂದ, ಉಭಯತರೂ ಕೂಡಿ ಆ ನಡುಗಡ್ಡೆಯ ಮೇಲೆ ದಾಳಿಯನ್ನಿಕ್ಕಬೇಕೆಂಬ ಯುಕ್ತಿಯು ಸಮ್ಮತವಾಗಲಿಲ್ಲ. ಆಗ ಸಿದ್ದಿ ಕಾಸಮನೊಬ್ಬನೇ ಆ ಖಾಂದೇರಿ ದ್ವೀಪದ ಮೇಲೆ ತನ್ನ ತೋಫಿನ ಗುಂಡುಗಳನ್ನು ಹಾರಿಸಹತ್ತಿದನು; ಆದರೆ ಅದರ ಉಪಯೋಗವಾಗುವದಿಲ್ಲೆಂಬದು ಅವನಿಗೆ ತಿಳಿಯಲು, ಅವನು ತನ್ನ ಜನರನ್ನು ಎದುರಿಗಿನ ಉಂದೇರಿ ದ್ವೀಪದ ಮೇಲೆ ಇಳಿಸಿ ಅದನ್ನು ವಶಪಡಿಸಿಕೊಂಡನು.

ಇತ್ತ ಶಿವಾಜಿಯು ರಾಯಗಡದಿಂದ ಮುಂಬಯಿಯ ಇಂಗ್ಲಿಷರ ಕಡೆಗೆ ತನ್ನ ವಕೀಲನನ್ನು ಕಳಿಸಿ, ಅವರೊಡನೆ ಒಪ್ಪಂದದ ಸಂಧಾನ ನಡೆಸಿದ್ದನು: "ನೀವು ಹಬಸಿಯೊಡನೆ ಸಂಗನಮತದಿಂದ ನಡೆಯುತ್ತಿರುವದು ಸಟೆಯೋ ದಿಟವೋ ಎಂಬದನ್ನು ಖಾಂದೇರಿ ಪ್ರಕರ್ಣದಲ್ಲಿ ನೋಡಿರಿ" ಎಂಬ ಪ್ರಶ್ನೆಯಿಂದ ಶಿವಾಜಿಯ ಕಡೆಯ ವಕೀಲನು ಇಂಗ್ಲಿಷರನ್ನು ಪೇಚಿಗೆ ಕೆಡವಲು, ಮುಂಬಯಿಯ ಇಂಗ್ಲಿಷರ ಗವರ್ನರನು ಖಾಂದೇರಿಯ ಬಳಿಯ ತಮ್ಮ ಹಡಗುಪಡೆಯನ್ನು ಹಿಂದಕ್ಕೆ ಕರೆಯಿಸಿಕೊಂಡನು; ಹಾಗು ಹಬಸಿಯ ಹಡಗುಪಡೆಯು ಶಿವಾಜಿಯ ನಾಡಿಗೆ ಉಪಟಳ ಕೊಡುವದಿಲ್ಲೆಂಬದನ್ನು ಖಾತ್ರಿಪಡಿಸಿಕೊಂಡ ನಂತರವೇ ತಾವು ಅವರಿಗೆ ತಮ್ಮ ಮುಂಬಯಿಯ ಬಂದರದಲ್ಲಿ ಆಶ್ರಯ ಕೊಡುವೆವೆಂಬ ಮಾತನ್ನು ಇಂಗ್ಲಿಷರಿಂದ ಶಿವಾಜಿಯ ವಕೀಲನು ಖಾತ್ರಿಮಾಡಿಕೊಂಡನು.

---



# ೨ನೆಯ ಭಾಗ



## ೧ನೆಯ ಪರಿಚ್ಛೇದ

## ಶಿವಾಜಿಯ ನಿಧನದ ನಂತರ.

೧೬೮೦ರಲ್ಲಿ ಶಿವಾಜಿಯು ತೀರಲು, ಸಂಭಾಜಿಯು ಪಟ್ಟವನ್ನೇರಿದನು. ಆ ಕಾಲಕ್ಕೆ ಸಿದ್ದಿಯ ದಾಳಿಗಳು ಪಶ್ಚಿಮ ಸಮುದ್ರದ ಮೇಲೆ ನಡೆದುದ್ದರಿಂದ ಸಂಭಾಜಿಯು ಕೂಡಲೆ ಅವನೊಡನೆ ಯುದ್ಧವನ್ನಾರಂಭಿಸಿದನು. ಸಿದ್ದಿಯ ಹಡಗು ಪಡೆಯೊಡನೆ ಸಂಭಾಜಿಯ ಹಡಗುಪಡೆಯ ಮೊದಲನೇ ಕಾಳಗವು ಮುಂಬಯಿ-ಅಲೀಬಾಗಗಳ ಮಧ್ಯದಲ್ಲಿ ಉಂದೇರಿ ದ್ವೀಪದ ಬಳಿಯಲ್ಲಾಯಿತು. ಆ ಯುದ್ಧದಲ್ಲಿ ಸಿದ್ದಿಯು ಜಯಶಾಲಿಯಾದನು. ಅವನು ೬೦ ಮಂದಿ ಮರಾಟರ ರುಂಡಗಳನ್ನು ತುಂಡರಿಸಿ ಮುಂಬಯಿಗೆ ತಂದನು; ಮತ್ತು ಅವುಗಳನ್ನು ಬರ್ಚಿಯ ತುದಿಗೆ ಚುಚ್ಚಿ ಸಮುದ್ರ ದಂಡೆಯಲ್ಲಿ ಸಾಲುಗಟ್ಟಿ ನಿಲ್ಲಿಸಿ, ತನ್ನ ವಿಜಯದ ಪ್ರದರ್ಶನ ಮಾಡಿಕೊಳ್ಳುವ ವಿಚಾರದಲ್ಲಿದ್ದನು; ಆದರೆ ಆಗ ಮುಂಬಯಿ ದ್ವೀಪವು ಇಂಗ್ಲಿಷರ ಒಡೆತನಕ್ಕಾಧೀನವಾದುದರಿಂದ, ಇಂಗ್ಲಿಷರು ಸಿದ್ದಿಯ ಆ ಪ್ರದರ್ಶನಕ್ಕೆ ಅಡ್ಡಿಯನ್ನುಂಟು ಮಾಡಿದರು. ಅದೇ ಕಾಲಕ್ಕೆ ಸಂಭಾಜಿಯು ಇಂಗ್ಲಿಷರೊಡನೆಯೂ ಯುದ್ಧವನ್ನು ಪ್ರಾರಂಭಿಸಿದನು. ಹಿಂದಿನ ಪರಿಚ್ಛೇದದಲ್ಲಿ ಹೇಳಿದಂತೆ ಇಂಗ್ಲಿಷರು ಸಿದ್ದಿಗೆ ಮುಂಬಯಿಯಲ್ಲಿ ಬರಲಿಕ್ಕೆ ಅಡ್ಡಿಯನ್ನುಂಟು ಮಾಡಲಿಲ್ಲೆಂಬುದೇ ಮರಾಟರ-ಇಂಗ್ಲಿಷರ ನಡುವಿನ ಆ ಯುದ್ಧಕ್ಕೆ ಕಾರಣವಾಗಿತ್ತು. ೧೬೮೨ರಲ್ಲಿ ಸಂಭಾಜಿಯು ಮುಂಬಯಿಗೆ ಸಮೀಪವಾದ ಎಲಿಫಂಟಾ ನಡುಗಡ್ಡೆಯ ದುರಸ್ತಿಗೂ ಅಲ್ಲಿ ಕೋಟೆ-ಕೊತ್ತಳಗಳನ್ನು ಕಟ್ಟಿಸಲಿಕ್ಕೂ ಪ್ರಾರಂಭಿಸಿದನು. ೧೬೮೩ರಲ್ಲಿ ಮಸ್ಕತದೊಳಗಿನ ಅರಬೀ ಜನರು ಪ್ರೆಸಿಡೆಂಟ ಎಂಬ ಹೆಸರಿನ ಇಂಗ್ಲಿಷರ ಹಡಗವನ್ನು ಒಡೆದು ಸುಲಿದರು. ಆ ಅರಬೀ ಜಾತಿಯ ಅಂಬಿಗರನ್ನು ಸಂಭಾಜಿಯೇ ಕಳುಹಿಸಿದ್ದನೆಂದು ರಾಜಾಪುರದ ಇಂಗ್ಲಿಷರು ಮುಂಬಯಿಯ ಇಂಗ್ಲಿಷ ಗವರ್ನರನಿಗೆ ತಿಳಿಸಿದರು. ಆಗ ಮುಂಬಯಿಯಿಂದ ಇಂಗ್ಲಿಷರ ವಕೀಲನು ಸಂಭಾಜಿಯ ಭೆಟ್ಟಿಗಾಗಿ ರಾಯಗಡಕ್ಕೆ ಬಂದನು. ಆ ಅರಬರು ತಮಗೆ ಎಷ್ಟುಮಾತ್ರಕ್ಕೂ ಸಂಬಂಧಿಸಿದವರಲ್ಲೆಂಬದನ್ನು ಸಂಭಾಜಿಯು ಅವನಿಗೆ ಖಾತ್ರಿ ಮಾಡಿಕೊಟ್ಟನು.

೧೬೮೭ರಲ್ಲ ಇಂಗ್ಲಿಷ ಈಸ್ಟ ಇಂಡಿಯಾ ಕಂಪನಿಯ ಮುಖ್ಯ ಕಚೇರಿಯು ಸುರತದಿಂದ ಮುಂಬಯಿಗೆ ಬಂತು; ಮತ್ತು ಅಂದಿನಿಂದ ಸುರತ ಬಂದರವು ಕಂಪನಿಯ ೨ನೇ ತರಗತಿಯ ಬಂದರವಾಗಿ ಮಾತ್ರ ಉಳಿಯಿತು; ಆದರೆ ಸಂಭಾಜಿಯು

ಆ ಕಂಪನಿಯು ಆ ಕೃತಿಯ ಕಡೆಗೆ ಜಾಣಾಕ್ಷತನದಿಂದ ನೋಡಲಿಲ್ಲ. ಆಗ ಅವನು ಗೋವೆಯ ಫಿರಂಗಿಗಳ ದುರ್ವರ್ತನದ ಕಡೆಗೆ ಲಕ್ಷ್ಯಗೊಟ್ಟಿದ್ದನು; ಮತ್ತು ಅಂದಿನಿಂದ ಅವನು ಇಂಗ್ಲಿಷರ ಕಡೆಗೆ ವಿಶೇಷವಾಗಿ ಲಕ್ಷ್ಯಗೊಡಲಿಲ್ಲ.

ರಾಜಾರಾಮನು ತನ್ನ ಕಾಲವನ್ನೆಲ್ಲ ಮೊಗಲರೊಡನೆ ದೂರ ದೇಶದಲ್ಲಿ ಯುದ್ಧ ಮಾಡುವದಕ್ಕೇ ವಿನಿಯೋಗಿಸುವ ಪ್ರಸಂಗ ಬಂದುದರಿಂದ, ಅವನಿಗೂ ಇಂಗ್ಲಿಷರಿಗೂ ಹೆಚ್ಚಾಗಿ ಸಂಬಂಧವೇ ಉಂಟಾಗಲಿಲ್ಲ. ೧೬೯೪ನೇ ಫೆಬ್ರುವಾರಿಯಲ್ಲಿ ಮಾತ್ರ ಮರಾಟರು ಸುರತದ ಕಡೆಗೆ ಹೋಗಿ, ಅದರ ಸುತ್ತಮುತ್ತಲಿನ ೨ ಮೈಲುಗಳೊಳಗಿನ ಹಳ್ಳಿ-ಪಳ್ಳಿಗಳನ್ನು ಸುಲಿದು ಸೂರೆಗೊಂಡರು; ಆದರೂ ಆಗ ಅವರು ಪ್ರತ್ಯಕ್ಷವಾಗಿ ಸುರತವನ್ನು ಪ್ರವೇಶಿಸದೆ, ಬಂದ ದಾರಿಯಿಂದ ಹಿಂತಿರುಗಿದರು. ಮರಾಟರಿಗೆ ಚೆನ್ನಾಗಿ ಕೈ ತೋರಿಸಬೇಕೆಂದು ಇಂಗ್ಲಿಷರು ಆಗ ಸುರತದಲ್ಲಿ ಒಳ್ಳೇ ಸಜ್ಜಾಗಿ ಕುಳಿತಿದ್ದರು. ಮತ್ತೆ ೧೬೯೮ರಲ್ಲಿ ಅಹಮ್ಮದಾಬಾದದ ನೆರೆಯಲ್ಲಿ ಮರಾಟರು ಮೊಗಲರನ್ನು ಸೋಲಿಸಿದ ಬಳಿಕ ಸುರತ-ಭಡೋಚಗಳ ಮಧ್ಯದಲ್ಲಿ ಮರಾಟರ ದಂಡುಗಳು ಹಬ್ಬಿ ಹರಿಬಿದ್ದವು; ಹಾಗೂ ಆಗ ಅವರು ಆ ಎರಡೂ ಪಟ್ಟಣಗಳ ನಿವಾಸಿಗಳಿಂದ ಕಪ್ಪ-ಕಾಣಿಕೆಗಳನ್ನು ವಸೂಲ ಮಾಡಿಕೊಂಡರು. ಇದೇ ಕಾಲಕ್ಕೆ ಕಾನ್ಹೋಜಿ ಆಂಗ್ರೇ ಎಂಬವನು ಉದಯ ಹೊಂದಹತ್ತಿ, ಅವನಿಗೂ ಇಂಗ್ಲಿಷ ವಣಿಕರಿಗೂ ಕೊಂಕಣದ ಸಮುದ್ರ ದಂಡೆಯಲ್ಲಿ ಗಂಟುಬೀಳಲಾರಂಭಿಸಿತು. ಕಾನ್ಹೋಜಿಯು ಸ್ವಂತದ ಒಗರಿನಿಂದಲೇ ಹಡಗುಪಡೆಯ ಕಸಬನ್ನು ನಡೆಸಿದನು; ಮತ್ತು ಅಲ್ಪಾವಧಿಯಲ್ಲಿಯೇ ಅವನು ಇಂಗ್ಲಿಷರ ಆ ಉದ್ಯೋಗಕ್ಕೆ ಅಡ್ಡ ಬರಹತ್ತಿ, ಅವರ ಕಣ್ಣಲ್ಲಿ ಒತ್ತಲಾರಂಭಿಸಿದನು. ಆತನು ಖಾಂದೇರಿ ದ್ವೀಪವನ್ನು ಸ್ವಾಧೀನ ಪಡಿಸಿಕೊಂಡು ಅಲ್ಲಿ ಜನವಸತಿಯನ್ನುಂಟು ಮಾಡಿದನು.

೧೬೯೬ರಲ್ಲಿ ದಕ್ಷಿಣ ಕೊಂಕಣದೊಳಗಿನ ಸಾವಂತವಾಡಿಯ ದೇಸಾಯಿಯು ಏಳು ಸಾವಿರ ದಂಡಿನೊಡನೆ ಕಾರವಾರದ ಇಂಗ್ಲಿಷ ವಖಾರಿಗೆ ೨ ತಿಂಗಳ ವರೆಗೆ ಮುತ್ತಿಗೆ ಹಾಕಿದನು; ಆದರೆ ಜಲಮಾರ್ಗದಿಂದ ವಖಾರಿನವರಿಗೆ ಸಹಾಯ ದೊರೆಯುವ ಸಮಯಕ್ಕೆ ಶಾಹೂ ಛತ್ರಪತಿಯ ಸೈನ್ಯವು ಸಾವಂತವಾಡಿಯ ಉತ್ತರ ಕಡೆಯ ನಾಡಿಗೆ ದಾಳಿಯನ್ನಿಕ್ಕಲು, ದೇಸಾಯಿಯು ನಿರ್ವಾಹವಿಲ್ಲದೆ ಮುತ್ತಿಗೆಯನ್ನೆಬ್ಬಿಸಿ ತನ್ನ ನಾಡಿಗೆ ಹೊರಟು ಹೋಗಬೇಕಾಯಿತು. ನಂತರ ದೇಸಾಯಿಯು ಇಂಗ್ಲಿಷರ ಕಡೆಗೆ ಒಬ್ಬ ಬ್ರಾಹ್ಮಣನನ್ನು ಕಳಿಸಿದನು. ಅವನ ಮಧ್ಯಸ್ಥಿಕೆಯಿಂದ ಉಭಯತರಲ್ಲಿ ಒಡಂಬಡಿಕೆಯುಂಟಾಯಿತು.

ಆಂಗ್ರೇ ಕಾನ್ಹೋಜಿಯು ಶಿವಾಜಿಯ ಕಾಲಕ್ಕೆ ಮರಾಟರ ಹಡಗುಪಡೆಯೊಳಗಿನ ಒಬ್ಬ ಸಾಮಾನ್ಯ ಅಂಬಿಗನಾಗಿದ್ದನು. ತನ್ನ ಪರಾಕ್ರಮ ಬಲದಿಂದ ಅವನು ರಾಜಾರಾಮ ಮಹಾರಾಜನ ಕಾಲಕ್ಕೆ ಇದೇ ಹಡಗುಪಡೆಯ ಮುಖ್ಯಸ್ಥನಾದನು. ಶಾಹುಮಹಾರಾಜನು ದಕ್ಷಿಣಕ್ಕೆ ಬಂದ ಬಳಿಕ ಮರಾಟರಲ್ಲಿ ಕೆಲ ದಿನ ನಡೆದ ಒಳ

ಜಗಳದಲ್ಲಿ ಕಾನ್ಹೋಜಿಯು ಸೇರಿ ಮೊದಲು ತಾರಾಬಾಯಿಯ ಪಕ್ಷವನ್ನು ವಹಿಸಿದ್ದನು; ಆದರೆ ಮುಂದೆ ಅವನು ಶಾಹುವಿನ ಪಕ್ಷಕ್ಕೆ ಸೇರಿಕೊಂಡನು. ಈ ಸಮಯಕ್ಕೆ ಕಾನ್ಹೋಜಿಯ ಸ್ವಾಧೀನದಲ್ಲಿ ಸಾವಂತವಾಡಿಯಿಂದ ಮುಂಬಯಿವರೆಗಿನ ಬಹುತರ ಎಲ್ಲ ಸಮುದ್ರ ದಂಡೆಯು ಇತ್ತು. ಶಾಹುವಿನಿಂದ ಅವನಿಗೆ ಖಾಂದೇರಿ. ಕುಲಾಬಾ, ಸುವರ್ಣದುರ್ಗ ಮತ್ತು ವಿಜಯದುರ್ಗಗಳೆಂಬ ಕೋಟೆಗಳೂ, ಬೇರೆ ಆಯಕಟ್ಟಿನ ಸ್ಥಳಗಳೂ, ಸರಖೇಲ ಎಂಬ ಪದವಿಯೂ ದೊರೆತವು. ಕಾನ್ಹೋಜಿಯು ಹಬಸಿ-ಸಿದ್ದಿಯನ್ನು ಸಂಪೂರ್ಣವಾಗಿ ಸೋಲಿಸಿ ಮೂಲೆಗುಂಪುಗೊಳಿಸಿದನು; ಕೊಂಕಣದ ದಂಡೆಯಲ್ಲಿ ಅಲೆಯುತ್ತಿರುವ ಎಲ್ಲ ಪರದೇಶೀ ಹಡಗುಪಡೆಯವರಿಂದ 'ಚೌಥ' ಎಂಬ ಕರವನ್ನು ಪಡೆದನು; ಅಲ್ಲದೆ ಸುಲಿಗೆಯನ್ನೂ ಸಂಪಾದಿಸುತ್ತಿದ್ದನು. ಅವನ ಬಳಿಯಲ್ಲಿ ಪ್ರತಿಯೊಂದರಲ್ಲಿ ೧೬ರಿಂದ ೩೦ರ ವರೆಗೆ ತೋಫುಗಳನ್ನು ಹೇರಿ ಸಜ್ಜಾದಂಥ ೧೦ ದೊಡ್ಡ ಯುದ್ಧದ ಹಡಗುಗಳೂ, ೪ ರಿಂದ ೧೦ ತೋಫುಗಳುಳ್ಳ ೫೦ ಸಣ್ಣ ಹಡಗುಗಳೂ ಇರುತ್ತಿದ್ದವು. ಅದೇ ಕಾಲಕ್ಕೆ ಅಂದರೆ ೧೭೧೬ರಲ್ಲಿ ಇಂಗ್ಲಿಷ ಹಡಗು ಪಡೆಯಲ್ಲಿ ೩೨ ತೋಫುಗಳುಳ್ಳ ೧ ಹಡಗ, ೨೦ರಿಂದ ೨೮ ತೋಫುಗಳುಳ್ಳ ೪ ಹಡಗ, ೫ರಿಂದ ೨೦ ತೋಫುಗಳುಳ್ಳ ೨೦ ಹಡಗುಗಳಿದ್ದವು. ಅವರ ಆ ಹಡಗುಪಡೆಯ ವೆಚ್ಚವು ವರ್ಷಕ್ಕೆ ೫ ಲಕ್ಷ ರೂ. ಗಳ ವರೆಗೆ ಇದ್ದಿತು. ಪೋರ್ತುಗೀಜ ಮತ್ತು ಸಿದ್ದಿಗಳ ವರ್ಚಸ್ಸು ಕಡಿಮೆಯಾದ ಮೂಲಕ ಸಮುದ್ರ ದಂಡೆಯಲ್ಲಿ ಇಂಗ್ಲಿಷ-ಆಂಗ್ರ್ಯೆಯವರಿಗೇ ಆಗಾಗ್ಗೆ ಗಂಟು ಬೀಳತೊಡಗಿತು. ೧೭೧೬ರಲ್ಲಿ ಮಲಬಾರ ದಂಡೆಯಲ್ಲಿ ಅವರ ನಡುವೆ ಮೊದಲನೇ ರಣಸಂಗ್ರಾಮವಾಯಿತು; ಹಾಗು ಅದರಲ್ಲಿ ಆಂಗ್ರ್ಯೆ ಇವನು ಪರಾಭವಗೊಂಡನು. ಮುಂದಿನ ವರ್ಷ ಅವನು ಇಂಗ್ಲಿಷರ 'ಸಕ್ಸೆಸ್' ಎಂಬ ಹೆಸರಿನ ಹಡಗವನ್ನು ಕೈವಶ ಮಾಡಿಕೊಂಡನು. ಆಗ ಸಿಟ್ಟಿನಿಂದ ಇಂಗ್ಲಿಷರು ಆತನ ವಿಜಯದುರ್ಗವನ್ನು ಮುತ್ತಿದರು; ಆದರೆ ಅವರಿಂದ ಅದನ್ನು ಗೆದ್ದುಕೊಳ್ಳುವದಾಗಲಿಲ್ಲ. ತಾ|| ೧೮-೪-೧೭೧೭ರಲ್ಲಿ ಆದ ಕಾಳಗದಲ್ಲಿ ಇಂಗ್ಲಿಷರ ಹಡಗು ಪಡೆಯ ನಾಶವಾಗಲು, ಅವರು ಮುತ್ತಿಗೆಯನ್ನೆಬ್ಬಿಸಿಕೊಂಡು ತಿರುಗಿ ಹೋಗಬೇಕಾಯಿತು. ೧೭೧೮ರ ಅಕ್ಟೋಬರದಲ್ಲಿ ಇಂಗ್ಲಿಷರು ಖಾಂದೇರಿಯ ದ್ವೀಪವನ್ನು ಮುತ್ತಿದರು; ಆದರೆ ಅಲ್ಲಿಯೂ ಅವರ ಪರಾಭವವಾಗಲು, ಅವರು ಅಲ್ಲಿಂದಲೂ ಹಿಂದಿರುಗಬೇಕಾಯಿತು. ಈ ರೀತಿಯಾಗಿ ಖಾಂದೇರಿಯನ್ನು ಸೆಳಕೊಳ್ಳಬೇಕೆಂದಿದ್ದ ಇಂಗ್ಲಿಷರ ಪ್ರಯತ್ನಗಳೆಲ್ಲ ನಿಷ್ಫಲವಾದವು. ಇಂಗ್ಲಿಷ ವ್ಯಾಪಾರಿಗಳ ಹಡಗುಗಳಿಗೆ ತೊಂದರೆ ಕೊಡುವ ಕೆಲಸವನ್ನು ಆಂಗ್ರ್ಯೆಯು ಏಕೋಪ್ರಕಾರವಾಗಿ ನಡೆಸಿದ್ದನು. "ನಿಮ್ಮಿಂದಾಗಲಿ, ಪೋರ್ತುಗೀಜರಿಂದಾಗಲಿ ನನಗೇನೂ ಅಪಾಯ ಮಾಡುವದಾಗಲಿಲ್ಲ. ಆದುದರಿಂದ ನೀವಿನ್ನು ನನ್ನ ಉಸಾಬರಿಗೆ ಬರಬೇಡಿರಿ." ಹೀಗೆಂದು ಆಂಗ್ರ್ಯೆಯು ಮುಂಬಯಿಯ ಇಂಗ್ಲಿಷರಿಗೆ ಹೇಳಿಕಳಿಸಿದನು. ಅವನ ವಶದಲ್ಲಿ ಎಷ್ಟೋ ಜನ ಯುರೋಪಿಯನ್ನ ಸೆರೆಯಾಳುಗಳು ಬಹು ದಿನಗಳ ವರೆಗೆ ಇದ್ದರು. ೧೭೨೦

ರಲ್ಲಿ ಆಂಗ್ರೆಯು ಶಾರ್ಲಟ್ ಎಂಬ ಹೆಸರಿನ ಹಡಗವನ್ನು ಆಕ್ರಮಿಸಿ, ಅದನ್ನು ತನ್ನ ವಿಜಯದುರ್ಗ ಬಂದರದಲ್ಲಿ ಒಯ್ದಿಟ್ಟನು. ಅವನು ಕೊಂಕಣ ಪ್ರಾಂತದ ಸಮುದ್ರ ದಂಡೆಯೊಳಗಿನ ಆಯಕಟ್ಟಿನ ಸ್ಥಳಗಳಲ್ಲೆಲ್ಲ ತೋಫುಗಳನ್ನು ಹೂಡಿ ಸಜ್ಜಾಗಿಟ್ಟಿದ್ದನು. ಅವನಲ್ಲಿ ಚಾಕರಿಗಾಗಿ ಇದ್ದ ಮರಾಟರ ಹಾಗು ಇಂಗ್ಲಿಷರ ತೋಫು ಹಾರಿಸುವವರು ಅವುಗಳನ್ನು ಬಹು ದೂರದ ವರೆಗೆ ಹಾರಿಸುತ್ತಿದ್ದರು. ಸನ್ ೧೭೨೨ ರಲ್ಲಿ ಪೋರ್ತುಗೀಜರೂ ಇಂಗ್ಲಿಷರೂ ಒಟ್ಟಾಗಿ ಕುಲಾಬಾದ ಬಳಿಯಲ್ಲಿ ಆಂಗ್ರೆಯ ಮೇಲೆ ದಾಳಿಯಿಟ್ಟರು; ಆದರೆ ಆಗ ಅವರು ಪರಾಜಯಗೊಳ್ಳಬೇಕಾಯಿತು. ೧೭೨೪ರಲ್ಲಿ ಡಚ್ಚ ಜನರ ೭ ಹಡಗುಗಳ ಸಮೂಹವು ಸರಾಸರಿ ೫೦ ತೋಫುಗಳೊಡನೆ ವಿಜಯದುರ್ಗದ ಮೇಲೆ ದಾಳಿಯನ್ನಿಕ್ಕಿತು; ಆದರೆ ಅವರಿಗೂ ಅಲ್ಲಿ ಜಯ ದೊರೆಯಲಿಲ್ಲ. ೧೭೨೭ರಲ್ಲಿ ಆಂಗ್ರೆಯು ಮತ್ತೆ ಇಂಗ್ಲಿಷ ಕಂಪನಿಯ ಒಂದು ಬಹು ಭವ್ಯವಾದ ಹಾಗು ಅಮೂಲ್ಯವಾದ ಜಿನಸುಗಳಿಂದ ತುಂಬಿದ ಹಡಗವನ್ನು ಆಕ್ರಮಿಸಿದನು. ಹೀಗೆ ಆಂಗ್ರೆಯ ಹಡಗುಪಡೆಯು ದಿನದಿನಕ್ಕೆ ವರ್ಧಮಾನ ಸ್ಥಿತಿಯಲ್ಲಿತ್ತು. ೧೭೨೯ರಲ್ಲಿ ಆತನು ಪುನಃ 'ಕಿಂಗ ವುಯಿಲ್ಯಮ್' ಎಂಬ ಹೆಸರಿನ ಕಂಪನಿಯ ಹಡಗವನ್ನು ಆಕ್ರಮಿಸಿದನು; ಹಾಗು ಕರ್ನಲ್ಲ ಮ್ಯಾಕನೀಲನೆಂಬ ಅಧಿಕಾರಿಯನ್ನು ಸೆರೆ ಹಿಡಿದು ಅವನ ಕಾಲಲ್ಲಿ ಭಾರವಾದ ಬೇಡಿಗಳನ್ನು ಹಾಕಿ ಅವನನ್ನು ಬಹುದಿನಗಳ ವರೆಗೆ ಸೆರೆಯಲ್ಲಿರಿಸಿದನು; ಮತ್ತು ಕಡೆಗೆ ೫೦೦ ರೂಪಾಯಿ ಕಪ್ಪ-ಕಾಣಿಕೆಯನ್ನು ಸ್ವೀಕರಿಸಿ, ಅವನನ್ನು ಬಂಧಮುಕ್ತಗೊಳಿಸಿದನು. ಮುಂದೆ ೧೭೩೧ರಲ್ಲಿ ಕಾನ್ಹೋಜಿ ಆಂಗ್ರೆಯು ತೀರಿಕೊಂಡನು. ಅದುವರೆಗೂ ಇಂಗ್ಲಿಷರಿಂದ ಅವನ ಯಾವ ಬಗೆಯ ಪಾರುಪತ್ಯವನ್ನೂ ಮಾಡಲಿಕ್ಕಾಗಲಿಲ್ಲ. ಕಾನ್ಹೋಜಿಯು ಮರಣದ ನಂತರ ಅವನ ಹಿರಿಯಮಗನಾದ ಸಖೋಜಿಯು ೧೭೩೩ರ ಜೂನ ತಿಂಗಳಲ್ಲಿ ಮುಂಬಯಿಯ ಪ್ರೆಸಿಡೆಂಟನ ಕಡೆಗೆ ಮಿತ್ರತ್ವದ ಒಡಂಬಡಿಕೆಗಾಗಿ ತನ್ನ ಇಬ್ಬರು ವಕೀಲರನ್ನು ಕಳಿಸಿದನು; ಆದರೆ ಸಖೋಜಿಯು ಕ್ಷಿಪ್ರದಲ್ಲಿಯೇ ಮರಣ ಹೊಂದಿದ್ದರಿಂದ ಅವನ ತಮ್ಮಂದಿರಲ್ಲಿ ಜಗಳವೆದ್ದು, ಕಾನ್ಹೋಜಿಯ ದಾಸೀಪುತ್ರನಾದ ಮಾನಾಜಿ ಆಂಗ್ರೆಯೇ ಮುಂದೆ ಬಿದ್ದನು; ಹಾಗು ಪೋರ್ತುಗೀಜರ ನೆರವಿನಿಂದ ಅವನು ಕುಲಾಬೆಯನ್ನು ಕೈವಶಮಾಡಿಕೊಂಡನು. ಮುಂದೆ ಪೇಶವೆ ಬಾಜೀರಾಯನ ಮಧ್ಯಸ್ಥಿಕೆಯಿಂದ ಅವನು ಶಾಹೂ ಮಹಾರಾಜನೊಡನೆ ಸಖ್ಯ ಬೆಳಿಸಿ, ತನ್ನ ಅಧಿಕಾರವನ್ನು ಹೆಚ್ಚಿಸಿಕೊಳ್ಳತೊಡಗಿದನು. ಇದು ಮುಂಬಯಿಯ ಇಂಗ್ಲಿಷ ಗವರ್ನರನಿಗೆ ಸಹನವಾಗದ್ದರಿಂದ ಅವನು ಮಾನಾಜಿಯ ವಿರುದ್ಧ ಹಬಸಿಗೆ ಸಹಾಯ ಮಾಡಿದನು. ಹೀಗಾದರೂ ಮಾನಾಜಿಯು ಹಣಿಯದೆ, ವೈರಿಗಳ ಹಡಗುಪಡೆಯನ್ನು ಆಕ್ರಮಿಸಿ, ಹಬಸಿಯ ಎಷ್ಟೋ ದುರ್ಗಗಳನ್ನು ಗೆದ್ದುಕೊಂಡನು. ಪೇಣದ ಬಳಿಯ ಸಮುದ್ರದ ಒತ್ತಿನಲ್ಲಿ ಆತನು ತನ್ನ ಸತ್ತೆಯನ್ನು ನೆಲಿಸಿ, ಮುಂಬಯಿ ಬಂದರದವರೆಗೂ ಸಾಗಿ ಬರತೊಡಗಿದನು.

ಮೊದಲನೇ ಬಾಜೀರಾಯನು ಜಂಜೀರೆಯ ಹಬಸಿಯನ್ನು ಸಂಪೂರ್ಣವಾಗಿ ಸೋಲಿಸಬೇಕೆಂದು ಸಂಕಲ್ಪಿಸಿದ್ದರಿಂದ, ಅವನು ಆ ಕೆಲಸಕ್ಕಾಗಿ ಇಂಗ್ಲಿಷರನ್ನು ಸಹಾಯಕ್ಕೆ ತೆಗೆದುಕೊಳ್ಳಬೇಕೆಂದು ಯೋಚಿಸಿದನು. ಬಾಜೀರಾಯನು ರಾಜಾಪುರ-ಕ್ಕೆ ಮುತ್ತಿಗೆ ಹಾಕಿದಾಗ ಶಾಹೂಮಹಾಜನ ಹೆಸರಿನಿಂದ ಮುಂಬಯಿ ಗವರ್ನರನಿಗೆ ಪತ್ರ ಬರೆದು, ನಿಮ್ಮ ಹಡಗುಪಡೆಯಿಂದ ನಮಗೆ ತೊಂದರೆಯಾಗಗೊಡಬಾರದೆಂದು ವಿನಂತಿ ಮಾಡಿಕೊಂಡನು. ಮುಂದೆ ಹಬಸಿ ಹಾಗು ಮರಾಟರು ಇವರಲ್ಲಿ ಮಧ್ಯಸ್ತಿಕೆಯನ್ನು ಮಾಡುವ ಕೆಲಸವು ಇಂಗ್ಲಿಷರ ಕಡೆಗೇ ಬಂದಿತು; ಆದರೆ ಪೇಶವೆ ಮತ್ತು ಆಂಗ್ರೆ ಇವರಲ್ಲಿ ಸ್ನೇಹ ಸಂಬಂಧವಿದ್ದುದರಿಂದ, ಇಂಗ್ಲಿಷ ಹಾಗು ಪೇಶ್ವೆ ಇವರಲ್ಲಿ ಮನಃಪೂರ್ವಕವಾದ ಸ್ನೇಹವುಂಟಾಗುವದು ಶಕ್ಯವಿರಲಿಲ್ಲ. ಮೇಲಾಗಿ ಹಬಸಿ ಹಾಗು ಇಂಗ್ಲಿಷರು ಆಂಗ್ರೆನ ವಿರುದ್ಧ ಒಡಂಬಡಿಕೆ ಮಾಡಿಕೊಂಡರು. ಈ ಒಡಂಬಡಿಕೆಯಲ್ಲಿ ನಿರ್ಣೀತವಾದುದೇನಂದರೆ; ಉಭಯತರೂ ಕೂಡಿ ಆಂಗ್ರೇನನ್ನು ಸೋಲಿಸಿದರೆ, ಇಂಗ್ಲಿಷರಿಗೆ ಖಾಂದೇರಿ ದ್ವೀಪವು ಅದರ ಮೇಲಿನ ಎಲ್ಲ ಲಷ್ಕರೀ ಸಾಹಿತ್ಯದೊಡನೆ ದೊರೆಯಬೇಕು; ಕುಲಾಬಾ ಸಿಗಬೇಕು; ಅಲ್ಲದೆ ಪೇಣ ಹಾಗು ನಾಗೋಠಣದ ಸಮುದ್ರದ ಒತ್ತುಗಳ ನಡುವೆ ಅವರಿಗೆ ತಮ್ಮ ವಖಾರವನ್ನಿಡಲು ಅಪ್ಪಣೆಯಿರಬೇಕು. ಭೂಭಾಗದ ಮೇಲೆ ಹಸ್ತಗತವಾಗತಕ್ಕ ಠಾಣ್ಯಗಳನ್ನೆಲ್ಲ ಹಬಸಿಯು ಸ್ವಾಧೀನಪಡಿಸಿಕೊಳ್ಳಬೇಕು; ಆದರೆ ಹಬಸಿಯು ಬಲಾಢ್ಯನಿರದ್ದರಿಂದ ಅವನ ನೆರವಿನಿಂದ ಇಂಗ್ಲಿಷರಿಗೆ ಅಷ್ಟೊಂದು ಪ್ರಯೋಜನವಾಗದಾಯಿತು. ಅದರಿಂದ ಇಂಗ್ಲಿಷ ಕಂಪನಿಯ ಹಡಗುಪಡೆಯ ವೆಚ್ಚವು ಹೆಚ್ಚಾಗಹತ್ತಿತು. ಈ ಒಡಂಬಡಿಕೆಯಿಂದ ಇಂಗ್ಲರಿಗೆ ಏನೂ ಲಾಭವಾಗಲಿಲ್ಲ. ಇತ್ತ ಶಾಹೂಮಹಾರಾಜನ ನೆರವಿನಿಂದ ಆಂಗ್ರೆಯು ಮಾತ್ರ ಬಲಾಢ್ಯನಾಗತೊಡಗಿದನು. ಇದೇ ಕಾಲಕ್ಕೆ ಮಾನಾಜಿ ಮತ್ತು ಸಂಭಾಜಿ ಆಂಗ್ರೆ ಇವರಲ್ಲಿ ಮನೆತನದ ಒಡಕು ಹುಟ್ಟದಿದ್ದರೆ, ಆಂಗ್ರೆಯು ಗೋವೆಯಿಂದ ಮುಂಬಯಿ ವರೆಗಿನ ಎಲ್ಲ ಕೊಂಕಣ ಪ್ರಾಂತದ ಸಮುದ್ರ ದಂಡೆಯ ಮೇಲೆ ತನ್ನ ಅಧಿಕಾರವನ್ನು ಸ್ಥಿರಪಡಿಸದೆ ಇರುತ್ತಿರಲಿಲ್ಲ.

ಆದರೆ ಪೇಶವೆಯವರ ಗೃಹಕಲಹದಂತೆ ಆಂಗ್ರೆಯ ಗೃಹಕಲಹವೂ ಇಂಗ್ಲಿಷರಿಗೆ ಪಥ್ಯಕರವಾಗಿಯೇ ಪರಿಣಮಿಸಿತು; ಮುಂಬಯಿಯ ಇಂಗ್ಲಿಷರು ಕ್ಯಾಪ್ಟನ್ ಇಂಚಬರ್ಡ ಎಂಬಾತನನ್ನು ಮಾನಾಜಿಯ ಕಡೆಗೆ ಕುಲಾಬೆಗೆ ಕಳುಹಿಸಿದರು; ಹಾಗು ಆತನ ಮತ್ತು ಸಂಭಾಜಿಯ ನಡುವಿನ ಗೃಹಕಲಹವನ್ನು ಹೆಚ್ಚು ಪುಟವಾಗುವಂತೆ ಮಾನಾಜಿಗೆ ದುಡ್ಡು, ಲಷ್ಕರೀ ಸಾಮಗ್ರಿ ಮೊದಲಾದವುಗಳನ್ನು ಪೂರೈಸಲಿಕ್ಕೆ ತಿಳಿಸಿದರು. ೧೭೩೮ರ ಡಿಸೆಂಬರದಲ್ಲಿ ಕಮ್ಯಾಂಡರ ಬ್ಯಾಗ್‌ವೆನ್ ಇವನಿಗೂ ಸಂಭಾಜಿ ಆಂಗ್ರೆ ಇವನಿಗೂ ರಾಜಾಪುರದ ಬಳಿಯ ಒತ್ತಿನಲ್ಲಿ ಗಂಟುಬಿದ್ದಿತು; ಆದರೆ ಸಂಭಾಜಿಯ ಹಡಗುಪಡೆಯು ಒತ್ತಿನಲ್ಲಿ ನುಗ್ಗಿ ಮರೆಯಾದುದರಿಂದ ಪಾರಾಯಿತು. ತಿರುಗಿ ಅದೇ ತಿಂಗಳಲ್ಲಿ ಸಂಭಾಜಿಯು ಇಂಗ್ಲಿಷರ ಡಾರ್ಬಿ ಎಂಬ ಹೆಸರಿನ ವ್ಯಾಪಾರೀ

ಹಡಗವನ್ನು ಕೈವಶ ಮಾಡಿಕೊಂಡನು; ಆದರೂ ಅವನು ೧೭೩೯ರಲ್ಲಿ ಇಂಗ್ಲಿಷ ರೊಡನೆ ಒಡಂಬಡಿಕೆ ಮಾಡಿಕೊಳ್ಳಲಿಕ್ಕೆ ಪ್ರಯತ್ನಿಸಿದನು. ಆ ಒಡಂಬಡಿಕೆಯ ಕರಾರಿನಿಂದ ಇಂಗ್ಲಿಷರ ಪ್ರತಿಯೊಂದು ವ್ಯಾಪಾರೀ ಹಡಗವು ಸಂಭಾಜಿ ಆಂಗ್ರೆಯ ಅಪ್ಪಣೆ ಪಡೆದು ಪಶ್ಚಿಮಸಮುದ್ರ ದಂಡೆಯಲ್ಲಿ ತಿರುಗಾಡಬೇಕು. ಆಂಗ್ರೇನಿಂದ ಅವು ಗಳಿಗೆ ಉಪಟಳವಾಗಬಾರದೆಂದು ಇಂಗ್ಲಿಷರು ಅವನಿಗೆ ಪ್ರತಿವರ್ಷ ೨೦ ಲಕ್ಷ ರೂಪಾಯಿ ಕೊಡಬೇಕು, ಎಂದು ನಿಶ್ಚಿತವಾಗುವಂತಿತ್ತು; ಆದರೆ ಆ ಕರಾರುಗಳಿಗೆ ಇಂಗ್ಲಿಷರು ಒಪ್ಪಲಿಲ್ಲ. ೧೭೩೯ರ ಮಾರ್ಚ ತಿಂಗಳಲ್ಲಿ ಕ್ಯಾಪ್ಟನ್ ಇಂಚಬರ್ಡನು ಮಾನಾಜಿಯ ೮ ಯುದ್ಧದ ಹಡಗುಗಳನ್ನು ಹಿಡಕೊಂಡನು; ಆದರೂ ಮುಂದೆ ನವಂಬರದಲ್ಲಿಯೇ ಮಾನಾಜಿಯು ಮುಂಬಯಿ ಬಳಿಯ ಎಲಿಫಂಟಾ ದ್ವೀಪವನ್ನು ಕೈವಶ ಮಾಡಿಕೊಂಡನು. ಈ ರೀತಿಯಾಗಿ ಸಂಭಾಜಿ ಹಾಗು ಮಾನಾಜಿ ಇವರು ಇಂಗ್ಲಿಷರೊಡನೆ ಸರತಿಯ ಮೇಲೆ ಸರತಿಯಂತೆ ಯುದ್ಧವನ್ನೂ ಒಡಂಬಡಿಕೆ ಯನ್ನೂ ಮಾಡಿಕೊಳ್ಳುತ್ತಿರಲು, ಪೇಶ್ವೆ ನಾನಾಸಾಹೇಬನಿಗೂ ಇಂಗ್ಲಿಷರಿಗೂ ಮೈತ್ರಿಯುಂಟಾಗಿ, ಕುಲಾಬೆಯು ಅವರಿಬ್ಬರ ಕೈಯಿಂದಲೂ ಜಾರಿಹೋಗುವ ಪ್ರಸಂಗವುಂಟಾಯಿತು. ಆಗ ಮಾತ್ರ ಅವರಿಬ್ಬರೂ ಅಣ್ಣ-ತಮ್ಮಂದಿರು ಆಗಿನ ಮಟ್ಟಿಗೆ ಒಕ್ಕಟ್ಟಾಗಿ, ಆ ಪ್ರಸಂಗವನ್ನು ನೀಗಿದರು.

ಮೇಲಿನ ಸಂಗತಿಗಳಿಂದ ೧೭೩೯ರ ವರೆಗೆ ಇಂಗ್ಲಿಷರಿಗೂ ಶಿವಾಜಿ, ಸಂಭಾಜಿ ಹಾಗು ಆಂಗ್ರೆ ಇವರಿಗೂ ಯಾವ ಪ್ರಕಾರದ ಸಂಬಂಧವಿದ್ದಿತೆಂಬದು ವ್ಯಕ್ತವಾಗು ತ್ತಿದೆ; ಆದರೆ ಮರಾಟರಿಗೂ ಇಂಗ್ಲಿಷರಿಗೂ ಇದಕ್ಕಿಂತಲೂ ನಿಕಟದ ಸಂಬಂಧವು ವಸಯಿಯ ಯುದ್ಧದ ಮೂಲಕ ಹಾಗು ಅಂದಿನಿಂದ ಮುಂದೆ ಹೇಗೆ ಉಂಟಾಯಿ ತೆಂಬದು ಈ ಮುಂದಿನ ಸಂಗತಿಗಳಿಂದ ಚನ್ನಾಗಿ ವ್ಯಕ್ತವಾಗುತ್ತದೆ.

೧೭೩೭ರ ವರೆಗಿನ ಇಂಗ್ಲಿಷರಿಗೆ ಮರಾಟರ ಬಗ್ಗೆ ಪ್ರತ್ಯಕ್ಷವಾದ ಮಾಹಿತಿಯು ಹೆಚ್ಚಾಗಿ ಇರಲಿಲ್ಲ; ಅಥವಾ ಮರಾಟರ ಉತ್ಕರ್ಷದ ಬಗ್ಗೆ ಅವರಿಗೆ ಹೆಚ್ಚಾಗಿ ಭಯ ವೆನಿಸಿರಲಿಲ್ಲ; ಆದರೆ ಅಂದಿನಿಂದ ಇಂಗ್ಲಿಷರಿಗೆ ಅವರ ವಿಷಯವಾಗಿ ನಿಜವಾಗಿ ಭೀತಿಯುಂಟಾಗಹತ್ತಿತು. ಇದಕ್ಕೆ ಕಾರಣವೆಂದರೆ, ಪೇಶ್ವೆಯವರು ಪೋರ್ತುಗೀಜರ ಮೇಲೆ ಮಾಡಿದ ದಾರುಣವಾದ ದಾಳಿಯು. ೧೭೩೩ರಲ್ಲಿ ಮರಾಟರು ಠಾಣೆಯೊಳಗಿನ ಪೋರ್ತುಗೀಜರ ಮೇಲೆ ಏರಿ ಹೋದರು ಆ ಕಾಲಕ್ಕೆ ಇಂಗ್ಲಿಷ ರಿಗೂ ಪೋರ್ತುಗೀಜರಿಗೂ ವೈಮನಸ್ಸಿತ್ತಾದ್ದರಿಂದ ಮುಂಬಯಿ ಇಂಗ್ಲಿಷರು ಮರಾಟರಿಗೆ ಉತ್ತೇಜನವಿತ್ತಿದ್ದರು; ಆದರೆ ಹೀಗೆ ಮಾಡಿದ್ದು ತಮ್ಮ ಘೋರತರ ಅಪರಾಧವಾಯಿತೆಂಬದು ಇಂಗ್ಲಿಷರಿಗೆ ಕ್ಷಿಪ್ರದಲ್ಲಿಯೇ ಹೊಳೆದು ಬಂತು. ೧೭೩೭ರ ಎಪ್ರೀಲದಲ್ಲಿ ಸುರತದೊಳಗಿನ ಒಬ್ಬ ಇಂಗ್ಲಿಷನು ಬಂಗಾಲದೊಳಗಿನ ತನ್ನ ಗೆಳೆಯ ರಿಗೆ ಪತ್ರ ಬರೆದು, ಅವರಿಗೆ ಪ್ರಥಮತಃ ಇತ್ತ ಕಡೆಯ ಮರಾಟರ ಪರಿಚಯವನ್ನು ಮಾಡಿಕೊಟ್ಟಿರುತ್ತಾನೆ. ಅವನು ಆ ಪತ್ರದಲ್ಲಿ:—"ಶಾಹುರಾಜನ ಕೈಕೆಳಗಿನ

ಮರಾಟರೆಂಬ ಹೆಸರಿನ ಜನರು ಪೋರ್ತುಗೀಜರನ್ನು ಚೆನ್ನಾಗಿ ಹಣ್ಣಿಗೆ ತಂದಿರುವದರಿಂದ ಇನ್ನು ಅಲ್ಪಾವಕಾಶದಲ್ಲಿಯೇ ಅವರು ನಮ್ಮ ಮುಂಬಯಿ ದ್ವೀಪಕಲ್ಪಕ್ಕೆ ನುಗ್ಗಿ ನಮಗೂ ಕೈತೋರಿಸಬಹುದಾಗಿದೆ." ಎಂದು ಸಾರಿರುವನು. ಆ ವರ್ಷ ಮರಾಟರು ಪೋರ್ತುಗೀಜರಿಂದ ಠಾಣೆಯ ದುರ್ಗವನ್ನು ಹಸ್ತಗತಮಾಡಿಕೊಂಡರು. ಇನ್ನು ಮರಾಟರು ಠಾಣೇದ ಒತ್ತಿನೊಳಗಿಂದ ತಮ್ಮ ವಾಂದ್ರ್ಯಗೆ ನುಗ್ಗುವರೋ ಏನೋ ಎಂಬ ಭಯದಿಂದ ಇಂಗ್ಲಿಷರು ಸೈನ್ಯವನ್ನೂ ಮದ್ದು-ಗುಂಡುಗಳನ್ನೂ ಅತ್ತ ಕಡೆಗೆ ಕಳುಹಿಸಿದರು. ಇತ್ತ ಇಂಗ್ಲಿಷರು ಮೇಲುಪಚಾರಕ್ಕಾಗಿ ಮರಾಟರೊಡನೆ ಸವಿ ಸವಿ ಮಾತಾಡುತ್ತಿದ್ದರು; ಮತ್ತು ಮರಾಟರು ಠಾಣೆಯ ಕಿಲ್ಲೆಯನ್ನು ಗೆದ್ದುಕೊಂಡದ್ದನ್ನು ಕಂಡು ಅವರಿಂದ ಮರಳಿ ಪಡೆಯುವದಕ್ಕಾಗಿ ಪೋರ್ತುಗೀಜರು ವಸಯಿಯಿಂದ ದಾಳಿ ಮಾಡಲಿಕ್ಕೆ ಹೊರಡುತ್ತಿರಲು, ಆ ಸಂಗತಿಯನ್ನು ಇಂಗ್ಲಿಷರು ತಾವಾಗಿಯೇ ಮರಾಟರಿಗೆ ತಿಳಿಸಿದರು; ಹಾಗು ಆ ದುರ್ಗದೊಳಗಿನ ಜನರಿಗೆ ಇಂಗ್ಲಿಷರೇ ಮದ್ದು-ಗುಂಡುಗಳನ್ನು ಒದಗಿಸಿಕೊಟ್ಟರು. ಅದರಿಂದ ಪೋರ್ತುಗೀಜರುಮರಾಟರ ಮೇಲೆ ಮಾಡಿದ ದಾಳಿಯು ಯಶಸ್ವಿಯಾಗಲಿಲ್ಲ. ಇಷ್ಟೇ ಅಲ್ಲ, ಅವರ ಸರದಾರನಾದ ದಾನ ಅಂತೋನಿಯಾ ಎಂಬವನು ಕೊಲ್ಲಲ್ಪಟ್ಟನು. ಈ ಮೊದಲೊಮ್ಮೆ ಸಿದ್ದಿಯು ಮುಂಬಯಿಯ ಮೇಲೆ ಏರಿ ಬಂದಿದ್ದನು. ಆಗ ಇಂಗ್ಲಿಷರ ಚಲನವಲನದ ಸುದ್ದಿಗಳನ್ನು ಪೋರ್ತುಗೀಜರು ಸಿದ್ದಿಗೆ ತಿಳಿಸಿದ್ದರು. ತಾವು ಪೋರ್ತುಗೀಜರ ಪಕ್ಷದ ಆಗಿನ ಮುಯ್ಯವನ್ನು ಈಗ ತೀರಿಸಿಕೊಂಡೆವೆಂದು ಇಂಗ್ಲಿಷರು ತಮ್ಮ ಮನಸ್ಸಿನ ಸಮಾಧಾನ ಮಾಡಿಕೊಂಡರು; ಆದರೆ ಬೇರೆ ಯುರೋಪಿಯನ್ ಇತಿಹಾಸಕಾರರು ಇಂಗ್ಲಿಷರ ಈ ಜಾತಿಯ ಕೃತಿಯನ್ನು ತೀರ ಕೀಳುತರದ್ದೆಂದು ಗಣಿಸಿರುತ್ತಾರೆ.

---

೨ನೆಯ ಪರಿಚ್ಛೇದ.

## ಬಾಜೀರಾಯನ ಕಾಲಕ್ಕೆ.

ಠಾಣೆಯ ನಂತರ ಮರಾಟರು ತಾರಾಪುರವನ್ನು ಗೆದ್ದುಕೊಂಡರು; ಹಾಗು ಮುಂದೆ ೧೭೩೯ರ ಫೆಬ್ರುವಾರಿಯಲ್ಲಿ ವಾಸೋವಾ ಈ ಠಾಣ್ಯವನ್ನು ಗೆದ್ದುಕೊಂಡು ವಸಯಿಗೆ ಮುತ್ತಿಗೆ ಹಾಕಿದರು. ಆ ಕಾಲಕ್ಕೆ ಆ ದುರ್ಗದೊಳಗಿನ ಪೋರ್ತುಗೀಜ ಫಿರಂಗಿಗಳು ಒಳ್ಳೇ ದೈನ್ಯದಿಂದ ಇಂಗ್ಲಿಷರ ಸಹಾಯವನ್ನು ಯಾಚಿಸಿದರು; ಆದರೆ ಇಂಗ್ಲಿಷರು ತಮ್ಮ ಕುಲಧರ್ಮದಂತೆ ತೋರಿಕೆಯಲ್ಲಿ ಸಹಜವೂ ಸುಂದರವೂ ಆದ ನೆವವೊಂದನ್ನು ಹೇಳಿ ಅವರಿಗೆ ಸಹಾಯ ಮಾಡಲಿಲ್ಲ! ಕಡೆಗೆ ಪೇಶ್ವೆ ಚಿಮಣಾಜಿ ಅಪ್ಪಾನಿಗೆ ಯಶದೊರೆತು ಪೋರ್ತುಗೀಜರು ಮರಾಟರಿಗೆ ಶರಣಾಗತರಾದರು. ಈ ಕಾಳಗದಲ್ಲಿ ಮರಾಟರ ಸಾವಿರಾರು ಜನರ ಆತ್ಮಬಲಿದಾನದಿಂದ ಅವರಿಗೆ ವಸಯಿಯ ಆ ದುರ್ಗವು ಹಸ್ತಗತವಾಯಿತು.

ಆಗಿನ ವಸಯಿಯ ಪೋರ್ತುಗೀಜ ದುರ್ಗಾಧಿಪತಿಯಾದ ಜಾನ್ ಪಿಂಟೋ ಎಂಬವನು ಮುಂಬಯಿಯ ಇಂಗ್ಲಿಷ ಗವರ್ನರನಿಗೆ ಬರೆದದ್ದೇನಂದರೆ:—

"ಮರಾಟರ ಮನಸ್ಸಿನಲ್ಲಿ ಠಾಣೆಗಿಂತ ಮುಂಬಯಿಯನ್ನು ಸೆಳಕೊಳ್ಳುವದೇ ಹೆಚ್ಚಾಗಿದೆ. ಅವರು ಠಾಣೆಯ ಕಿಲ್ಲೆಯನ್ನು ಮೊದಲು ಗೆದ್ದುಕೊಂಡ ಕಾರಣ ವೇನಂದರೆ, ಇದು ಮುಂಬಯಿಯ ದಾರಿಯೊಳಗಿನ ಆಯಕಟ್ಟಿನ ಸ್ಥಳವೆಂದು ಇದನ್ನು ತೆಗೆದುಕೊಂಡರು. ಇಂದು ನೀವು ಮರಾಟರೊಡನೆ ಎಷ್ಟು ಮೈತ್ರಿಯಿಂದಿರುವಿರೋ, ನಾವೂ ಮುಂಚೆ ಹಾಗೆಯೇ ಅವರೊಡನೆ ಸ್ನೇಹಿತರಾಗಿದ್ದೆವು; ಆದರೆ ಅವರನ್ನು ನಂಬಲಾಗದು. ಮುಂಬಯಿ ನಡುಗಡ್ಡೆಯೊಳಗಿನ ಸಂಪತ್ತನ್ನೆಲ್ಲ ಕೈವಶಮಾಡಿಕೊಳ್ಳಬೇಕೆಂಬುದೇ ಅವರ ಮುಖ್ಯ ಧ್ಯೇಯವಾಗಿರುತ್ತದೆ. ಇಂದು ಮರಾಟರು ನಿಮ್ಮೊಡನೆ ಇಷ್ಟು ಮೈತ್ರಿಯಿಂದ ನಡೆಯುವ ಕಾರಣವೇನಂದರೆ, ಇಂದೇ ಅವರು ಪೋರ್ತುಗೀಜ ಮತ್ತು ಇಂಗ್ಲಿಷ ಈ ಉಭಯ ಜನಾಂಗಗಳೊಡನೆ ಒಮ್ಮೆಲೆ ಕಾದಲಿಕ್ಕೆ ಸಮರ್ಥರಾಗಿರುವದಿಲ್ಲ. ಸಾಷ್ಟಿ ದ್ವೀಪದ ಮೇಲೆ ಮರಾಟರು ಕಾಲೂರಿ ನಿಂತರೆಂದರೆ, ನಿಮ್ಮ ಮುಂಬಯಿಯು ಕ್ಷಿಪ್ರದಲ್ಲಿಯೇ ಅವರ ಹಸ್ತಗತವಾಗುವದೆಂಬದು ಖಂಡಿತವೆಂದು ತಿಳಿಯಿರಿ. ನಿಮ್ಮಿಂದ ಮರಾಟರಿಗೆ ಮದ್ದು-ಗುಂಡುಗಳು ಪೂರೈಸಲ್ಪಡುತ್ತವೆಂಬದು ಇತ್ತೀಚೆಗೆ ಈ ದುರ್ಗದಲ್ಲಿ ಬಂದು ಬೀಳುವ ಗುಂಡುಗಳ ಸೆಲ್ಲುಗಳ ಮೇಲಿನ ನಿಮ್ಮ ಗುರುತುಗಳಿಂದ ಚೆನ್ನಾಗಿ ಗೊತ್ತಾಗುತ್ತದೆ. ನಿಮ್ಮ ಕಡೆಯ ಮೂವರು ನಿಷ್ಣಾತ ಗೋಲಂದಾಜರು ಮರಾಟರ ನೆರವಿಗೆ ಹೋಗಿರುವದರಿಂದಲೇ, ಅವರ ತೋಫುಗಳ ಎದುರಿಗೆ ನಮ್ಮ ತೋಫುಗಳ ಆಟವು ನಡೆಯದಾಗಿದೆ."

ವಸಯಿಯ ಮುತ್ತಿಗೆಯ ಕಾಲಕ್ಕೆ ಪೋರ್ತುಗೀಜರು ಇಂಗ್ಲಿಷರ ನೆರವನ್ನು ಯಾಚಿಸಿದ್ದರು. ಅವರಿಗೆ ಮುಂಬಯಿಂದ ಧಾನ್ಯವೂ, ೪೦೦ ಸಾರಾಯಿಯ ಪೀಪುಗಳೂ, ೫ ಸಾವಿರ ಗುಂಡುಗಳೂ ಬೇಕಾಗಿದ್ದವು. ಮರಾಟರು ಒಳ್ಳೇ ಬಲವಾಗಿ ಮುತ್ತಿಗೆ ಹಾಕಿದ್ದರಿಂದ ಇಂಗ್ಲಿಷರಿಂದ ಅವರಿಗೆ ಆ ಸಹಾಯ ಮಾಡುವದು ಅಶಕ್ಯವಾಗಿತ್ತು; ಆದರೂ ಅವರು ಅಲ್ಪಸ್ವಲ್ಪ ಸಹಾಯ ಮಾಡೇ ಮಾಡಿದರು. ಸೈನಿಕರ ಸಂಬಳ ಕೊಡುವದಕ್ಕಾಗಿ ಪೋರ್ತುಗೀಜರು ಇಂಗ್ಲಿಷರಿಗೆ ರೋಖ ಹಣವನ್ನು ಕೇಳಿದರು; ಆದರೆ ಅದನ್ನು ಮಾತ್ರ ಇವರು ಕೊಡಲಿಲ್ಲ. ೧೫ ಸಾವಿರ ರೂಪಾಯಿಗಳನ್ನು ಮಾತ್ರ ಪೋರ್ತುಗೀಜರ ಕ್ರಿಸ್ತ ದೇವಾಲಯದೊಳಗಿನ ಬೆಳ್ಳಿಯ ಪಾತ್ರೆಗಳನ್ನೂ ಹಿತ್ತಾಳೆಯ ತೋಫುಗಳನ್ನೂ ಒತ್ತೆ ಇಟ್ಟುಕೊಂಡು ಕೊಟ್ಟಿದ್ದರು!

ವಸಯಿಯಂಥ ಭದ್ರವಾದ ದುರ್ಗವನ್ನು ಮರಾಟರು ಸೆಳಕೊಂಡದ್ದರಿಂದ, ಇನ್ನು ಇವರು ತಮ್ಮ ಮುಂಬಯಿ ದ್ವೀಪವನ್ನು ಸಹಜವಾಗಿ ಕಸಕೊಳ್ಳುವರೆಂದು ಇಂಗ್ಲಿಷರಿಗೆ ಅನಿಸಹತ್ತಿತು. ಮುಂಬಯಿಯೊಳಗಿನ ದುರ್ಗವು ಹನ್ನೊಂದೇ ಘೂಟು ಎತ್ತರವಾಗಿದ್ದಿತು; ಆದ್ದರಿಂದ ಅದರ ಸುತ್ತಲೂ ಕಂದಕವನ್ನು ಅಗಿಸುವದಾದರೂ

ಅಗತ್ಯವಾಗಿತ್ತು. ಆ ಕೆಲಸಕ್ಕಾಗಿ ಬೇಕಾಗುವ ೩೦ ಸಾವಿರ ರೂಪಾಯಿಗಳನ್ನು ೧೦೦ಕ್ಕೆ ೧ರಂತೆ ಹೆಚ್ಚು ಸುಂಕವನ್ನು ಹಾಕಿ ವಸೂಲಮಾಡಬೇಕೆಂದು ಮುಂಬಯಿಯೊಳಗಿನ ದೇಶೀ ವ್ಯಾಪಾರಿಗಳು ಲೇಖೀ ಸಮ್ಮತಿಯನ್ನಿತ್ತರು. ಆ ಲೇಖದಲ್ಲಿ ಮುಂದೆ ವಿವರಿಸಿದ ಸಂಗತಿಯಿರುತ್ತದೆ. "ಇಂಗ್ಲಿಷ ಕಂಪನಿಯ ಆಶ್ರಯದಲ್ಲಿ ನಮಗೆ ಬಹು ಸುಖವೆನಿಸುತ್ತದೆ. ನಮ್ಮ ಸ್ವತ್ತುಗಳು ನಿರ್ಭೀತಿಕವಾಗಿರುತ್ತವೆ. ನಮ್ಮ ಧರ್ಮಗಳ ಕಟ್ಟಳೆಗಳಿಗನುರೂಪವಾಗಿ ನಡೆಕೊಳ್ಳಲಿಕ್ಕೆ ನಮಗೆ ಯಾವ ಕಾಟವೂ ಇರುವದಿಲ್ಲ. ಈ ಸುಖ-ಸಮಾಧಾನಗಳು ನಮ್ಮ ಮಕ್ಕಳು-ಮರಿಗಳಿಗೂ ಲಭಿಸಬೇಕೆಂದು ನಮ್ಮ ಇಚ್ಛೆ ಇರುತ್ತದೆ ಈ ಮುಂಬೈ ದ್ವೀಪಕಲ್ಪವನ್ನು ಬಿಟ್ಟು ಬೇರೆ ಕಡೆಗೆ ಇಷ್ಟು ಸುಖರೂಪದಿಂದ ಸಾವಿರಲಾರೆವು. ಮರಾಟರ ದಾಳಿಗಳು ಸಮೀಪಿಸಿರುತ್ತವೆ; ಆದುದರಿಂದ ಮುಂಬಯಿ ದ್ವೀಪದ ಸಂರಕ್ಷಣೆಗಾಗಿ ನಮ್ಮ ಈ ೩೦ ಸಾವಿರ ರೂಪಾಯಿಗಳ ಚಂದಾಯವನ್ನು ಸ್ವಸಂತೋಷದಿಂದ ಕೊಡುತ್ತೇವೆ." ಈ ಲೇಖದ ಕೆಳಗೆ ಹಿಂದೂ, ಪಾರ್ಶೀ, ಮುಸಲ್ಮಾನ, ಗುಜರಾಥೀ ಮುಂತಾದ ಎಲ್ಲ ಜಾತಿಯ ಹಾಗು ಎಲ್ಲ ಧರ್ಮದ ಜನರ ಸಹಿಗಳಿರುತ್ತವೆ!

ವಸಯಿಯು ಕೈ ಬಿಟ್ಟು ಹೋದದ್ದರಿಂದ ಉತ್ತರಕೊಂಕಣ ಪ್ರಾಂತದೊಳಗಿನ ಫಿರಂಗಿಗಳ ಮುಖ್ಯ ಆಧಾರವು ಇಲ್ಲದಂತಾಯಿತು. ಚೌಲ ಮತ್ತು ಮಹಾಡ(ಬಾಣಕೋಟ ಬಂದರ) ಮುಂತಾದ ಠಾಣ್ಯಗಳನ್ನು ತಾವಾಗಿಯೇ ಬಿಟ್ಟು ಕೊಡಬೇಕೆಂದು ಅವರು ಯೋಚಿಸಿದರು. ಅವರು ಚೌಲವನ್ನು ಇಂಗ್ಲಿಷರಿಗೆ ಕೊಡಹೋದರು. ಬಳಿಕ ಇಂಗ್ಲಿಷರ ಮಧ್ಯಸ್ಥಿಕೆಯಿಂದ ಪೋರ್ತುಗೀಜ ಹಾಗು ಮರಾಟರಲ್ಲಿ ಒಪ್ಪಂದದ ಮಾತುಗಳಿಗೆ ಪ್ರಾರಂಭವಾಯಿತು; ಹಾಗು ಕ್ಯಾಪ್ಟನ್ ಇಂಚಬರ್ಡನು ತಾ|| ೧೪ನೇ ಅಕ್ಟೋಬರ ೧೭೪೦ರಲ್ಲಿ ಪೇಶ್ವೆ ಬಾಜೀರಾಯನಿಗೂ ಗೋವೆಯೊಳಗಿನ ಪೋರ್ತುಗೀಜ ವ್ಹಾಯಿಸರಾಯನಿಗೂ ಒಪ್ಪಂದ ಮಾಡಿಸಿದನು. ಪೋರ್ತುಗೀಜರು ಚೌಲ ಹಾಗು ಮಹಾಡಗಳನ್ನು ಪೇಶ್ವೆಯರಿಗೆ ಕೊಡಬೇಕು. ಅದರಂತೆ ಮರಾಟರಾದರೂ ಸಾಷ್ಟಿಯೊಳಗಿನ ತಮ್ಮ ಸೈನ್ಯವನ್ನು ಹಿಂದಕ್ಕೆ ತರಿಸಿಕೊಳ್ಳಬೇಕು; ಮತ್ತು ಅವರಿವರ ಒಪ್ಪಂದದ ಈ ಕರಾರುಗಳು ಸಂಪೂರ್ತಿಯಾಗುವವರೆಗೆ ಅವೆರಡೂ ದುರ್ಗಗಳನ್ನು ಇಂಗ್ಲಿಷರು ತಮ್ಮ ವಶದಲ್ಲಿಟ್ಟುಕೊಂಡಿರಬೇಕು.

ಪೋರ್ತುಗೀಜರ ನಾಮಶೇಷವಾದ ಬಳಿಕ ಇಂಗ್ಲಿಷರಿಗೂ ಪೇಶ್ವೆಯರಿಗೂ ಪ್ರತ್ಯಕ್ಷವಾದ ಸಂಬಂಧವು ಹೆಚ್ಚಾಯಿತು. ಮರಾಟರ ಸತ್ತೆಯು ಅವರಿಗೆ ತಿಳಿಯಿತಲ್ಲದೆ, ಪ್ರತ್ಯಕ್ಷ ಅನುಭವವೂ ಬರತೊಡಗಿತು. ಆದುದರಿಂದ ಸಾತಾರೆಯಲ್ಲಿ-ಶಾಹುರಾಜನ ದರ್ಬಾರದಲ್ಲಿ ತಮ್ಮ ಪ್ರವೇಶವಾಗಬೇಕೆಂದು ಅವರು ಇಚ್ಛಿಸತೊಡಗಿದರು. ಅದರಂತೆ ೧೭೩೯ರ ಮೇ ತಿಂಗಳಲ್ಲಿ ಕ್ಯಾಪ್ಟನ್ ವುಯಿಲ್ಯಮ್ ಗಾರ್ಡನ್ ಎಂಬ ಹೆಸರಿನ ದಂಡಿನ ಅಮಲದಾರನನ್ನು ಸಾತಾರೆಗೆ ಶಾಹೂಮಹಾರಾಜನ ಭೆಟ್ಟಿಗೆ ಕಳಿಸಿದರು. ಅವನಿಗೆ ಮುಂಬಯಿ ಸರಕಾರದಿಂದ ಗುಪ್ತವಾಗಿ ತಿಳಿಸಲ್ಪಟ್ಟಿತ್ತೇನಂದರೆ,

"ನೀನು ಮೇಲುಪಚಾರದಲ್ಲಿ ಮರಾಟರಿಗೆ ಒಳ್ಳೇ ಅನುಕೂಲನಾಗಿ ನಡೆದಂತೆ ತೋರಿಸಬೇಕು; ಹಾಗು ಶಾಹುವಿನ ದರ್ಬಾರದಲ್ಲಿ ಪೇಶ್ವೆ ಬಾಜೀರಾಯನಿಗೆ ಆಗದವರು ಯಾರು-ಯಾರು ಇರುತ್ತಾರೆಂಬದನ್ನು ಗುಪ್ತವಾಗಿ ತಿಳಕೊಳ್ಳಬೇಕು" ಆದರೆ ಶಾಹುವಿಗಿಂತ ಬಾಜೀರಾಯನೇ ಹೆಚ್ಚು ಪ್ರಬಲನಿದ್ದುದರಿಂದ, ಬಾಜೀರಾಯನೊಡನೆ ಸಂಧಾನವಿಡದ ಹೊರತು ಗತ್ಯಂತರವಿಲ್ಲೆಂಬದನ್ನು ಅವನು ತಿಳಿದನು! ಆ ಕೂಡಲೆ ಇಂಗ್ಲಿಷರು ಕ್ಯಾಪ್ಟನ್ ಇಂಚಬರ್ಡನೊಡನೆ ಬಾಜೀರಾಯನಿಗೆ ಸ್ನೇಹಭಾವದ ಪತ್ರವನ್ನೂ ಕಾಣಿಕೆಗಳನ್ನೂ ಕಳಿಸಿದರು.

ಶಾಹುರಾಜನಿಗೆ ಕ್ಯಾಪ್ಟನ್ ಗಾರ್ಡನ ಇವನೊಡನೆ ಕಾಣಿಕೆ ಕಳಿಸಬೇಕು; ಆದರೆ ಸ್ವಲ್ಪ ಹಣದಲ್ಲಿ ಹೆಚ್ಚಾಗಿ ಬರುವಂಥ ಕಾಜಿನ ಕನ್ನಡಿ ಮುಂತಾದ ವಿಲಾಸೋಪಯುಕ್ತ ಕೀಳು ಜೀನಸುಗಳನ್ನೇ ಕಳಿಸಬೇಕೆಂದು ಮುಂಬಯಿ ಬೋರ್ಡಿನವರು ನಿಶ್ಚಯಿಸಿಕೊಂಡರು. ಗಾರ್ಡನ್ ಸಾಹೇಬನು ೧೨ನೇ ಮೇಕ್ಕೆ ಮುಂಬಯಿಯಿಂದ ಹೊರಟನು. ಅವನೊಡನೆ ಶಿಂಧೆಯ ಕಡೆಯ ಭಿಕಾಜಿಪಂತನೆಂಬೋರ್ವ ಮಾಹಿತಿಗಾರನು ಕಳಿಸಲ್ಪಟ್ಟಿದ್ದನು. ಮುಂಬಯಿ ಕೌನ್ಸಿಲ್ಲದವರು ಗಾರ್ಡನ್ನನಿಗೆ ಅಲ್ಲಿ ಮಾಡಬೇಕಾದ ಕೆಲಸದ ಬಗ್ಗೆ ಈ ಪ್ರಕಾರ ತಿಳಿಹೇಳಿದ್ದರು:—

"ನೀನು ನಿನ್ನ ಸಂಗಡ ಒಯ್ದು ಪತ್ರ ಮತ್ತು ಕಾಣಿಕೆಗಳನ್ನು ಎಂದಿನಂತೆ ಅವರವರಿಗೆ ಮರ್ಯಾದಯಿಂದ ತಲುಪಿಸಬೇಕು. ಶಾಹುಮಹಾರಾಜನ ದರ್ಬಾರದಲ್ಲಿ ಅವನ ಮುಖ್ಯ ಸಲ್ಲಾಗಾರನಾರು? ಆತನ ವಿಚಾರಗಳೇನಿರುವವು? ಮತ್ತು ಆತನ ಹಿತಾಹಿತ ಸಂಬಂಧಗಳು ಯಾವ ಪ್ರಕಾರದವಿವೆ? ಇವನ್ನೆಲ್ಲ ಸೂಕ್ಷ್ಮರೀತಿಯಿಂದ ತಿಳಕೊಳ್ಳಬೇಕು. ಬಾಜೀರಾಯನ ಶತ್ರುಗಳು ಆ ಶಾಹುವಿನ ದರ್ಬಾರದಲ್ಲಿ ಹೆಚ್ಚು ಜನರಿರುತ್ತಾರೆ. ಆದ್ದರಿಂದ ಪ್ರಸಂಗವರಿತು ಅವನ ಬಗ್ಗೆ ಅವರ ಮನಸ್ಸಿನಲ್ಲಿ ಸ್ಪರ್ಧೆಯನ್ನೂ ಹೇವವನ್ನೂ ಉಂಟುಮಾಡಬೇಕು. 'ಬಾಜೀರಾಯನು ಮೊದಲೇ ಪ್ರಬಲನಿದ್ದು, ಪೋರ್ತುಗೀಜರನ್ನು ಗೆದ್ದುದರಿಂದ ಆತನು ಹೆಚ್ಚು ಪ್ರಬಲನಾಗುವನು. ಆತನ ವರ್ಚಸ್ಸಿಗೆ ಅರೆದಾಳ ಹಚ್ಚುವ ಸಂಧಿಯು ಇದೇ ಆಗಿದ.' ಮುಂತಾಗಿ ಅವನ ಶತ್ರುಗಳ ಖಾತ್ರಿಯಾಗುವಂತೆ ಹೇಳಬೇಕು. ನಮ್ಮ ನಿರ್ಬಲತ್ವವನ್ನು ಯಾರ ಕಣ್ಣಿಗೂ ಬೀಳಗೊಡಬಾರದು. "ಬಾಜೀರಾಯನಿಗೆ ನಾವು ಅಂಜುವದಲ್ಲ. ಅವನು ನಮ್ಮ ಮೇಲೆ ಏರಿಬಂದರೆ ನಾವು ನಮ್ಮ ಸಂರಕ್ಷಣ ಮಾಡಿಕೊಂಡು, ಆತನ ಪಾರುಪತ್ಯ ಮಾಡಿ ಕಳಿಸುವೆವು" ಎಂದು ಅವರಿಗ ಭಾಸವಾಗಗೊಡಬೇಕು. ನಮ್ಮ ಮುಖ್ಯ ಉದ್ದೇಶವು ವ್ಯಾಪಾರವು. ನಮಗೆ ಬೇರೆ ಯಾವ ಮಾತೂ ಬೇಡ. ನಾವು ಪೋರ್ತುಗೀಜ ಫಿರಂಗಿಗಳಂತೆ ಯಾರ ಧರ್ಮದಲ್ಲಿಯೂ ಕೈ ಹಾಕುವವರಲ್ಲ. ಈ ದೇಶದಲ್ಲಿ ಮಿಕ್ಕಿ ಉಳಿದ ಮಾಲನ್ನು ನಮ್ಮ ದೇಶಕ್ಕೆ ಒಯ್ದು ಮಾರುವ ನಿಮ್ಮ ಕೆಲಸವನ್ನೇ ನಾವು ಮಾಡಿ, ಅಲ್ಲಿಂದ ಹೇರಳವಾದ ದುಡ್ಡನ್ನೂ, ಇಲ್ಲಿ ಸಿಗದಿರುವ ಉತ್ತಮ ಪ್ರಕಾರದ ಜೀನಸುಗಳನ್ನೂ ನಿಮ್ಮಲ್ಲಿಗೆ ತರುತ್ತಿರುತ್ತೇವೆ. ಮೇಲಾಗಿ

ನಾವು ನಿಮಗೆ ಸಾಕಷ್ಟು ಸುಂಕವನ್ನೂ ಕೊಡುತ್ತಿರುತ್ತೇವೆ. ಆದುದರಿಂದ ಫಮ್ಮ ಈ ಉದ್ಯೋಗವು ಒಟ್ಟಿನಲ್ಲಿ ನಿಮ್ಮ-ಮರಾಟರ-ಲಾಭಕ್ಕಾಗಿಯೇ ನಡೆದಿರುವದೆಂದು ಅವರಿಗೆ ತಿಳಿಹೇಳಬೇಕು!"

ಗಾರ್ಡನ ಸಾಹೇಬನು ಮೇ ೨೩ಕ್ಕೆ ಸಾತಾರೆಯ ಹತ್ತರ ಬಂದನು. ೨೫ಕ್ಕೆ ಶ್ರೀಪತರಾವ ಪ್ರತಿನಿಧಿಯ ಕಾರಕೂನನಾದ ಅಂತಾಜಿಪಂತನು ಆತನನ್ನು ಸತ್ಕರಿಸಿ, ಸ್ವಾಗತ ಮಾಡಿದನು; ಹಾಗು ಆಗ ಶಾಹುರಾಜರು ಸಾತಾರೆಯಲ್ಲಿರದ್ದರಿಂದ ಅವನ ಸಂಗಡ ಚೌಕಿಯನ್ನು ಕೊಟ್ಟು ಅವನನ್ನು ರಹಿಮತಪುರದ ಮೇಲಿಂದ ಶಾಹೂನ ಕಡೆಗೆ ಕಳುಹಿಸಿದನು. ಜೂನ ೩ಕ್ಕೆ ಶ್ರೀಪತರಾವ ಪ್ರತಿನಿಧಿಗೂ ಗಾರ್ಡನ್ನನಿಗೂ ಭೆಟ್ಟಿಯಾಯಿತು. ೭ನೇ ತಾರೀಖಿಗೆ ಅವನನ್ನು ಶಾಹುವಿಗೆ ಭೆಟ್ಟಿಮಾಡಿಸಿದರು. ಕುಶಲಪ್ರಶ್ನಗಳಾದ ನಂತರ ಶಾಹೂರಾಜನು ಅವನನ್ನು ಕುರಿತು:-"ಮರಾಟರ ಅಂಜಿಕೆಯು ಇಂಗ್ಲಿಷರಿಗೆ ತೋರಹತ್ತಿದ್ದರಿಂದ, ಮುಂಬಯಿಯ ಇಂಗ್ಲಿಷರು ತಮ್ಮ ವಕೀಲನನ್ನು ನಮ್ಮ ಕಡೆಗೆ ಕಳುಹಿಸುವ ತೊಂದರೆ ತಕ್ಕೊಂಡರೋ ಏನು?" ಎಂದು ಪ್ರಶ್ನೆ ಮಾಡಲು "ಮರಾಟರ ಅಂಜಿಕೆಯಿಂದಲ್ಲ; ಕೇವಲ ಅವರ ಸ್ನೇಹ ಸಂಪಾದಿಸಬೇಕೆಂಬ ಇಚ್ಛೆಯೇ ನಾನು ಇಲ್ಲಿಗೆ ಬಂದ ನಿಜವಾದ ಕಾರಣವು." ಎಂದು ಅವನು ಉತ್ತರವನ್ನಿತ್ತನು. ಆ ವಕೀಲನು ತಂದ ಸುಂದರವಾದ ಕನ್ನಡಿಗಳನ್ನೂ ಚಿತ್ರವಿಚಿತ್ರವಾದ ಪಕ್ಷಿಗಳನ್ನೂ ಕಂಡು ಶಾಹುವು ಮೋದಗೊಂಡನು; ಹಾಗು ಇಂಗ್ಲಿಷರೊಡನೆ ಸ್ನೇಹಭಾವದಿಂದ ವರ್ತಿಸುವ ಬಗ್ಗೆ ಆಶ್ವಾಸನವನ್ನಿತ್ತನು; ಆದರೆ ಬಾಜೀರಾಯನೇ ಆ ದರ್ಬಾರದಲ್ಲಿ ಪ್ರಬಲನಾಗಿದ್ದುದರಿಂದ, ಶಾಹುವಿನ ಈ ಆಶ್ವಾಸನಕ್ಕೆ ನಿಜವಾದ ಬೆಲೆಯಿಲ್ಲೆಂಬದನ್ನು ಆ ಧೂರ್ತ ವಕೀಲನು ತಟ್ಟನೆ ತಿಳಿದುಕೊಂಡನು. ಬಾಜೀರಾಯ ಮತ್ತು ಚಿಮಣಾಜಿ ಅಪ್ಪಾ ಇವರು ಇಂಗ್ಲಿಷರಿಗೆ ವಿರುದ್ಧರಾಗಿರುವರೆಂಬದನ್ನು ತಿಳಿದು, ಶಾಹುವು:—"ಈ ಇಂಗ್ಲಿಷ ಜನರು ಸಜ್ಜನರಾಗಿ ತೋರುತ್ತಾರೆ; ನಾವು ಇವರಿಗೆ ಆಶ್ರಯ ಕೊಟ್ಟರೆ, ಬಾಜೀರಾಯನು ಬೇಡೆನ್ನುತ್ತಾನೇನು?" ಎಂದನು.

ಗಾರ್ಡನ್ ಸಾಹೇಬನು ರಾಣಿ ವೀರೂಬಾಯಿಗೂ ಸನ್ಮಾನದಶಕವಾದ ಪತ್ರ-ಕಾಣಿಕೆಗಳನ್ನು ಕಳುಹಿಸಿದನು. ಬಾಜೀರಾಯನ ಮಗನಾದ ನಾನಾಸಾಹೇಬನಿಗೂ ಆ ಸಾಹೇಬನು ಭೆಟ್ಟಿಯಾದನು. ಇಂಗ್ಲಿಷರು ತಮ್ಮ ವಕೀಲನನ್ನು ಈ ದರ್ಬಾರಿಗೆ ಕಳುಹಿಸಿದ ಕಾರಣವೇನೆಂಬ ಬಗ್ಗೆ ನಾನಾಸಾಹೇಬನು ಬಗೆ ಬಗೆಯಿಂದ ಕೇಳಹತ್ತಿದನು. ಅದರಿಂದ ಈತನು ಇಂಗ್ಲಿಷರನ್ನು ಹೆಚ್ಚಾಗಿ ದ್ವೇಷಿಸುತ್ತಾನೆಂಬದು ಆ ಗಾರ್ಡನ್ ಸಾಹೇಬನ ಮನದಟ್ಟಾಯಿತು ಆ ಕಾಲಕ್ಕೆ ಬಾಜೀರಾಯನು ಬರ್ಹಾಣಪುರದ ಕಡೆಗೆ ಹೋಗಿದ್ದನು; ಮತ್ತು ನಾದಿರಶಹನು ದಕ್ಷಿಣಕ್ಕೆ ಮರಾಟರ ಮೇಲೆ ಸ್ವಾರೀ ಮಾಡಲಿಕ್ಕೆ ಬರುತ್ತಾನೆಂದು ಹೂಲಿಗಳೇಳುತ್ತಿದ್ದವು. ತಾ||೨೭ನೇ ಜೂನಕ್ಕೆ ಆದ ಸಂಭಾಷಣದಲ್ಲಿ ಶಾಹುವು ಗಾರ್ಡನ್ನನನ್ನು ಕುರಿತು:—ನೀವು ನಮ್ಮ ಆಂಗ್ರೇನಿಗೆ ತೊಂದರೆಯನ್ನೇಕೆ ಕೊಡುತ್ತೀರೆಂದು ಕೇಳಿದನು. ಅದಕ್ಕೆ ಸಮುದ್ರ ದಂಡೆಯ

ನಮ್ಮ ವ್ಯಾಪಾರಕ್ಕೆ ಅವನೇ ತೊಂದರೆ ಕೊಡುತ್ತಾನೆಂದು ಆ ವಕೀಲನು ಹೇಳಿದನು. ೩೦ನೇ ಜೂನಕ್ಕೆ ಗಾರ್ಡನ ಸಾಹೇಬನು ಶಾಹೂರಾಜನ ಛಾವಣಿಯಿಂದ ಹಿಂದಿರುಗಿದನು; ಹಾಗು ೧೪ನೇ ಜುಲೈ ದಿವಸ ಮುಂಬಯಿಗೆ ಹೋಗಿ ತಲುಪಿದನು. "ಠಾಣೆ ಮತ್ತು ಸಾಷ್ಟಿಗಳನ್ನು ತಕ್ಕೊಂಡದ್ದು ಶಾಹುವಿಗೆ ಸಮ್ಮತವಾದ ಸಂಗತಿಯಾಗಿತ್ತು; ಆದರೆ ವಸಯಿಯ ಮೇಲೆ ದಾಳಿಯನ್ನಿಕ್ಕಿದ್ದು ಆತನಿಗೆ ಸೇರಲಿಲ್ಲ. ಬಾಜೀರಾಯನ ಮನಸ್ಸಿನಲ್ಲಿ ಮುಂಬಯಿಯ ಮೇಲೆ ದಾಳಿಯನ್ನಿಕ್ಕುವದಿರಲಿಲ್ಲ. ಪೇಶ್ವೆಯ ಹೊರತು ಮಿಕ್ಕವರೆಲ್ಲರೂ ಇಂಗ್ಲಿಷರ ವಿಷಯಕ್ಕೆ ಸಹಾನುಭೂತಿಯುಳ್ಳವರಾಗಿರುತ್ತಾರೆ. ಬಾಜೀರಾಯನ ಮಹತ್ವಾಕಾಂಕ್ಷೆಯು ಹೆಚ್ಚುತ್ತಲಿದೆ. ಮೊಗಲರ ನಾಡಿನಲ್ಲಿ ಹೆಚ್ಚು ಹಣವನ್ನು ಲೂಟಿಮಾಡಿ, ಹೆಚ್ಚು ಸೈನ್ಯವನ್ನು ತನ್ನ ಕೈಕೆಳಗಿಟ್ಟುಕೊಳ್ಳಬೇಕೆಂದು ಅವನ ಇಚ್ಛೆಯಿರುತ್ತದೆ. ಶಾಹೂರಾಜನ ಹತ್ತರ ೨೬ ಸಾವಿರ ದಂಡೂ ಬಾಜೀರಾಯನ ಹತ್ತರ ೬೦ ಸಾವಿರ ದಂಡೂ ಇರುತ್ತಿದ್ದು, ಇದಕ್ಕೂ ಹೆಚ್ಚು ದಂಡು ಬೇಕಾದಾಗ ಮರಾಟರು ಕೂಡಲೆ ಅವರಿಗೆ ನೆರವಾಗುವರು ಬಾಜೀರಾಯನು ತನ್ನ ಇಂಗಿತಗಳನ್ನು ಯಾವಾಗಲೂ ಗುಪ್ತವಾಗಿಟ್ಟಿರುತ್ತಾನೆ. ಅವನ ದಂಡಿನವರಿಗೆ ತಾವು ನಾಳೆ ಎತ್ತ ಕಡೆಗೆ ಹೊರಡಬೇಕೆಂಬ ಸುದ್ದಿಯು ಸ್ವಲ್ಪ ಕೂಡ ತಿಳಿದಿರುವದಿಲ್ಲ; ಆದರೆ ಆ ದಂಡಾಳುಗಳು ಬಾಜೀರಾಯನಲ್ಲಿ ಒಳ್ಳೇ ನಂಬಿಗೆಯಿಂದಿರುತ್ತಾರೆ ತಾತ್ಪರ್ಯವಿಷ್ಟೇ, ಬಾಜೀರಾಯನು ತೀರ ಪ್ರಬಲನಾಗಿದ್ದು, ಶಾಹುವಿನ ದರ್ಬಾರದ ಮಿಕ್ಕ ಏಳು ಜನ ಮಂತ್ರಿಗಳು ವಿರುದ್ಧರಾದರೂ ಕೂಡ ಅವನು ತನ್ನ ಮನಸ್ಸಿನಂತೆ ಮಾಡಬಲ್ಲವನಾಗಿರುತ್ತಾನೆ; ಆದುದರಿಂದ ಬಾಜೀರಾಯನು ನಮ್ಮ ಬಗ್ಗೆ ಸಂತಾಪಗೊಳ್ಳದಂತೆ ನಾವು ಎಚ್ಚರದಿಂದ ವರ್ತಿಸಬೇಕು. ಪ್ರಣೇಯೊಳಗಿನ ಅಂತಾಜಿ ನಾಯಿಕ ಬೆಹರೆ ಎಂಬ ವಣಿಕನು ಮುಂಬಯಿಯಲ್ಲಿ ತನ್ನ ಗುಮಾಸ್ತನನ್ನಿಟ್ಟು ವ್ಯಾಪಾರಮಾಡಬೇಕೆಂದಿರುತ್ತಾನೆ. ಆ ಬೆಹರೆಯು ಬಾಜೀರಾಯನಿಗೆ ಕೇವಲ ವಿಶ್ವಾಸಿಗನು, ಆದುದರಿಂದ ನಾವು ಆತನ ಅಂಬೋಣವನ್ನು ಪರ್ಯಾಲೋಚಿಸಬೇಕು!" ಇತ್ಯಾದಿ ಸಂಗತಿಗಳನ್ನು ಗಾರ್ಡನ್ ಸಾಹೇಬನು ಮರಳಿ ಬಂದ ಮೇಲೆ ಮುಂಬಯಿ ಕೌನ್ಸಿಲ್ಲಿಗೆ ತಿಳಿಸಿದನು.

ತಾ|| ೨೦-೭-೧೭೩೯ರ ಮುಂಬಯಿ ಕೌನ್ಸಿಲ್ಲಿನಲ್ಲಿ ಮಿನೀಟ ಬುಕ್ಕಿನಲ್ಲಿ ಹೀಗೆ ಬರೆಯಲ್ಪಟ್ಟಿದೆ:—"ವ್ಯಾಪಾರದಿಂದಾಗುವ ಲಾಭವು ಮರಾಟರಿಗೆ ತಿಳಿಯುತ್ತಿದೆ; ಆದರೆ ಬಾಜೀರಾಯನು ನಮ್ಮ ಮುಂಬಯಿ ಬಂದರದ ಕಡೆಗೆ ಕಡೆಗಣ್ಣಿನಿಂದ ನೋಡುತ್ತಿದ್ದು, ನಮ್ಮನ್ನು ತನ್ನ ಅಳವಿನೊಳಗೆ ತಂದುಕೊಳ್ಳುವ ಬಗ್ಗೆ ಆತನು ಯಾವಾಗಲೂ ಸಾವಧನಾಗಿರುತ್ತಾನೆ; ಆದರೂ ಎಲ್ಲ ಬಗೆಯಿಂದ ಆಲೋಚಿಸಿದರೆ, ಕ್ಯಾಪ್ಟನ್ ಇಂಚಬರ್ಡನು ಅವನೊಡನೆ ಮಾಡಿದ ಒಪ್ಪಂದಕ್ಕೆ ಸಮ್ಮತಿಯನ್ನೀಯಬೇಕು. ವಸಯಿಯನ್ನು ಗೆದ್ದುಕೊಂಡು ಮರಾಟರು ಪ್ರಬಲರಾಗಿರುವದರಿಂದ ಸದ್ಯಕ್ಕೆ ಅವರೊಡನೆ ಹಗೆತನ ಬೆಳಿಸುವದು ಸರಿಯಲ್ಲ. ಸಮುದ್ರದಲ್ಲಿ ನಾವು ತುಸ ಹೆಚ್ಚು ಪ್ರಬಲರಾಗಿದ್ದರೂ, ಭೂಮಿಯ ಮೇಲಿನ ಅವರ ಪ್ರಾಬಲ್ಯವು ಮಿತಿಮೀರಿದೆ."

ಗಾರ್ಡನ್ನನು ಮರಳಿ ಹೋಗುವಾಗ ಶಾಹುರಾಜನು ಅವನೊಡನೆ ಮುಂಬಯಿ ಕೌನ್ಸಿಲ್ಲಿಗೆ ಕಳಿಸಿದ ಪತ್ರವು ಈ ಪ್ರಕಾರದ್ದಾಗಿತ್ತು:—"ನೀವು ಕ್ಯಾ. ಗಾರ್ಡನ್ನ ರೊಡನೆ ಕಳಿಸಿದ ಪತ್ರ ತಲುಪಿ ಸಂಗತಿ ತಿಳಿಯಿತು. ನಾವು ಮೊದಲಿನಿಂದ ಇಂಗಿಷ ರೊಡನೆ ಹೇಗೆ ಮೈತ್ರಿಯಿಂದಿರುವೆವ್ರೋ, ಈಗಲೂ ಹಾಗೆಯೇ ಇರುತ್ತೇವೆ. ಆ ಮೈತ್ರಿಗೆ ನಿಮ್ಮಿಂದ ಇದುವರೆಗೆ ಯಾವ ಬಾಧಕವೂ ಉಂಟಾಗಿಲ್ಲ; ಮುಂದಾದರೂ ಉಂಟಾಗಲಾರದು. ನಿಮ್ಮ ವ್ಯಾಪಾರದ ಮೇಲೆ ನಮ್ಮ ಕೃಪಾದೃಷ್ಟಿಯಿದ್ದೇ ಇರುವದು. ಆಗಾಗ್ಗೆ ಪತ್ರ ಕಳಿಸಿ. ಸ್ನೇಹವನ್ನು ಬೆಳಿಸುತ್ತಿರಬೇಕು."

ಶಾಹುರಾಜನು ಇದೇ ಕಾಲಕ್ಕೆ ಬಾಜೀರಾಯನಿಗೆ ಈ ಪ್ರಕಾರ ಪತ್ರಬರೆದಿದ್ದನು. ಇಂಗ್ಲಿಷರು ಮೊದಲಿನಿಂದಲೂ ನಮ್ಮೊಡನೆ ಇಮಾನಪೂರ್ವಕ ಸ್ನೇಹವನ್ನಿಡುತ್ತ ಬಂದಿರುತ್ತಾರೆ. ಮುಂಬಯಿಯ ಗವರ್ನರ ಸ್ಟೀಫನ ಲಾ ಎಂಬವರಿಂದ ಕಳಿಸಲ್ಪಟ್ಟ ಕ್ಯಾ. ಗಾರ್ಡನ್ನನೆಂಬ ವಕೀಲನು ನಮಗೆ ಭೆಟ್ಟಿಯಾಗಿದ್ದನು. ಅವರು ನಮ್ಮೊಡನೆ ಸ್ನೇಹ ದಿಂದ ವರ್ತಿಸಲು ಬಯಸುತ್ತಾರೆ. ಅವರು ಕೇವಲ ವ್ಯಾಪಾರೀ ಒಲವಿನವರಾಗಿರು ತ್ತಾರೆ; ಹಾಗು ಅವರು ನಮ್ಮೊಡನೆ ನಿಷ್ಕಪಟದಿಂದ ವರ್ತಿಸುತ್ತ ಬಂದಿರುತ್ತಾರೆ. ಅವರು ತಮ್ಮ ವಚನಕ್ಕೆ ಭಂಗ ತಂದಿರುವದಿಲ್ಲ; ಕಾರಣ ನೀವೂ ಅವರೊಡನೆ ಮೈತ್ರಿ ಯನ್ನಿಡಬೇಕು."

ಚಿಮಣಾಜಿ ಅಪ್ಪಾನಿಗೂ ಶಾಹುವಿನಿಂದ ಇಂಥದೇ ಒಂದು ಪತ್ರವು ಹೋಗಿತ್ತು. ೨೬-೬-೧೭೩೯ಕ್ಕೆ ಬಾಜಿರಾಯನು ಮುಂಬಯಿಯ ಗವರ್ನರನಿಗೆ ಕಳಿಸಿದ ಪತ್ರವು ಹೀಗೆ ಇದ್ದಿತು:—"ತಾವು ಶಾಹುರಾಜರ ಕೂಡ ಸ್ನೇಹದಿಂದ ವರ್ತಿಸಬೇಕೆಂದು ಇಚ್ಛಿ ಸುವದು ವಿಹಿತವೇ ಆಗಿದೆ. ನಾವು ಜಯಶಾಲಿಗಳಾದದ್ದಕ್ಕಾಗಿ ನಿಮಗೆ ಸಮಾಧಾನ ವೆನಿಸಿತೆಂಬದನ್ನು ಕೇಳಿ ಸಂತೋಷವಾಯಿತು. ನಿಮ್ಮ-ನಮ್ಮಗಳ ವ್ಯಾಪಾರವು ಬೆಳೆಯಬೇಕೆಂದೂ ರಾಜರ ಹಾಗು ಪ್ರಜೆಗಳ ಲಾಭವಾಗಬೇಕೆಂದೂ ನಮ್ಮ ಇಚ್ಛೆ ಯಿರುತ್ತದೆ."

ಚಿಮಣಾಜಿ ಅಪ್ಪಾನ ಕಡೆಗೆ ಇಂಚಬರ್ಡ ಸಾಹೇಬನು ಇದೇ ಕಾಲಕ್ಕೆ ವಕೀಲ ನೆಂದು ಕಳಿಸಲ್ಪಟ್ಟಿದ್ದನು. ಅವರಿಬ್ಬರಿಗೂ ವಸಯಿಯಲ್ಲಿ ಭೆಟ್ಟಿಯಾಯಿತು. 'ವಸ ಯಿಯ ಮುತ್ತಿಗೆಯ ಕಾಲಕ್ಕೆ ಇಂಗ್ಲಿಷರು ಪೋರ್ತುಗೀಜರಿಗೆ ಸಹಾಯ ಮಾಡಿದ್ದ ರಿಂದ ನಮಗೆ ಬಹಳ ತೊಂದರೆಯಾಯಿತೆ'ಂದು ಚಿಮಣಾಜಿಯು ಹೇಳಿದನು. ಅದಕ್ಕೆ ಇಂಚಬರ್ಡನು: "ಇನ್ನು ನೀವೇ ವಸಯಿಯ ಒಡೆಯರಾದಿರಿ; ನಿಮಗೂ ನಾವು ಸ್ನೇಹಭಾವದಿಂದ ಸಹಾಯವನ್ನೀಯುವೆವು' ಎಂದನು. 'ನಾವು ಇನ್ನು ಮೇಲೆ ದಮನ, ಚೌಲ ಮುಂತಾದ ಠಾಣ್ಯಗಳನ್ನುಗೆದ್ದುಕೊಂಡು ನಮ್ಮ ಹಡಗುಪಡೆಯನ್ನು ಬೆಳಿಸುತ್ತೇವೆ.' ಎಂದು ಚಿಮಣಾಜಿ ನುಡಿಯಲು, ಅದೇ ಸಂಧಿಯನ್ನು ಸಾಧಿಸಿ ಪ್ರಬಲ ಹಡಗುಪಡೆಯ ಮೂಲಕ ಪಶ್ಚಿಮ ಸಮುದ್ರದಂಡೆಯ ಮೇಲಿನ ಕೊಳೆ ಸುಲಿಗೆಗಾರರ ನಾಶಮಾಡಬಹುದೆಂದು ಸೂಚಿಸಿ, ಅನಿರ್ಬಂಧಕ ವ್ಯಾಪಾರದಿಂದಾಗುವ

ಲಾಭದ ಬಗ್ಗೆ ಇಂಚಬರ್ಡನು ಚಿಮಣಾಜಿಗೆ ಹೀಗೆ ಹೇಳಿದನು:—"ನಿಮ್ಮ ದೇಶವು ಸುಖಸಮೃದ್ಧಿಯುಳ್ಳದ್ದಾಗಿದೆ. ನೀವು ವ್ಯಾಪಾರವನ್ನು ಬೆಳೆಯುಗೊಡಿರಿ. ಸುಂಕವನ್ನು ಕಡಿಮೆ ಮಾಡಿರಿ. ಪರದೇಶದವರ ಹಡಗುಗಳನ್ನು ನಿಮ್ಮ ಪ್ರತಿಯೊಂದು ಬಂದರಕ್ಕೆ ಬರಗೊಡಿರಿ. ಅವರ ವಖಾರ ಮುಂತಾದವುಗಳನ್ನು ಸಂರಕ್ಷಿಸಿರಿ; ಅಂದರೆ ನಿಮ್ಮ ದೇಶಕ್ಕೆ ಚನ್ನಾಗಿ ಲಾಭವಾದೀತು."

———

೩ನೆಯ ಪರಿಚ್ಛೇದ

## ನಾನಾಸಾಹೇಬನ ಕಾಲ

—:※:—

ತಾ||೧೨-೭-೧೭೩೯ಕ್ಕೆ ಇಂಚಬರ್ಡನು ಮರಾಟರೊಡನೆ ಒಪ್ಪಂದ ಮಾಡಿಕೊಳ್ಳಲಿಕ್ಕೆ ಬಂದಾಗ ಚಿಮಣಾಜಿಯು ಬೇನೆಬಿದ್ದದ್ದರಿಂದ ಅವನು ಪ್ರತ್ಯಕ್ಷ ಮಾ-ತಾಡಲಿಲ್ಲ. ರಾಘೋಬನೇ ಇಂಚಬರ್ಡನೊಡನೆ ಪ್ರಾಮುಖ್ಯವಾಗಿ ಮಾತಾಡಿದನು. ಇಂಚಬರ್ಡನಿಗೆ ಮರಾಟರ ಆ ಒಪ್ಪಂದದ ಶರ್ತುಗಳು ಸಮ್ಮತವಾಗಿರಲಿಲ್ಲ. ಅದರಿಂದ ಅವನು ಮುಂಬಯಿ ಕೌನ್ಸಿಲ್ಲಿಗೆ:—"ಒಟ್ಟಿನಲ್ಲಿ ಮರಾಟರು ಬರೆಯುವದೊಂದು ಮಾಡುವದಿನ್ನೊಂದು! ಆದರೆ ಒಪ್ಪಂದ ಮಾಡಿಕೊಳ್ಳಲಿಕ್ಕೆ ಇದು ತಕ್ಕ ಸಮಯವಾದುದರಿಂದ ಅದನ್ನು ಮಾಡಿಕೊಳ್ಳುವದೇ ವಿಹಿತವು". ಎಂದು ಬರೆದು ತಿಳಿಸಿದನು. ಈ ಒಪ್ಪಂದದ ಮೂಲಕ ಇಂಗ್ಲಿಷರಿಗೆ ಪೇಶ್ವಾಯಿ ನಾಡಿನಲ್ಲಿ ವ್ಯಾಪಾರ ಮಾಡಲಿಕ್ಕೆ ಆಸ್ಪದ ದೊರೆಯಿತು.

೧೭೫೫ರಲ್ಲಿ ಆಂಗ್ರೇನನ್ನು ಬೊಗ್ಗು ಬಡಿಯುವದಕ್ಕೆ ಪೇಶ್ವೆಯವರು ಇಂಗ್ಲಿಷರ ಸಹಾಯ ತಕ್ಕೊಂಡರು. ಆಂಗ್ರೇನ ಸಮುದ್ರದ ವರ್ಚಸ್ಸಿನ ಮೂಲಕ ಇಂಗ್ಲಿಷರ ಸಿಟ್ಟು ಆತನ ಮೇಲೆ ಇದ್ದೇ ಇತ್ತು. ಅದರಿಂದ ಆತನ ವಿರುದ್ಧ ಪೇಶ್ವೆಯವರು ಹೊರಟಿದ್ದು ಅವರಿಗೆ ಪಥ್ಯಕರವಾಗಿಯೇ ಪರಿಣಮಿಸಿತು. ಮಾರ್ಚ ೨೨ನೇ ತಾರೀಖಿಗೆ ಕ್ಯಾಪ್ಟನ್ ಜೇಮ್ಸನ ೪ ಯುದ್ಧದ ಹಡಗುಗಳೂ ಮರಾಟರ ೬೭ ಸಣ್ಣ-ದೊಡ್ಡ ಹಡಗುಗಳೂ ಕೂಡಿ ಸುವರ್ಣದುರ್ಗವನ್ನು ಮುತ್ತಿದವು. ಮುತ್ತಿಗೆಯಲ್ಲಿ ಕೈಗೆ ಕೈ ಹತ್ತಿ ಕಾದುವ ಕೆಲಸವು ಮರಾಟರ ಕಡೆಗೆ; ಮತ್ತು ತೋಫಿನ ಕೆಲಸ ಹಾಗು ಗುಂಡು ಹೊಡೆಯುವ ಕೆಲಸಗಳು ಇಂಗ್ಲಿಷರ ಕಡೆಗೆ ವಿಭಾಗ ಮಾಡಲ್ಪಟ್ಟಿದ್ದವು. ಈ ರೀತಿಯಾಗಿ ಆಂಗ್ರೇಯ ಆ ದುರ್ಗವನ್ನು ತಕ್ಕೊಂಡು, ಇಂಗ್ಲಿಷರು ಇಪ್ಪತ್ತು ವರ್ಷದೊಳಗಿನ ಆ ಮೊದಲನೇ ಜಯವನ್ನು ಸಂಪಾದಿಸಿದರು! ಬಳಿಕ ಇಂಗ್ಲಿಷರು ಬಾಣಕೋಟದ ದುರ್ಗವನ್ನು ತಕ್ಕೊಂಡರು. ಅದೇ ವರ್ಷದ ಎಪ್ರೇಲ ತಿಂಗಳಲ್ಲಿ ಪೇಶ್ವೆ ನಾನಾಸಾಹೇಬನ ವಿನಂತಿಯ ಮೇರೆಗೆ ರತ್ನಾಗಿರಿ ಕೋಟೆಯನ್ನು ತಕ್ಕೊಳ್ಳುವದಕ್ಕಾಗಿ ಮುಂಬಯಿಯವರು ಕ್ಯಾಪ್ಟನ್ ಜೇಮ್ಸನನ್ನು ಮತ್ತೆ ಕಳುಹಿಸಿದರು.

ಮುಂದಿನ ವರ್ಷ ರಾಬರ್ಟ ಕ್ಲೈವ ಮತ್ತು ಅಡ್ಮಿರಲ್ ವಾಟಸನ್ನರ ಸರ

ಕಾರೀ ಯುದ್ಧದ ಹಡಗುಗಳು ಮುಂಬಯಿಗೆ ಬಂದವು; ಅವರಿಗೆ ಸುಲಿಗೆಯ ಆಶೆ ದೋರಿ, ಅವರ ನೆರವಿನಿಂದ ಇಂಗ್ಲಿಷರು ಮತ್ತೆ ಆಂಗ್ರೇಯ ಮೇಲೆ ದಾಳಿಯನ್ನಿಟ್ಟರು ಈ ದಾಳಿಯಲ್ಲಿ ಮರಾಟರೂ ಕೂಡಿದ್ದರು. ಈ ಸಾರೆ ಅವರು ವಿಜಯದುರ್ಗದ ಭದ್ರವಾದ ಕೋಟೆಯನ್ನು ನೆಳಕೊಂಡರು. ಆ ದಾಳಿಗೆ ಕರ್ನಲ್ಲ ಕ್ಲೈವನು ಸ್ವತಃ ಬಂದಿದ್ದನು. ದುರ್ಗವನ್ನು ಇಂಗ್ಲಿಷರೇ ಮೊದಲು ಏರಿದ್ದರಿಂದ ಅವರ ನಿಶಾನೆಯೇ ಅಲ್ಲಿ ಹಚ್ಚಲ್ಪಟ್ಟಿತು; ಆದರೆ ಪೇಶವೆಯವರಿಗೆ ಅದು ಸಮ್ಮತವಾಗಿರಲಿಲ್ಲ. ವಿಜಯದುರ್ಗಕ್ಕೆ ಪ್ರತಿಯಾಗಿ ಇಂಗ್ಲಿಷರು ಬಾಣಕೋಟವನ್ನು ಪೇಶ್ವೆಯರಿಗೆ ಕೊಡಹೋದರು; ಮರಾಟರು ಅದನ್ನು ಸ್ವೀಕರಿಸದಾದರು. ಆಗ ಅವರು ಇಂಗ್ಲಿಷರಿಗೆ:—"ಯುರೋಪಿಯನ್ನರು ಪ್ರಾಯಶಃ ಇಮಾನೀ ಜನರಿರುತ್ತಾರೆಂದು ತಿಳಿದೇ ನಾವು ನಿಮ್ಮೊಡನೆ ಒಪ್ಪಂದ ಮಾಡಿಕೊಂಡೆವು. ಹೀಗಿದ್ದು, ಈ ತರದ ಗೊಂದಲವೇಕೆ?" ಇದಕ್ಕೆ ಗವರ್ನರ ಬೋರಶೇಅರನು:—"ಈ ಅದಲು ಬದಲುಗಳು ನಿಮಗೆ ಸಮ್ಮತವಾಗಬಹುದೆಂದು ತಿಳಿದೇ ನಾವು ಸೂಚಿಸಿದ್ದೆವು" ಎಂದು ಬರೆದನು! ಕಡೆಗೆ ಮುಂಬಯಿಯ ವಕೀಲನೆಂದು ಸ್ಪೆನ್ಸರಸಾಹೇಬನು ಪುಣೆಗೆ ನಾನಾಸಾಹೇಬನ ಕಡೆಗೆ ಬಂದನು; ಹಾಗು ೧೨-೧೦-೧೭೫೬ಕ್ಕೆ ಅಲ್ಲಿ ಒಪ್ಪಂಡವಾಯಿತು. ಆ ಒಪ್ಪಂದದಲ್ಲಿ "ಮರಾಟರಿಗೆ ವಿಜಯದುರ್ಗವು ದೊರೆಯಬೇಕು; ಬಾಣಕೋಟವು ಇಂಗ್ಲಿಷರಿಗೇ ಇರಬೇಕು. ಬಾಣಕೋಟದ ಖರ್ಚಿಗಾಗಿ ಮರಾಟರು ಹತ್ತುಗ್ರಾಮಗಳನ್ನು ಸ್ವತಂತ್ರವಾಗಿ ಹಚ್ಚಿಕೊಡಬೇಕು; ಹಾಗು ಡಚ್ಚ ಮುಂತಾದ ಬೇರೆ ಯುರೋಪಿಯನ್ನರಿಗೆ ಪೇಶ್ವಾಯಿ ರಾಜ್ಯದಲ್ಲಿ ವ್ಯಾಪಾರಮಾಡಲಿಕ್ಕೆ ಕಟ್ಟುಮಾಡಬೇಕು."

೧೭೫೬ನೇ ಇಸವಿಯ ಜುಲೈ ೨೧ಕ್ಕೆ ಪೇಶ್ವೆ ನಾನಾಸಾಹೇಬನು ಮುಂಬಯಿಯ ಇಂಗ್ಲಿಷರಿಗೆ ಒಂದು ಪತ್ರ ಬರೆದನು. ಅದರ ಸಂಗತಿಯು ಹೀಗೆ ಇದ್ದಿತು:—"ವಿಜಯದುರ್ಗವ ಕೋಟೆಗಾಗಿಯೇ ನಾವು ಆಂಗ್ರೇಯೊಡನೆ ಕಾಳಗ ಮಾಡಿದೆವು. ಹೀಗಿದ್ದು ನಾವು ಅದನ್ನು ನಿಮಗೆ ಬಿಟ್ಟುಕೊಡುವದೆಂತು? ಎಲ್ಲ ಯುರೋಪಿಯನ್ನ ಜನರಲ್ಲಿ ಇಂಗ್ಲಿಷ ಜನರು ತಮ್ಮ ವಚನಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆಂಬದನ್ನು ಕೇಳಿಯೇ ನಾವು ನಿಮ್ಮ ಕೂಡ ಹಾಗು ನಿಮ್ಮ ರಾಜನ ಸ್ನೇಹ ಬೆಳೆಸಿರುತ್ತೇವೆ. ವಿಜಯದುರ್ಗವು ನಮ್ಮ ನಾಡೊಳಗಿನ ದುರ್ಗವಾಗಿರುತ್ತದೆ. ಅದನ್ನು ಕೈವಶ ಮಾಡಿಕೊಳ್ಳಬೇಕೆಂದೇ ನಾವು ಯುದ್ಧ ಮಾಡಿದೆವು. ನೀವು ಇಂಗ್ಲಿಷ ಜನಾಂಗದವರಿದ್ದು, ವಚನಭ್ರಷ್ಟರಾಗುವದು ಸರಿಯಲ್ಲ. ಆದುದರಿಂದ ಆ ದುರ್ಗವನ್ನು ನಮ್ಮ ಜನರಿಗೆ ಒಪ್ಪಿಸಿ ಬಿಡಿರಿ."

ಇದಕ್ಕೆ ಮುಂಬಯಿಯ ಗವರ್ನರನು ನಾನಾಸಾಹೇಬನಿಗೆ ಬರೆದ ಉತ್ತರವೇನಂದರೆ:—"ನಾವು ಆ ದುರ್ಗವನ್ನು ಒಪ್ಪಂದದ ಕರಾರುಗಳು ಅಮಲಿನಲ್ಲಿ ಬರುವವರೆಗೆ ಮಾತ್ರ ನಮ್ಮ ಸ್ವಾಧೀನದಲ್ಲಿಟ್ಟುಕೊಂಡಿರುತ್ತೇವೆ. ಡಚ್ಚ ಜನರ ವ್ಯಾಪಾರವನ್ನು ನೀವು ನಾಮಮಾತ್ರಕ್ಕೆ ಕಟ್ಟುಮಾಡಿದ್ದರೂ, ಅವರ ಮಾಲು ಈಗಲೂ ನಿಮ್ಮ

ನಾಡಿಗೆ ಬರುತ್ತಿರುತ್ತದೆ. ನಿಮ್ಮ ನಮ್ಮೊಳಗೆ ಮತಭೇದವುಳಿಯಬಾರದೆಂದು ನಿಮ್ಮೊಡನೆ ಚರ್ಚಿಸುವದಕ್ಕಾಗಿ ನಾವು ನಮ್ಮ ಜನರನ್ನು ನಿಮ್ಮೆಡೆಗೆ (ಪುಣೆಗೆ) ಕಳಿಸಿರುತ್ತೇವೆ. ಅವರಿಂದ ಸಕಲವೂ ವೇದ್ಯವಾಗುವದು.''

ಪುಣೆಯ ಪೇಶ್ವೆಯರ ಕಡೆಗೆ ಬಂದಿದ್ದ ಜಾನ್‌ಸ್ಪೆನ್ಸರನೆಂಬ ಇಂಗ್ಲಿಷ ವಕೀಲನು ಅಲ್ಲಿ ನಡೆದ ವಿಷಯದ ರಿಪೋರ್ಟನ್ನು ತಾ|| ೩-೧೦-೧೭೫೬ಕ್ಕೆ ಮುಂಬಯಿಯ ಕೌನ್ಸಿಲ್ಲಿಗೆ ಸಾದರಗೊಳಿಸಿದನು: "ನಾನಾಸಾಹೇಬನ ಸಲಹೆಯ ಮೇರೆಗೆ ಸಲಾಬತ ಜಂಗನು ತನ್ನ ಬಳಿಯ ಫ್ರೆಂಚರನ್ನು ಕಳಿಸಿಕೊಟ್ಟನೆಂಬುದು ಅಮೃತರಾವ ಪೇಶ್ವೆಯ ಕಾರಭಾರಿಯಿಂದ ನನಗೆ ತಿಳಿಯಿತು. ನಾನು ನಾನಾಸಾಹೇಬನನ್ನು ಪ್ರತ್ಯಕ್ಷವಾಗಿ ಕಾಣಲಿಕ್ಕೆ ಹೋದಾಗ ರಾಘೋಬಾ ದಾದಾ, ಸದಾಶಿವರಾವ ಭಾವು, ಅಮೃತರಾವ ಇಷ್ಟೇ ಜನರು ಅವನ ಬಳಿಯಲ್ಲಿದ್ದರು. ನಾನಾ ಹಾಗು ಸದೋಬರು ಫ್ರೆಂಚ ಮತ್ತು ಸಲಾಬತಜಂಗ ಇವರ ನಡುವೆ ನಡೆದ ಸಂಗತಿಯನ್ನು ನನಗೆ ತಿಳಿಸಿದರು. ಫ್ರೆಂಚರ ವರ್ಚಸ್ಸು ಇನ್ನು ಮುಂದೆ ಕರ್ನಾಟಕದಲ್ಲಿ ಬೆಳೆಯಬಾರದೆಂದೂ, ಘೇರಿಯಾ ದುರ್ಗದ ಪ್ರಕರಣವು ಸಮಾಧಾನಕರವಾಗಿ ನಿರ್ಣಯವಾದ ಮೇಲೆ ನಮ್ಮ-ನಿಮ್ಮಗಳ ನಡುವೆ ವಿತುಷ್ಟತೆಯುಂಟಾಗುವ ಕಾರಣ ಒದಗಲಾರದೆಂದೂ ಪೇಶವೆಯವರು ಹೇಳಿದರು. ಮದ್ರಾಸದ ಕಡೆಗೆ ಮಹಮ್ಮದ ಅಲ್ಲಿಖಾನನಿಗೂ, ಇಂಗ್ಲಿಷರಿಗೂ ಸ್ನೇಹಸಂಬಂಧವಿರುವಂತೆ ಮುಂಬಯಿಯ ಇಂಗ್ಲಿಷರಿಗೂ ತಮಗೂ ಇರಬೇಕೆಂದೂ; ಮಹಮ್ಮದ ಅಲ್ಲಿಗೆ ತೋಫುಖಾನೆಯ ಹಾಗು ದಂಡಿನ ನೆರವನ್ನು ಅಲ್ಲಿಯ ಇಂಗ್ಲಿಷರು ಹೇಗೆ ಒದಗಿಸುವರೋ, ಹಾಗೆಯೇ ತಮಗೂ ಒದಗಿಸಬೇಕೆಂದೂ ನಾನಾಸಾಹೇಬರ ಇಚ್ಛೆಯಿರುತ್ತದೆ; ಆದರೆ ನಾನಾಬಗೆಯ ನೆವ ಹೇಳಿ, ನಿಮಗೆ ನಮ್ಮಿಂದ ಆ ನೆರವು ಸಿಗಲಾರದೆಂದು ನಾನು ಅವರಿಗೆ ತಿಳಿಸಿರುತ್ತೇನೆ.''

ಇಷ್ಟಾಗುವ ವರೆಗೆ ರಾಘೋಬನು ಪಿಟ್ಟೆಂದುಸುರದೆ ಸುಮ್ಮನೆ ಕುಳಿತಿದ್ದನು; ಆದರೆ ತಮ್ಮ ದಿಲ್ಲಿಯ ಕಡೆಯ ಸವಾರಿಯಲ್ಲಿ ಇಂಗ್ಲಿಷರು ತಮಗೆ ತೋಫು ಹಾಗು ದಂಡಿನ ಸಹಾಯವನ್ನೀಯಬೇಕೆಂದು ಅವನು ಬಗೆಬಗೆಯಿಂದ ಹೇಳಹತ್ತಿದನು. ನಾನು ಅವನಿಗೂ ನನ್ನ ಮೊದಲಿನ ಉತ್ತರವನ್ನೇ ತಿಳಿಸಿದೆನು. ಘೇರಿಯುದ ದುರ್ಗದ ಬಗ್ಗೆ ಚರ್ಚಿಸುವದಕ್ಕೆಂದು ಗೋವಿಂದ ಶಿವರಾಮ ಎಂಬುವನು ಹೋಗುವನು. ಅವನಾದರೂ ಬಹುಶಃ ಇದೇ ಮಾತೆತ್ತಬಹುದಾಗಿದೆ; ಆದರೆ ಮೊಗಲರ ನಾಡಿನಲ್ಲಿ ಕೊಲೆ-ಸುಲಿಗೆ ಮಾಡುವ ಮರಾಟರಿಗೆ ನಮ್ಮ ದಂಡುಗಳು ನೆರವಾದರೆ, ಕಂಪನಿ ಸರಕಾರಕ್ಕೆ ಹಲವು ಅಡಚಣಿಗಳುಂಟಾಗಬಹುದಾಗಿದೆ. ನಾನಾಸಾಹೇಬನ ಕಕ್ಕನ ಮಗನಾದ ಸದಾಶಿವರಾವ ಭಾವು ಇವನೇ ಮುಖ್ಯ ಕಾರಭಾರಿಯಾಗಿರುತ್ತಾನೆ. ಇವನು ಒಳ್ಳೇ ಕರ್ತೃತ್ವಶಾಲಿಯೂ ಬುದ್ಧಿವಂತನೂ ಆಗಿರುತ್ತಾನೆ; ಅದರಂತೆ ಇವನು ತೀರ ಉತಾವಳಿಯೂ ಆಗಿರುತ್ತಾನೆ. ಅದರಿಂದ ಪೇಶ್ವೆಯ ದರದಾರದೊಳಗಿನ ಸದಾಶಿವರಾಯನನ್ನು ಸಂಬಾಳಿಸುವದೇ ಮಹತ್ವದ್ದಾಗಿದೆ."

೧೭೫೯ರಲ್ಲಿ ನಾನಾಸಾಹೇಬನ ಕಡೆಗೆ ಮುಂಬಯಿ ಕೌನ್ಸಿಲ್ಲಿನಿಂದ ವುಯಿಲ್ಯಮ್ ಆ್ಯಂಡ್ರ್ಯೂ ಪ್ರಾಯಿಸ್ಸು ಎಂಬ ಹೆಸರಿನ ವಕೀಲನು ಕಳಿಸಲ್ಪಟ್ಟನು. ಅವನಿಗೆ ಆ ಕೌನ್ಸಿಲ್ಲದವರು ಹೀಗೆ ಅಪ್ಪಣೆ ಮಾಡಿ ಕಳಿಸಿದ್ದರು:—

"ಸದ್ಯಕ್ಕೆ ಪೇಶ್ವೆ ದರಬಾರದಲ್ಲಿ ನಾನಾಸಾಹೇಬ ಹಾಗು ಸದಾಶಿವರಾವ ಇವರಲ್ಲಿ ವೈಮನಸ್ಸುಂಟಾಗಿ ಗೊಂದಲವೆದ್ದಿದೆ; ಆದ್ದರಿಂದ ದರಬಾರದ ಬಹು ಜನರು ಕಂಪನೀ ಸರಕಾರಕ್ಕೆ ಅನುಕೂಲವಾಗಬಹುದಾಗಿದೆ; ಆದರೂ ಯಾರನ್ನು ನಂಬಬೇಕು; ಯಾರನ್ನು ನಂಬಬಾರದು? ಎಂಬ ಬಗ್ಗೆ ನೀವು ವಿಚಾರಮಾಡಿ ನಡೆಯತಕ್ಕದ್ದು. ಶಂಕರಾಜಿಪಂತನು ಸದಾಶಿವರಾಯನ ಪಕ್ಷಕ್ಕೆ ಸೇರಿರುವನು. ಅವನು ನಿಮಗೆ ಅಲ್ಲಿಯ ಅಂತಃಸ್ಥಿತಿಯ ಮಾಹಿತಿಯನ್ನು ಹೆಚ್ಚಾಗಿ ಮಾಡಿಕೊಡಬಹುದು; ಆದರೆ ಸುರತದ ಕಡೆಗೆ ತೊಡಗಿರುವ ಅವನ ಧನವು ನಮ್ಮ ಸಹಾಯದಿಂದ ಮರಳಿ ಸಿಗಬಹುದೆಂಬ ಆಶೆಯು ಅವನಿಗಿರುವದರಿಂದ, ಅವನು ಒಂದುವೇಳೆ ಕಪಟಸ್ನೇಹಭಾವವನ್ನು ತೋರಬಹುದಾಗಿದೆ. ರಾಮಾಜಿಪಂತನ ಹೇಳಿಕೆಯು ಮೇರೆಗೆ ಜಂಜೀರೆ ಹಾಗು ಉಂದೇರಿ ಇವುಗಳನ್ನು ಸಂಪಾದಿಸುವದಕ್ಕೆ ನಾವು ಪೇಶ್ವೆಯವರಿಗೆ ಸಹಾಯ ಮಾಡಲಿಲ್ಲೆಂದು ಅವನು ಸಿಟ್ಟಾಗಿರುತ್ತಾನೆ; ಆದರೆ ರಾಮಾಜಿಪಂತನು ಜಂಜೀರೆಯನ್ನು ಮುತ್ತುವ ವರೆಗೆ ನಮಗೆ ಆ ಸುದ್ದಿಯೇ ಹತ್ತಿರಲಿಲ್ಲ; ಹಾಗು ತೀರ ಆಯತ ಸಮಯಕ್ಕೆ ಅವನು ಗಂಗಾಧರಪಂತನನ್ನು ಮುಂಬಯಿಗೆ ನಮ್ಮ ಕಡೆಗೆ ಕಳಿಸಿದನು. ಹಬಸಿಯ ವಿರುದ್ಧ ನಡೆಯುವದು ನಮಗೆ ಯೋಗ್ಯವಾಗಿರಲಿಲ್ಲ. ರಾಮಾಜಿಪಂತನು ನಮ್ಮ ಸಲಹೆಯನ್ನು ಮೊದಲೇ ಕೇಳಿದ್ದರೆ, ಜಂಜೀರೆಯು ನಿಮ್ಮ ಹಸ್ತಗತವಾಗುವದು ದುಷ್ಕರವೆಂದು ನಾವು ಆಗಲೆ ಅವನಿಗೆ ತಿಳಿಸುತ್ತಿದ್ದೆವು. ನಾವೇನು ಹೇಳಿ ಕೇಳಿ ವ್ಯಾಪಾರಿಗಳು. ಬೇಕಾದವರು ನಮ್ಮ ಮುಂಬಯಿಗೆ ಬಂದು ನಮ್ಮ ವಖಾರಿನೊಳಗಿನ ಮಾಲು ಕೊಂಡುಕೊಳ್ಳಬಹುದು. ಅದರಂತೆಯೇ ಹಬಸಿಯು ಒಯ್ಯುತ್ತಿರುತ್ತಾನೆ; ಆದರೆ ನಾವು ಅವನಿಗೆ ಮದ್ದು-ಗುಂಡುಗಳನ್ನು ಮಾತ್ರ ಮಾರಿಲ್ಲ. ನಾವು ಮರಾಟರಿಗೆ ಎಂದೂ ಪ್ರತಿಬಂಧ ಮಾಡಿಲ್ಲ. ಇದಲ್ಲದೆ ಠಾಣೇದಿಂದ ಹುಕುಂ ಬರುವ ವರೆಗೆ ಮಾಹಿಮದ ಒತ್ತಿನಲ್ಲಿ ನಮ್ಮ ಮಾಲು ಹೇರುವ ಹಡಗುಗಳಿಗೆ ಬಹಳ ಹೊತ್ತಿನವರೆಗೆ ನಿಲ್ಲುವ ಪ್ರಸಂಗ ಬರುತ್ತಿತ್ತು. ಎಷ್ಟೋ ಪ್ರಸಂಗಗಳಲ್ಲಿ ಮರಾಟರ ಉಕ್ಕಡಗಳಲ್ಲಿ ನಮ್ಮ ಹಡಗುಪಡೆಯ ಅಧಿಕಾರಿಗಳು ಕೂಡ ಝಡತಿ ಕೊಡಬೇಕಾಗುತ್ತಿತ್ತು. ಇವೆಲ್ಲವನ್ನು ನಾನಾಸಾಹೇಬರಿಗೆ ನೀವು ಚೆನ್ನಾಗಿ ತಿಳಿಸಿ ಹೇಳಿರಿ.

'ನಾನಾಸಾಹೇಬನು ಸದ್ಯಕ್ಕೆ ಫ್ರೆಂಚರೊಡನೆ ಪತ್ರವ್ಯವಹಾರ ನಡೆಸಿರುತ್ತಾನೆಂದೂ ಮತ್ತು ಜಂಜೀರಾ ಹಾಗು ಉಂದೇರಿಗಳನ್ನು ಸೆಳಕೊಳ್ಳುವ ಬಗ್ಗೆ ಫ್ರೆಂಚರು ಪೇಶ್ವೆಯರಿಗೆ ಸಹಾಯ ಮಾಡುವರೆಂದೂ ಕೇಳುತ್ತೇವೆ; ಆದರೆ ಇದು ಅಧಮತನವೆಂದೂ ಕೃತಘ್ನತನವೆಂದೂ ನೀವು ಅವರಿಗೆ ಹೇಳಿರಿ. ಹಾಗಿರದಿದ್ದರೆ ಎಲ್ಲ ಹಡಗು

ಪಡೆಗೆ ಸಿದ್ಧವಿರುವ ಬಗ್ಗೆ ಅಪ್ಪಣೆಯೇಕೆ ಮಾಡಿರುವಿರೆಂಬ ಬಗ್ಗೆ ಕೇಳಬೇಕು; ಅದರಂತೆ ಮಳೆಗಾಲ ತೀರುತ್ತಲೆ ದಮಾಜಿ ಗಾಯಕವಾಡನಿಗೆ ಸುರತದ ಮೇಲೆ ಸಾಗಿ ಹೋಗಲಿಕ್ಕೆ ಅಪ್ಪಣೆಯೇಕೆ ಮಾಡಿರುವರು? ಸುರತದ ಆಢಳಿತದಲ್ಲಿ ಕಂಪನಿ ಸರಕಾರದ ಕೈಯು ರಟ್ಟಿಮುಟ ಸಿಕ್ಕಿದೆಯೆಂಬದನ್ನು ಪೇಶ್ವೆಯವರು ಬಲ್ಲರು. ನಮಗೆ ಮೊಗಲರಿಂದ ದೊರೆತ ಸನದನ್ನು ತಾವು ತುಚ್ಛೀಕರಿಸುವೆವೆಂದು ಪೇಶ್ವೆಯವರು ತೋರಿಸುತ್ತಾರೆ; ಆದರೆ ಸ್ವತಃ ಪೇಶ್ವೆಯವರು ಮೊಗಲರಿಂದ ಸಂಪಾದಿಸಿದ ಸನದುಗಳಿಗೆ ಮಾತ್ರ ಮಹತ್ವ ಕೊಡುತ್ತಿರುತ್ತಾರೆ. ಸುರತದ ಕೋಟೆಯು ಮೊಗಲರ ಹುಕುಮಿನ ಹಾಗು ಸನದಿನ ಪ್ರಕಾರ ನಮ್ಮ ಸ್ವಾಧೀನದಲ್ಲಿರುತ್ತದೆ; ಅಂಥ ಆ ಸುರತಕ್ಕೆ ಉಪಸರ್ಗ ಕೊಡುವದು ಪೇಶ್ವೆಯರಿಗೆ ತಕ್ಕದ್ದಲ್ಲ. ಸುರತದ ನವಾಬನು ಪೇಶ್ವೆಯರ ಹಣವನ್ನು ಸರಿಯಾಗಿ ಕೊಡದಿದ್ದರೆ ನಾವು ಅದನ್ನು ಅವನಿಂದ ಕೊಡಿಸುತ್ತೇವೆ; ಆದರೆ ಸುರತದ ಮೇಲೆ ಅವರ ದಂಡು ಏರಿ ಬಂದರೆ, ನಮ್ಮ ದಂಡು ಅದಕ್ಕೆ ಎದುರಾಗುವದೆಂಬದನ್ನು ನಿಕ್ಷ್ಪಣ್ಣವಾಗಿ ತಿಳಿಸಿರಿ. ಬಾಣಕೋಟದ ಈಚೆಗೆ ಮುಂಬಯಿಗೆ ಸಮೀಪದಲ್ಲಿ ಬಾಣಕೋಟದ ಹೊರತು ಅವರಿಗೆ ಯಾವುದೊಂದು ದುರ್ಗವು ಬೇಕಾಗಿದ್ದರೆ ನಾವು ಆ ಬಗ್ಗೆ ವಿಚಾರ ಮಾಡುತ್ತೇವೆ. ಹಬಸಿಯ ವಿರುದ್ಧ ಪೇಶ್ವೆಯರಿಗೆ ಸಹಾಯ ಮಾಡುವದು ನಮಗೆ ಎಷ್ಟು ದುಸ್ತರವಿದೆಯೆಂಬದನ್ನು ಅವರಿಗೆ ಚನ್ನಾಗಿ ವಿವರಿಸಿ ಹೇಳಬೇಕು. ನಾವು ಪೇಶ್ವೆಯವರೊಡನೆ ಸ್ನೇಹಭಾವದಿಂದ ವರ್ತಿಸಬೇಕೆನ್ನುತ್ತೇವೆ; ಆದರೆ ಅದರಿಂದ ಅವಮಾನ ಹಾಗು ಹಾನಿಗಳನ್ನು ಹೊಂದಲಿಕ್ಕೆ ಮಾತ್ರ ನಾವು ಸಿದ್ಧರಿರುವದಿಲ್ಲ."

ನಿಮ್ಮ ನೆರವಿಗಾಗಿ ಟಾಮಸ್ ಮಾಸ್ಟಿನ್ ಇವನನ್ನು ಪುಣೆಗೆ ಕಳುಸಿರುತ್ತೇವೆ. ಅವನನ್ನು ಪುಣೆಯಲ್ಲೇ ಇಟ್ಟು, ನಾನಾ ಹಾಗು ಸದೋಬಾ ಇವರಿಗೆ ಆಗಾಗ್ಗೆ ಭೆಟ್ಟಿಯಾಗಿ ಮಾತನಾಡಲಿಕ್ಕೆ ಅನುಕೂಲವಾಗುವಂತೆ ಅವನಿಗೊಬ್ಬ ದುಭಾಷಿಯನ್ನು ಗೊತ್ತುಮಾಡಿಕೊಡಿರಿ.

ವುಯಿಲ್ಯಮ್ ಪ್ರಾಯಿಜನು ೨೪ನೇ ಆಗಸ್ಟಿಗೆ ಮುಂಬಯಿಯಿಂದ ಹೊರಟನು. ಅವನು ಪುಣೆಯ ಸಂಗಮಕ್ಕೆ ೪ನೇ ಸಪ್ಟಂಬರಕ್ಕೆ ಬಂದು ತಲುಪಿದನು. 'ಪೇಶ್ವೆಯರಿಗೆ ಸುದ್ದಿ ಕಳಿಸಿದ ಬಳಿಕ ಸದಾಶಿವರಾವ ಭಾವೂನ ಕಡೆಯಿಂದ ಬಾಬಾ ಚಿಟಣವೀಸನು ಸಾಹೇಬನ ಸಮಾಚಾರಕ್ಕೆ ಕಳಸಲ್ಪಟ್ಟನು. ಆ ಸಾಹೇಬನು ಸೋಮವಾರಪೇಟೆಯೊಳಗಿನ ಒಬ್ಬ ವಣಿಕನ ಮನೆಯಲ್ಲಿ ಇಳಿಯುವ ವ್ಯವಸ್ಥೆಯಾಯಿತು. ಅಲ್ಲಿ ನಾನಾಸಾಹೇಬ, ಸದಾಶಿವರಾವ ಭಾವು, ರಾಘೋಬಾ, ವಿಶ್ವಾಸರಾವ ಇವರು ಆ ವಕೀಲನಿಗೆ ಭೆಟ್ಟಿಯಾದರು. ನಾನಾಸಾಹೇಬರು ಹೊರಟು ಹೋದ ಮೇಲೆ ಭಾವುವು ಆ ಸಾಹೇಬನ ಕೂಡ ಬಹಳ ಹೊತ್ತಿನವರೆಗೆ ಮಾತುಕಥೆಗಳಾಡಿದನು. ಹಬಸಿಯ ವಿರುದ್ಧ ಇಂಗ್ಲಿಷರು ತಮಗೆ ನೆರವಾಗದ ಬಗ್ಗೆ ದರಬಾರದ ಜನರೆಲ್ಲ ಇಂಗ್ಲಿಷರ ಮೇಲೆ ಸಿಟ್ಟಾಗಿದ್ದರು.

ತಾ. ೨೪ಕ್ಕೆ ನಾನಾಸಾಹೇಬನು ಮತ್ತೆ ಆ ವಕೀಲನಿಗೆ ಭೆಟ್ಟಿಕೊಟ್ಟನು; ಆದರೆ ಆ ಭೆಟ್ಟಿಯಿಂದ ಪ್ರಯೋಜನವೇನೂ ಆಗಲಿಲ್ಲ. ಗೋವಿಂದ ಶಿವರಾಮನು ಆ ವಕೀಲನಿಗೆ ಹೆಚ್ಚಾಗಿ ಬೆದರಿಸಿದನು; ಹಾಗು ಇಂಗ್ಲಿಷರ ವ್ಯಾಪಾರಕ್ಕೆ ಅಡ್ಡಿಯನ್ನುಂಟು ಮಾಡಿ, ಠಾಣೆಯ ವಸೂಲಿಯನ್ನು ಮುಂಗೈ ಕಸುವಿನಿಂದ ಪಡಕೊಳ್ಳುವ ಸತ್ತೆಯು ಪೇಶ್ವೆಯರಲ್ಲಿದೆಯೆಂಬುದನ್ನು ಅವನಿಗೆ ಭಾಸವಾಗಗೊಟ್ಟನು. ಆಗ ಆ ವಕೀಲನು ಅವನಿಗೆ ಹೇಳಿದನೇನಂದರೆ:—"ಪೇಶ್ವೆಯರ ಶತ್ರುಗಳು ಇಂಗ್ಲಿಷರೊಡನೆ ಒಪ್ಪಂದ ಮಾಡಿಕೊಳ್ಳಲಿಕ್ಕೆ ಒಂಟಿಗಾಲಿನಿಂದ ಸಿದ್ಧರಿರುತ್ತಾರೆ. ಈಗ ಪೇಶ್ವೆಯರು ನಮ್ಮೊಡನೆ ಸಲಹೆ ಮಾಡಿಕೊಳ್ಳದಿದ್ದರೆ, ನಾವು ಅವರನ್ನು ಕೂಡಿಕೊಳ್ಳಬೇಕಾಗುತ್ತದೆ." ಮತ್ತೊಂದು ದಿನ ಆ ವಕೀಲನು ಗೋವಿಂದ ಶಿವರಾಮನನ್ನು ಕುರಿತು: ಸಾಷ್ಟಿ, ವಿಜಯದುರ್ಗಗಳನ್ನು ನಮಗೆ ಕೊಟ್ಟು ಸುರತದ ವಸೂಲಿನ ಹಕ್ಕನ್ನು ಬಿಟ್ಟುಕೊಟ್ಟರೆ ಮಾತ್ರ ಜಂಜೀರೆಯನ್ನು ತಕ್ಕೊಳ್ಳುವದಕ್ಕೆ ಇಂಗ್ಲಿಷರು ನಿಮಗೆ ನೆರವಾಗಬಹುದು, ಎಂದು ಆಡಿ ತೋರಿಸಿದನು; ಆದರೆ ಆ ಸಂಗತಿಯು ಗೋವಿಂದ ಶಿವರಾಮನಿಗೆ ಎಳ್ಳಷ್ಟೂ ಸೇರಲಿಲ್ಲ. ಆ ವಕೀಲನು ಆ ಕಾರಭಾರಿಯು ಕೂಡ ಗುಜರಾಥ ಪ್ರಾಂತದ ಬಗ್ಗೆ ಹೆಚ್ಚಾಗಿ ಚರ್ಚಿಸಿದನು. ೧೩ನೇ ಅಕ್ಟೋಬರಕ್ಕೆ ಸದಾಶಿವರಾವ ಭಾವುವು ಸವಾರಿಯ ಮೇಲೆ ಸಾಗಿ ಊರ ಹೊರಗಿನ ತನ್ನ ಡೇರೆಗೆ ದಾಖಲ ಆದನು. ಮುಂದೆ ತಾ|| ೧೬ಕ್ಕೆ ಆ ವಕೀಲನು ನಾನಾಸಾಹೇಬನನ್ನು ಪರ್ವತೀ ಬೆಟ್ಟದ ಮೇಲೆ ಕಂಡನು. ಅದರಂತೆ ತಾ|| ೨೨ಕ್ಕೂ ಅವರವರಿಗೆ ಮತ್ತೆ ಭೆಟ್ಟಿಯಾಯಿತು; ಆದರೂ ಜಂಜೀರಾದ ಪ್ರಕರಣವು ನಿಕಾಲೆಯಾಗಲಿಲ್ಲ. ಕಡೆಗೆ ನಾನಾಸಾಹೇಬನು ಆ ಇಂಗ್ಲಿಷ ವಕೀಲನಿಗೆ ಒಂದು ಚಲೋ ಕುದುರೆ ಹಾಗು ಶಿರಸ್ತ್ರಾಣಗಳನ್ನು ಕೊಟ್ಟು ಅವನನ್ನು ಸನ್ಮಾನಿಸಿ ಕಳಿಸಿದನು. ಈ ಬಗೆಯಾಗಿ ಆಗ ಆ ವಕೀಲನಿಂದ ಏನೂ ಕೆಲಸವಾಗದೆ ಅವನು ೨೩ನೇ ಅಕ್ಟೋಬರಕ್ಕೆ ಮುಂಬಯಿಗೆ ತಿರುಗಿ ಬಂದನು.

೧೭೬೭ರಲ್ಲಿ ಟಾಮಸ್ ಮಾಸ್ಟಿನ್‍ನೆಂಬುವನನ್ನು ಇಂಗ್ಲಿಷರು ಪೇಶ್ವೆಯರ ಕಡೆಗೆ ಕಳಿಸಿದರು. ಆ ಕಾಲಕ್ಕೆ ಪುಣೆಯಲ್ಲಿ ದೊಡ್ಡ ಮಾಧವರಾಯರು ಪೇಶ್ವೆಯ ಪಟ್ಟದಲ್ಲಿದ್ದರು. ಮಾಸ್ಟಿನ್ನನಿಗೆ ಮುಂಬಯಿಯ ಕೌನ್ಸಿಲ್ಲದವರು ಹೀಗೆಹೇಳಿ ಕಳಿಸಿದ್ದರು: "ಈಗಲೂ ನಮ್ಮ ಮಾಲಿಗೆ ಅಡ್ಡಿಯುಂಟಾಗಿ ಅದು ಎಷ್ಟೋ ಬಂದರಗಳಲ್ಲಿ ಬಿದ್ದು ಬಿಟ್ಟಿರುತ್ತದೆ. ಈ ಅಡ್ಡಿಯು ಪರಿಹಾರವಾಗಬೇಕೆಂಬ ಮುಂಬಯಿ ಗವರ್ನರನು ವಿನಂತಿ ಮಾಡಿಕೊಂಡ ಮೇರೆಗೆ ಏಸಾಜಿಪಂತನಿಗೆ ಅದನ್ನು ಪರಿಹರಿಸುವ ಬಗ್ಗೆ ಅವರಿಂದ ಅಪ್ಪಣೆಯು ಹೊರಟಿದ್ದಿತು. ಆ ಹುಕುಮಿನ ಅಮಲಬಜಾವಣಿಯಾಗಬೇಕೆಂದು ಕೇಳಿಕೊಳ್ಳುವ ಸಲುವಾಗಿ ನಾನು ಮುಂಬಯಿಯಿಂದ ತಮ್ಮೆಡೆಗೆ ಬಂದಿರುತ್ತೇನೆಂದು ನೀವು ಅವರಿಗೆ ಮುಖ್ಯವಾಗಿ ಭಾಸವಾಗಗೊಡತಕ್ಕದ್ದು. ಅಲ್ಲದೆ ಇದಕ್ಕೂ ಎಷ್ಟೋ ಮಹತ್ವದ ಕೆಲಸಗಳನ್ನು ನೀವು ಅಲ್ಲಿ ಮಾಡಬೇಕಾಗಿದೆ.

ವಿಜಯದುರ್ಗವು ಹಸ್ತಗತವಾದಾಗ ಆಂಗ್ರೇನ ಮಕ್ಕಳು ನಮ್ಮ ಸ್ವಾಧೀನರಾದರು. ಅವರು ನಮಗೆ ಶರಣಾಗತರಾದುದರಿಂದಲೇ ನಾವು ಅವರನ್ನು ನಮ್ಮ ಬಳಿಯಲ್ಲಿಟ್ಟು ಕೊಂಡೆವು ಸುಮ್ಮ ಸುಮ್ಮನೆ ಇಂಥ ಜನರನ್ನು ಬಂದಿಗಳೆಂದು ಇಟ್ಟುಕೊಂಡು ನಿಷ್ಕಾರಣವಾದ ಖರ್ಚನ್ನು ಅದಾರು ಮಾಡಬಲ್ಲರೆಂಬದನ್ನು ಪೇಶ್ವೆಯರಿಗೆ ಬಿಚ್ಚಿ ಹೇಳಿರಿ.

ಮರಾಟರ ವರ್ಚಸ್ಸು ದಿನದಿನಕ್ಕೆ ಬೆಳೆಯುತ್ತಿದ್ದು, ಅದು ಒಳ್ಳೇ ಅನಿಷ್ಟಕರ ಸಂಗತಿಯೆಂಬದು ನಮಗೆ ಗೊತ್ತಿದೆ. ಮದ್ರಾಸ, ಬಂಗಾಲ ಕಡೆಯ ನಮ್ಮ ಅಧಿಕಾರಿಗಳು ಇದಕ್ಕಾಗಿಯೇ ಹೆಚ್ಚಾಗಿ ಭಯಗೊಳ್ಳುತ್ತಿರುವರು; ಆದರೆ ಇತ್ತೀಚೆಗೆ ನಿಜಾಮು ಅಲ್ಲೀ ಹಾಗು ಹೈದರ ಅಲ್ಲೀ ಇವರಲ್ಲಿ ವೈತ್ರಿಯುಂಟಾಗಿರುವದರಿಂದ, ನಾವು ಈಗ ಮರಾಟರೊಡನೆ ಸ್ನೇಹ ಬೆಳಿಸಲೇ ಬೇಕಾಗಿರುತ್ತದೆ. ಬೇಕಾದರೆ ನಾವು ಮರಾಟರಿಗೆ ಬೇದನೂರು ಹಾಗು ಸಾವೆಗಳನ್ನು ಕೊಡುತ್ತೇವೆ; ಆದರೆ ಅವುಗಳ ಬದಲು ಸಾಷ್ಟೀ ಹಾಗು ವಸಯಿಗಳನ್ನು ಮರಾಟರು ನಮಗೆ ಕೊಡಲಿಕ್ಕೆ ಬೇಕು; ಅಲ್ಲದೆ ಸುರತದ ಮೇಲಿನ ತಮ್ಮ ಹಕ್ಕನ್ನು ಬಿಟ್ಟುಗೊಟ್ಟು, ಪೇಶ್ವೆಯ ರಾಜ್ಯದಲ್ಲಿ ಬೇಕಾದಲ್ಲಿ ನಮ್ಮ ವಖಾರುಗಳನ್ನಿಡಗೊಡಬೇಕು. ಕರ್ನಾಟಕದೊಳಗಿನ ಮೆಣಸು, ಯಾಲಕ್ಕಿ, ಚಂದನಗಳ ವ್ಯಾಪಾರದ ವಂಶಪರಂಪರೆಯ ಹಕ್ಕನ್ನು ನಮಗೆ ಕೊಡಬೇಕು. ಮುಖ್ಯವಾಗಿ ಸಾಷ್ಟಿಯು ನಮ್ಮ ಹಸ್ತಗತವಾಗಬೇಕಾಗಿದೆ. ಮರಾಟರೊಡನೆ ಸ್ನೇಹ ಬೆಳಿಸಿ ಅವರ ಸತ್ತೆ ಬೆಳೆಯಗೊಡುವದು ನಮಗೆ ಅನಿಷ್ಟಕರವಾಗಿದ್ದರೂ, ಸದ್ಯಕ್ಕೆ ಅದರ ಹೊರತು ಗತ್ಯಂತರವೇ ಇಲ್ಲದಾಗಿದೆ."

---

೪ನೆಯ ಪರಿಚ್ಛೇದ.

## ಮಾಧವರಾಯನ ಕಾಲ.

—o()o—

"ಮಾಧವರಾಯ-ರಘುನಾಥರಾಯರ ಒಳ ಜಗಳದ ಮೂಲಕ ಮಾಧವರಾಯನ ಮನಸ್ಸು ಉದಾಸವಾಗಿದ್ದರೆ, ಪೇಶ್ವೆಯರ ಮನಸ್ಸನ್ನೊಲಿಸಿಕೊಳ್ಳುವದು ನಮಗೆ ಅಷ್ಟೇನೂ ಆವಶ್ಯಕವಾಗಲಾರದು; ಆದುದರಿಂದ ಆ ದರ್ಬಾರದ ಸ್ಥಿತಿಗತಿಗಳನ್ನರಿತು, ಪೇಶ್ವೆಯರು ನಮಗೆ ಕೂಡಲಿಕ್ಕೆ ಇಚ್ಛಿಸುತ್ತಿದ್ದರೆ, ಪ್ರಸಂಗ ಬಿದ್ದಾಗ ಮದ್ರಾಸದ ಕಡೆಗೆ ನಮಗೆ ಎಷ್ಟು ದಂಡನ್ನು ನೀವು ಪೂರೈಸಬಲ್ಲಿರೆಂಬದನ್ನು ಮೊದಲು ಅವರಿಗೆ ಕೇಳಬೇಕು ಅದಕ್ಕೆ ಅವರಿಂದ ಏನು ಉತ್ತರ ಬರುವದೋ, ಅದರ ಮೇಲಿಂದ ಅಲ್ಲಿಯ ಸ್ಥಿತಿಯನ್ನು ಚೆನ್ನಾಗಿ ಪರೀಕ್ಷಿಸಿಕೊಳ್ಳಬೇಕು.

"ಮಾಧವರಾವ ಹಾಗು ರಘುನಾಥರಾವ ಇವರಿಬ್ಬರ ಕಡೆಯಿಂದಲೂ ಮುಂಬಯಿಯ ಗವರ್ನರನ ಕಡೆಗೆ ನಜರಾಣೆ ಮತ್ತು ಮಿತ್ರತ್ವದ ಪತ್ರಗಳನ್ನು ತಕ್ಕೊಂಡು ಬೇರೆ ಬೇರೆ ಜನರು ಕಳಿಸಲ್ಪಟ್ಟಿದ್ದರು. ಇದರ ಮೇಲಿಂದ ಪೇಶ್ವೆಯವರಿಗೆ,

ವಿಶೇಷವಾಗಿ ರಘುನಾಥರಾಯನಿಗೆ-ನಮ್ಮ ಸಹಾಯವು ಬೇಕಿರುವಂತೆ ತಿಳಿಯುತ್ತದೆ. ಕಕ್ಷ-ಮಕ್ಷಳಲ್ಲಿಯು ಶತ್ರುತ್ವವು ಅಳಿದಿರುವಂತೆ ತೋರುವದು ನಿಜವಲ್ಲ. ನಮ್ಮ ಈ ತರ್ಕವು ದಿಟವೇನೆಂಬದನ್ನು ನೀವು ಶೋಧಮಾಡಿ ತಿಳಿಸಿದರೆ ನಮಗೆ ಬಹಳ ಸಂತೋಷವಾಗುವದು. ಈ ಕಕ್ಷ-ಮಕ್ಷಳ ವಿತುಷ್ಟತೆಯು ಹೊರತು ಇಂಥದೇ ಬೇರೊಂದು ದೊಡ್ಡ ಗೃಹಕಲಹವಿದ್ದು, ಅದರಿಂದ ಅವರ ಮುಲುಖಗಿರಿಗೆ ವ್ಯತ್ಯಯು ಬರುವಂತಿದ್ದರೆ, ಅದನ್ನೂ ಬರೆದು ತಿಳಿಸಬೇಕು. ಒಂದುವೇಳೆ ನಿಜಾಮ ಇಲ್ಲವೆ ಹೈದರ ಇವರ ಕಡೆಯು ವಕೀಲರು ಇಷ್ಟರೊಳಗೇ ಬಂದು ಪೇಶ್ವೆಯರ ಅನುಕೂಲತೆಯನ್ನು ಸಂಪಾದಿಸಿದ್ದರೆ, ಇದರಿಂದ ಖಂಡಿತವಾಗಿ ಅನಿಷ್ಟವಾಗುವದೆಂದು ನೀವು ಪೇಶ್ವೆಯರಿಗೆ ನಾನಾಪ್ರಕಾರಗಳಿಂದ ತಿಳಿಹೇಳಿರಿ. ಈ ಪತ್ರದೊಡನೆ ನಜರಾಣೆಗಳು ಕಳಿಸಿರುತ್ತವೆ. ಇವುಗಳಲ್ಲಿಯು ರಾಘೋಬನಿಗೆ ಕೊಡತಕ್ಕ ನಜರಾಣೆಯನ್ನು ನಾಶಿಕದ ನಿಮ್ಮ ಸಹಾಯಕರಾದ ಚಾರ್ಲಸ ಬ್ರೀಮರೊಡನೆ ಕಳಿಸಬೇಕು; ಹಾಗು ಪೇಶ್ವೆ ಮತ್ತು ರಾಘೋಬಾ ಇವರು ತಾವಾಗಿಯೇ ನಮ್ಮ ಕೂಡ ಒಪ್ಪಂದ ಮಾಡಿಕೊಳ್ಳುವಂತಹ ಪ್ರಸಂಗಗಳನ್ನುಂಟು ಮಾಡುತ್ತಿರಬೇಕು."

೧೭೬೭ನೇ ನವಂಬರ ೧೯ನೇ ತಾರೀಖಿನ ದಿನ ಮಾಸ್ಟಿನ್ ಸಾಹೇಬನು ಮುಂಬಯಿಯಿಂದ ಹೊರಟನು. ಪನವೇಲದ ಆಖಾತದಲ್ಲಿ ಹೋದ ಬಳಿಕ ಪೇಶವೆಯು ಅತಿಥಿಯಂತೆ ಅವನು ನಡಿಸಿಕೊಳ್ಳಲ್ಪಟ್ಟನು. ವೇಲಾಪುರದ ಕೋಟೆಯು ಹತ್ತರ ಅವನಿಗೆ ತೋಫಿನ ಹಾಗು ಕಹಳೆಯ ಸನ್ಮಾನವು ಮಾಡಲ್ಪಟ್ಟಿತು. ಪನವೇಲದಲ್ಲಿ ದಾದೋಪಂತನು ಅವನ ವ್ಯವಸ್ಥೆಯನ್ನಿಟ್ಟಿದ್ದನು; ಮತ್ತು ಅಲ್ಲಿಂದ ಮುಂದೆ ಪೇಶ್ವೆಯರ ಬಿಟ್ಟೀ ಜನರು ಅಲ್ಲಲ್ಲಿ ವಸತಿಯು ಮಾಡುತ್ತ, ಅವನ ಎಲ್ಲ ಸಾಮಾನುಗಳನ್ನು ಪುಣೆಗೆ ತಲುಪಿಸಿದರು. ಮಾಸ್ಟಿನ ಸಾಹೇಬನ ಸಾಮಾನುಗಳು ಬಹಳವಾಗಿದ್ದರಿಂದ, ಅವನ್ನೆಲ್ಲ ಒಯ್ಯಲು ೫೦ ಬಿಟ್ಟೀ ಆಳುಗಳು ಹತ್ತುತ್ತಿದ್ದವು. ೨೯ನೇ ತಾರೀಖಿಗೆ ಮಾಸ್ಟಿನ ಸಾಹೇಬನು ಗಣೇಶಖಿಂಡಿಗೆ ಬಂದು ಮುಟ್ಟಿದನು; ಮತ್ತು ಪೇಶ್ವೆ ಮಾಧವರಾಯನ ಕಡೆಯಿಂದ ಚಿಟಣೀಸ ರಾಮಾಜಿಪಂತನು ಬಂದು ಭೆಟ್ಟಿಯಾದ ತರುವಾಯ, ಪಟ್ಟಣದಲ್ಲಿದ್ದ ಗೋವಿಂದ ಶಿವರಾಮ ಎಂಬವರ ತೋಟದಲ್ಲಿ ಅವನಿಗೆ ಇಳಕೊಳ್ಳಲಿಕ್ಕೆ ಸ್ಥಳ ಕೊಟ್ಟರು. ಅಲ್ಲಿ ಇದ್ದು ಪೇಶ್ವೆಯು ಭೆಟ್ಟಿಯು ಇಂದು ಆದೀತು, ನಾಳೆ ಆದೀತೆಂದು ದಾರಿಯು ಕಾಯುತ್ತ ಅವನು ಕುಳಿತುಕೊಂಡನು. ಕಡೆಗೆ ಡಿಶಂಬರ ೩ನೇ ತಾರೀಖಿನ ದಿನ ಶನಿವಾರ ವಾಡೆಯಲ್ಲಿಯ ದರಬಾರದ ದಿವಾಣಖಾನೆಯಲ್ಲಿ ಭೆಟ್ಟಿಯಾಯಿತು. ಮೊದಲನೇ ಭೆಟ್ಟಿಯು ಕೇವಲ ಔಪಚಾರಿಕ ಮಾತು-ಕಥೆಗಳಲ್ಲಿ ಮುಗಿದ ತರುವಾಯ, ಮಾಸ್ಟಿನ ಸಾಹೇಬನು ಪೇಶವೆಗೆ ಕಾಣಿಕೆಯಾಗಿ ತಂದ ಸಾಮಾನುಗಳನ್ನು ಅರ್ಪಿಸಿದನು.

ಮಾಸ್ಟಿನ ಸಾಹೇಬನು ಮಾಧವರಾಯನಿಗೆ ಅರ್ಪಿಸಿದ ಕಾಣಿಕೆಯ ಸಾಮಾನುಗಳು ಹೀಗೆ ಇದ್ದವು: ೧ ಕುದುರೆ ೧ ಗಡಿಯಾರ ೧ ಬಂಗಾರದ ಅತ್ತರದಾಣಿ

೧ ಸುಗಂಧ ಎಣ್ಣೆಯ ಶೀಸೆ ೨ ಶಾಲು ೧ ಕಿನಕಾಪಿನ ಅರಿವೆ ೧ ಬೇಟೆಯಾಡುವ ಬಂದೂಕು ೧ ಜೋಡು ಪಿಸ್ತೂಲು ೧ ಪೋಷಾಕು ೪ ವಾರ ಹಸರು ಮಖಮಲ ೬ ವಾರ ಗುಲಾಬೀ ಮಖಮಲ ೨ ಕುದುರೆಸವಾರರ ಚಬಕ ೮ ಗುಲಾಬೀ ಅತ್ತರಿನ ಶೀಸೆಗಳು ೪ ವಾರ ಜರತಾರೀ ಅರಿವೆ. ಇವುಗಳ ಹೊರತು ಪೇಶವೆ ನಾರಾಯಣ ರಾಯನಿಗೆ ೧ ಬಂಗಾರದ ಸರಪಳಿ ೧ ಪೋಷಾಕು ೧ ಬೆಳ್ಳಿಯ ಆಕಳು ೨ ಶಾಲು ೨ ಕಿನಕಾಫಿನ ಥಾನು ಮತ್ತು ೧ ಚಬಕ.

ಇಂಗ್ಲಿಷ ವಕೀಲನ ಭೆಟ್ಟಿಯನ್ನು ಶುಭಮುಹೂರ್ತದಲ್ಲಿ ಮಾಡಿಕೊಳ್ಳಬೇಕೆಂದು ತಡೆದದ್ದರಿಂದ ಮೊದಲಿನ ಭೆಟ್ಟಿಗೆ ಇಷ್ಟು ಅವಧಿ ಹತ್ತಿತು; ಆದರೆ ಮುಂದೆಯಾ-ದರೂ ಪೇಶವೆಯ ಭೆಟ್ಟಿಯನ್ನು ಬೇಗನೆ ತಕ್ಕೊಳ್ಳಬೇಕೆಂದೂ, ಮಾತು-ಕತೆಗಳಾಡ ಬೇಕೆಂದೂ ಮಾಸ್ಟಿನ್ ಸಾಹೇಬನು ಗೋವಿಂದ ಶಿವರಾಮನಿಂದಲೂ ರಾಮಾಜಿ ಪಂತನಿಂದಲೂ ಹೆಚ್ಚಾಗಿ ಮಧ್ಯಸ್ತಿಕೆ ಮಾಡಬೇಕಾಯಿತು. ಇಂದು ಊರಲ್ಲಿ ಮದುವೆಯಿದೆ, ನಾಳೆ ವಾಡೆಯಲ್ಲಿ ಬ್ರಾಹ್ಮಣ ಭೋಜನವಿದೆ ಮುಂತಾದ ಹಲವು ಕಾರಣಗಳಿಂದ ಪುನಃ ನಾಲ್ಕೈದು ದಿನಗಳ ವರೆಗೆ ಪೇಶವೆ-ಮಾಸ್ಟಿನ್ನರ ಭೆಟ್ಟಿಯಾಗ ಲಿಲ್ಲ. ೬ನೇ ತಾರೀಖಿನ ದಿನ ಮಾಸ್ಟಿನ ಸಾಹೇಬನು ಮುಂಬಯಿಯ ಗವರ್ನರ ನಿಗೆ ತನಗೆ ತಿಳಿದುಬಂದ ಕಚ್ಚಾ ಸಂಗತಿಯ ಪತ್ರವನ್ನು ಬರೆದನು; ಅದರಲ್ಲವನು ಕೆಳಗಿನ ಸಂಗತಿಯನ್ನು ಕಾಣಿಸಿದ್ದನು:—

"ಗೋಪಿಕಾಬಾಯಿಯ ಕಿವಿಮಾತಿನಿಂದ ರಾಘೋಬನನ್ನು ಸಮಕ್ಷಮ ಭೆಟ್ಟಿ ಯಾದಾಗಲೇ ಕೈದು ಮಾಡಬೇಕೆಂದು ಮಾಧವರಾಯನು ವಿಚಾರ ಮಾಡಿದ್ದನು; ಆದರೆ ಸಖಾರಾಮ ಬಾಪುವಿನ ಮಧ್ಯಸ್ತಿಕೆಯಿಂದ ಕಕ್ಕ-ಮಕ್ಕಳಲ್ಲಿ ಅಷ್ಟರವಟ್ಟಿಗೆ ಸಂಧಾನವಾಯಿತು. ಪೇಶ್ವೆಯು ರಘುನಾಥರಾಯನಿಗೆ ನಾಶಿಕ ತ್ರ್ಯಂಬಕದ ಸುತ್ತ ಲಿನ ೧೩ ಲಕ್ಷ ಬೆಲೆ ಬಾಳುವ ಜಹಗೀರನ್ನೂ ಮತ್ತು ಕೆಲವು ಕೋಟೆಗಳನ್ನೂ ಕೊಡಬೇಕು. ರಾಘೋಬನ ಸೈನ್ಯದ ಬಾಕಿ ನಿಂತಂಥ ೨೫ ಲಕ್ಷ ಸಂಬಳವನ್ನು ಕೊಡುವದರ ಸಲುವಾಗಿ ಪೇಶ್ವೆಯು ಜಾಮೀನು ಕೊಡಬೇಕು; ಮತ್ತು ರಾಘೋ ಬನು ರಾಜ್ಯಕಾರಭಾರದಲ್ಲಿ ಕೈಹಾಕದೆ ಸುಮ್ಮನಿರಬೇಕು, ಎಂದು ಸಂಧಾನದ ಕಲಮುಗಳಿವೆ. ಈ ಸಂಧಾನವು ಕಡೆತನಕ ನಿಲ್ಲುವದೆಂದು ಮಾತ್ರ ಯಾರಿಗೂ ಅನಿ ಸುವದಿಲ್ಲ; ಆದರೆ ಸದ್ಯಕ್ಕಾದರೂ ಈ ರೀತಿಯಿಂದ ನ್ಯಾಯವು ಮುರಿಯಿತು. ಜಾಟರು ಮಹದಾಜಿ ಶಿಂದೆಯನ್ನು ಸೋಲಿಸಿದ್ದರಿಂದ ತುಕೋಜಿ ಹೋಳಕರ, ನಾರೋ ಶಂಕರ, ಶಿವಾಜಿ ವಿಠ್ಠಲ, ವಿಂಚೂರಕರ ಇವರು ಶಿಂದೆಯ ಸಹಾಯಕ್ಕೆ ಹಿಂದುಸ್ತಾನಕ್ಕೆ ಹೋಗುವವರಿದ್ದಾರೆ." ಇದಲ್ಲದೆ ಕರ್ನಾಟಕದ ಮೇಲೆ ದಾಳಿ ಯಿಕ್ಕುವ ಸನ್ನಾಹದ ಸಂಗತಿಯನ್ನೂ ಆ ಪತ್ರದಲ್ಲಿ ಬರೆದಿದ್ದನಲ್ಲದೆ "ಮಾಧವರಾವ ಪೇಶ್ವೆಯು ಜಂಜೀರೆಯನ್ನು ತಕ್ಕೊಳ್ಳುವ ಉದ್ದೇಶದಿಂದ ಕೊಂಕಣಕ್ಕೆ ಸ್ವತಃ ಹೋಗುವವನಿದ್ದಾನೆ; ತ್ರ್ಯಂಬಕರಾವ ಮಾಮಾನು ಕಾಶಿ-ಪ್ರಯಾಗಗಳ ಯಾತ್ರೆಗೆ

ಹೋದಾಗ ಅಲ್ಲಿಯು ಇಂಗ್ಲಿಷರಿಗೆ ಭೆಟ್ಟಿಯಾದನು. ಇಂಗ್ಲಿಷರೂ ಮರಾಟರೂ ಸುರಾಜುದ್ದೌಲನೂ ಕೂಡಿಕೊಂಡು ಜಾಟ ಮತ್ತು ರೋಹಿಲರ ಸಮಾಚಾರ ತಕ್ಕೊಳ್ಳಬೇಕೆಂದು ಮಾತಾಡಿದರೆಂದು ಇಲ್ಲಿ ಸುದ್ದಿಯಿದೆ. ರಾಜಾಪುರದಲ್ಲಿ ಇಂಗ್ಲಿಷ ಸೈನ್ಯವು ಸೋತಿತೆಂದೂ ಒಬ್ಬ ಅಧಿಕಾರಿ ಮತ್ತು ನೂರಾರು ಸೈನಿಕರು ಸಮರಾಂಗಣದಲ್ಲಿ ಮಡಿದರೆಂದೂ ಪುಣೆಯಲ್ಲಿ ವದಂತಿಯಿದೆ." ಮುಂತಾದ ಸುದ್ದಿಯೂ ಆ ಪತ್ರದಲ್ಲಿತ್ತು. ೭ನೇ ತಾರೀಖಿನ ದಿನ ಮಾಸ್ಟಿನ ಸಾಹೇಬನು ನಾನಾಫಡಣೀಸನಿಗೆ ಭೆಟ್ಟಿಯಾಗಿ, ಪೇಶ್ವೆಯರ ಭೆಟ್ಟಿಯನ್ನು ಪುನಃ ಮಾಡಿಸಿರೆಂದು ಅವನಿಗೆ ಬೇಡಿಕೊಂಡನು. ಇಂದು ಪೇಶ್ವೆಯರು ಥೇವೂರಿಗೆ ದೇವದರ್ಶನದ ಸಲುವಾಗಿ ಹೋಗುವವರಿದ್ದಾರೆ, ನಾಳೆ ತುಕೋಜಿಯನ್ನು ಹಿಂದುಸ್ಥಾನಕ್ಕೆ ರವಾನಿಸುವದಿದೆ, ನಾಡದ್ದು ಗೋವಿಂದ ಶಿವರಾಮನ ಮನೆಯಲ್ಲಿ ಲಗ್ನದ ಮೇಜವಾನಿ ಮತ್ತು ಸಮಾರಾಧನೆಗಳಾಗತಕ್ಕವಿರುವದರಿಂದ ಪೇಶ್ವೆಯರ ದರುಶನವಾಗುವದಿಲ್ಲ. ಹೀಗೆ ಕೆಲದಿನಗಳು ಕಳೆದ ಮೇಲೆ ಕಡೆಗೆ ೧೧ನೇ ತಾರೀಖಿಗೆ ಅವರ ಭೆಟ್ಟಿಯಾಯಿತು. ಈ ಪ್ರಸಂಗದಲ್ಲಿ ಸಖಾರಾಮಬಾಪುವೂ, ಫಡಣವೀಸ ಮೋರೋಬನೂ ಬಂದಿದ್ದರು. ಈ ಸಮ್ಮೇಲನದಲ್ಲಿ ಮುಖ್ಯ ಕೆಲಸದ ವಿಷಯಕ್ಕೆ ಮಾತುಹೊರಟಿತು; ಇದರಲ್ಲಿ ಪೇಶವೆಯ ವತಿಯಿಂದ ಒಂದು ಇಲಾಖೆಯಲ್ಲಿದ್ದ ಇಂಗ್ಲಿಷ ಅಧಿಕಾರಿಗಳು ಒಪ್ಪಿದ ಒಪ್ಪಂದದ ಕರಾರನ್ನು ಇನ್ನುಳಿದ ಇಲಾಖೆಯೊಳಗಿನ ಇಂಗ್ಲಿಷರು ಒಪ್ಪುವರೋ ಹೇಗೆಂಬ ಪ್ರಶ್ನೆಯು ವಿಚಾರಿಸಲ್ಪಟ್ಟಿತು. ಅದಕ್ಕೆ ಮಾಸ್ಟಿನಸಾಹೇಬನು, "ಪ್ರತಿಯೊಂದು ಇಲಾಖೆಯೊಳಗಿನ ಅಧಿಕಾರಿಗಳು ಸ್ವತಂತ್ರರಿರುತ್ತಾರೆ; ಆದರೆ ಕಂಪನಿಯ ಹಿತದ ವಿಷಯವಿದ್ದರೆ ಒಬ್ಬರ ಮಾತನ್ನೊಬ್ಬರು ಕೇಳುತ್ತಾರೆ!" ಎನ್ನಲು, ಕಡೆಗೆ ಕರ್ನಾಟಕದಿಂದ ಮರಾಟಾ ಸರದಾರನು ತಿರುಗಿ ಬರುವ ವರೆಗೆ ನಿಶ್ಚಿತವಾಗಿ ಏನೂ ಹೇಳಲು ಬರುವಂತಿಲ್ಲೆಂದು ನಿಶ್ಚಯಿಸಲ್ಪಟ್ಟಿತು. ಎರಡನೆಯ ದಿನ ಮಾಸ್ಟಿನಸಾಹೇಬನು ಗೋವಿಂದ ಶಿವರಾಮನಿಗೆ ಭೆಟ್ಟಿಯಾದನು; ಮತ್ತು "ನಿಜಾಮನ ಇಲ್ಲವೆ ಹೈದರಅಲ್ಲಿಯ ಗೆಳೆತನ ಮಾಡುವದರಿಂದ ಪೇಶವೆಯರಿಗೆ ಲಾಭವಿಲ್ಲ; ಆದರೆ ನಾವು ಇಂಗ್ಲಿಷರು ವಚನಬದ್ಧರಿರುವದರಿಂದ ನಮ್ಮ ಕೂಡ ಒಪ್ಪಂದ ಮಾಡಿಕೊಳ್ಳುವದರಲ್ಲಿ ಇವರ ಹಿತವಿದೆ'' ಎಂದು ಸೂಚಿಸಿದನು. ಸಖಾರಾಮ ಬಾಪುವು ದರಬಾರದೊಳಗಿನ ಮುಖ್ಯ ಮುತ್ಸದ್ದಿಯಿದ್ದುದರಿಂದ, ಮಾಸ್ಟಿನಸಾಹೇಬನು ಅವನ ಭೆಟ್ಟಿಯಾಗಲು ಪ್ರಯತ್ನಿಸಿದನು; ಆದರೆ ಅದು ಕೈಗೂಡಲಿಲ್ಲ. ಇಷ್ಟರಲ್ಲಿ ಕರ್ನಾಟಕದಿಂದ ಪತ್ರ ಬಂದಿತು; ಹಾಗು ಮುಂಬಯಿಯವರು ಮಾಸ್ಟಿನಸಾಹೇಬನಿಗೆ ಮುಂದಿನಂತೆ ಅಪ್ಪಣೆ ಕಳಿಸಿದರು—"ಕರ್ನಾಟಕದ ವಿಷಯದಲ್ಲಿ ಪೇಶವೆಯು ಯಾವ ಪಕ್ಷವನ್ನೂ ಹಿಡಿಯದೆ ಸುಮ್ಮನೆ ಕುಳಿತರೆ, ಅದರಲ್ಲಿ ನಮಗೆ ಲಾಭವಿದೆ. ಕಡೆಗೆ ಅವನು ಸುಮ್ಮನಾದರೂ ಕುಳ್ಳಿರುವಂತೆ ನೀವು ವ್ಯವಸ್ಥೆ ಮಾಡಿರಿ. ಪೇಶವೆಯು ನಮ್ಮ ಸ್ನೇಹ ಬಿಟ್ಟು, ಹೈದರಅಲ್ಲಿ ಅಥವಾ ನಿಜಾಮನನ್ನು ಕೂಡಿದರೆ ವರ್ಹಾಡದೊಳಗಿನ

ಭೋಸಲೆಯು ನಮ್ಮ ಸ್ನೇಹ ಮಾಡಲು ತವಕಿಸುತ್ತಾನೆಂದೂ ಆಗ ನಾವು ಅವನನ್ನು ಕೂಡಬೇಕಾಗುವದೆಂದೂ, ಹೇಳಿ ನೀವು ಪೇಶವೆಯನ್ನು ಬೆದರಿಸಿರಿ." ಇಷ್ಟಾದ ಮೇಲೆ, ಅಂದರೆ ಡಿಸೆಂಬರ ೧೯ನೇ ತಾರೀಖಿನ ದಿನ ಮಾಸ್ಟಿನ ಸಾಹೇಬನು ತನ್ನ ಕೈಕೆಳಗಿನ ಸಹಾಯಕನಾದ ಚಾರ್ಲಸ್ ಬ್ರೋಮನನ್ನು ನಾಶಿಕಕ್ಕೆ ರಾಘೋಬನೆಡೆಗೆ ಕಳಿಸಿದನು. "ಮಾಧವರಾವ ಮತ್ತು ರಾಘೋಬರಲ್ಲಿ ನಿಜವಾದ ಪ್ರೇಮವಿಲ್ಲ. ಆದ್ದರಿಂದ ರಾಘೋಬನಿಗೆ ನಾವು ನಿಮಗೆ ಸಹಾಯ ಮಾಡುತ್ತೇವೆಂದು ಹೇಳಿ ರಾಘೋಬನ ಕಡೆಯಿಂದಲೇ ಮಾತು ಬರುವಂತೆ ಮಾಡಿರಿ." ಎಂದು ಮಾಸ್ಟಿನನು ಬ್ರೋಮನಿಗೆ ತಿಳಿಸಿದ್ದನು. ಅದೇ ದಿನ ಸಖಾರಾಮ ಬಾಪುವಿನ ಮಧ್ಯಸ್ಥಿಕೆಯಿಂದ ಮಾಸ್ಟಿನ-ಪೇಶವೆಯರ ಭೆಟ್ಟಿಯಾಗಿ ಮಾತು-ಕಥೆಗೆ ಸುರುವಾಯಿತು. ಚೌಲ ಬಂದರದಲ್ಲಿ ಬಂಧಿಸಿಟ್ಟಿದ್ದ ಹಡಗವನ್ನು ಬಿಡಬೇಕೆಂಬ ಮಾಸ್ಟಿನನ ವಿನಂತಿಯನ್ನು ಪೇಶವೆಯು ಮಾನ್ಯಮಾಡಿದನು; ಆದರೆ ಉಳಿದ ವಿಷಯಗಳ ಸಂಬಂಧ ಸ್ಪಷ್ಟವಾಗಿ ಮಾತು-ಕತೆಗಳಾಗಲಿಲ್ಲ. ಇವಲ್ಲದೆ ಹೈದರಅಲ್ಲಿ ಮತ್ತು ಹಬಸಿಯ ವಿರುದ್ಧವಾಗಿ ಇಂಗ್ಲಿಷರು ತನಗೆ ಸಹಾಯ ಮಾಡಬೇಕೆಂಬ ಗುಪ್ತಹೇತುವು ಪೇಶವೆಯ ಮನದಲ್ಲಿರುತ್ತದೆಂದು ಮಾಸ್ಟಿನನು ತರ್ಕಿಸಿದ್ದನು; ಆದರೆ ಕಡೆಗೆ ಯಾವದೂ ನಿಶ್ಚಿತವಾಗಲಿಲ್ಲ. ಎರಡೂ ಬಣದವರು ತಮ್ಮ ಹೊಟ್ಟೆಯೊಳಗಿನದನ್ನು ಬಿಚ್ಚಿಡದೆ, ಹೆರವರೇ ಮೊದಲು ಮಾತಾಡಲೆಂದು ಸುಮ್ಮನೆ ಕುಳಿತಿದ್ದರು. ಮರಾಟರು ಬಂಧಿಸಿಟ್ಟಿದ್ದ ಇಂಗ್ಲಿಷರ ಹಡಗವನ್ನು ಬಿಟ್ಟುಕೊಡಬೇಕೆಂದು ೩೦ನೇ ತಾರೀಖಿನ ದಿನ ಮಾಧವರಾಯನು ಅಪ್ಪಣೆ ಮಾಡಿದನು. ಜಾನೇವಾರಿ ೧ನೇ ತಾರೀಖಿನ ದಿನ ರಾಘೋಬನ ವಕೀಲನಾದ ಗೋಪಾಳಪಂತ ಚಕ್ರದೇವನು ಮಾಸ್ಟಿನಸಾಹೇಬನ ಭೆಟ್ಟಿಗೆ ಹೋಗಿ, "ರಾಘೋಬನಿಗೆ ಒಪ್ಪಂದವು ಸಮ್ಮತವಿಲ್ಲದಿರುವದರಿಂದ, ಮಾಧವರಾಯನಿಂದ ಸ್ವಲ್ಪಾದರೂ ತಪ್ಪಾದಲ್ಲಿ ಒಪ್ಪಂದವನ್ನು ಸಂಪೂರ್ಣವಾಗಿ ಮುರಿದು ೬ ತಿಂಗಳಲ್ಲಿ ದಿವಾಳಿ ಹೊರಡಿಸಬೇಕೆಂದು ಅವನ ಇಚ್ಛೆಯಿದೆ." ಈ ವೇಳೆಯಲ್ಲಿ ನಿಜಾಮಅಲ್ಲಿ ಮತ್ತು ಹೈದರಅಲ್ಲಿಯ ವಕೀಲರು ಪುಣೆಗೆ ಬಂದು ಮುಟ್ಟಿದರು; ಮತ್ತು ಪೇಶವೆಯು ತಾನಾಗಿಯೇ ಮಾತು ತೆಗೆಯುವನೋ ಹೇಗೆಂದು ದಾರೀ ನೋಡಿ ನೋಡಿ ಮಾಸ್ಟಿನ ಸಾಹೇಬನು ಬೇಸತ್ತುಹೋಗಿದ್ದನು; ಹಾಗು ತಾನಾಗಿಯೇ ಮಾತು ಸುರುವು ಮಾಡಲೋ ಹೇಗೆಂದು ಅವನು ಮುಂಬಯಿಯ ಕೌನ್ಸಿಲ್ಲಿಗೆ ವಿಚಾರಿಸಿದನು. ೪ನೇ ತಾರೀಖಿನ ದಿನ ಮಹದಾಜಿ ಶಿಂದೆಯು ಪುಣೆಗೆ ಬಂದನು; ಅವನ ಮತ್ತು ಪೇಶವೆ ಮಾಧವರಾಯನ ಭೆಟ್ಟಿಯು ಸಂಗಮದಲ್ಲಿಯೇ ಆಯಿತು. ೫ನೇ ತಾರೀಖಿನ ದಿನ ಪೇಶವೆ ಮಾಧವರಾಯನು ಮಾಸ್ಟಿನನಿಗೆ ವಾಡೆಯಲ್ಲಿ ಭೆಟ್ಟಿಯಾಗುವದಕ್ಕೆ ಕರೆಕಳಿಸಿ ಊಟಕ್ಕಾಗಿ ಇಟ್ಟುಕೊಂಡನು. ಊಟಕ್ಕೆ ಮೊದಲು ಯುರೋಪ-ಹಿಂದುಸ್ತಾನಗಳ ಬಗ್ಗೆ ಅವರಿಬ್ಬರ ನಡುವೆ ಎಷ್ಟೋ ಪ್ರಶ್ನೋತ್ತರಗಳು ನಡೆದವು. ೧೦ನೇ ತಾರೀಖಿನ ಸುಮಾರಕ್ಕೆ ಮುಂಬಯಿಯಿಂದ

ಮಾಸ್ಟಿನ ಸಾಹೇಬನಿಗೆ ತಾನಾಗಿಯೇ ಹೋಗಿ ಮಾತಾಡಲಿಕ್ಕೆ ಅನಿರ್ವಾಹವೆಂದು ಅಪ್ಪಣೆ ಸಿಕ್ಕಿತು; ಆದರೆ "ಆ ಜನರ ಸಂಗಡ ಮಾತನಾಡುವಾಗ ಅವಶ್ಯವಿದ್ದ ಎಲ್ಲ ಬಗೆಯ ಸಾವಧಾನತೆಯಿಂದ ಮಾತಾಡಬೇಕು"ಂಬ ಎಚ್ಚರಿಕೆಯು ಕೊಡಲ್ಪಟ್ಟಿತ್ತು.

ಇತ್ತ ಕಡೆ ಬ್ರೋಮ ಸಾಹೇಬನು ನಾಶಿಕಕ್ಕೆ ರಾಘೋಬನ ಕಡೆಗೆ ಕಳಿಸಲ್ಪಟ್ಟಿದ್ದನು. ಇಂದ್ರಗಡದಲ್ಲಿ ಅವನು ರಾಘೋಬನಿಗೆ ಭೆಟ್ಟಿಯಾದನು. ಆ ಸಂಗಮದಲ್ಲಿ ರಾಘೋಬನು ಇಂಗ್ಲಿಷರ ಸಹಾಯವು ತಾನಾಗಿಯೇ ಸಿಗುವದೆಂದು ಆನಂದ ಪ್ರದರ್ಶನ ಮಾಡಿದನು. "ಪೇಶವೆ ನಾನಾಸಾಹೇಬನ ಮರಣದ ತರುವಾಯ ಮಾಧವರಾಯನಿಗೆ ನಾನು ಎಲ್ಲ ಬಗೆಯಿಂದಲೂ ಸಹಾಯ ಮಾಡಿದೆನು; ಅವನ ಮಾನ-ಮರ್ಯಾದೆಗಳನ್ನು ಕಾಯ್ದೆನು; ಅವನ ಪತಿಯಿಂದ ದಂಡೆತ್ತಿ ಬಂದೆನು; ಮತ್ತು ಮಾಧವರಾಯನನ್ನು ನನ್ನ ಹೊಟ್ಟೆ ಮಗನಂತೆ ಜೋಪಾನ ಮಾಡಿದೆನು. ಹೀಗಿರುತ್ತಿರಲು, ಮಾಧವರಾಯನು ನನಗೆ ಕೃತಘ್ನನಾದನು; ನನ್ನ ಅಪಮಾನ ಮಾಡಹತ್ತಿದನು; ನನ್ನ ಮಿತ್ರರಾದ ಸರದಾರರನ್ನು ಒಡಕೊಳ್ಳಹತ್ತಿದನು; ಮತ್ತು ಕಡೆಗೆ ನನ್ನನು ಸೆರೆಹಿಡಿಯಬೇಕೆಂದು ಕೂಡ ಬೇತು ಮಾಡಿದನು. ಹೀಗಾಗಿ ನನಗೀಗ ಇಂಗ್ಲಿಷರ ಹೊರತು ಯಾವ ಸಹಾಯಕರೂ ಉಳಿವೇ ಇಲ್ಲ!" ಎಂಬದಾಗಿ ರಾಘೋಬನು ನುಡಿದನು. ರಘುನಾಥರಾಯನಿಗೆ ಇಂಗ್ಲಿಷರಿಂದ ಮುಖ್ಯವಾಗಿ ತೋಫುಗಳ ಹಾಗು ಮದ್ದು ಗುಂಡುಗಳ ಸಹಾಯವು ಬೇಕಾಗಿತ್ತು. ಸ್ವತಃ ರಾಘೋಬನ ಹತ್ತರ ಈ ಕಾಲಕ್ಕೆ ನೂರಾರು ಸಣ್ಣ ಸಣ್ಣ ತೋಫುಗಳಿದ್ದವು; ಆದರೆ ಅವುಗಳ ಗಾಡಿ ಮುಂತಾದವುಗಳು ಅನುಪಯುಕ್ತವಾಗಿದ್ದವು. ಆನಂದವಲ್ಲಿಯಲ್ಲೂ ಸಣ್ಣದೊಂದು ತೋಫಿನ ಆಗರವಿದ್ದಿತು; ಆದರೆ ಇಂಗ್ಲಿಷರ ತೋಫಖಾನೆಯ ಸಹಾಯವಿಲ್ಲದೆ ತನ್ನ ಆಟ ಸಾಗದೆಂದು ರಾಘೋಬನಿಗೆ ಅನಿಸುತ್ತಿತ್ತು. ಮಾಧವರಾಯನ ಸಂಗಡ ತಾತ್ಪೂರ್ತಿಕ ಒಪ್ಪಂದವಾದಂದಿನಿಂದ ರಾಘೋಬನು ತನ್ನಲ್ಲಿದ್ದ ಕುದುರೆ ಸವಾರರನ್ನು ಬಹಳವಾಗಿ ಕಡಿಮೆಮಾಡಿದ್ದನು. ಅವನ ಹತ್ತರ ಬರಿಯ ಎರಡು ಸಾವಿರ ಕುದುರೇ ಸವಾರರಷ್ಟೇ ಇದ್ದರು; ಆದರೆ ದಂಡೆತ್ತಿ ಹೋಗುವಾಗ ಬೇಕಾದಷ್ಟು ಜನ ಕುದುರೆ ಸವಾರರನ್ನು ಕೆಲಸಕ್ಕೆ ಸೇರಿಸಿಕೊಳ್ಳಬಹುದೆಂದು ಅವನು ನಂಬಿದ್ದನು. ಬ್ರೋಮ ಸಾಹೇಬ ಹಾಗು ರಾಘೋಬರ ಭೆಟ್ಟಿಯಲ್ಲಿ ಮೇಲಿನಂತೆ ಸಾಮಾನ್ಯ ಮಾತುಕತೆಗಳಾದವು. ತಾವು ಮಾಡಿದ ಪ್ರತಿಫಲದ ಸಲುವಾಗಿ ಇಂಗ್ಲಿಷರಿಗೆ ಹಣವನ್ನಲ್ಲದೆ ಕೆಲವು ಹಕ್ಕುಗಳನ್ನೂ, ದೇಣಿಗೆಯನ್ನೂ ಕೊಡಬೇಕಾಗುವದೆಂದು ಮುಂಬಯಿಯವರ ಅಪೇಕ್ಷೆಯಿದೆಯೆಂದು ಬ್ರೋಮ ಸಾಹೇಬನು ಒಡನುಡಿದು ತೋರಿಸಿದನು; ಆದರೆ ಎರಡೂ ಪಂಗಡದವರು ಖಂಡ-ತುಂಡಾಗಿ ಮಾತನಾಡಲು ಸಿದ್ಧರಿರದ್ದರಿಂದ, ಬ್ರೋಮ ಸಾಹೇಬನು ನಿಶ್ಚಿತವಾಗಿ ಏನೂ ಮಾತನಾಡದೆ ಹಿಂದಿರುಗಿ ಬಂದನು.

೧೭೬೮ನೇ ಜನವರಿ ೨೭ನೇ ತಾರೀಖಿನ ದಿವಸ ಪುನಃ ಮಾಸ್ಟಿನನ ಹಾಗು ಪೇಶವೆ ಮಾಧವರಾಯನ ಭೆಟ್ಟಿಯಾಯಿತು. ಆ ವೇಳೆಯಲ್ಲಿ ಒಪ್ಪಂದದಲ್ಲಿಯ ಗಳ

ಕರಾರುಗಳ ಕಚ್ಚಾ ನಕಲು ತಯಾರಿಸಲ್ಪಟ್ಟಿತು; ಆದರೆ ಹಿಂದಕ್ಕೆ ೧೭೬೯ರಲ್ಲಿ ಆದ ಒಪ್ಪಂದದ ವಿರುದ್ಧವಾಗಿ ಇಂಗ್ಲಿಷರು ಆಂಗ್ರೆಯರ ಹುಡುಗರನ್ನು ತಮ್ಮ ಸ್ವಾಧೀನ ದಲ್ಲಿ ತಕ್ಕೊಂಡದ್ದು ವಿಹಿತವಾಗಲಿಲ್ಲೆಂದೂ, ನಾಳೆ ರಾಘೋಬನ ಪ್ರಶ್ನೆಯಾದರೂ ಇದರಂತೆಯೇ ಬರುವದೆಂದೂ ಮುಂತಾದ ವಿಷಯಗಳ ಸಂಬಂಧ ಮಾತು-ಕಥೆಗಳಾ ದವು. ಇದೇ ವೇಳೆಗೆ ನಿಜಾಮ ಇಲ್ಲವೆ ಹೈದರ ಅಲ್ಲಿಯು ಮರಾಟರನ್ನು ಕೂಡುವ ಸಂಭವ ತೋರುವದಿಲ್ಲೆಂದೂ, ತಾವಾದರೂ ಸದ್ಯಕ್ಕೆ ಮರಾಟರ ಕೂಡ ಒಪ್ಪಂದ ಮಾಡಿಕೊಳ್ಳುವ ಅವಶ್ಯಕತೆಯು ಇಲ್ಲೆಂದೂ ಮಾಸ್ಟಿನ ಸಾಹೇಬನಿಗೆ ಇಂಗ್ಲಿಷರು ಬರೆದು ತಿಳಿಸಿದರು. ಫೆಬ್ರುವರಿ ೧೯ನೇ ತಾರೀಖಿನ ದಿನ ಪೇಶ್ವೆ ಮಾಧವರಾಯನು ಮುಂಬಯಿಯಲ್ಲಿಯ ಇಂಗ್ಲಿಷರು ಯುದ್ಧಸನ್ನಾಹ ಮಾಡಿಕೊಂಡು ಎತ್ತ ಕಡೆಗೆ ಹೊರಡುವರೆಂದು ವಿಚಾರಿಸಿದನು. ಆ ಯುದ್ಧಸನ್ನಾಹವು ನಿಜವಾಗಿ ದಕ್ಷಿಣಕ್ಕೆ ಹೈದರ ಅಲ್ಲಿಯ ಮೇಲೆ ಸಾಗಿಹೋಗುವದಿತ್ತು; ಆದರೆ ಅದು ಮಾಲವಣ ಮತ್ತು ರಾಯರೀ ಕಡೆಗೆ ಹೋಗುವದೆಂದು ಮಾಸ್ಟಿನ ಸಾಹೇಬನು ಪೇಶ್ವೆಗೆ ಸುಳ್ಳು ಸುಳ್ಳೇ ಹೇಳಿಬಿಟ್ಟನು ಮುಂದೆ ನಿಜವಾದ ಸಂಗತಿಯು ತಿಳಿದ ಮೇಲೆ ಪೇಶ್ವೆಗೆ ಬಹಳ ಆಶ್ಚರ್ಯವಾಯಿತು; ಮತ್ತು ಬೇದನೂರ, ಸೌದಾ ಕೋಟೆಗಳು ತಮ್ಮ ಸ್ವಾಧೀನ ದಲ್ಲಿರುವದರಿಂದ ಅವುಗಳನ್ನು ಇಂಗ್ಲಿಷರು ತಕ್ಕೊಳ್ಳಬಾರದೆಂದೂ ಬೇಕಾದರೆ ಅವರು ಹೈದರನ ಮೇಲೆ ದಂಡೆತ್ತಿ ಹೋಗಬಹುದೆಂದೂ ಪೇಶ್ವೆಯು ಮಾಸ್ಟಿನನಿಗೆ ತಿಳಿಸಿ ದನು; ಆದರೆ ಕೋಟೆ-ಜಹಗೀರುಗಳನ್ನು ತಕ್ಕೊಳ್ಳದ ಹೊರತು ಹೈದರನ ಪಾರು ಪತ್ಯ ಮಾಡಲು ಬರುವದಿಲ್ಲೆಂದೂ ಆದ್ದರಿಂದಲೇ ಇಂಗ್ಲಿಷರೂ ಪೇಶ್ವೆಯೂ ಕೂಡಿ ಕೊಂಡು ಹೈದರನ ಸಮಾಚಾರ ತಕ್ಕೊಳ್ಳುವದು ವಿಹಿತವೆಂದೂ ಈ ವಿಷಯದ ಸಂಬಂಧ ಮಾತನಾಡಲು ಪೇಶ್ವೆಯು ತನ್ನೊಬ್ಬ ವಕೀಲನನ್ನು ಮುಂಬಯಿಗೆ ಕಳಿಸ ಬೇಕೆಂದೂ ಮಾಸ್ಟಿನ ಸಾಹೇಬನು ಸೂಚಿಸಿದನು. ಈ ಮಾತಿಗೆ ಪೇಶ್ವೆಯು ಒಪ್ಪಿ ದನು. ಕಡೆಗೆ ಒಂದು ಕುದುರೆಯನ್ನೂ ಒಂದು ಮುಂಡಾಸವನ್ನೂ ಕೊಟ್ಟು ಪೇಶ್ವೆಯು ಮಾಸ್ಟಿನನನ್ನು ಕಳಿಸಿಕೊಟ್ಟನು. ಇದಕ್ಕೆ ಪ್ರತಿಯಾಗಿ ಇಂಗ್ಲಿಷರು ಒಂದು ಚಿರ್ಚು ಮತ್ತು ಒಂದು ಹೆಣ್ಣು ಸಿಂಹವನ್ನು ಪೇಶ್ವೆಗೆ ಕಾಣಿಕೆಯಾಗಿ ಕೊಟ್ಟರು ಪೇಶ್ವೇ ಮತ್ತು ಮಾಸ್ಟಿನ ಸಾಹೇಬರ ನಡುವಿನ ಎಷ್ಟೋ ಕಲಮುಗಳು ಆಗಲೇ ನಿಕಾಲೆಯಾಗಿಬಿಟ್ಟವು; ಮತ್ತು ಪೇಶ್ವೆಯ ಹುಕುಂ ಮಾಸ್ಟಿನನ ಕೈಯಲ್ಲಿ ಸಿಕ್ಕಿತು. ಆ ಕಲಮುಗಳು ಕೆಳಗೆ ಕೊಟ್ಟಂತೆ ಅವೆ:—

(೧) ಮೂರು ವರ್ಷಗಳ ಹಿಂದೆ ಇಂಗ್ಲಿಷ ವ್ಯಾಪಾರಿಗಳಿಗೆ ಮರಾಟರಿಂದಾದ ೩೦,೯೮೫ ರೂಪಾಯಿ ೨ ಆಣೆ ಹಾನಿಯನ್ನು ಪೇಶ್ವೆಯರು ತುಂಬಿಕೊಡಬೇಕು.

(೨) ಮುಂಬಯಿಯ ನಸರವಾನಜಿ ಮೋದಿಯಿಂದ ಕೊಂಡಿದ್ದ ಕುದುರೇ ಮನೆ ಯನ್ನು ಅವನಿಗೆ ತಿರುಗಿ ಕೊಡಬೇಕು.

(೩) ಏಳು ವರ್ಷಗಳ ಹಿಂದೆ ಲೂಟಿಮಾಡಿದ್ದ ಬೈರಾಮಜಿ ಹೋರಮುಸಜಿಯ

ಎರಡುನೂರು ಖಂಡಗ ಧಾನ್ಯದ ಬದಲು ಎರಡನೆಯದನ್ನು ಕೊಡಬೇಕು.

(೪) ರಿಚರ್ಡ ನಾವಲಂಡ ಎಂಬ ಹೆಸರಿನ ಇಂಗ್ಲಿಷನ ಗುಲಾಮರು ಸಾಷ್ಟಿ ಯಿಂದ ಓಡಿಹೋಗಿದ್ದರೆ ಅವರನ್ನು ಸ್ಥಳಿಕ ಅಧಿಕಾರಿಯು (ಠಾಣೇದಾರ) ಕಡೆ ಯಿಂದ ತಿರುಗಿ ದೊರಕಿಸಿ ಕೊಡಬೇಕು; ಅಲ್ಲದೆ

(೫) ಅದೇ ಮನುಷ್ಯನ ಬೇರೆ ಇಬ್ಬರು ಗುಲಾಮರು ಚೌಲ ಎಂಬಲ್ಲಿಗೆ ಓಡಿ ಹೋಗಿದ್ದಾರೆ. ಅವರನ್ನಾದರೂ ದೊರಕಿಸಿ ಕೊಡಬೇಕು.

(೬) ಮುಂಬಯಿ ದ್ವೀಪದಲ್ಲಿದ್ದ ಜಾಲಗಾರರು ಮೀನ ಹಿಡಿಯಲಿಕ್ಕೆ ಹುಗಿ ದಂಥ ಬಂಬುಗಳನ್ನು ತೆಗೆದೊಗೆಯಲಿಕ್ಕೆ ಕರಂಜದಲ್ಲಿರುವ ಠಾಣೇದಾರರಿಗೆ ಅಪ್ಪಣೆ ಕಳಿಸಬೇಕು.

---

## ೮ನೆಯ ಪರಿಚ್ಛೇದ.

# ರಾಘೋಬನ ಕಾಲ.

ಹಿರಿಯ ಮಾಧವರಾಯನ ಕಾಲಕ್ಕೆ ಮರಾಟರ ರಾಜ್ಯಕಾರಭಾರದಲ್ಲಿ ಕೈ ಹಾಕ ಲಿಕ್ಕೆ ಇಂಗ್ಲಿಷರಿಗೆ ಸಂಧಿ ಸಿಗಲಿಲ್ಲ. ಮಾಧವರಾಯನು ರಾಘೋಬನನ್ನು ಪೂರ್ಣವಾಗಿ ಸದೆಬಡೆದು, ಅವನಿಗೆ ಹೆಚ್ಚು ಸೈನ್ಯವನ್ನು ಇಟ್ಟುಕೊಳ್ಳಲಿಕ್ಕೆ ಬರದಂತೆ-ಸಾವಿರಾರು ಜನರನ್ನು ಮಾತ್ರ ಮರ್ಯಾದೆಗೆಂದು ಇಟ್ಟುಕೊಳ್ಳುವಂತೆ-ಅಷ್ಟರಮಟ್ಟಿಗೆ ನೇಮ ಣೂಕ ಮಾಡಿಕೊಟ್ಟು, ಅವನನ್ನು ಗೋದಾವರೀ ತೀರದಲ್ಲಿ ಸ್ನಾನ-ಸಂಧ್ಯೆಗಳನ್ನು ಮಾಡಲಿಕ್ಕೆ ಹಚ್ಚಿದನು; ಮತ್ತು ಹಿಂದೆ ಹೇಳಿದಂತೆ ರಾಘೋಬನ ಸಂಗಡ ಇಂಗ್ಲಿಷರ ಕಾರಸ್ಥಾನವು ಒಳಗಿಂದೊಳಗೆ ನಡದೇ ಇತ್ತು. ಆದರೂ ಮಾಧವರಾಯನ ಬೆದರಿಕೆ ಯು ಮೂಲಕ ಪ್ರಸಿದ್ಧ ರೀತಿಯಿಂದ ರಾಘೋಬನಿಗೆ ಸಹಾಯ ಮಾಡಿ, ಆವನನ್ನು ಪುಣೆಗೆ ತರುವ ಜಬಾಬುದಾರಿಯನ್ನು ತಮ್ಮ ಮೈಮೇಲೆ ಹೊತ್ತುಕೊಳ್ಳಲಿಕ್ಕೆ ಇಂಗ್ಲಿಷ ರಿಗೆ ಧೈರ್ಯ ಸಾಲಲಿಲ್ಲ. ಇದಲ್ಲದೆ ಕರ್ನಾಟಕದಲ್ಲಿಯು ಗೊಂದಲದ ಮೂಲಕ ಮಾಧವರಾಯನೊಡನೆ ಕೇವಲ ಪರಕೀಯ ದೃಷ್ಟಿಯಿಂದ ಇಲ್ಲವೆ ವೈರತ್ವದಿಂದ ನಡಕೊಳ್ಳುವದು ಲಾಭದಾಯಕವಲ್ಲೆಂದು ಅವರಿಗೆ ಸಂಪೂರ್ಣವಾಗಿ ಮನವರಿಕೆ ಯಾಗಿತ್ತು; ಆದ್ದರಿಂದ ಒಳಗಿಂದೊಳಗೆ ನಡೆದ ಆ ಕಾರಸ್ಥಾನಕ್ಕೆ ಪ್ರಕಟಸ್ವರೂಪವು ಬರಲಿಲ್ಲ; ಆದರೆ ಮಾಧವರಾಯನ ನಿಧನದ ತರುವಾಯ ಪೇಶವೇ ಪದವು ಬಹಳ ಶಿಥಿಲವಾಯಿತು; ಕರ್ನಾಟಕದಲ್ಲಿಯು ಕಾರಸ್ಥಾನವು ಸಡಿಲಾಯಿತು; ಮತ್ತು ಪುಣೆಯಲ್ಲಿ ನಾನಾಫಡಣವೀಸನ ಪ[illegible]ಸ್ಸು ದರ್ಬಾರದಲ್ಲಿ ಹೆಚ್ಚೆಚ್ಚು ಬೀಳಹತ್ತಿ ದ್ದರೂ ಅವನು ಇಂಗ್ಲಿಷರ ಸ್ವಭಾವವನ್ನು ಚೆನ್ನಾಗಿ ಬಲ್ಲವನಾಗಿದ್ದರೂ ರಘುನಾಥ ರಾಯನಲ್ಲಿದ್ದ ಅವನ ತೀವ್ರ ತಿರಸ್ಕಾರ ಮತ್ತು ದ್ವೇಷದ ಸಲುವಾಗಿ, "ರಾಘೋಬನು ಬೇಡ; ಅವನ ಸಲುವಾಗಿ ಆದದ್ದಾಗಲಿ" ಎಂದು ನಾನಾಫಡಣವೀಸನು ಕಲ್ಲು

ಮನಸ್ಸು ಮಾಡಿಕೊಂಡಿದ್ದನು. ರಾಘೋಬನ ದ್ವೇಷದ ಮೂಲಕ ನಾನಾನಿಗೂ ಅವನ ಸಹಕಾರಿಗಳಾದ ಸರದಾರರಿಗೂ ಹೀಗೆ ತುಸ ದೃಷ್ಟಿದೋಷವಾಗಿರಲು, ಪುಣೆಯಲ್ಲಿದ್ದ ಇಂಗ್ಲಿಷ ವಕೀಲನ ಸಹಾಯದಿಂದ ಮುಂಬಯಿಯ ಇಂಗ್ಲಿಷರು ಎಲ್ಲ ಸಂಗತಿಯನ್ನು ನೋಡುತ್ತ ಹೊಂಚು ಹಾಕಿಕೊಂಡು ಕುಳಿತಿದ್ದರು. ಮೈತ್ರಿಯನ್ನು ಬೆಳಿಸಲು ಇಂಗ್ಲಿಷರು ಒಪ್ಪಂದವನ್ನು ಮಾಡಿಕೊಂಡಿಲ್ಲವೆಂದೂ, ಮುಂಬಯಿ, ವಸಯಿ, ಸಾಷ್ಟಿಗಳ ಕಡೆಗೆ ಸಿಗತಕ್ಕಂಥ ಪ್ರದೇಶಗಳು ಹಾಗು ಇತರ ಲಾಭಗಳು ಹೇಗಾದರೂ ಸಿಗಬೇಕೆಂದೂ, ಇದಕ್ಕಾಗಿಯೇ ಅವರು ತಮ್ಮ ವಕೀಲನನ್ನು ಪುಣೆಯಲ್ಲಿ ಇಟ್ಟಿರುವರೆಂದೂ ಮಾಧವರಾಯನಿಗೆ ತಿಳಿಯದೆ ಇರಲಿಲ್ಲ. ಆದರೂ ಪೇಶವೆಗೆ ಇತ್ತ ಜಂಜೀರೆ ಹಾಗು ಅತ್ತ ಕರ್ನಾಟಕ ಇವೆರಡೂ ಕಡೆಗೆ ಇಂಗ್ಲಿಷರ ಸಹಾಯವು ಬೇಕಾಗಿತ್ತು. ಈ ಆಶೆಗೆ ಬಿದ್ದು ಮಾಧವರಾಯನು ಇಂಗ್ಲಿಷ ವಕೀಲನನ್ನು ಪುಣೆಯ ದರಬಾರದಲ್ಲಿ ಇಟ್ಟುಕೊಳ್ಳಲಿಕ್ಕೆ ಸಮ್ಮತಿಪಟ್ಟಿರಬಹುದು, ಮತ್ತು ಇದರಿಂದಲೇ ಮುಂದೆ ನಾನಾಫಡಣವೀಸನಿಗೆ ಆ ಇಂಗ್ಲಿಷ ವಕೀಲನನ್ನು ಪುಣೆಯಿಂದ ಹೊರಗೆ ಹಾಕಲಿಕ್ಕೆ ಬಂದಿರಲಿಕ್ಕಿಲ್ಲ. ಅದು ಹೇಗೆ ಇದ್ದರೂ, ಇಂಗ್ಲಿಷ ವಕೀಲನು ಪುಣೆಯಲ್ಲಿ ಸ್ಥಾಯಿಕನಾಗಿ ಇದ್ದುದರಿಂದ, ಇಂಗ್ಲಿಷರ ಕೈಯು ಪೇಶವೆಯ ಕಾರಭಾರದಲ್ಲಿ ನಿರಂತರವಾಗಿ ಹೊಕ್ಕಂತೆಯೇ ಆಯಿತು; ಮತ್ತು ಅವರ ಆ ಕಾರಸ್ಥಾನರೂಪೀ ವೃಕ್ಷಕ್ಕೆ ಪೇಶವೆ ನಾರಾಯಣರಾಯರ ಮರಣದ ತರುವಾಯ ಫಲಪ್ರಾಪ್ತಿಯಾಯಿತು. ನಾರಾಯಣರಾಯನ ಖೂನಿಯಾದ ರಾತ್ರಿಯೇ ಇಂಗ್ಲಿಷ ವಕೀಲನಾದ ಮಾಸ್ಟಿನನು ದಾದಾಸಾಹೇಬನ ಭೆಟ್ಟಿಗೆ ಬಂದಿದ್ದನು ದಾದಾಸಾಹೇಬನು ಪಟ್ಟಕ್ಕೆ ಬಂದರೆ ಅನಾಯಾಸವಾಗಿಯೇ ತಮ್ಮ ಕೆಲಸವಾಗುವದೆಂದು ಅವನಿಗೆ ಅನಿಸಿರಬಹುದು; ಆದರೆ ಮುಂದೆ ನಾರಾಯಣರಾಯನ ಖೂನಿನ ಪತ್ತೆಯಲ್ಲಿ ರಾಘೋಬನು ಪುರಾವೆ ಸಹಿತ ಸಿಕ್ಕನು; ಮತ್ತು ಬಾರಭಾಯಿಗಳ ಕಾರಸ್ಥಾನವು ಉಂಟಾಗಿ, ದಾದಾಸಾಹೇನು ಪುಣೆಯನ್ನು ಬಿಟ್ಟು ದೂರ ದೇಶಕ್ಕೆ ಓಡಿಹೋಗಬೇಕಾಯಿತು ಆದರೂ ಇಂಗ್ಲಿಷರು ತಮ್ಮ ಕೈಯನ್ನು ಪೇಶ್ವೆಯ ಕಾರಭಾರದಲ್ಲಿ ಹೊಗಿಸುವ ಬಗ್ಗೆ ನಿರಾಶರಾಗುವ ಕಾರಣವಿದ್ದಿಲ್ಲ; ಯಾಕಂದರೆ ರಾಘೋಬನು ತನಗೇ ಪೇಶ್ವೆ ಪಟ್ಟವು ದೊರಕಬೇಕೆಂಬ ಉದ್ದೇಶದಿಂದ ಪೇಶವೆಯ ಶತ್ರುಗಳೆಲ್ಲರನ್ನು ಮಿತ್ರರನ್ನಾಗಿ ಮಾಡಿಕೊಳ್ಳಲು ಪ್ರಯತ್ನ ನಡೆಸಿದ್ದನು. ಇಂಗ್ಲಿಷರು ಪೇಶವೆಯ ಪ್ರತ್ಯಕ್ಷ ಶತ್ರುಗಳೆಂದು ಇನ್ನೂ ಎಣಿಸಲ್ಪಟ್ಟಿದ್ದಿಲ್ಲ; ಆದರೆ ನಾನಾಫಡಣವೀಸನ ಪಕ್ಷಗಟ್ಟಿದರೆ ವಿಶೇಷ ಲಾಭವಾಗುವ ಆಶೆ ತೋರದ್ದರಿಂದ, ರಘುನಾಥರಾಯನನ್ನು ಕೂಡಿಕೊಂಡು ಪೇಶ್ವೆಯ ವೈರಿಗಳಾದರೆ, ಅದರಿಂದಲೂ ವಿಶೇಷ ಹಾನಿಯಿಲ್ಲೆಂದು ಅವರಿಗೆ ಅನಿಸಿದ್ದರೆ ಅದು ಯೋಗ್ಯವೇ ಸರಿ. ದಾದಾಸಾಹೇನು ಪಟ್ಟಕ್ಕೆ ಬಂದಿದ್ದರೂ ಕೂಡ ಏನೂ ಹಾನಿಯಾಗುತ್ತಿದ್ದಿಲ್ಲವೆಂದು ಮತ್ತೊಂದು ಸಮಸ್ಯೆಯು ಹೊರಡುತ್ತಿತ್ತು; ಯಾಕಂದರೆ, ದಾದಾಸಾಹೇಬನೂ ಪೇಶವೆಯೇ ಆಗಿದ್ದನು; ಪರಕೀಯನಾಗಿರಲಿಲ್ಲ. ಗಂಗಾಬಾಯಿಯ ಹೊಟ್ಟೆಯಿಂದ

ಸವಾಯಿ ಮಾಧವರಾಯನು ಹುಟ್ಟಿಬರುವವರೆಗೆ ರಾಘೋಬನು ಪಟ್ಟಕ್ಕೆ ಬಾಧ್ಯಸ್ಥನಿದ್ದು, ಕಾರಭಾರಿಗಳೇ ಬಂಡುಗಾರರೆಂದು ಹೈದರ ಅಲ್ಲಿಯು ಅನ್ನುತ್ತಿದ್ದಂತೆ ಇವರಿಗೂ ಪ್ರಸಿದ್ಧರೀತಿಯಿಂದ ಅನ್ನಲಿಕ್ಕೆ ಮಾರ್ಗವಿತ್ತು; ಮತ್ತು ಸವಾಯಿ ಮಾಧವರಾಯನು ಹುಟ್ಟಿದ ಮೇಲಾದರೂ ಅವನು ನಾರಾಯಣರಾಯನ ನಿಜವಾದ ಮಗನು ಅಹುದೋ-ಅಲ್ಲವೋ? ಎನ್ನುವ ವಿಷಯದಲ್ಲಿ ಅದೇ ಪೇಶವೆಯ ಮನೆತನದಲ್ಲಿಯು ಅನೇಕ ಜನರು ಸಂಶಯ ತಕ್ಕೊಳುತ್ತಿರಲಿಕ್ಕೆ, ಕೇವಲ ಪರಕೀಯರಾದ ಇಂಗ್ಲಿಷರು ಆ ಸಂಶಯವನ್ನೇ ಮುಂದೆ ಮಾಡಿಕೊಂಡು ನಡೆಯಲಿಕ್ಕೆ ಯಾವ ಬಗೆಯ ತೊಂದರೆಯಿತ್ತು? ಅದು ಎಲ್ಲ ಬಗೆಯಿಂದಲೂ ಲಾಭದಾಯಕವೇ ಆಗಿತ್ತು.

ಶಿಂದೆ ಮತ್ತು ಹೋಳಕರರ ಮಧ್ಯಸ್ತಿಕೆಯು ವ್ಯರ್ಥವಾದ ಮೇಲೆ ದಾದಾಸಾಹೇಬನಿಗೆ ಪೇಶವೆಯ ಶತ್ರುಗಳ ಹೊರತು ಅನ್ಯ ಗತಿ ಇರಲಿಲ್ಲ. ಸುಜಾಉದ್ದೌಲಾ ಅಥವಾ ಹೈದರಅಲ್ಲಿ ಇವರ ಕಡೆಗೆ ಹೋಗಬೇಕೆಂದರೆ, ಅವರ ವಾಸಸ್ಥಳಗಳು ಬಹು ದೂರವಾಗಿದ್ದವು. ಅದಕ್ಕೋಸುಗ ಸಮೀಪದಲ್ಲಿಯೇ ಗುಜರಾಥದಲ್ಲಿದ್ದ ಇಂಗ್ಲಿಷರ ಕಡೆಗೆ ಹೋಗುವದು ಅವನಿಗೆ ಸುಲಭವೆನಿಸಿತು. ಇದಲ್ಲದೆ ಅದೇ ನಿಟ್ಟಿನಲ್ಲಿ ಬಡೋದೆಯ ಗಾಯಕವಾಡನ ವಾರಸದಾರರಲ್ಲಿ ಜಗಳವೆದ್ದಿದ್ದು, ಅವರಲ್ಲಿಯ ಫತ್ತೇಸಿಂಗನು ಪುಣೆಯ ಕಾರಭಾರಿಗಳ ಆಶ್ರಯ ಹೊಂದಿದ್ದರಿಂದ ಮತ್ತು ಗೋವಿಂದರಾಯನು ಮೊದಲಿನಿಂದಲೂ ದಾದಾಸಾಹೇಬನ ಪಂಗಡದವನಾದ್ದರಿಂದ ಇಂಗ್ಲಿಷರ ಸಂಗಡ ಗೋವಿಂದರಾಯ ಗಾಯಕವಾಡನ ಸಹಾಯವೂ ಅವನಿಗೆ ಸಿಗುವ ಸಂಭವವಿತ್ತು. ಆದಕಾರಣ ದಾದಾಸಾಹೇಬನು ಗುಜರಾತದ ಕಡೆಗೇ ತಿರುಗಿದನು.

ಮೊದಲು ದಾದಾಸಾಹೇಬ, ಗೋವಿಂದರಾವ ಗಾಯಕವಾಡ ಮತ್ತು ಮಾನಾಜಿ ಫಾಕಡೆ ಇವರೆಲ್ಲರೂ ಕೂಡಿಕೊಂಡು ಹರಿಪಂತ ಫಡಕೇನ ಕೂಡ ಯುದ್ಧ ಮಾಡುತ್ತಿದ್ದರು. ಶಿಂದೆ ಮತ್ತು ಹೋಳಕರರ ಮಧ್ಯಸ್ತಿಕೆಯಿಂದ ಕೆಲವು ವೇಳೆಯ ವರೆಗೆ ಯುದ್ಧವು ನಿಂತಿತು; ಆ ಮಧ್ಯಸ್ತಿಕೆಯಿಂದ ಏನೂ ಉಪಯೋಗವಾಗದೆ. ಮಹೀ ನದಿಯ ತೀರದಲ್ಲಿ ದೊಡ್ಡ ಯುದ್ಧವಾಗಿ ದಾದಾಸಾಹೇಬನು ಸೋತನು; ಮತ್ತು ಅವನ ತೋಫು, ಆನೆ, ನಿಶಾನೆ ಮುಂತಾದವುಗಳೆಲ್ಲ ಹರಿಪಂತನ ಕೈವಶವಾದವು. ಆಗ ದಾದಾಸಾಹೇಬನು ಸ್ವಲ್ಪ ಸೈನ್ಯದೊಡನೆ ಖಂಬಾಯತದ ಕಡೆಗೆ ಓಡಿ ಹೋದನು. ಇಷ್ಟರಲ್ಲಿ ಪಟವರ್ಧನನು ಬೆನ್ನಟ್ಟಿ ಬರುತ್ತಿರುವನೆಂಬ ಸುದ್ದಿಯು ದಾದಾಸಾಹೇಬನಿಗೆ ಹತ್ತಿದ್ದರಿಂದ, ಅವನು ಖಂಬಾಯತದ ಕೋಟೆಯಲ್ಲಿ ಆಶ್ರಯ ಹೊಂದುವ ಪ್ರಯತ್ನ ಮಾಡಿದನು; ಆದರೆ ಖಂಬಾಯತದ ನಬಾಬನು ಅವನಿಗೆ ಆಶ್ರಯ ಕೊಡಲಿಕ್ಕೆ ಸಮ್ಮತಿಸಲಿಲ್ಲ. ಆಗ ದಾದಾಸಾಹೇಬನು ಸುರತದಲ್ಲಿದ್ದ ಇಂಗ್ಲಿಷರ ಕಡೆಗಾದರೂ ತನ್ನನ್ನು ಸುರಕ್ಷಿತ ರೀತಿಯಿಂದ ಮುಟ್ಟಿಸಿರೆಂದು ನಬಾಬನಿಗೆ ಬಿದ್ದು ಹೇಳಿಕೊಳ್ಳಲು, ನಬಾಬನು ಆತನ ಆ ವಿನಂತಿಯನ್ನು ಮಾನ್ಯ ಮಾಡಿದನು; ಮತ್ತು ಅವನನ್ನು ಭಾವನಗರಕ್ಕೆ ಕಳಿಸಿದನು. ಭಾವನಗರದ ಬಂದರದಲ್ಲಿ ನಬಾಬನ ಹಡಗಗಳಿದ್ದವು. ಅವು

ಗಳಲ್ಲಿ ತನ್ನ ಜಡಿಗೆ ನೀರಿನವರು, ಕಾರಕೂನ-ಶಿಪಾಯಿಗಳು, ಆಳು ಹೋಳುಗಳು, ಗಾಡಿ-ಬಂಡಿಗಳು ಮುಂತಾದ ೭೦೦ ಜನರೊಡನೆ ದಾದಾಸಾಹೇಬನು ಕುಳಿತು ಸುರತಿಗೆ ಸುಖರೂಪವಾಗಿ ಮುಟ್ಟಿದನು. ಯುದ್ಧದಲ್ಲಿ ಅಷ್ಟು ಶಕ್ತಿಗುಂದಿದ್ದರೂ ದಾದಾಸಾಹೇಬನಲ್ಲಿ ೬೦೦ ಕುದುರೆಗಳೂ ೭ ಆನೆಗಳೂ ಇದ್ದವು; ಆದರೆ ಅವುಗಳನ್ನು ಸಾಕಲಿಕ್ಕೆ ಯಾರೂ ಸಿದ್ಧರಾಗದ್ದರಿಂದ, ಆವನು ಅವುಗಳನ್ನು ಕಣ್ಣಿ ಹರಿದು ಬಿಟ್ಟುಕೊಟ್ಟು ಸುರತಿಗೆ ಹೋಗಬೇಕಾಯಿತು!

ಇದಕ್ಕೂ ಮೊದಲು ಕೆಲವು ದಿನಗಳ ಹಿಂದೆ ದಾದಾಸಾಹೇಬನು ಮಾಳವಕ್ಕೆ ಓಡಿ ಹೋಗಿದ್ದನು. ಅಲ್ಲಿಂದ ಶಿಂದೆ-ಹೋಳಕರರ ಮಧ್ಯಸ್ಥಿಕೆಯಿಂದ ತಿರುಗಿ ಬರುತ್ತಿರುವಾಗ ತಾಪೀ ನದಿಯನ್ನು ಮುಟ್ಟುವಾಗಲೇ ಅವನು ಸುರತದ ಗವರ್ನರನ ಮುಖಾಂತರ ಇಂಗ್ಲಿಷರ ಸಂಗಡ ಮಾತು-ಕಥೆಗೆ ಪ್ರಾರಂಭಿಸಿದ್ದನು. ಆಗ ಇಂಗ್ಲಿಷರು ಅವನಿಗೆ, "ಸದ್ಯಕ್ಕೆ ಸೈನ್ಯದ ವೆಚ್ಚದ ಸಲುವಾಗಿ ಹದಿನೈದು ಲಕ್ಷದಿಂದ ಇಪ್ಪತ್ತು ಲಕ್ಷಗಳ ವರೆಗೆ ಹಣವನ್ನು ಮುಂಗಡ ಕೊಡಬೇಕು; ಮತ್ತು ಬಾರಭಾಯಿಗಳ ಬಂಡನ್ನು ಮುರಿದು, ಪುಣೆಯಲ್ಲಿ ನಿಮ್ಮನ್ನು ಪಟ್ಟಕ್ಕೆ ಕೂಡ್ರಿಸಿದ ಮೇಲೆ ಸಾಷ್ಟಿ ಮತ್ತು ವಸಯಿಗಳನ್ನು ಕೊಡಬೇಕು; ಅಂದರೆ-ನಾವು ನಮ್ಮ ತೋಫು ಸಹಿತ ಎರಡೂವರೆ ಸಾವಿರ ಕಾಲಾಳುಗಳನ್ನು ನಿಮ್ಮ ಸಹಾಯಕ್ಕೆ ಕಳಿಸಿ ಕೊಡುತ್ತೇವೆ," ಎಂದು ಹೇಳಿದರು; ಆದರೆ ಈ ಮಾತು ದಾದಾಸಾಹೇಬನಿಗೆ ರುಚಿಸಲಿಲ್ಲ; ಯಾಕಂದರೆ ಆಗ ಅವನಲ್ಲಿ ಹದಿನೈದು ಲಕ್ಷ ರೋಖ ಹಣವು ಇರಲಿಲ್ಲ; ಅಥವಾ ಅದು ಅವನಿಗೆ ಸಿಗುವಂತೆಯೂ ಇದ್ದಿಲ್ಲ; ಅಲ್ಲದೆ ಸಾಷ್ಟಿ ಮತ್ತು ವಸಯಿಗಳನ್ನು ಕೊಡಲು ಸಮ್ಮತಿಸುವದು ಯೋಗ್ಯವಲ್ಲೆಂಬ ಸ್ವಾಭಿಮಾನವು ಅಂಥ ಸ್ಥಿತಿಯಲ್ಲಿಯೂ ಅವನಲ್ಲಿ ಉಳಿದಿತ್ತು. ಅದಕ್ಕನುಚಿತವಾಗಿ ಅವನು "ಇಂದು ನನ್ನಲ್ಲಿ ರೋಖ ಹಣವಿಲ್ಲ; ಮತ್ತು ಸಾಷ್ಟಿ-ವಸಯಿಗಳನ್ನೂ ಕೊಡುವದಿಲ್ಲ; ಆದರೆ ಗುಜರಾಥದಲ್ಲಿ ನಿಮಗೆ ಅನುಕೂಲವಾಗುವಂಥ ೧೧ ಲಕ್ಷ ರೂಪಾಯಿ ಉತ್ಪನ್ನಗಳ ಜಹಗೀರ ಹಾಕಿ ಕೊಡುತ್ತೇನೆ; ಮತ್ತು ಅದರ ಬದಲು ನೀವು ನನಗೆ ೧ ಸಾವಿರ ಕೆಂಪು ಮತ್ತು ೨ ಸಾವಿರ ಕರೀ ಸಿಪಾಯಿಗಳ ಹಾಗು ೧ ತೋಫುಗಳ ಸಹಾಯವನ್ನು ಕೊಡಬೇಕು." ಎಂದು ಇಂಗ್ಲಿಷರಿಗೆ ಹೇಳಿ ಕಳಿಸಿದನು. ಮುಂಬಯಿ ಸರಕಾರಕ್ಕೆ ಈ ಕರಾರುಗಳು ಸಾಧಾರಣ ಸಮ್ಮತವಾಗಿದ್ದವು; ಆದರೆ ಸಾಷ್ಟಿಯನ್ನು ಒಂದು ವೇಳೆ ಕೊಡುವದನ್ನು ಬಿಟ್ಟರೂ ನಡೆಯಬಹುದು; ಗುಜರಾಥದಲ್ಲಿಯ ಜಹಗೀರಿಯು ಹದಿನೆಂಟೂವರೆ ಲಕ್ಷ ಉತ್ಪನ್ನ ಬರುವಂತಹದಾದರೂ ಇರಬೇಕೆಂದು ಅವರು ಅನ್ನಹತ್ತಿದರು.

ಇದೇ ವೇಳೆಗೆ ಪೋರ್ತುಗೀಜರು ಸಾಷ್ಟಿಯನ್ನು ತಕ್ಕೊಳ್ಳುವ ಪ್ರಯತ್ನ ಮಾಡುವರೆಂಬ ಸುದ್ದಿಯು ಹಬ್ಬಿದ್ದರಿಂದ ಆಗ ಆ ಮಾತು ಅಷ್ಟಕ್ಕೇ ಉಳಿಯಿತು. ಸಾಷ್ಟಿಯ ಕಿಲ್ಲೇದಾರನು ಇದಕ್ಕೂ ಮೊದಲು ಮುಂಬಯಿಯವರಿಗೆ ಫಿತೂರಾಗಲು ಮಾತು-ಕಥೆ ನಡೆಸಿದ್ದನು. ೨ ಲಕ್ಷ ೬೦ ಸಾವಿರ ರೂಪಾಯಿಗಳನ್ನು ನನಗೆ ಕೊಟ್ಟರೆ, ನಾನು

ಸಾಷ್ಟಿಯನ್ನೂ ಕೋಟೆಯನ್ನೂ ನಿಮ್ಮ ಹಸ್ತಗತ ಮಾಡುವೆನೆಂದು ಆ ಕಿಲ್ಲೇದಾರನು ಅನ್ನುತ್ತಿದ್ದನು. ಮುಂಬಯಿಯ ಗವರ್ನರನಾದ ಹಾರ್ನಬಿಯು ೧ ಲಕ್ಷ ರೂಪಾಯಿಗಳನ್ನು ಕೊಡಲು ಸಿದ್ಧನಾಗಿದ್ದನು; ಮತ್ತು ಕಟ್ಟಕಡೆಗೆ ೧ ಲಕ್ಷ ೨೦ ಸಾವಿರದವರೆಗೆ ಆ ವ್ಯಾಪಾರವು ಬಗೆಹರಿಯಬಹುದಾಗಿತ್ತು; ಆದರೆ ಪುಣೆಯ ದರಬಾರದ ಗೊಂದಲದ ಮೂಲಕ ಬೇರೆ ರೀತಿಯಿಂದ ಆ ಕೋಟೆ ಸಿಗುವ ಸಂಭವ ಕಂಡು ಬಂದುದರಿಂದ, ಲಂಚಕೊಟ್ಟು ಅದನ್ನು ತಕ್ಕೊಳ್ಳುವ ಮಾರ್ಗವನ್ನು ಇಂಗ್ಲಿಷರು ಬಿಟ್ಟುಬಿಟ್ಟರು; ಮತ್ತು ಪೋರ್ತುಗೀಜರು ಸಾಷ್ಟಿಯನ್ನು ತಕ್ಕೊಳ್ಳುವರೆಂಬ ಸುದ್ದಿಯು ಅವರಿಗೊಂದು ನೆವ ಸಿಕ್ಕಂತಾಯಿತು. ಇತ್ತ ಪೋರ್ತುಗೀಜರ ಈ ಸುದ್ದಿಯು ಪುಣೆಗೆ ತಿಳಿದದ್ದರಿಂದ, ಕೋಟೆಯ ರಕ್ಷಣೆಗೆಂದು ಮತ್ತೆ ಐದು ನೂರರ ದಂಡನ್ನು ಕಿಲ್ಲೇದಾರನ ಸಹಾಯಕ್ಕೆ ಕಳಿಸಬೇಕೆಂದು ಗೊತ್ತಾಯಿತು. ಇದರಿಂದ ಕಿಲ್ಲೇದಾರನಿಗಾದರೂ ಲಂಚ ತಕ್ಕೊಂಡು ಕೋಟೆಯನ್ನು ಇಂಗ್ಲಿಷರ ಸ್ವಾಧೀನ ಮಾಡುವ ಸಂಧಿಯು ತಪ್ಪಿಹೋಯಿತು. ಕಡೆಗೆ ೧೭೭೪ನೇ ಇಸ್ವಿಯ ಡಿಶೆಂಬರ ೯ನೇ ತಾರೀಖಿನ ದಿವಸ ಇಂಗ್ಲಿಷರು ಸಾಷ್ಟಿಯನ್ನು ತಕ್ಕೊಳ್ಳಲು ನಿಶ್ಚಯಿಸಿದರು. ೬೨೦ ಜನ ಕೆಂಪು ಸಿಪಾಯಿಗಳು, ತೋಫುಗಳು ೨೦೦ ಜನ ತೋಫು ಹಾರಿಸುವವರು ಮತ್ತು ೧ ಸಾವಿರ ಜನ ಕರೀ ಸಿಪಾಯಿಗಳು ಇವರಿಂದ ಕೂಡಿದ ಸೈನ್ಯವು ಜನರಲ್ಲ ರಾಬರ್ಟ ಗಾರ್ಡನ್ನನ ಕೈಕೆಳಗೆ ಹೊರಟಿತು. ಜನರಲ್ಲ ಗಾರ್ಡನ್ನನು ಭೂಮಿಯ ಮೇಲಿಂದಲೂ ಕ್ಯಾಪ್ಟನ್ನ ವಾಟ್ಸನ್ನನು ಜಲಮಾರ್ಗದಿಂದಲೂ ಆ ಸ್ಥಳದ ಮೇಲೆ ಏರಿಹೋಗಬೇಕೆಂದು ನಿಶ್ಚಯಿಸಲ್ಪಟ್ಟಿತು. ೨೦ನೇ ತಾರೀಖಿನ ದಿವಸ ಕೋಟೆಯ ಗೋಡೆಗಳ ಮೇಲೆ ತೋಫಿನ ಗುಂಡುಗಳು ಬೀಳಲಿಕ್ಕೆ ಆರಂಭವಾಯಿತು. ಎಂಟು ದಿನಗಳಲ್ಲಿ ಗೋಡೆಯಲ್ಲಿ ದೊಡ್ಡದೊಂದು ತೂತು ಬಿದ್ದಿತು; ಆದರೆ ಕಂದಕವನ್ನು ಹುಗಿದು, ಅಲ್ಲಿಂದ ಕೋಟೆಯನ್ನು ಪ್ರವೇಶಿಸುವ ಕೆಲಸದಲ್ಲಿ ಇಂಗ್ಲಿಷ ಸೈನ್ಯಕ್ಕೆ ಬಹಳ ಶ್ರಮ ಹತ್ತಿತು. ಡಿಶೆಂಬರ ೨೭ನೇ ತಾರೀಖಿನ ದಿನ ಮಾಡಿದ ದಾಳಿಯನ್ನು ಮರಾಟರು ಹಿಂದಕ್ಕಟ್ಟಿದರು; ಮತ್ತು ಅದರಲ್ಲಿ ಇಂಗ್ಲಿಷರ ಸಿಪಾಯರೂ ಅಧಿಕಾರಿಗಳೂ ಕೂಡಿ ಒಟ್ಟು ೧೦೦ ಜನರು ಮಡಿದರು; ಆದರೆ ಎರಡನೇ ದಿನ ತಿರುಗಿ ಕೋಟೆಯ ಮೇಲೆ ಏರಿ ಹೋಗಿ, ಇಂಗ್ಲಿಷ ಸೈನ್ಯವು ಕೋಟೆಯನ್ನು ತಕ್ಕೊಂಡಿತು; ಮತ್ತು ಒಳಗಿನ ಬಹು ಜನ ಶಿಪಾಯಿಗಳ ಕೊಲೆ ಮಾಡಿತು ಇತ್ತ ಕಡೆಗೆ ಹ್ವರ್ಸೋವಾ, ಉರಣ (ಕರಂಜಾ) ಮುಂತಾದ ಸ್ಥಳಗಳನ್ನು ತಕ್ಕೊಳ್ಳಲಿಕ್ಕೆ ಇಂಗ್ಲಿಷರು ಇದೇ ಸಮಯಕ್ಕೆ ಪ್ರಯತ್ನ ಮಾಡಿದರು; ಮತ್ತು ಡಿಶೆಂಬರಿನ ಕಡೆಯ ಭಾಗದಲ್ಲಿ ಠಾಣೆಯ ಕೋಟೆಯೂ ಸುತ್ತು ಮುತ್ತಲಿನ ಠಾಣ್ಯಗಳೂ ಕೂಡಿ ಎಲ್ಲ ಸಾಷ್ಟೀ ನಡುಗಡ್ಡೆಯು ಇಂಗ್ಲಿಷರ ವಶವಾಗಿ ಮರಾಟರೆದುರಿಗೆ ಅದೊಂದು ಮಹದಾಶ್ಚರ್ಯದ ಸಂಗತಿಯಾಗಿ ಉಳಿಯಿತು.

ರಾಘೋಬನು ಸನ್ ೧೭೭೫ರ ಜಾನೇವಾರಿ ೩ನೇ ತಾರೀಖಿಗೆ ಹತ್ತು ಸಾವಿರ ಕುದುರೇ ಸವಾರರನ್ನು ಮತ್ತು ೪೦೦ ಕಾಲಾಳುಗಳನ್ನು ತಕ್ಕೊಂಡು ನೆಟ್ಟಗೆ ಬಡೋ

ನೆಗೆ ಹೊರಟನು. ಆವನ ಬೆನ್ನ ಮೇಲೆಯೇ ಹರಿಪಂತ ಫಡಕೆಯಿದ್ದನು; ಶಿಂಧೆ ಮತ್ತು ಹೋಳಕರರ ಸಂಗಡ ಮಾತಾಡಲಿಕ್ಕೆ ಸಖಾರಾಮ ಬಾಪು, ನಾನಾ ಫಡಣವೀಸ ಇವರು-ಹರಿಪಂತನ ಸಂಗಡವೇ ಇದ್ದರು; ಆದರೆ ಸಾಷ್ಟಿಯ ಕಡೆಯ ಗಡಿಬಿಡಿಯನ್ನು ಕೇಳಿ ಮತ್ತು ಇಂಗ್ಲಿಷರು ವಸಯಿಯನ್ನು ತಕ್ಕೊಳ್ಳುವರೊ-ಏನೋ, ಘಟ್ಟದ ಕಡೆಗೆ ಸೈನ್ಯವನ್ನು ಎಲ್ಲಿ ಕಳಿಸುವರೋ ಎಂಬ ಭೀತಿಯಿಂದ ಆ ಇಬ್ಬರೂ ಕಾರಭಾರಿಗಳು ಪುರಂದರಕ್ಕೆ ತಿರುಗಿ ಬಂದರು.

ಇದರ ತರುವಾಯ ಕೆಲವು ದಿನಗಳವರೆಗೆ ರಾಘೋಬನಿಗೆ ಶಿಂಧೆ ಹೋಳಕರರ ಹವ್ಯಾಸವು ಬಿಡದ್ದರಿಂದ ಅವನು ಹರಿಪಂತನೊಡನೆ ಅರ್ಧಮರ್ಧ ಒಪ್ಪಂದದ ಮಾತನ್ನೇ ಮಾತಾಡುತ್ತಿದ್ದನು; ಆದರೆ ಕಡೆಗೆ ಅವನು ಆ ಹವ್ಯಾಸವನ್ನು ಬಿಟ್ಟನು; ಮತ್ತು ಸನ್ ೧೭೭೫ನೇ ಮಾರ್ಚ ೬ನೇ ತಾರೀಖಿನ ದಿನ ರಾಘೋಬನು ಇಂಗ್ಲಿಷರ ಸಂಗಡ ನಿಶ್ಚಿತವಾಗಿ ಒಪ್ಪಂದ ಮಾಡಿಕೊಂಡನು. ಇಂಗ್ಲಿಷರು ರಾಘೋಬನಿಗೆ ೫೦೦ ಕೆಂಪು ಮತ್ತು ೧೦೦೦ ಕಪ್ಪು ಶಿಪಾಯಿಗಳನ್ನೂ ತೋಫುಗಳನ್ನೂ ಕೂಡಲೆ ಕೊಡಬೇಕು; ಅವಶ್ಯಬಿದ್ದಲ್ಲಿ ಏಳೆಂಟು ನೂರು ಕೆಂಪು ಮತ್ತು ಹದಿನೇಳು ನೂರು ಕಪ್ಪು ಸೈನಿಕರನ್ನೂ, ಇತರ ಕೆಲಸಗಾರರನ್ನೂ ಕೂಡಿಸಿ ಒಟ್ಟು ೩೦೦೦ ವರೆಗೆ ಸೈನ್ಯವನ್ನು ಅವನ ಸಹಾಯಕ್ಕಾಗಿ ಕೊಡಬೇಕು. ರಾಘೋಬನು ಸೈನ್ಯದ ವೆಚ್ಚಕ್ಕೆಂದು ೨೫ ನೂರು ಜನರ ಖರ್ಚಿಗೆ ಅಂದರೆ ಸುಮಾರು ಒಂದೂವರೆ ಲಕ್ಷದವರೆಗೆ ಕೊಡಬೇಕು; ಮತ್ತು ಸೈನ್ಯದ ಖರ್ಚಿನ ಜಾಮೀನಿಗಾಗಿ ಅಮೋದ, ಹನಸೋದ, ಹ್ವರಸಾಲ ಮತ್ತು ಅಂಕಲೇಶ್ವರಗಳೆಂಬ ನಾಲ್ಕು ತಾಲೂಕುಗಳನ್ನು ಇಂಗ್ಲಿಷರಿಗೆ ಸ್ವಾಧೀನಪಡಿಸಬೇಕು. ಅದರಂತೆ ವಸಯಿ ಮತ್ತು ಅದರ ಕೆಳಗಿನ ಹತ್ತೊಂಬತ್ತೂಕಾಲು ಲಕ್ಷದ ಜಹಗೀರನ್ನೂ ಸಾಷ್ಟಿ ಮತ್ತು ಅದರ ಸುತ್ತಲಿನ ಜಂಬೂಸರ ಮತ್ತು ಓಲವಾಡ ಮುಂತಾದ ನಡುಗಡ್ಡೆಗಳನ್ನೂ ರಾಘೋಬನು ಪಟ್ಟಕ್ಕೆ ಬಂದ ಮೇಲೆ ಇಂಗ್ಲಿಷರಿಗೆ ನಿರಂತರವಾಗಿ ಬಿಟ್ಟುಕೊಡಬೇಕು; ಅಲ್ಲದೆ ಸದ್ಯಕ್ಕೆ ಕೊಡಲು ಹತ್ತರ ಹಣವಿಲ್ಲದ್ದರಿಂದ ತನ್ನ ಹತ್ತರಿದ್ದ ೬ ಲಕ್ಷಕ್ಕಿಂತ ಹೆಚ್ಚು ಬೆಲೆಯ ಮುತ್ತು-ರತ್ನಗಳನ್ನು ರಾಘೋಬನು ಇಂಗ್ಲಿಷರಿಗೆ ಒತ್ತೀಹಾಕಿ, ಅವನ್ನು ಇಂಗ್ಲಿಷರ ಸ್ವಾಧೀನಮಾಡಬೇಕೆಂದು ಆ ಒಪ್ಪಂದದಲ್ಲಿ ನಿಶ್ಚಯಿಸಲ್ಪಟ್ಟಿತು. ಅದರಂತೆ ಬಂಗಾಲದ ಕಡೆಯ ಇಂಗ್ಲಿಷರ ನಾಡಿನ ಮೇಲೂ ಅರ್ಕಾಟದ ನವಾಬನ ಪ್ರದೇಶದ ಮೇಲೂ ಮರಾಟರು ದಂಡೆತ್ತಿ ಹೋಗಬಾರದು; ಸ್ವತಃ ಇಂಗ್ಲಿಷ ವ್ಯಾಪಾರಿಗಳ ಹಡಗ ಇಲ್ಲವೆ ಕಂಪನಿ ಸರಕಾರದ ನಿಶಾನೆಯನ್ನು ಧರಿಸಿದ ಇತರ ಹಡಗ ಇವುಗಳು ಮರಾಟರ ನಾಡಿನಲ್ಲಿ ಒಡೆದು ಇಲ್ಲವೆ ಬೇರೆ ಕಾರಣಗಳಿಂದ ದಂಡೆಗೆ ಹತ್ತಿದ್ದರೆ, ಅವನ್ನು ಅವುಗಳ ಮಾಲಕರಿಗೆ ತಿರುಗಿ ಕೊಡಬೇಕು ಇತ್ಯಾದಿ ಇತರ ಕರಾರುಗಳನ್ನೂ ಇಂಗ್ಲಿಷರು ರಾಘೋಬನ ಸಂಗಡ ಮಾಡಿಕೊಂಡಿದ್ದರು. ಈ ಒಪ್ಪಂದವು ಆದ ಮೇಲೆ ರಾಘೋಬನು ಹರಿಪಂತನ ಸಂಗಡ ನಡೆಸಿದ್ದ ಮಾತು ಮುರಿದು ಹೋಯಿತು; ಅದರಿಂದ ಮತ್ತೆ ಯುದ್ಧಕ್ಕೆ

ಪ್ರಾರಂಭವಾಯಿತು. ಕಡೆಗೆ ಹರಿಪಂತನೆದುರಿಗೆ ತನ್ನ ಆಟವು ನಡೆಯದ್ದರಿಂದ ರಾಘೋಬನು ಸುರತಿಗೆ ಓಡಿ ಹೋದನು.

ದಾದಾಸಾಹೇಬನು ಸುರತವನ್ನು ಮುಟ್ಟುವ ಸಮಯಕ್ಕೆ ಇಂಗ್ಲಿಷರ ಹದಿನೈದು ನೂರು ಸೈನ್ಯವು ಅವನ ಸಹಾಯಕ್ಕೆ ಸಜ್ಜಾಗಿ ನಿಂತಿತ್ತು; ಹಾಗು ಮದ್ರಾಸದಿಂದ ದಂಡು ಬಂದ ಬಳಿಕ ಅದರಲ್ಲಿ ಭರ್ತಿಯಾಗತಕ್ಕದ್ದಿತ್ತು. ರಾಘೋಬನೊಡನೆ ಒಪ್ಪಂದವಾಗುವ ಮೊದಲೇ ಇಂಗ್ಲಿಷರು ತಾವಾಗಿಯೇ ಮರಾಟರೊಡನೆ ಯುದ್ಧಕ್ಕೆ ಪ್ರಾರಂಭಿಸಿದ್ದರು. ಅದಕ್ಕೆ ಈಸ್ಟ ಇಂಡಿಯಾ ಕಂಪನಿಯ ಮುಂಬಯಿಯ ಅಧಿಕಾರಿಗಳೇ ಪ್ರಾಮುಖ್ಯವಾಗಿ ಕಾರಣೀಭೂತರಾಗಿದ್ದರು. ಕಲಕತ್ತೆಯ ಇಂಗ್ಲಿಷರು ಈ ಮೊದಲನೇ ಯುದ್ಧದಲ್ಲಂತೂ ಮರಾಟರ ಸ್ನೇಹ ಮುರಿಯಲಿಕ್ಕೆ ಅತ್ಯಂತವಾಗಿ ತಿರಸ್ಕರಿಸಿದರು ಯುದ್ಧವು ಒಮ್ಮೆ ಪ್ರಾರಂಭವಾದ ಬಳಿಕ ಕಂಪನೀ ಸರಕಾರದ ಲೌಕಿಕಕ್ಕಾಗಿ ಅವರು ಮುಂಬಯಿಯ ಇಂಗ್ಲಿಷರಿಗೆ ಬೇಡವೆಂದು ಹೇಳದಾದರು; ಅವರ ಈ ವರ್ತನವು ಮನುಷ್ಯ ಸ್ವಭಾವಕ್ಕೂ ರಾಜನೀತಿಗೂ ಒಪ್ಪುವಂತಹವೇ ಸರಿ. ಆದರೂ ತಮ್ಮ ಲೌಕಿಕವನ್ನು ಕಾಯ್ದುಕೊಂಡು, ಯುದ್ಧವನ್ನು ನಿಲ್ಲಿಸಬಹುದಾದ ಪ್ರತಿಯೊಂದು ಪ್ರಸಂಗವನ್ನು ಅವರು ಸಾಧಿಸಿದರು. ಕಡೆಗೆ ಸಾಲ್ಬಾಯಿಯಲ್ಲಿ ಅನುಕೂಲ-ಪ್ರತಿಕೂಲಗಳನ್ನು ನೋಡದೆ ಹೇಗಾದರೊಮ್ಮೆ ಒಡಂಬಡಿಕೆ ಮಾಡಿಕೊಂಡು, ಆ ಯುದ್ಧದ ಸಮಾಪ್ತಿ ಮಾಡಿದರು; ಮತ್ತು ಆಗ ಮತ್ತೆ ಮರಾಟರೊಡನೆ ಸಖ್ಯವುಂಟಾದ ಬಗ್ಗೆ ಕಲಕತ್ತೆಯ ಇಂಗ್ಲಿಷರು ಮನಃಪೂರ್ವಕವಾಗಿ ಸಂತೋಷಗೊಂಡರು. ಇಷ್ಟೇ ಅಲ್ಲ, ಈ ಸಾಲ್ಬಾಯಿಯ ಒಪ್ಪಂದವು ಇಂಗ್ಲಂಡದ ಅರಸು ಮತ್ತು ಬ್ರಿಟಿಶ ಪಾರ್ಲಮೆಂಟ ಇವರ ಹುಕುಮಿನ ಮೇರೆಗೆ ಆಗಿದ್ದು, ನೀವು ಇದನ್ನು ಯಾವುದೊಂದು ಕಾರಣ ಇಲ್ಲವೆ ನೆವದಿಂದ ಮುರಿದರೆ, ನಾವು ನಮ್ಮ ವರಿಷ್ಠ ಅಧಿಕಾರದ ಬಲದಿಂದ ನಿಮ್ಮನ್ನು ಹತ್ತಿಬಡಿಯಬೇಕಾದೀತೆಂದು ಕಲಕತ್ತೆಯ ಇಂಗ್ಲಿಷರು ಮುಂಬಯಿಯ ಇಂಗ್ಲಿಷರಿಗೆ ಸ್ಪಷ್ಟವಾಗಿ ತಿಳಿಸಿದರು. ಆದರೂ ಕೂಡ ಮುಂಬಯಿಯ ಇಂಗ್ಲಿಷರು ತಾವಾಗಿ ಚಿತ್ತಿದ ಆ ಜಗಳದ ಅಂಕುರವನ್ನು ಸಂಪೂರ್ಣವಾಗಿ ನಾಶಗೊಳಿಸಲಿಕ್ಕೆ ಮನಸ್ಸು ಮಾಡಲಿಲ್ಲ. ಮುಂಬಯಿಯವರ ಆ ಧೋರಣವು ಮುಂದೆ ೨೦-೨೫ ವರ್ಷಗಳ ಮೇಲೆ ಕಲಕತ್ತೆಯವರಿಗೂ ರುಚಿಸಿತು; ಹಾಗು ತದನಂತರ ಅವರೂ ಈ ಯುದ್ಧದ ಕೊಳ್ಳಿಯನ್ನು ತಮ್ಮ ಕೈಯಲ್ಲಿ ತಕ್ಕೊಂಡರು; ಮತ್ತು ಮರಾಟಶಾಹಿಯ ಭವ್ಯವಾದ ಕಟ್ಟಡವು ಸುಟ್ಟು ಸೂರೆಗೊಂಡು ನೆಲಸಮವಾಗುವ ವರೆಗೂ ಅವರು ಅದನ್ನು ನೆಲಕ್ಕಿಡಲಿಲ್ಲ. ಮುಂಬಯಿಯ ಇಂಗ್ಲಿಷರ ಆ ಧೋರಣವು ತಡವಾಗಿಯೇ ಏಕಾಗಲೊಲ್ಲದು, ಕಡೆಗೆ ವಿಜಯ ಹೊಂದದೆ ಇರಲಿಲ್ಲ.

---

೬ನೆಯ ಪರಿಚ್ಛೇದ.

## ಆನಂದೀಬಾಯಿಯ ಕಾರಸ್ಥಾನ.



ಸ್ವಾರ್ಥದ ದೃಷ್ಟಿಯಿಂದ ಇಂಗ್ಲಿಷರ ಧೋರಣವು ಯೋಗ್ಯವಾಗಿತ್ತು. ರಘುನಾಥರಾಯ ಮತ್ತು ನಾನಾಫಡಣವೀಸ ಇವರಿಬ್ಬರ ನಡುವಿನ ಜಗಳದ ಸಂಧಿ ಸಾಧಿಸಿ ಮುಂಬಯಿ ಕಡೆಯ ಇಂಗ್ಲಿಷರು ಅವರಲ್ಲಿ ಕಿಡಿ ಹಾಕುವ ಉದ್ಯೋಗಕ್ಕೆ ತೊಡಗಿದರು. ಇದೇ ಕಾಲಕ್ಕೆ ರಾಘೋಬನು ತಾನಾಗಿಯೇ ಅವರ ಪಕ್ಷವನ್ನು ವಹಿಸಿದನು; ಮತ್ತು ನೀವು ನಮ್ಮ ಈ ಜಗಳದಲ್ಲಿ ಕೈಹಾಕಿ ನನಗೆ ಸಹಾಯ ಮಾಡಿದರೆ. ನಾನು ನಿಮಗೆ ಬಹು ದೊಡ್ಡ ಇನಾಮು ಕೊಡುವೆನೆಂದು ಆಶೆದೋರಿದನು. ಇಂಥ ಪ್ರಸಂಗದಲ್ಲಿ ಸ್ವಹಿತ ಸಾಧಿಸುವ ಆ ಮಹಾ ಪರ್ವಣಿಯನ್ನು ಮುಂಬಯಿಯ ಇಂಗ್ಲಿಷರು ತ್ಯಜಿಸುವದೆಂತು? ಆ ಸಮಯವನ್ನು ಸಫಲಗೊಳಿಸಿಕೊಳ್ಳುವ ಅವರಲ್ಲಿಯ ಮೋಹವು ಅನಿವಾರವಾಯಿತು. ರಾಘೋಬನ ವತಿಯಿಂದ ತಾವು ಈ ಮರಾಟರ ಯುದ್ಧದಲ್ಲಿ ಏಕೆ ಭಾಗವಹಿಸುತ್ತೇವೆಂಬ ಬಗ್ಗೆ ಮುಂಬಯಿ ಕಡೆಯ ಇಂಗ್ಲಿಷರು ಕಲಕತ್ತೆಯ ತಮ್ಮ ಮೇಲಧಿಕಾರಿಗಳಿಗೆ ತಾ|| ೯-೧೦-೧೭೭೫ ರಲ್ಲಿ ಹೀಗೆ ಪತ್ರಬರೆದು ತಿಳಿಸಿರುತ್ತಾರೆ. ಇದನ್ನು ಓದಿದರೆ ಮುಂಬಯಿಯ ಇಂಗ್ಲಿಷರ ಧೋರಣವು ಚೆನ್ನಾಗಿ ವ್ಯಕ್ತವಾಗುತ್ತದೆ.

"ರಘುನಾಥರಾಯನೇ ಪೇಶ್ವೇ ಪಟ್ಟಕ್ಕೆ ನಿಜವಾದ ಹಕ್ಕುದಾರನು. ಅವನ ಪಕ್ಷವನ್ನು ವಹಿಸಿದಂತಹ ಖುದ್ದ ಬ್ರಾಹ್ಮಣ ಮತ್ತು ಮರಾಠಾ ಜಾತಿಯ ಸರದಾರರು ಅಲ್ಪಸ್ವಲ್ಪಾಗಿರುವದಿಲ್ಲ. ನಾಗಪುರದ ಭೋಸಲೆ ಮತ್ತು ಬಡೋದೆಯ ಗಾಯಕವಾಡ ಮನೆತನಗಳಲ್ಲಿ ಏನಿಲ್ಲೆಂದರೂ ಒಬ್ಬೊಬ್ಬ ಪ್ರಮುಖ ಸರದಾರರಾದರೂ ರಾಘೋಬನ ಪಕ್ಷದವರಿರುತ್ತಾರೆ. ಶಿಂದೆ, ಹೋಳಕರರು ರಾಘೋಬನ ಪಕ್ಷ ವಹಿಸಿಲ್ಲೆಂಬದೇನೋ ನಿಜವು; ಆದರೂ ಅವರು ಆ ಪಕ್ಷವನ್ನು ಸಂಪೂರ್ಣವಾಗಿ ಬಿಟ್ಟಿರುವರೆಂಬದು ನಿಜವಲ್ಲ. ತಮ್ಮ ಭಾಗದ ಕಪ್ಪ-ಕಾಣಿಕೆಗಳ ಹಾಗು ಲೆಕ್ಕಾಚಾರಗಳ ಜಬಾಬುದಾರಿಯನ್ನು ತಪ್ಪಿಸಿಕೊಳ್ಳುವದಕ್ಕಾಗಿಯೇ ಏಕಾಗಲೊಲ್ಲದು, ಅವರು ಯಾವ ಪಕ್ಷಕ್ಕೂ ಬಹಿರಂಗದಲ್ಲಿ ಸಂಪೂರ್ಣವಾಗಿ ಕೂಡದೆ, ಪೇಶ್ವೇ ಮನೆತನದೊಳಗಿನ ಈ ಪಕ್ಷಭೇದದಿಂದ ಅವರು ತಮ್ಮ ಸ್ವಂತದ ಲಾಭವನ್ನು ಮಾತ್ರ ಚೆನ್ನಾಗಿ ಮಾಡಿಕೊಳ್ಳುತ್ತಿರುವರು. ನಿಜಾಮ, ಹೈದರರಂತೂ ಡಾಣಾಡಂಗುರವಾಗಿ ಒಮ್ಮೆ ಒಂದು ಪಕ್ಷವನ್ನೂ ಮತ್ತೊಮ್ಮೆ ಮತ್ತೊಂದು ಪಕ್ಷವನ್ನೂ ಎತ್ತಿ ಹಿಡಿದು, ತಮ್ಮ ಕಾರ್ಯ ಸಾಧಿಸಿಕೊಳ್ಳುತ್ತಿರುವರು. ಖುದ್ದ ರಘುನಾಥರಾಯನ ಹತ್ತರ ಹೆಚ್ಚು ಸೈನ್ಯವಿದ್ದುದರಿಂದ ಅವನಿಗೆ ಅಲ್ಪಸ್ವಲ್ಪ ಸೈನ್ಯಬಲವನ್ನು ಕೊಟ್ಟರೂ ಕಾರ್ಯಭಾಗವು ನೀಗುವಂತಿತ್ತು. ರಘುನಾಥರಾಯನು ಪಟ್ಟವೇರಿದರೆ,

ಪೇಶ್ವೇ ಅಧಿಕಾರದ ಮೂಲಕ ಅವನು ಬೇಕಾದವರಿಗೆ ಬೇಕಾದ ಪ್ರಾಂತವನ್ನು ಬಿಟ್ಟು ಕೊಡುವಂತಿರುತ್ತದೆ."

ಆ ಯುದ್ಧದಲ್ಲಿ ಭಾಗವಹಿಸಲಿಕ್ಕೆ ಮುಂಬಯಿಯ ಇಂಗ್ಲಿಷರಿಗೆ ಮೇಲಿನ ಕಾರಣಗಳು ಸಾಕಾಗಿದ್ದವು; ಆದರೆ ವ್ಯವಹಾರ ದೃಷ್ಟಿಯಿಂದ ಈ ಸಂಧಿಯು ಸಾಧಿಸಿಕೊಳ್ಳಲಿಕ್ಕೆ ತಕ್ಕದ್ದಾಗಿತ್ತೆಂದು ಅಂದುಕೊಂಡರೂ, ಆ ಜಗಳದಲ್ಲಿ ಸೇರುವದರಿಂದ ಮುಂಬಯಿಯ ಇಂಗ್ಲಿಷರಿಗೆ ಸಿಗುವ ಲಾಭವೇನೆಂಬ ಪ್ರಶ್ನೆಯು ಉಳಿದೇ ಉಳಿಯುತ್ತದೆ. ಅದಕ್ಕೆ ಉತ್ತರವಿಷ್ಟೇ, ಅವರು ಪೇಶ್ವೆಯರ ಆ ಯುದ್ಧದಲ್ಲಿ ಭಾಗ ವಹಿಸಿದ್ದು ರಘುನಾಥರಾಯನಿಗೆ ಪೇಶ್ವೆಯಿಂದ ವಿಶೇಷ ಅನ್ಯಾಯವಾಗಿತ್ತೆಂತಲ್ಲ; ಆದರೆ ಅವರು ಕೇವಲ ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವ ಉದ್ದೇಶದಿಂದಲೇ ಆ ಯುದ್ಧದಲ್ಲಿ ಭಾಗ ವಹಿಸಿದರು. ಅವರ ಆಗಿನ ಸ್ವಾರ್ಥವೆಂದರೆ:—ಈಷ್ಟ ಇಂಡಿಯಾ ಕಂಪನಿಯವರು ತಮ್ಮ ವ್ಯಾಪಾರವನ್ನು ಹಿಂದುಸ್ಥಾನದಲ್ಲಿ ಬೆಳಿಸುವ ಸಲುವಾಗಿಯೇ ಮುಂಬಯಿಯಲ್ಲಿ ತಮ್ಮ ವಖಾರವನ್ನು ಸ್ಥಾಪಿಸಿದ್ದರು; ಆ ವ್ಯಾಪಾರದ ಸಲುವಾಗಿಯೇ ಮುಂಬಯಿಯ ಬಂದರವನ್ನು ಸಂಪಾದಿಸಿದ್ದರು; ಹಾಗು ಆ ಬಂದರವನ್ನು ಸುರಕ್ಷಿತಗೊಳಿಸುವ ಸಲುವಾಗಿಯೇ ಮುಂಬಯಿ ದ್ವೀಪವನ್ನು ಸಂಪಾದಿಸಿ, ಅದಕ್ಕೆ ಕೋಟೆ-ಕೊತ್ತಳಗಳನ್ನು ಕಟ್ಟಿಸಿದ್ದರು. ಆಗ ಮುಂಬಯಿ ಬಂದರಕ್ಕೆ ಬರುವ ಕಂಪನಿಯ ಮಾಲನ್ನು ದೇಶದ ಮೇಲೆ ಒಯ್ಯಲಿಕ್ಕೆ ಠಾಣೆ-ಸಾಷ್ಟಿಗಳ ಮೇಲಿನ ಭೂಮಾರ್ಗವೇ ಮುಖ್ಯವಾಗಿತ್ತು. ಅಲ್ಲಿಂದ ಮುಂದೆ ಗುಡ್ಡಗಳೂ ಘಟ್ಟಗಳೂ ಹತ್ತುತ್ತವೆ; ಹಾಗು ಅದರ ಆಚೆಗೆ ಮರಾಟರ ನಾಡು ಹತ್ತುತ್ತಿದ್ದದರಿಂದಲೇ ಇಂಗ್ಲಿಷರು ಸಾಷ್ಟಿಯನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳುವ ಅವಶ್ಯಕತೆಯಂತೂ ಇದ್ದೇ ಇತ್ತು; ಅಲ್ಲದೆ ಮುಂಬಯಿ ಬಳಿಯ ಬೇರೆ ದ್ವೀಪಗಳೂ ವಸಯಿಯೂ ತಮ್ಮ ಸ್ವಾಧೀನದಲ್ಲಿರುವದು ಇಂಗ್ಲಿಷರಿಗೆ ಅವಶ್ಯವಾಗಿತ್ತು. ರಾಘೋಬನು ಅವುಗಳನ್ನು ಅವರಿಗೆ ಕೊಡಲಿಕ್ಕೆ ಒಪ್ಪಿಕೊಂಡಿದ್ದನು. ವಸಯಿಯಿಂದ ಸುರತದ ವರೆಗಿನ ಠಾಣ್ಯಗಳು ವ್ಯಾಪಾರದ ದೃಷ್ಟಿಯಿಂದ ಮಹತ್ವದವಾಗಿದ್ದವು. ಅವುಗಳನ್ನು ಕೊಡಲಿಕ್ಕೆ ರಾಘೋಬನು ಸಿದ್ಧನಾದನು. ಆ ಎಲ್ಲ ದ್ವಿಪಗಳೂ ಠಾಣ್ಯಗಳೂ ಇಂಗ್ಲಿಷರ ವಶವಾಗಿದ್ದರೆ, ಕಂಪನಿ ಸರಕಾರದ ವ್ಯಾಪಾರವು ನಿರಾತಂಕವಾಗಿ ಸಾಗುವಂತಿತ್ತು. ಈ ಮೊದಲೇ ಕಂಪನಿಯ ೧ಳ ಲಕ್ಷ ರೂ. ಬೆಲೆಯ ಉಣ್ಣೆಯ ವಸ್ತ್ರಗಳು ಮರಾಟರ ನಾಡಿನಲ್ಲಿ ಖರ್ಚಾಗುತ್ತಿದ್ದವು; ಅಲ್ಲದೆ ಗುಜರಾಥದಲ್ಲಿಯ ಉತ್ತಮ ಹತ್ತಿಯ ಬೆಳೆಯ ಪ್ರಾಂತವು ಹಸ್ತಗತವಾಗಿದ್ದರೆ ಬಂಗಾಲ, ಚೀನಗಳ ಕಡೆಯ ವ್ಯಾಪಾರವೂ ಬೆಳೆಯಬಹುದಾಗಿತ್ತು. ಎಲ್ಲ ಕೊಂಕಣ ಪಟ್ಟಿಯು ಕೈವಶವಾಗಿದ್ದರೆ ಡಚ್ಚ, ಪೋರ್ತುಗೀಜ ಮತ್ತು ಫ್ರೆಂಚ ಈ ಮೂವರ ಕೈಯಿಂದಲೂ ಆತ್ತ ಕಡೆಯ ವ್ಯಾಪಾರವನ್ನು ಸೆಳಕೊಂಡು, ಬರೀ ಈಷ್ಟ ಇಂಡಿಯಾ ಕಂಪನಿಯ ವ್ಯಾಪಾರವೇ ಅಲ್ಲಿ ನಿರಂತರವಾಗಿ

ನೆಲಿಸಬಹುದಾಗಿತ್ತು. ಅದುವರೆಗೆ ಮುಂಬಯಿ ವಖಾರದ ಕಾರಭಾರವು ಕಂಪನಿಗೆ ಹಾನಿದಾಯಕವೇ ಆಗಿರುತ್ತಿತ್ತು; ಆದರೆ ರಾಘೋಬನು ಕೊಡುತ್ತೇನೆಂದು ಹೇಳಿದ ಪ್ರದೇಶವು ಪ್ರಾಪ್ತವಾದರೆ, ಒಂದೂವರೆ ಲಕ್ಷ ಪೌಂಡುಗಳ ಕಂಪನಿಯ ಹಾನಿಯು ತುಂಬಿ ಬಂದು, ಮುಂದೆ ೨-೨॥ ಲಕ್ಷ ಪೌಂಡುಗಳ ಉಳಿತಾಯವಾಗುವ ಸಂಭವವಿತ್ತು. ಮುಂಬಯಿ ಬಂದರಕ್ಕೆ ಕೋಟೆ-ಕೊತ್ತಳಗಳನ್ನು ಕಟ್ಟಿಸಿದಂದಿನಿಂದ ಅದಕ್ಕೆ ದಂಡಿನ ಠಾಣ್ಯದ ಸ್ವರೂಪವು ಸಹಜವಾಗಿಯೇ ಬರಹತ್ತಿತು. ಮುಂಬಯಿ ಬಂದರವು ಹೊಸ ಹಡಗುಗಳನ್ನು ಕಟ್ಟಲಿಕ್ಕೆ ಅನುಕೂಲವಾಗಿತ್ತು; ಹಾಗು ರಾಘೋಬನಿಂದ ದೊರೆಯತಕ್ಕ ಮುಂಬಯಿ ಬಳಿಯ ಪ್ರದೇಶದಲ್ಲಿ ಹಡಗು ಕಟ್ಟಲಿಕ್ಕೆ ಬೇಕಾಗುವಂತಹ ಕಟ್ಟಿಗೆಯು ಬೇಕಾದಷ್ಟು ಸಿಗುತ್ತಿತ್ತು. ಈ ಎಲ್ಲ ಬಗೆಯ ಲಾಭವನ್ನು ಪರ್ಯಾಲೋಚಿಸಿದರೆ, ಪೇಶ್ವೆಯರಲ್ಲಿ ಜಗಳ ಹುಟ್ಟಿಸಿ, ಅನಾಯಾಸವಾಗಿ ದೇವರು ನಮಗೆ ಒಲಿದನೆಂದು ಮುಂಬಯಿ ಕಡೆಯ ಇಂಗ್ಲಿಷರು ತೆಗೆದ ಉದ್ಗಾರಗಳು ಮನುಷ್ಯ ಸ್ವಭಾವಕ್ಕೆ ತಕ್ಕಂತೆಯೇ ಆಗಿದ್ದವು.

ರಾಘೋಬನಿಗೆ ಪೇಶ್ವಾಯಿಯೊಳಗಿನ ಕಲಿಪುರುಷನೆನ್ನುತ್ತಾರೆ. ಆತನ ಕಾಲದ ಜನರಿಗಿಂತ ಆತನೇ ನಿಜವಾಗಿ ಕೀಳು ಮನಸ್ಸಿನವನಿದ್ದನೋ ಹೇಗೆಂಬದನ್ನು ನಿರ್ಣಯಿಸುವದು ಬಹು ಕಠಿಣ ಕೆಲಸವಾಗಿದೆ; ಆದರೆ ಪೇಶ್ವಾಯಿಯ ಸತ್ತೆ, ಪೇಶ್ವಾಯಿಯ ಒಗರು ಹಾಗು ಪೇಶ್ವಾಯಿಯ ಐಶ್ವರ್ಯ ಇವುಗಳಿಗೆ ಪರಿಣಾಮದಲ್ಲಿಯಾದರೂ ಒಟ್ಟಿನಲ್ಲಿ ವಿಘಾತಕದ ಕೃತಿಯು ಅವನಿಂದಲೇ ಜರುಗಿತೆಂಬದನ್ನು ಅದಾರೂ ಒಪ್ಪದಿರಲಾರರು. ಅಧಿಕಾರದ ಹವ್ಯಾಸದಿಂದ, ಮಹತ್ವಾಕಾಂಕ್ಷೆಯಿಂದ ಅಥವಾ ಪ್ರತಿಪಕ್ಷಿಗಳ ಸೇಡು ತೀರಿಸಿಕೊಳ್ಳುವ ಬುದ್ಧಿಯಿಂದ ಅವನು ಬರಿಯ ಶಿಂದೆ-ಹೋಳಕರರಂಥ ಮರಾಟಶಾಹಿಯೊಳಗಿನ ಪ್ರಬಲ ಸರದಾರರೊಡನೆ ಸಂಧಾನ ಕಟ್ಟಿ ಇಲ್ಲವೆ ಅವರ ಆಶ್ರಯಹೊಂದಿ ನಾನಾಫಡಣೀಸನ ಕೂಡ ಜಗಳಾಡಿದ್ದರೂ ಹಾಗು ತುಸ ತಡವಾಗಿಯೇ ಏಕಾಗಲೊಲ್ಲದು ವಿಜಯಹೊಂದಿ, ನಾನಾನನ್ನು ಸೋಲಿಸಿ ಅವನನ್ನು ಕಾರಭಾರದಿಂದ ತೆಗೆದುಹಾಕಿ ಪೇಶ್ವಾಯಿಯ ಸಕಲ ಸತ್ತೆಯನ್ನು ತಾನು ಹಸ್ತಗತಮಾಡಿಕೊಂಡಿದ್ದರೂ ರಾಘೋಬನಿಗೆ ಹೆಸರಿಡುವಂತಿರುತ್ತಿದ್ದಿಲ್ಲ; ಆದರೆ ಇಂಗ್ಲಿಷರ, ಅಂದರೆ ಎಲ್ಲ ಬಗೆಯಿಂದಲೂ ಪರಕೀಯರಾದಂಥವರ ಆಶ್ರಯ ಪಡೆದು ಅವನು ಅವರನ್ನು ತಮ್ಮ ಮನೆಯೊಳಗೆ ಸೇರಗೊಟ್ಟದ್ದರಿಂದ, ಆ ಇಂಗ್ಲಿಷರೆಂಬ ವಿಷವೃಕ್ಷದ ಅಂಕುರವು ಅಲ್ಲಿ ನೆಟ್ಟು, ಅದು ಮೆಲ್ಲಮೆಲ್ಲನೆ ದೊಡ್ಡದಾಗಿ, ಮರಾಟಶಾಹಿಯ ಭವ್ಯವಾದ ಇಮಾರತನ್ನು ಅಲ್ಪಾವಧಿಯಲ್ಲೇ ನೆಲಸಮ ಮಾಡಿಬಿಟ್ಟಿತು! ಯಾರ್‍ಯಾರಿಗೆ ಆ ವಿಷವೃಕ್ಷದ ಹಣ್ಣುಗಳನ್ನು ತಿನ್ನುವ ಪ್ರಸಂಗವುಂಟಾಯಿತೋ, ಸ್ವಾತಂತ್ರ್ಯದೃಷ್ಟಿಯಿಂದ ಆ ಎಲ್ಲರೂ ವಿನಾಶದ ಮಾರ್ಗವನ್ನೇ ಹಿಡಿಯಬೇಕಾಯಿತು. ರಾಘೋಬನಿಂದ ಈ ಯಾವ ಅಪರಾಧವು ಘಟಿಸಿತೋ, ಅದು ನಿಜವಾಗಿಯೂ ಅಕ್ಷಮ್ಯವಾಗಿರುವದು. ನಾನಾಫಡಣೀಸನು ರಾಘೋಬನಿಗಿಂತ ಕಡಿಮೆ ತರಗತಿಯ

ಕಾರಸ್ಥಾನಿಯಾಗಲಿ ಮಹತ್ವಾಕಾಂಕ್ಷೆಯಾಗಲಿ ಆಗಿದ್ದನೆಂದುಅನ್ನುವಂತಿಲ್ಲ; ಮತ್ತು ಆತನ ಕಾಲದಲ್ಲಿ ಅವನಿಗೆ ಇಂಗ್ಲಿಷರ ನೆರವು ತಕ್ಕೊಳ್ಳುವ ಪ್ರಸಂಗವು ಬರಲೇ ಇಲ್ಲವೆಂತಲೂ ಅಲ್ಲ; ಆದರೆ ನಾನಾನ ಮಹತ್ವಾಕಾಂಕ್ಷೆಯು ಒಲವು ಪೇಶ್ವಾಯಿಯ ದೃಢೀಕರಣ, ಬಲವೃದ್ಧಿ ಇವುಗಳ ಕಡೆಗೇ ಇತ್ತು; ಆದರೆ ರಾಘೋಬನ ಮಹತ್ವಾಕಾಂಕ್ಷೆಯು ತದ್ವಿರುದ್ಧವಾಗಿದ್ದು, ಇಂಗ್ಲಿಷರಿಗೆ ಸಹಾಯಕವಾಗಿಯೂ ಪೇಶ್ವಾಯಿಗೆ ವಿನಾಶಕವಾಗಿಯೂ ಪರಿಣಮಿಸಿತು. ನಾನಾನು ಇಂಗ್ಲಿಷರ ಸಹಾಯ ಪಡೆದದ್ದು ತೊಗರಿಕಟ್ಟಿಗೆಯಿಂದ ತೊಗರಿಕಟ್ಟಿಗೆ ಕೊಡುವುವಂತೆ ಕೇವಲ ಪರಕೀಯ ಶತ್ರುಗಳನ್ನು ನುಗ್ಗು ಮಾಡುವ ಕೆಲಸಕ್ಕೆ ಮಾತ್ರ; ಆದರೆ ರಾಘೋಬನ ಮಾತು ಹಾಗಲ್ಲ. ಅವನು ಅವರನ್ನು ತನ್ನ ಮನೆಜಗಳದಲ್ಲಿ ಸೇರಿಸಿಕೊಂಡನು. ತನಗೆ ನೆರವಾಗುವಂತಹ ಒಬ್ಬನೂ ಮರಾಟರ ಇಲ್ಲವೆ ಬ್ರಾಹ್ಮಣರ ಸರದಾರರು ರಾಘೋಬನಿಗೆ ದೊರೆಯದ್ದರಿಂದ, ಅವನು ಅನಿರ್ವಾಹವೆಂದು ಇಂಗ್ಲಿಷರ ಕಡೆಗೆ ಹೋಗಿರಬಹುದು; ಆದರೆ ಆತನ ಬೆನ್ನು ಕಟ್ಟುವಂತಹ ಯಾವ ದೊಡ್ಡ ಸರದಾರನೂ ಇತ್ತ ದೊರೆಯದಿದ್ದುದೇ ಆ ಕಾಲಕ್ಕೆ ಆತನ ಪಕ್ಷವು ಸಕಲರಿಗೂ ಅನ್ಯಾಯದ್ದೂ ನಾನಾನ ಪಕ್ಷವು ನ್ಯಾಯದ್ದೂ ಎಂಬ ಸಹಜವಾದ ಅರ್ಥವನ್ನು ತೋರುತ್ತಿತ್ತು. ರಾಘೋಬನ ಆ ಅನ್ಯಾಯದಲ್ಲಿ ಆತನು ಇಂಗ್ಲಿಷರ ಆಶ್ರಯಹೊಂದಿದ ಮಹದನ್ಯಾಯವು ಕೂಡಿ ದ್ವಿಗುಣಿತವಾಯಿತು. ನಾನಾ ಹಾಗು ರಾಘೋಬ ಇವರ ಇತಿಹಾಸದ ಕಡೆಗೆ ಪ್ರತಿಯೊಬ್ಬರು ಯಾವಾಗಲೂ ಇದೇ ದೃಷ್ಟಿಯಿಂದ ನೋಡಬಹುದಾಗಿದೆ.

ರಾಘೋಬನು ಶೂರನೂ, ಕಡುಗಲಿಯೂ ಆಗಿದ್ದನೆಂಬ ಬಗ್ಗೆ ಯಾರಿಗೂ ಅನುಮಾನವಿಲ್ಲ; ಆದರೆ ಕಡುಗಲಿಗಳು ಪ್ರಾಯಶಃ ಮುತ್ಸದ್ದಿಗಳಾಗಿರುವದಿಲ್ಲೆಂದು ಅನ್ನುತ್ತಾರೆ; ಮತ್ತು ರಾಘೋಬನಲ್ಲಾದರೂ ಅದೇ ವ್ಯಂಗ್ಯವಿದ್ದಿತು. ಆದ್ದರಿಂದ ದಾಳಿಯ ಮೇಲೆ ಹೊರಡಲಿಕ್ಕೆ ಆತನು ತಕ್ಕವನಾಗಿದ್ದರೂ, ದೌಲತಿಯ ಕಾರಭಾರ ನಡೆಸಲಿಕ್ಕೆ ಅವನು ಯೋಗ್ಯನಾಗಿದ್ದನೆಂಬ ಬಗ್ಗೆ ಯಾರೂ ಒಪ್ಪಿರುವಂತೆ ಕಾಣಿಸುವದಿಲ್ಲ. ಪೇಶ್ವೇ ನಾನಾಸಾಹೇಬನ ಮರಣದ ವರೆಗೆ ರಾಘೋಬನಲ್ಲಿಯ ಕಲಹಪ್ರಿಯತೆಯು ವ್ಯಕ್ತವಾಗುವದು ಶಕ್ಯವಿರಲಿಲ್ಲ; ಆದರೆ ಮಾಧವರಾಯನು ಪೇಶ್ವೇಪಟ್ಟವೇರುತ್ತಲೆ, ಆತನ ಜಗಳಗಂಟತನಕ್ಕೆ ಪ್ರಾರಂಭವಾಯಿತು. ಯಾವನೊಬ್ಬ ಪೇಶ್ವೆಯು ಮರಣದ ನಂತರ ಆತನ ಪಟ್ಟದ ಅಧಿಕಾರವು ಆತನ ಮಗನು ಅಲ್ಪವಯಿಯಾಗಿದ್ದರೂ ಆ ಅಲ್ಪವಯಿಗೇ ಹೋಗತಕ್ಕದ್ದು; ಆತನ ತಮ್ಮನು ವಯಸ್ಸಿನಿಂದ ಆತನ ಮಗನಿಗಿಂತ ದೊಡ್ಡವನಾಗಿದ್ದರೂ ಆ ತಮ್ಮನ ಕಡೆಗೆ ಅದು ಹೋಗತಕ್ಕದ್ದಲ್ಲ, ಎಂಬ ವಾರಸಾ ಹಕ್ಕಿನ ನಿಯಮವು ಆಗಿನ ಕಾಲದಲ್ಲೂ ಶಿಷ್ಟಸಮ್ಮತವಾಗಿತ್ತು. ಅಂತೆಯೇ ನಾನಾಸಾಹೇಬನ ನಿಧನದ ನಂತರ ಪೇಶ್ವಾಯಿಯ ಮರ್ಯಾದೆಯು ಅಲ್ಪವಯಿ ಮಾಧವರಾಯನಿಗೇ ದೊರಕಿತು; ರಾಘೋಬನಿಗೆ ಸಿಗಲಿಲ್ಲ. ಮತ್ತು ಇದೇ ಕಾರಣದ ಮೂಲಕ ಮಾಧವರಾಯನ ಮರಣದ ನಂತರ ಆತನು

ನಿಪುತ್ರಿಕನಾದುದರಿಂದ, ಆ ಪೇಶ್ವಾಯಿಯ ಮರ್ಯಾದೆಯು ಆತನ ತಮ್ಮನಾದ ನಾರಾಯಣರಾಯನಿಗೆ ಸಿಗುವದೇ ಕ್ರಮಪ್ರಾಪ್ತವಾಗಿತ್ತು. ಅದರಂತೆ ಅವನಿಗೆ ಪೇಶ್ವಾಯಿಯ ಆ ಪಟ್ಟವು ಲಭಿಸಿಯೂ ಲಭಿಸಿತು. ಈ ಮಧ್ಯದಲ್ಲಿ ರಾಘೋಬನು ಬಲಾತ್ಕಾರದಿಂದ ಅಲ್ಪಕಾಲದ ವರೆಗೆ ತಾನಾಗಿಯೇ ಆ ಮಾನವನ್ನು ಹೊಂದಿದ್ದನು; ಆದರೆ ಆ ಕೃತಿಯು ಅನ್ಯಾಯದ್ದೆಂಬದು ಸಹಜವಾಗಿಯೇ ತೋರಿತಾದ್ದರಿಂದ, ಪ್ರಚಂಡ ಲೋಕಮತದ ಎದುರಿಗೆ ಅವನ ಆ ಒತ್ತಾಯದ ಪೇಶ್ವಾಯಿ ಪಟ್ಟವು ಹೆಚ್ಚು ದಿನಗಳ ವರೆಗೆ ಸ್ಥಿರವಾಗಿ ಉಳಿಯಲಿಲ್ಲ. ತಾತ್ಪರ್ಯವಿಷ್ಟೇ, ಪೇಶ್ವಾಯಿಯ ಮರ್ಯಾದೆ ಪಡೆಯಬೇಕೆಂಬ ರಾಘೋಬನ ಮಹತ್ವಾಕಾಂಕ್ಷೆಯು ಯಾವಾಗಲೂ ಅನ್ಯಾಯದ್ದೂ, ಅಕ್ರಮದ್ದೂ ಆಗಿತ್ತು; ಆದರೆ ಪೇಶ್ವಾಯಿಯ ಕಾರಭಾರಿಯಾಗುವ ಆತನ ಮಹತ್ವಾಕಾಂಕ್ಷೆಯ ವಿಷಯದಲ್ಲಿ ಮಾತ್ರ ಮೇಲಿನ ವಿಧಾನವು ಅಷ್ಟು ಸಬಲವಾಗಿ ತೋರುವದಿಲ್ಲ. ಅಂತೆಯೇ ಮಾಧವರಾಯನು ಪಟ್ಟಕ್ಕೇರಿದಾಗ ಆತನ ತಾಯಿಯಾದ ಗೋಪಿಕಾಬಾಯಿಯು ಮತ್ಸರಬುದ್ಧಿಯ ಪ್ರಭಾವದ ಮೂಲಕ ರಾಘೋಬನನ್ನು ಕಾರಭಾರಿಯನ್ನಾಗಿ ನೇಮಿಸದೆ, ಫಡಣೀಸ ಮತ್ತು ಪೇಠೆ ಇವರನ್ನೇ ಕಾರಭಾರಿಗಳನ್ನಾಗಿ ನೇಮಿಸಿದರು. ಆಗ ರಾಘೋಬನಿಗೆ ಆ ಬಗ್ಗೆ ಲೋಕಮತದ ಬೆಂಬಲವು ಸ್ವಲ್ಪವೂ ಇರಲಿಲ್ಲವೆಂತಲ್ಲ; ಆದರೂ ಆತನು ಆ ಕಾರಭಾರಿತನವನ್ನು ಹಸ್ತಗತ ಮಾಡಿಕೊಳ್ಳಲಿಕ್ಕೆ ಮೊಗಲರ ಸಹಾಯಪಡೆಯಬೇಕಾಯಿತು. ಆ ಸಹಾಯದಿಂದ ಅವನು ಖುದ್ದ ಪೇಶ್ವೆಯಾಗಿದ್ದ ಮಾಧವರಾಯನನ್ನು ಸೆರೆಯಲ್ಲಿಟ್ಟು, ಫಡಣೀಸರ ಕಡೆಯ ಕಾರಭಾರವನ್ನು ಕಿತ್ತುಕೊಂಡು, ತನ್ನ ಹಸ್ತಕನಾದ ಚಿಂತೋ ವಿಠ್ಠಲ ರಾಯರೀಕರ ಇವನನ್ನು ೧೭೬೨ರಲ್ಲಿ ಫಡಣೀಸನನ್ನಾಗಿ ನೇಮಿಸಿಕೊಂಡನು; ಆದರೆ ಅಲ್ಪಾವಧಿಯಲ್ಲೇ, ಅಂದರೆ ೧೭೬೩ರಲ್ಲಿ ಮೊಗಲರೊಡನೆ ಒಪ್ಪಂದವಾಗಿ ಮಾಧವರಾಯನು ಮತ್ತೆ ಪಟ್ಟಕ್ಕೆ ಅಧಿಕಾರಿಯಾದನು; ಹಾಗು ಫಡಣೀಸಿಯನ್ನು ರಾಯರೀಕರನಿಂದ ಕಿತ್ತಿ ತಕ್ಕೊಂಡು, ಅದನ್ನು ಮೊದಲಿನ ಫಡಣೀಸರ ಕಡೆಗೆ ಅಂದರೆ ನಾನಾ ಹಾಗು ಮೋರೋಬಾ ಇದರಿಗೇ ಒಪ್ಪಿಸಿದ್ದಾಯಿತು.

ಆ ಬಳಿಕ ಸರಾಸರಿ ಐದು ವರ್ಷಗಳ ವರೆಗೆ ರಘುನಾಥರಾಯ-ಮಾಧವರಾಯರಲ್ಲಿ ವಿಶೇಷ ಜಗಳ-ತಂಟೆಗಳೇನೂ ಆಗಲಿಲ್ಲ. ಆಗ ರಾಘೋಬನು ಯಥಾಪ್ರಕಾರ ದಾಳಿ ಮುಲುಖಗಿರಿಗಳ ಮೇಲೆ ಹೋಗುತ್ತಿದ್ದನು; ಹಾಗು ಪೇಶ್ವೆ ಮತ್ತು ಅವನ ಕಾರಭಾರಿಗಳು ಒಪ್ಪಿಸಿದ ಕಾರ್ಯಗಳನ್ನು ಚೆನ್ನಾಗಿ ಮಾಡುತ್ತಿದ್ದನು; ಆದರೆ ಮಾತೃಭಕ್ತ ಮಾಧವರಾಯನನ್ನು ಆತನ ಮತ್ಸರಗ್ರಸ್ತ ತಾಯಿ-ಗೋಪಿಕಾಬಾಯಿಯ ಸ್ತ್ರೀ ಬುದ್ಧಿಯು ಸ್ವಸ್ಥವಾಗಿರಗೊಡುತ್ತಿದ್ದಿಲ್ಲವೆಂಬದು ತುಸ ಮಟ್ಟಿಗೆ ನಿಜವಿದ್ದರೂ, ಪ್ರಕೃತ ರಾಘೋಬನ ಎರಡನೇ ಹೆಂಡತಿಯಾದ ಆನಂದೀಬಾಯಿಯ ಕಾರಸ್ಥಾನಗ್ರಸ್ತ ಸ್ತ್ರೀ ಬುದ್ಧಿಯು ರಘುನಾಥರಾಯನನ್ನೂ ಸುಮ್ಮನಿರಗೊಡುತ್ತಿದ್ದಿಲ್ಲವೆಂಬದು ಹೆಚ್ಚು ದಿಟವಾಗಿತ್ತು. ಹೇಗೆಯೇ ಆಗಲಿ, ರಾಘೋಬನ ಅಸಂತೋ

ಷದ ಪರ್ಯವಸಾನವು ಬಂಡಿನ ರೂಪದಲ್ಲಿ ಪ್ರಕಟವಾಯಿತು; ಹಾಗು ಐದು ವರ್ಷಗಳ ಹಿಂದಿನ ಕಾಲಚಕ್ರವು ತೀರ ವಿರುದ್ಧವಾಗಿ, ಮಾಧವರಾಯನು ರಾಘೋಬನನ್ನು ಪರಾಭವಗೊಳಿಸಿ, ಪುಣೆಯ ಶನಿವಾರ ವಾಡೆಯಲ್ಲಿ ಅವನನ್ನು ಕೈದಿನಲ್ಲಿಟ್ಟನು. ಮಾಧವರಾಯ-ನಾನಾಫಡಣೀಸರು ಮೊದಲಿನಿಂದಲೂ ಒಮ್ಮನಸ್ಸಿನವರಾಗಿದ್ದರು; ಮತ್ತು ರಾಗೋಬನ ಗೈರ ಮುತ್ಸದ್ದಿತನವು ಮೊದಲಿನಿಂದಲೂ ನಾನಾನಿಗೆ ಸೇರುತ್ತಿರಲಿಲ್ಲ. ಆದ್ದರಿಂದ ರಾಘೋಬನನ್ನು ಬೊಗ್ಗುಬಡೆಯುವ ಕೆಲಸದಲ್ಲಿ ಮಾಧವರಾಯನಿಗೆ ನಾನಾನ ನೆರವು ಸಹಜವಾಗಿಯೇ ಉಂಟಾಗುತ್ತಿತ್ತು; ಹಾಗು ಮಾಧವರಾಯನು ದಂಡೆತ್ತಿ ಹೋದ ಕಾಲಕ್ಕೆ ರಾಘೋಬನ ಪ್ರತ್ಯಕ್ಷ ಬಂದೋಬಸ್ತಿನ ಕೆಲಸವು ನಾನಾನ ಕಡೆಗೇ ಕ್ರಮಪ್ರಾಪ್ತವಾಗಿ ಬರುತ್ತಿತ್ತು. ಆದ್ದರಿಂದ ನಾನಾ ಮತ್ತು ರಾಘೋಬ ಇವರಲ್ಲಿ ಒಮ್ಮೆ ಉಂಟಾಗಿದ್ದ ವೈಮನಸ್ಸು ಮುಂದೆ ಎಂದೂ ಕಡಿಮೆಯಾಗಲಿಲ್ಲ.

ಮಾಧವರಾಯನು ತಾನು ಸಾಯುವ ಕಾಲಕ್ಕೆ ರಾಘೋಬನನ್ನು ಬಂಧಮುಕ್ತಗೊಳಿಸಿದನು; ಹಾಗು ನಾರಾಯಣರಾಯನ ಕೈಯನ್ನು ಅತನ ಕೈಯಲ್ಲಿಟ್ಟು, ಮನಸ್ಸಿನೊಳಗಿನ ಎಲ್ಲ ರೋಷವನ್ನು ಬಿಟ್ಟು ಬಿಡುವಂತೆಯೂ ನಾರಾಯಣರಾಯನನ್ನು ಹೊಟ್ಟೆಯ ಮಗನಂತೆ ಪ್ರೀತಿಸುವಂತೆಯೂ ಪ್ರಾರ್ಥಿಸಿದನು. ಸಾಯಲಿಕ್ಕೆ ಸಿದ್ಧನಾದವನ ಪ್ರಾರ್ಥನೆಯನ್ನು ಯಾರೂ ಅಲ್ಲಗಳೆಯುವಂತಿರುವದಿಲ್ಲ. ರಾಘೋಬನು ಮಾಧವರಾಯನ ಆ ಬಿನ್ನಹವನ್ನು ಮನ್ನಿಸಿದ್ದರಿಂದ, ಸ್ವಂತದ ಮಹತ್ವಾಕಾಂಕ್ಷೆಯನ್ನೂ ಆನಂದೀಬಾಯಿಯಂಥ ತನ್ನ ಪ್ರೀತಿಯ ಎರಡನೇ ಹೆಂಡತಿಯ ಕಾರಸ್ಥಾನದ ಕಿವಿಮಾತುಗಳನ್ನೂ ಬದಿಗೊತ್ತಿ, ನಾರಾಯಣರಾಯನೊಡನೆ ಪ್ರೇಮದಿಂದ ನಡೆಯಹತ್ತಿದ್ದು ರಾಘೋಬನಲ್ಲಿಯ ಮನುಷ್ಯವೃತ್ತಿಗೆ ಭೂಷಣಾವಹವಾಗಿದ್ದಿತು. ಎಷ್ಟೋ ದಿನಗಳವರೆಗೆ ಆ ಕಕ್ಕ-ಮಕ್ಕಳು ಮಲಗುವ ವೇಳೆಯಲ್ಲಿ ಮಾತ್ರ ಬೇರೆ ಬೇರೆಯಾಗಿ ಮಲಗುತ್ತಿದ್ದರು. ಅವರ ಊಟ-ಉಡಿಗೆ, ಕೂಡ್ರುವದು, ನಿಲ್ಲುವದು ಇವುಗಳೆಲ್ಲ ಒತ್ತಟ್ಟಿಗೆ ಕೂಡೇ ಆಗುತ್ತಿದ್ದವು; ಆದರೆ ಪೇಶ್ವಾಯಿಯ ದುರ್ದೈವದ ಮೂಲಕ ಅವರಲ್ಲಿಯ ಆ ಸ್ನೇಹವು ಬಹು ದಿನಗಳವರೆಗೆ ಸ್ಥಿರವಾಗಿ ಉಳಿಯಲಿಲ್ಲ. ಪೇಶ್ವಾಯಿಯಲ್ಲಿ ಒಬ್ಬ ರಾಘೋಬನನ್ನೇ ಕುಹಕರು ಮುತ್ತಿದ್ದರೆಂತಲ್ಲ; ನಾರಾಯಣರಾಯನಿಗೂ ಅಂಥ ಜನರೇ ಗಂಟುಬಿದ್ದಿದ್ದರು. ನಾರಾಯಣರಾಯನು ಎಷ್ಟು ಸಿಟ್ಟಿನವನಿದ್ದನೋ, ಅಷ್ಟೇ ಹಿತ್ತಾಳಿ ಕಿವಿಯವನೂ ಆಗಿದ್ದನು. ಅದರಿಂದ ಅವನು ಕುಹಕರ ಕಿವಿಮಾತುಗಳನ್ನು ಕೇಳಿ, ರಾಘೋಬನ ಬಗ್ಗೆ ತನ್ನ ಮನಸ್ಸಿನಲ್ಲಿ ಸಂಶಯ ತಾಳಿ, ತನ್ನ ಕಕ್ಕನನ್ನೂ ಕಕ್ಕಿಯನ್ನೂ ಸೆರೆಯಲ್ಲಿರಿಸಿದನು. ನಾನಾ ಫಡಣೀಸನೂ, ಸಖಾರಾಮ ಬಾಪುವೂ ನಾರಾಯಣರಾಯನ ಈ ಕೃತಿಗೆ ವಿರುದ್ಧವಾಗಿದ್ದರು; ಆದರೆ ಅವನು ಅವರ ಸಲಹೆಯನ್ನು ಕೊಂಚವೂ ಕೇಳಲಿಲ್ಲ. ಹೇಗೆಯೇ ಆಗಲಿ, ಗೃಹಕಲಹವು ಮತ್ತೆ ಪುಟುವುಗೊಂಡಿತು! ರಾಘೋಬನ ಕಡೆಯ ಜನರು

ರಾಘೋಬನ ಬದಲು ನಾರಾಯಣರಾಯನನ್ನೇ ಕೈದುಮಾಡುವ ಬೇತು ಮಾಡಿದರು; ಹಾಗು ತೀರ ಆಯತ ಸಮಯಕ್ಕೆ ಆನಂದೀಬಾಯಿಯೂ ಕೆಲವು ಜನ ಗಾರದಿಗಳೂ ಮತ್ತು ಧರ್ಮಚ್ಛಲದಿಂದ ನಾರಾಯಣರಾಯನಲ್ಲಿ ದ್ವೇಷ ತಾಳಿದ್ದ ಕೆಲವು ಮಂದಿ ಪ್ರಭು ಜನರೂ ಇವರೆಲ್ಲರ ಕಾರಸ್ಥಾನದಿಂದ ನಾರಾಯಣರಾಯನನ್ನು ಹಿಡಿಯಬೇಕೆಂಬ ಮರಾಠೀ ಭಾಷೆಯ 'ಧರಾ' ಶಬ್ದವನ್ನು ಕೊಲ್ಲಬೇಕೆಂಬ 'ಮಾರಾ' ಶಬ್ದದಲ್ಲಿ ಯೋಜಿಸಿ, ನಾರಾಯಣರಾಯನನ್ನು ೩೦ನೇ ಆಗಸ್ಟ ೧೭೭೩ರಲ್ಲಿ ಕೊಂದರೆಂಬದು ಲೋಕಪ್ರಸಿದ್ಧವಾದ ಸಂಗತಿಯೇ ಆಗಿದೆ.

ಪಟ್ಟದ ಅಭಿಲಾಷೆಯಿಂದ ಪ್ರತ್ಯಕ್ಷ ಅಣ್ಣನ ಮಗನನ್ನು ಕೊಲ್ಲಿಸಿದನೆಂಬ ಆರೋಪವು ರಾಘೋಬನಿಗೆ ಬಂದದ್ದರಿಂದ, ಕೈದಿನಲ್ಲಿರುವಾಗ ಆತನನ್ನು ಕೆಲ ಜನರಾದರೂ ಸಹಾನುಭೂತಿಯಿಂದ ನೋಡುತ್ತಿದ್ದುದು ಈಗ ಕಟ್ಟಾಯಿತು. ಇದಲ್ಲದೆ ನಾರಾಯಣರಾಯನ ಹೆಂಡತಿಯು ಬಸುರಿದ್ದುದರಿಂದ, ಆತನ ವಂಶವೃದ್ಧಿಯ ಆಶೆಯೂ ಜನರಲ್ಲಿ ಉಂಟಾಯಿತು; ಮತ್ತು ರಾಘೋಬನು ಅಪರಾಧಿಯಾಗಿದ್ದು, ಆತನ ಸಂಪರ್ಕವು ಪೇಶ್ವೇ ಪಟ್ಟಕ್ಕೆ ಎಂದೂ ಉಂಟಾಗಬಾರದೆಂದು ಎಲ್ಲರಿಗೂ ಅನಿಸಹತ್ತಿತು. ನಾರಾಯಣರಾಯನಿಗೆ ಮಗನು ಹುಟ್ಟುವ ಸಂಭವವಿದೆಯೆಂಬದು ಮನಸ್ಸಿನಲ್ಲ ಬರಲು. ತಾನು ಆತನ ಕೊಲೆಗೆಯ್ಯಿಸಿ ಸಂಪಾದಿಸಿದ್ದಾದರೂ ಏನೆಂದು ಆನಂದೀಬಾಯಿಗೆ ಅನಿಸಿತು. ಅದರಿಂದ ಅವಳು ಮೊದಲು ಗಂಗಾಬಾಯಿಯನ್ನೂ ಆಕೆಯು ಹಡೆದ ನಂತರ ಆಕೆಯನ್ನೂ ಆಕೆಯ ಮಗ ಸವಾಯಿ ಮಾಧರಾಯನನ್ನೂ ಕೊಲ್ಲಿಸಬೇಕೆಂದು ಹಲವು ಗುಪ್ತಕಟ್ಟುಗಳನ್ನು ಮಾಡಿದಳು; ಆದರೆ ಅವೆಲ್ಲವೂ ಬೈಲಿಗೆ ಬಂದು ವ್ಯರ್ಥವಾದವು! *

———

## ೭ನೆಯ ಪರಿಚ್ಛೇದ.

## ನಿರಾಶೆಯ ಅಭಿವಚನ.

—೦()೦—

ಆನಂದೀಬಾಯಿಯ ನೀಚ ಕಾರಸ್ಥಾನಗಳ ಮೂಲಕ ರಾಘೋಬನ ವಿಷಯದ ದ್ವೇಷದ ಬೆಂಕಿಯಲ್ಲಿ ಎಣ್ಣೆ ಹಾಕಿದಂತಾಯಿತು; ಮತ್ತು ನಾರಾಯಣರಾಯನ ಮರಣದ ನಂತರ ಹದಿಮೂರನೇ ದಿವಸವೇ ರಾಘೋಬನ ವಿರುದ್ಧ ಯಾವ ಸುಪ್ರಸಿದ್ಧ ಬಾರಭಾಯಿಗಳ ಕಟ್ಟಾಯಿತೋ, ಅದಕ್ಕೆ ಬರಬರುತ್ತ ಪುಷ್ಟಿಯೇ ಉಂಟಾಗಹತ್ತಿತು. ಕಾರಭಾರಿಗಳು ಗಂಗಾಬಾಯಿಯ ಹೆಸರಿನಿಂದ ಹೊಸ ಸನದು ಕೊಡಲಿಕ್ಕೂ, ಮೊದಲಿನಂತೆ ನಾರಾಯಣರಾಯನ ಹೆಸರಿನ ಶಿಕ್ಕೆ-ಮೋರ್ತಬ

* ಈ ವಿಷಯದ ಹೆಚ್ಚಿನ ಐತಿಹಾಸಿಕ ಮಾಹಿತಿಯನ್ನು ತಿಳಿಯಬೇಕೆಂದಿರುವ ವಾಚಕರು ತಮ್ಮ ವಡಗಾವದ ವಿಜಯ ಬೆಲೆ ೧। ರೂ. ಎಂಬ ಪುಸ್ತಕ ತರಿಸಿ ಓದಬಹುದು,

ವಿಳಾಸ:—ಬಿ. ಪ. ಕಾಳೆ, ಆನಂದವನ ಪೋಸ್ಟ.

ಗಳನ್ನು ಮಾಡಲಿಕ್ಕೂ ಪ್ರಾರಂಭಿಸಿದರು. ಅದೇ ಕಾಲಕ್ಕೆ ರಾಘೋಬನು ಕರ್ನಾಟಕದ ಮೇಲೆ ದಂಡೆತ್ತಿ ಹೋದುದರಿಂದ ಬಾರಭಾಯಿಗಳ ಕಟ್ಟಿಗೆ ಮತ್ತಿಷ್ಟು ಅನುವು ದೊರೆಯಿತು. ನಾನಾಫಡಣವೀಸನು ರಾಘೋಬನ ಸಂಗಡ ಹೋಗಿದ್ದ ಆತನ ಪಕ್ಷದ ಸರದಾರರಲ್ಲಿಯೂ ಭೇದ ಹುಟ್ಟಿಸಿ ಒಡಕೊಂಡನು. ಹಾಗೆ ಫಿತೂರಾದ ಸರದಾರರು ಬೇರೆ ಬೇರೆ ನೆವ ಮುಂದೆ ಮಾಡಿ ಪುಣೆಗೆ ಹಿಂದಿರುಗಿ ಬಂದರು. ಮುಂದೆ ರಾಘೋಬನಿಗೆ ಬಾರಭಾಯಿಗಳ ಕಟ್ಟಿನ ವರ್ತಮಾನ ಹತ್ತಲು ಅವನು ತನ್ನ ಮುಲುಖಗಿರಿಯ ಕೆಲಸವನ್ನು ಬಿಟ್ಟುಗೊಟ್ಟು ಸಸೈನ್ಯವಾಗಿ ಪುಣೆಗೆ ಹಿಂದಿರುಗಿದನು. ರಾಘೋಬನು ಹಿಂದಿರುಗಿದನೆಂಬ ಸಂಗತಿಯು ತಿಳಿದ ಕೂಡಲೆ ನಾನಾನು ತ್ರ್ಯಂಬಕ ಮಾಮಾ ಪೇಠೆ ಮತ್ತು ಹರಿಪಂತ ಫಡಕೆ ಇವರ ಕೈಕೆಳಗೆ ದೊಡ್ಡ ದಂಡು ಕೊಟ್ಟು ಅವರನ್ನು ರಾಘೋಬನ ಮೇಲೆ ದಾಳಿಯಿಕ್ಕಲಿಕ್ಕೆ ಕಳಿಸಿದನು. ಉಭಯ ದಂಡುಗಳು ಪುರಂದರದ ಬಳಿಯ ಕಾಸೇಗಾವ ಎಂಬಲ್ಲಿ ಕಲೆತವು. ಆ ನಿಕರದ ಯುದ್ಧದಲ್ಲಿ ತ್ರ್ಯಂಬಕ ಮಾಮಾಸಿಗೆ ಪರಾಭವವಾಯಿತು; ಅಲ್ಲದೆ ಆತನು ರಾಘೋಬನಿಂದ ಕೊಲ್ಲಲ್ಪಟ್ಟನು. ತಮ್ಮ ಬಾರಭಾಯಿಗಳ ಪ್ರಯತ್ನಕ್ಕೆ "ಪ್ರಥಮ ಗ್ರಾಸೇ ಮಕ್ಷಿಕಾ ಪಾತಃ" ಎಂಬಂತೆ ಮೊಟ್ಟಮೊದಲಿಗೇ ಅಪಯಶ ಬಂದುದನ್ನು ಕಂಡು ನಾನಾಫಡಣವೀಸನು ಹತಾಶನಾದನು; ಆದರೂ ಫಡಕೆ ಹರಿಪಂತನು ಜೀವಂತನಿದ್ದುದರಿಂದ ಆತನು ತನ್ನ ಬೇತನ್ನು ಸರ್ವಸ್ವೀ ವಿನಾಶಗೊಳಿಸಲಿಕ್ಕಿಲ್ಲೆಂಬ ಭರವಸೆಯು ನಾನಾ ಮತ್ತು ಬಾಪು ಇವರಲ್ಲಿದ್ದಿತು. ಅಲ್ಪಾವಧಿಯಲ್ಲೇ ಹರಿಪಂತನು ಅದನ್ನು ದಿಟವಾಗಿ ಮಾಡಿ ತೋರಿಸಿದನು. ಹರಿಪಂತನು ಹೊಸ ದಂಡನ್ನು ಕೂಡಿಸಿ ಸಾವಾಜಿ ಭೋಸಲೆ, ನಿಜಾಮ ಅಲ್ಲ ಇವರ ನೆರವು ತಕ್ಕೊಂಡು ರಾಘೋಬನ ಮೇಲೆ ಏರಿ ಹೋದನು. ಆ ಹೊಸ ದಂಡಿನ ಆಗಮನವನ್ನು ಅರಿತು ರಾಘೋಬನು ಪುಣೆಯ ದಾರಿಯನ್ನು ಬಿಟ್ಟು ಬರ್ಹಾಣಪುರದ ಕಡೆಗೆ ಓಡತೊಡಗಿದನು. ಇತ್ತ ಪುಣೆಯಲ್ಲಿ ತಾ|| ೧೮ನೇ ಎಪ್ರಿಲ ೭೭೪ಕ್ಕೆ ಗಂಗಾಬಾಯಿಗು ಹಡೆದಳು. ಆಕೆಗೆ ಗಂಡು ಕೂಸೇ ಹುಟ್ಟಿದ್ದರಿಂದ ಬಾರಭಾಯಿಗಳ ಪ್ರಯತ್ನಕ್ಕೆ ಹೆಚ್ಚು ತೇಜವೂ ಬಲವೂ ಬಂದಿತು. ಹೊಸ ಪೇಶ್ವೆಗೆ "ಸವಾಯಿ ಮಾಧವರಾಯ" ಎಂಬ ಹೆಸರನ್ನಿಟ್ಟು, ಬಾರಭಾಯಿಗಳು ಅಂದಿನಿಂದ ಡಾಣಾ ಡಂಗುರವಾಗಿ ಪೇಶ್ವೇ ಕಾರಭಾರವನ್ನು ಸಾಗಿಸತೊಡಗಿದನು.

ಆ ಕಾಲಕ್ಕೆ ಪುಣೆಯ ದರ್ಬಾರದೊಳಗಿನ ಮೋರೋಬಾ ಫಡಣೀಸ, ರಾಯರೀಕರ ಮತ್ತು ಪುರಂದರೆ ಎಂಬ ಮೂವರು ಸರದಾರರು ರಾಘೋಬನಿಗೆ ಅನುಕೂಲರಾಗಿದ್ದರು. ರಾಘೋಬನು ಮೋರೋಬನ ಸಹಾಯದಿಂದ ಗಂಗಾಬಾಯಿ-ಸವಾಯಿ ಮಾಧವರಾಯರನ್ನು ಪುರಂದರ ಕೆಳಗೂ ಪುರಂದರಗಡದ ಮೇಲೂ ಬಂಧಿಸುವ ಪ್ರಯತ್ನ ಮಾಡಿದನು; ಆದರೆ ಅದು ಸಾಧಿಸಲಿಲ್ಲ. ರಾಘೋಬನು ಉತ್ತರ ಹಿಂದುಸ್ಥಾನದ ಕಡೆಗೆ ತಿರುಗಿದ್ದರಿಂದ, ಅತ್ತ ಕಡೆಯ ಶಿಂದೆ-ಹೋಳಕರ ಕ

ಪ್ರಮುಖ ಸರದಾರರ ನೆರವು ನಾನಾನಿಗೆ ಅವಶ್ಯಕವಾಗಿತ್ತು. ಅವರು ತಮಗೆ ನೆರವಾಗುವರೆಂದು ನಾನಾನ ಭರವಸೆಯಿದ್ದಿತು. ಮಹದಾಜಿ ಶಿಂದೆಗೆ ಮಾಧವರಾವ ಪೇಶ್ವೆಯ ಕಾಲಕ್ಕೆ ಸರದಾರಿಕೆಯು ದೊರೆತು, ಮಾಧವರಾಯನ ಕೃಪಾಬಲದಿಂದ ಆತನು ಹೆಸರುವಾಸಿಯಾಗಿದ್ದನು. ಅದರಿಂದ ಅವನು ಮಾಧವರಾಯನ ಪಕ್ಷಕ್ಕೆ ಅನುಕೂಲನೂ ರಾಘೋಬನ ಪಕ್ಷಕ್ಕೆ ಪ್ರತಿಕೂಲನೂ ಆಗಿರುತ್ತಿದ್ದನು; ಅಲ್ಲದೆ ತುಕೋಜಿ ಹೋಳಕರನು ಮಹದಾಜಿಯು ವರ್ಚಸ್ಸಿನ ಮೂಲಕ ಅವನಿಗೆ ಅನುಕೂಲವಾಗಿಯೇ ನಡೆಯುತ್ತಿದ್ದನು; ಅದರಿಂದ ಮಹದಾಜಿಯು ಹೂಂ ಅಂದರೆ ಹೋಳಕರನ ನೆರವು ನಾನಾನಿಗೆ ಸಹಜವಾಗಿಯೇ ಸಿಗುವಂತಿತ್ತು. ನಾನಾನ ಅಪೇಕ್ಷೆಯ ಮೇರೆಗೆ ಶಿಂದೆ-ಹೋಳಕರರು ಅವನಿಗೆ ಸಹಾಯಕರಾಗಲಿಕ್ಕೆ ಸಿದ್ಧರಾದರೇನೋ ನಿಜ; ಆದರೆ ರಾಘೋಬನನ್ನು ಬೊಗ್ಗುಬಡಿಯುವ ಕೆಲಸದಲ್ಲಿ ಅವರು ನಾನಾನಷ್ಟು ಉತ್ಸುಕರಾಗಿರಲಿಲ್ಲ. ಪೇಶ್ವಾಯಿಯೊಳಗಿನ ಈ ಗೃಹಕಲಹದ ಲಾಭವು ಸ್ವಂತದ ವರ್ಚಸ್ಸು ಬೆಳಿಸುವ ಕೆಲಸದಲ್ಲಿ ಮಹದಾಜಿಗೆ ಸಹಜವಾಗಿ ಆಗುವಂತಿತ್ತು; ಅಲ್ಲದೆ ಆ ಮೊದಲಿನ ನಾಲ್ಕು ವರ್ಷಗಳಲ್ಲಿ ಶಿಂದೆಯ ದಂಡಿನ ಖರ್ಚು ಎಷ್ಟು? ಆತನು ವಸೂಲ ಮಾಡಿದ ಹಣವೆಷ್ಟು? ಮತ್ತು ಪುಣೆಯ ದರಬಾರಿಗೆ ಆತನು ಕೊಡುವ ಬಾಕಿಯೆಷ್ಟು? ಈ ಬಗ್ಗೆ ಸರದಾರ ಈ ನಾತೆಯಿಂದ ಶಿಂದೆ ಹಾಗು ಫಡಣೀಸ ಈ ನಾತೆಯಿಂದ ನಾನಾ ಇವರ ನಡುವೆ ಉಂಟಾಗಿದ್ದ ವ್ಯಾಜ್ಯವು ಇನ್ನೂ ಸಂಪೂರ್ಣವಾಗಿ ತೀರಿರಲಿಲ್ಲ. ಶಿಂದೆಯು ತುಸ ಸಡಿಲು ಬಿಟ್ಟದ್ದರಿಂದ ರಾಘೋಬನು ನರ್ಮದೆಯನ್ನು ದಾಟಿ ಇಂದೂರ ವರೆಗೆ ಹೋದನು; ಅವನ ಹಿಂದೆಯೇ ಹರಿಪಂತನೂ ತನ್ನ ಸೈನ್ಯದೊಡನೆ ಮಾಳವ ದೇಶವನ್ನು ಹೊಕ್ಕನು; ಆದರೆ ಶಿಂದೆ-ಹೋಳಕರರ ಆ ಪ್ರಾಂತದಲ್ಲಿ ಅವರ ಸಮ್ಮತಿ ಪಡೆಯದೆ ಹರಿಪಂತನು ರಾಘೋಬನ ಪಾರುಪತ್ಯ ಮಾಡುವದು ಶಕ್ಯವಾಗಿರಲಿಲ್ಲ. ಹರಿಪಂತನು ಮಾಳವದೇಶಕ್ಕೆ ಬರುವನೆಂದು ತಿಳಿದ ಕೂಡಲೆ ಮಹದಾಜಿಯು ರಾಘೋಬನೊಡನೆ ಬಹಿರಂಗವಾಗಿ ಮಧ್ಯಸ್ಥಿಕೆ ನಡೆಸುವ ರಾಜಕಾರಣವನ್ನು ಕೈಕೊಂಡನು; ಹಾಗು ಯಾವ ಕರಾರುಗಳಿಂದ ರಾಘೋಬನನ್ನು ಮನೆಯಲ್ಲಿ ಸ್ವಸ್ಥವಾಗಿ ಕೂಡ್ರಹಚ್ಚಬೇಕೆಂಬ ಬಗ್ಗೆ ಸಂಧಾನ ನಡೆಸಿವನು. ರಾಘೋಬನು ತನ್ನ ಕರಾರುಗಳನ್ನು ತಿಳಿಸಲಿಕ್ಕೆ ದಿನಮೇಕ ಮಾಡಹತ್ತಿದನು. ದಂಡಿನ ಖರ್ಚಿಗಾಗಿ ಆಗಿರುವ ೬-೭ ಲಕ್ಷ ರೂ ಸಾಲವನ್ನು ತೀರಿಸಲಿಕ್ಕೆ ಮೊದಲು ಹಣ ಕೊಡಬೇಕು; ಅಂದರೆ ಶಿಂದೆಯ ಮಧ್ಯಸ್ಥಿಕೆಯಿಂದ ನಾನು ಕಾಯಮ ಒಪ್ಪಂದ ಮಾಡಿಕೊಳ್ಳುವೆನು, ಎಂದು ರಘುನಾಥರಾಯನು ತಿಳಿಸಿದನು. ಅದರಂತೆ ಹರಿಪಂತನಿಂದ ದಂಡಿನ ಖರ್ಚಿನ ಹಣವು ಕೈಸೇರುತ್ತಲೆ ಅವನು ಅಯೋಧ್ಯೆಯ ನವಾಬನಾದ ಸುಜಾಉದ್ದೌಲನ ಆಶ್ರಯಕ್ಕೆ ಓಡಿಹೋಗುವ ಬೇತು ಮಾಡಹತ್ತಿದನು; ಆದರೆ ಶಿಂದೆಯು ಅವನಿಗೆ ಅಡ್ಡಿಮಾಡಿದ್ದರಿಂದ, ಅವನು ದಕ್ಷಿಣಕ್ಕೆ ಬರಲಿಕ್ಕೆ ಸಿದ್ಧನಾದನು. ಆತನ ಕೂಡ ಶಿಂದೆ-ಹೋಳಕರರೂ ಹೊರಟರು.

ಆಗ ಮೊಗಲ ಭೋಸಲೆ ಇವರ ಸಹಾಯದ ಅವಶ್ಯಕತೆಯು ಉಳಿಯದ್ದರಿಂದ ಹರಿಪಂತನು ವರ್ಹಾಡದ ಸರಹದ್ದಿನಲ್ಲಿಯೆ ಅವರಿಗೆ ಮರಳಿ ಹೋಗಲಿಕ್ಕೆ ತಿಳಿಸಿದನು.

ರಾಘೋಬನು ಒಮ್ಮೆನಸ್ಸಿನಿಂದ ದಕ್ಷಿಣಕ್ಕೆ ಬರುತ್ತಿರಲಿಲ್ಲ. ದಾರಿಯಲ್ಲಿ ಹಲವು ಬಗೆಯ ನೆವ ಹೇಳಿ, ದಿನಗಳೆಯತ್ತ ಸಾಗಿದ್ದನು. ಅದು ಶಿಂದೆಗೂ ಒಂದು ಬಗೆಯಿಂದ ಇಷ್ಟವೇ ಆಗಿದ್ದಿತು; ಯಾಕಂದರೆ ರಾಘೋಬನು ಪುಣೆಗೆ ತಲುಪುವಷ್ಟರಲ್ಲೇ ಕಾರಭಾರಿಗಳಿಂದ ಆತನ ಕರಾರುಗಳಿಗೆ ಸಮ್ಮತಿ ಬರಬೇಕಾಗಿತ್ತು. ಆದ್ದರಿಂದ ಶಿಂದೆಯು ತನ್ನ ವಕೀಲನನ್ನು ಮುಂಗಡವಾಗಿ ಪುರಂದರಕ್ಕೆ ಕಾರಭಾರಿಗಳ ಕಡೆಗೆ ಕಳಿಸಿ, ರಾಘೋಬನ ವಿಷಯಕ್ಕೂ, ತನ್ನ ವಿಷಯಕ್ಕೂ ಎಲ್ಲ ಕರಾರುಗಳನ್ನೂ ಸ್ಪಷ್ಟವಾಗಿ ಗೊತ್ತುಮಾಡಿಕೊಂಡನು. ಆ ಕರಾರುಗಳಲ್ಲಿ ರಾಘೋಬನಿಗೆ ೧೦ ಲಕ್ಷ ರೂ.ಗಳ ಜಹಗೀರು ಮತ್ತು ೩ ಕೋಟಿಗಳು; ಸ್ವತಃ ಶಿಂದೆಗೆ ಖರ್ಚಿನ ಬಗ್ಗೆ ೧ ಲಕ್ಷ ರೂ. ಮತ್ತು ಸಿಂದಖೇಡ ಮುಂತಾದ ಕೆಲ ಗ್ರಾಮಗಳ ಇನಾಮು, ಮುಂತಾದ ಕರಾರುಗಳು ಪ್ರಾಮುಖ್ಯವಾಗಿದ್ದವು. ನೀವು ಈ ಕರಾರುಗಳಿಗೆ ಒಪ್ಪಿ, ರಾಘೋಬನನ್ನು ನಿಮ್ಮ ಸ್ವಾಧೀನ ಪಡಿಸಿಕೊಳ್ಳುವದಕ್ಕಾಗಿ ಬನ್ನಿರೆಂದು ಶಿಂದೆಯು ಕಾರಭಾರಿಗಳನ್ನೇ ಉತ್ತರ ಹಿಂದುಸ್ಥಾನಕ್ಕೆ ಕರೆಕಳುಹಿದ್ದನು; ಕಾರಭಾರಿಗಳಿಗಾದರೂ ಆ ಗೊಂದಲವನ್ನೊಮ್ಮೆ ಹೇಗಾದರೂ ಬೇಗನೆ ಮುಗಿಸಿಬಿಡುವದು ಆವಶ್ಯಕವಾದ್ದರಿಂದ, ಮೊಗಲ ಹಾಗು ಭೋಸಲೆ ಇವರನ್ನು ತಮ್ಮ ನೆರವಿಗೆ ತಕ್ಕೊಂಡು ಖಾನದೇಶದ ಮಾರ್ಗ ಹಿಡಿದರು. ಇದನ್ನು ಕಂಡು ರಾಘೋಬನು ಮತ್ತೆ ಕೆಲ ಹೊಸ ಕರಾರುಗಳನ್ನು ಮುಂದು ಮಾಡಿದನು; ಹಾಗು ಶಿಂದೆಯ ಸಡಿಲತನದ ಲಾಭ ಪಡೆದು, ಅವನ ಮೋರೆ ತಪ್ಪಿಸಿ, ಮತ್ತೆ ಉತ್ತರದ ಕಡೆಗೆ ಓಡತೊಡಗಿದನು. ಆಗ ಪುಣೆಯ ಕಾರಭಾರಿಗಳು ನಿರಾಶರಾದರು. ತಮ್ಮ ಬಳಿಯ ಸೈನ್ಯವನ್ನು ಹರಿಪಂತನ ಸಹಾಯಕ್ಕೆ ಕಳಿಸಿ, ಅವರು ಪುಣೆಗೆ ಹಿಂದಿರುಗಿ ಬಂದರು. ರಾಘೋಬನು ಹಾಗೆ ಮೋರೆತಪ್ಪಿಸಿ ಓಡಿ ಹೋಗುತ್ತಿರುವಾಗ ಆನಂದೀಬಾಯಿಯು ಅವನೊಡನೆಯೇ ಇದ್ದಳು ಆಗ ಅವಳು ಬಸುರಿದ್ದಳು ಅವಳನ್ನು ಸಂಗಡ ಕಟ್ಟಿಕೊಂಡು ಓಡಿ ಹೋಗುವದು ಬಹು ಕಠಿಣ ಕೆಲಸವಾಗಿತ್ತು. ಅದರಿಂದ ಅವನು ಅವಳನ್ನು ಧಾರದ ಕಿಲ್ಲೆಯಲ್ಲಿಟ್ಟು, ಆಕೆಯ ಸಂರಕ್ಷಣದ ಬಗ್ಗೆ ಯೋಗ್ಯ ವ್ಯವಸ್ಥೆ ಮಾಡಿದನು.

ಇಷ್ಟಾದ ಮೇಲೆ ಅವನು ಓಡಿ ಹೋಗಲಿಕ್ಕೆ ನಿರಾತಂಕವಾದನು. ಧಾರದಿಂದ ಆತನು ಉಜ್ಜಯಿನಿಗೆ ಹೋದನು; ಆದರೆ ಹರಿಪಂತನ ದಂಡು ಅಲ್ಲಿಯೂ ತನ್ನನ್ನು ಬೆನ್ನಟ್ಟಿ ಬಂದುದನ್ನು ಕಂಡು, ಅವನು ಪಶ್ಚಿಮಕ್ಕೆ ತಿರುಗಿ, ಗುಜರಾಥದಲ್ಲಿ ಸೇರಿ, ಬಡೋದೆಗೆ ಬಂದನು. ಆತನ ಹಿಂದೆ ಹರಿಪಂತನೂ, ಅವನ ಹಿಂದೆ ಒಡಂಬಡಿಕೆ ಮಾಡಲೆತ್ನಿಸುತ್ತ ಸಾವಕಾಶವಾಗಿ ನಡೆದಿರುವ ಶಿಂದೆ-ಹೋಳಕರರೂ ಹೀಗೆ ಮರಾಟರ ಎಲ್ಲ ಪ್ರಮುಖರೂ ಸಾಲುಗೊಂಡು ನಡೆದಿದ್ದರು. ಬಡೋದೆಯಲ್ಲಿರುವದು ಸುರಕ್ಷಿತವಲ್ಲೆಂಬದನ್ನು ತಿಳಿದು ರಾಘೋಬನು ಅಹಮ್ಮದಾಬಾದದ ಕಡೆಗೆ ನಡೆಯಲು,

ಹರಿಪಂತನು ಅವನನ್ನು ಬೆನ್ನಟ್ಟಿ ಮಹೀನದಿಯ ತೀರದಲ್ಲಿ ಅವನಿಗೆ ಗಂಟುಬಿದ್ದನು. ಇನ್ನು ಉಭಯತರಿಗೂ ತುಮುಲದ ಕಾಳಗವಾಗತಕ್ಕದ್ದು; ಇಷ್ಟರಲ್ಲಿ ಶಿಂದೆಯು ಮಧ್ಯಸ್ಥನಾಗಿ ಉಭಯತರಲ್ಲೂ ಒಡಂಬಡಿಕೆಯ ಸಂಧಾನ ನಡೆಸಿದನು. ಆ ನದಿಯ ಎರಡೂ ದಂಡೆಗಳಲ್ಲಿ ಎರಡೂ ಕಡೆಯ ಸೈನ್ಯವು ೧೭ ದಿನಗಳವರೆಗೆ ಬೀಡು ಬಿಟ್ಟಿತ್ತು; ಆದರೆ ಕಡೆಗೂ ಆ ಸಂಧಾನದಿಂದ ಪ್ರಯೋಜನವೇನೂ ಆಗಲಿಲ್ಲ

ಪೇಶ್ವಾಯಿಯ ನ್ಯಾಯಕ್ಕೆ ಕಾರಣನಾದ ರಾಘೋಬನ ಸ್ಥಿತಿಯಂತೂ ಆಗ ತೀರ ಕನಿಕರದ್ದಾಗಿತ್ತು. ನಾರಾಯಣರಾಯನ ಕೊಲೆಯ ನಂತರ ಬಾರಭಾಯಿಗಳು ಅವನನ್ನು ಓಡಿಸಿಬಿಟ್ಟಿದ್ದರು. ತನ್ನನ್ನು ಬೆನ್ನ ಕಟ್ಟುವವರಾರೂ ಇಲ್ಲೆಂಬದನ್ನು ತಿಳಿದು, ಅವನು ಇನ್ನು ಇಂಗ್ಲಿಷರ ಆಶ್ರಯ ಹೊಂದುವ ಬೇತು ಮಾಡಿದನು. ಧಾರದಲ್ಲಿ ತನ್ನ ಎಲ್ಲ ಸಿರಿ-ಸಂಪತ್ತನ್ನಿಟ್ಟು, ಬರಿಯ ಆರು ಲಕ್ಷ ಬೆಲೆಯ ವಜ್ರ-ವೈಢೂರ್ಯಗಳನ್ನಷ್ಟೇ ಸಂಗಡ ತಕ್ಕೊಂಡು ಅವನು ಗುಜರಾಥದ ದಾರೀ ಹಿಡಿದನು. ಖಂಬಾಯತದಿಂದ ಭಾವನಗರಕ್ಕೆ ಹೋಗಿ, ಅಲ್ಲಿಂದ ಜಲಮಾರ್ಗವಾಗಿ ತಾ|| ೨೩ ೨-೧೭೭೫ಕ್ಕೆ ಸುರತಿಗೆ ತಲುಪಿದನು. ಅಲ್ಲಿಯ ಇಂಗ್ಲಿಷ ಅಧಿಕಾರಿಗಳು ಅವನನ್ನು ಚೆನ್ನಾಗಿ ಸತ್ಕರಿಸಿದರು; ಆದರೆ ರಾಘೋಬಾ ದಾದಾನಿಗೆ ಹಣದ ಅಡಚಣಿಯಾಗಲು, ಅದನ್ನು ಮಾತ್ರ ಅವರು ಪೂರೈಸದಾದರು. ಸುರತದಲ್ಲಿ ಸಾಲಬೇಡಬೇಕೆಂದು ಅವನು ಯೋಚಿಸಿದನು; ಆದರೆ ಅಲ್ಲಿಯ ಯಾವ ಶೆಟ್ಟಿ-ಸಾವುಕಾರರೂ ಆತನಿಗೆ ಸಾಲಕೊಡಲೊಲ್ಲರು. ಇಂಥ ಸ್ಥಿತಿಯಲ್ಲಿ ನಮ್ಮೊಡನೆ ಒಡಂಬಡಿಕೆ ಮಾಡಿಕೊಳ್ಳುವದಾದರೂ ಬೇಗನೆ ಮಾಡಿಕೊಳ್ಳಿರೆಂದು ಇಂಗ್ಲಿಷರು ಅವನಿಗೆ ಬಿರಿ ಹಚ್ಚಿದರು. ಇಂಗ್ಲಿಷರು ರಾಘೋಬನಂತಹ ಶಹಾಜೋಗ ಕುಳಕ್ಕೆ ಜಾಮೀನಾಗಿ ಸಾಲ ಕೊಡಿಸುವದನ್ನೊತ್ತಟ್ಟಿಗೇ ಬಿಟ್ಟು, ನಿಮ್ಮ ಬಳಿಯ ಆರು ಲಕ್ಷ ಬೆಲೆಯ ಹರಳು ಕಲ್ಲುಗಳನ್ನು ಒಡಂಬಡಿಕೆಯ ಸಂಚುಗಾರವೆಂದು ನಮ್ಮಲ್ಲಿ ಇಟ್ಟರೆ ಮಾತ್ರ ನಾವು ನಿಮ್ಮೊಡನೆ ಒಪ್ಪಂದ ಮಾಡಿಕೊಳ್ಳುತ್ತೇವೆಂದು ಅನ್ನಲಾರಂಭಿಸಿದರು! ಆಗ ಅನಿವಾರ್ಯಕ್ಕಾಗಿ ರಾಘೋಬನು ಅವರೊಡನೆ ಒಡಂಬಡಿಕೆ ಮಾಡಿಕೊಂಡನು. ಆ ಒಪ್ಪಂದದ ಮುಖ್ಯ ಕರಾರುಗಳು ಇಂತಿದ್ದವು— ಇಂಗ್ಲಿಷರು ಮರಾಟರೊಡನೆ ಈ ಮೊದಲು ಮಾಡಿಕೊಂಡ ಒಪ್ಪಂದಗಳನ್ನು ರಾಘೋಬನು ಮಾನ್ಯಮಾಡಬೇಕು; ಇಂಗ್ಲಿಷರು ರಾಘೋಬನಿಗೆ ಸದ್ಯಕ್ಕೆ ೧೫೦೦, ಆದರೆ ಬೇಗನೆ ತೀರ ಕಡಿಮೆಯೆಂದರೆ ೨೫೦೦ ಜನ ತಮ್ಮ ದಂಡಾಳುಗಳ ಸಹಾಯ ಮಾಡಬೇಕು. ಈ ದಂಡಿನ ಖರ್ಚಿಗಾಗಿ ರಘುನಾಥರಾಯನು ಸಾಷ್ಟಿಯ ಎಲ್ಲ ದ್ವೀಪಗಳನ್ನೂ ಸಾಷ್ಟಿಯ ಬಳಿಯ ಮರಾಟರ ವಶದಲ್ಲಿರುವ ಪ್ರದೇಶವನ್ನೂ, ಅದರ ಆದಾಯವನ್ನೂ ಜಂಬೂಸರ ಓಲಪಾಡಗಳೆಂಬ ಗುಜರಾಥದೊಳಗಿನ ೨ ಪರಗಣೆಗಳನ್ನೂ, ಕಾರಂಜಾ ಕಾನ್ಹೇರೀ ಮುಂತಾದ ಮುಂಬಯಿಯ ಬಳಿಯ ದ್ವೀಪಗಳನ್ನೂ ಬಡೋದೆಯ ಗಾಯಕವಾಡನ ಮುಖಾಂತರ ಭಡೋಚನಗರ ಮತ್ತು ಪರಗಣೆ ಇವುಗಳಲ್ಲಿಯ ಮರಾಟರ ಆದಾಯವನ್ನೂ, ಅಂಕಲೇಶ್ವರದ ಆದಾಯ

ದೊಳಗಿಂದ ವರ್ಷಕ್ಕೆ ಮುಕ್ಕಾಲು ಲಕ್ಷ ರೂ. ಗಳನ್ನೂ, ಅಲ್ಲದೆ ವರ್ಷಕ್ಕೆ ೧॥ ಲಕ್ಷ ರೋಖ ರೂಪಾಯಿಗಳನ್ನೂ ಕೊಡಬೇಕು. ಈ ಎಲ್ಲ ಹಣಕ್ಕೆ ಉಗಾವಣಿಯಾಗಿ ಗುಜರಾಥದೊಳಗಿನ ನಾಲ್ಕು ಮಹಾಲುಗಳನ್ನು ಅಡವು ಹಾಕಿ ಕೊಡಬೇಕು. ಇನ್ನು ಮುಂದೆ ಎಂದೂ ಬಂಗಾಲ ಮತ್ತು ಕರ್ನಾಟಕದೊಳಗಿನ ಇಂಗ್ಲಿಷರ ಜಹಗೀರುಗಳ ಮೇಲೆ ಮರಾಟರು ದಾಳಿಯಿಕ್ಕಬಾರದು. ಕಂಪನಿ ಸರಕಾರಕ್ಕೆ ಕೊಡಬೇಕೆಂದು ಗೊತ್ತಾದ ಮೇಲೆ ವಿವರಿಸಿದ ಎಲ್ಲ ಪ್ರದೇಶಗಳು ಒಡಂಬಡಿಕೆಯ ತಾರೀಖಿನಿಂದ ಕಂಪನಿಯ ಸ್ವಾಧೀನಪಡಿಸಬೇಕು; ಮತ್ತು ರಾಘೋಬನು ಪುಣೆ ದರಬಾರದೊಡನೆ ಸ್ವತಂತ್ರ ಒಡಂಬಡಿಕೆ ಮಾಡಿಕೊಂಡು ಮುಂದೆ ಯುದ್ಧದ ಕಾರಣ ಬೀಳದಿದ್ದರೂ, ಇಂಗ್ಲಿಷರು ರಾಘೋಬನಿಗೆ ದಂಡಿನ ಸಹಾಯ ಮಾಡುವ ಪ್ರಸಂಗ ಬರದಿದ್ದರೂ ಕೂಡ ಈ ಒಪ್ಪಂದದ ಮೇರೆಗೆ ಇಂಗ್ಲಿಷರು ರಾಘೋಬನಿಗೆ ಮಾಡತಕ್ಕ ಸಹಾಯ ವನ್ನು ಮಾಡಿದರೆಂತಲೇ ತಿಳಿದು, ಮೇಲೆ ವಿವರಿಸಿದ ಪ್ರದೇಶಗಳನ್ನು ಇಂಗ್ಲಿಷರಿಗೆ ಕಾಯಮವಾಗಿ ಕೊಟ್ಟುಬಿಟ್ಟವೆಯೆಂದು ತಿಳಿಯತಕ್ಕದ್ದು.

ಈ ಪ್ರಕಾರ ಒಡಂಬಡಿಕೆಯಾದ ನಂತರ ಮುಂಬಯಿಯವರು ಕರ್ನಲ್ಲ ಕೀಟಿಂಗ ಎಂಬವನಿಗೆ ರಾಘೋಬನ ಸಹಾಯಕ್ಕೆ ಹೋಗಬೇಕೆಂದು ಅಪ್ಪಣೆ ಗೆಯ್ದರು. ಕೀಟಿಂಗ ಮತ್ತು ರಾಘೋಬ ಇವರ ಭೆಟ್ಟಿಯು ಸುರತದಲ್ಲಿ ಫೆಬ್ರುವಾರಿಯ ಕೊನೆಗೆ ಆಯಿತು. ಬೇಗನೆ ದಾರಾ ಎಂಬಲ್ಲಿ ಅಂದರೆ, ಖಂಬಾಯತದಿಂದ ೧೯ ಮೈಲಿನ ಮೇಲೆ ರಾಘೋಬಾ ಹಾಗು ಇಂಗ್ಲಿಷರ ಒಟ್ಟು ಸೈನ್ಯವು ಸರಾಸರಿ ೫೦ ಸಾವಿರ ಕೂಡಿತು. ಇತ್ತ ಹರಿಪಂತನ ಕಡೆಯ ದಂಡು ಸಿಂದೆ-ಹೋಳಕರರು ಮಾಳವಕ್ಕೆ ತಿರುಗಿ ಹೋದದ್ದರಿಂದ ವಿಶೇಷವಾಗಿ ಕಡಿಮೆಯಾಗಿತ್ತು; ಹಾಗು ಬಹು ದಿನಗಳಿಂದ ಸೈನಿಕರ ಸಂಬಳವು ಸಲ್ಲದ್ದರಿಂದ ದಂಡಾಳುಗಳಲ್ಲಿ ಹೆಚ್ಚಾದ ಅಸಂತೋಷವೂ ನೆಲಿ ಸಿತ್ತು. ಈ ಸ್ಥಿತಿಯಲ್ಲಿ ಆರಾಸಗಾವ ಎಂಬಲ್ಲಿ ಉಭಯ ಕಡೆಯ ಸೈನ್ಯಗಳಲ್ಲಿ ಯುದ್ಧ ವಾಯಿತು. ಆಗ ಹರಿಪಂತನು ಹಿಂದೆಗೆಯಬೇಕಾಯಿತು; ಆದರೆ ಆರಾಸದ ವಿಜ ಯದ ನಿಷ್ಕರ್ಷವೇನೂ ಆಗಲಿಲ್ಲ; ಯಾಕಂದರೆ, ಅಷ್ಟರಲ್ಲಿ ಮಳೆಗಾಲ ಸಮೀಪಿಸಿತು. ಅದರಿಂದ ಕೀಟಿಂಗನು ಹರಿಪಂತನನ್ನು ಬೆನ್ನಟ್ಟದೆ, ಡಭೋಯಿ ಎಂಬಲ್ಲಿ ಮಳೆಗಾಲದ ಛಾವಣಿ ಮಾಡಿಕೊಂಡಿರಬೇಕಾಯಿತು; ಆದರೆ ಪೇಶ್ವೆಯವರ ದಂಡಿಗೆ ದೊರೆತ ಈ ಅವಧಿಯು ರಾಘೋಬನಿಗೆ ಪ್ರತಿಕೂಲವಾಯಿತು. ಮುಂಬಯಿಯವರು ರಾಘೋಬ ನೊಡನೆ ಮಾಡಿದ ಒಪ್ಪಂದದ ಸಂಗತಿಯು ಕಲಕತ್ತೆಯ ಗವರ್ನರ ಜನರಲ್ಲನಾದ ವಾರನ್‌ಹೇಸ್ಟಿಂಗ್ಸನಿಗೆ ತಿಳಿದ ಕೂಡಲೆ ಅವನು ಆ ಒಪ್ಪಂದಕ್ಕೆ ಅಡ್ಡಿಯನ್ನುಂಟು ಮಾಡಿದನು. ೧೭೭೩ನೇ ರೆಗ್ಯೂಲೇಶನ್ ಆ್ಯಕ್ಟಿನ ಪ್ರಕಾರ ಬಂಗಾಲದೊಳಗಿನ ಗವರ್ನರನಿಗೆ ಹಿಂದುಸ್ತಾನದೊಳಗಿನ ಮುಖ್ಯ ಗವರ್ನರನ ಅಧಿಕಾರ ದೊರೆತಿದ್ದು, ಬೇರೆ ಇಲಾಖೆಯೊಳಗಿನ ಗವರ್ನರರ ಮೇಲೆ ಆತನ ಅಧಿಕಾರವು ನಡೆಯಹತ್ತಿತ್ತು. ಆ ಮಾತಿಗೆ ಒಂದೇ ವರ್ಷವಾಗಿದ್ದರಿಂದ, ಪೂರ್ವದ ಸ್ವತಂತ್ರತೆಯ ಮೇರೆಗೆ ಮುಂ-

ಬಯಿಯವರು ಸ್ವಂತದ ಜವಾಬುದಾರಿಯ ಮೇಲೆ ರಾಘೋಬನೊಡನೆ ಒಪ್ಪಂದ ಮಾಡಿಕೊಂಡಿದ್ದರು; ಕಲಕತ್ತೆಯ ಗವರ್ನರ ಜನರಲ್ಲನ ಸಮ್ಮತಿಯು ದಾರೀ ಕಾಯಲಿಲ್ಲ. ಈ ಮೂಲಕ ಪುಣೆ ದರ್ಬಾರಕ್ಕೆ ಸುಮ್ಮಸುಮ್ಮನೆ ರೇಗಿಗೆಬ್ಬಿಸಿದ ದ್ರೋಹವು ಮಾತ್ರ ಮುಂಬಯಿಯವರಿಗೆ ಬಡಕೊಂಡಿತು. ಕಲಕತ್ತೆಗೆ ಈ ಸುದ್ದಿ ಹತ್ತುವಷ್ಟರಲ್ಲಿ ಪೇಶ್ವೆಯರ ದಂಡಿನೊಡನೆ ನಿಕರದ ಯುದ್ಧವಾಗಿ ಇಂಗ್ಲಿಷರಿಗೆ ಅನುಕೂಲವಾದ ನಿಷ್ಕರ್ಷವಾಗಿದ್ದರೆ ಮತ್ತು ಇಂಗ್ಲಿಷರ ದಂಡಿನವರು ರಾಘೋಬನನ್ನೊಯ್ದು ಪುಣೆಯ ಪೇಶ್ವೇ ಪಟ್ಟದ ಮೇಲೆ ಕೂಡ್ರಿಸಿದ್ದರೆ ಮಾತ್ರ ಮಾತು ಬೇರೆಯಾಗುತ್ತಿತ್ತು. ಆ ಮೇಲೆ ಕಲಕತ್ತೆಯವರು ಆದ ಸಂಗತಿಯ ಲಾಭ ಮಾತ್ರ ತಕ್ಕೊಳ್ಳುತ್ತಿದ್ದರು!

ಒಟ್ಟಿನಲ್ಲಿ ಇಂಗ್ಲಿಷರಿಗೆ ಮರಾಟರೊಡನೆ ಕಾದುವ ಪ್ರಸಂಗ ಬಂತು. ಎಲ್ಲ ಮರಾಟಾ ಸರದಾರರೂ ಪುಣೆಯ ದರಬಾರಿಗೆ ಅನುಕೂಲರು. ಸ್ವತಃ ರಾಘೋಬನಲ್ಲಿ ಹೆಚ್ಚಾಗಿ ದಂಡಿದ್ದಿಲ್ಲ. ಮುಂಬಯಿಯ ಇಂಗ್ಲಿಷರು ಮೊದಲೇ ದುಡ್ಡಿನ ಪೇಚಿನಲ್ಲಿ ಸಿಕ್ಕವರು; ಮತ್ತು ಇಷ್ಟೆಲ್ಲ ಪ್ರತಿಕೂಲ ಪ್ರಸಂಗಗಳಿಗೆದುರಾಗಿ ಯುದ್ಧಕ್ಕೆ ತೊಡಗುವದು ಯಾರಿಗಾಗಿ? ಹಾಗು ಯಾತಕ್ಕಾಗಿಯೆಂದರೆ, ಇಡಿ ಜಗತ್ತು ಯಾವನ ಮೇಲೆ ತನ್ನ ಅಣ್ಣನ ಮಗನ ಕೊಲೆಯ ಆರೋಪವನ್ನು ಹೊರಿಸಿರುವದೋ ಅಂಥ ಆ ರಾಘೋಬನಿಗೆ ಪುಣೆಯ ಪೇಶ್ವೇ ಪಟ್ಟವು ದೊರೆಯಬೇಕೆಂದು! ವಾರನ್ ಹೆಸ್ಟಿಂಗನೇನೂ ಹರಿಶ್ಚಂದ್ರನಂತಹ ಸತ್ಯಪ್ರತಿಜ್ಞನಾಗಲಿ, ಶ್ರೀ ರಾಮಚಂದ್ರನಂತಹ ನ್ಯಾಯಪ್ರಿಯನಾಗಲಿ ಆಗಿರಲಿಲ್ಲ; ಆದರೂ ಮುಂಬಯಿಯವರು ರಾಘೋಬನ ಪಕ್ಷವಹಿಸಿದ್ದದು ಅವನಿಗೂ ವಿಪರೀತವೆನಿಸಿತೆಂಬ ಬಗ್ಗೆ ಸಂದೇಹವಿರಲಿಲ್ಲ. ಆತನು ಯುದ್ಧ ತಹಕೂಬಿಯ ಹುಕುಮನ್ನು ನಾಲ್ಕೂ ಕಡೆಗೆ ಕಳಿಸಿ, ತನ್ನ ಕಡೆಯ ಒಬ್ಬ ವಕೀಲನನ್ನು ಒಪ್ಪಂದ ಮಾಡಿಕೊಳ್ಳುವ ಸಲುವಾಗಿ ನೆಟ್ಟಗೆ ಪುಣೆಯ ದರಬಾರಿಗೆ ಕಳಿಸಿಕೊಟ್ಟನು. ಇದರಿಂದ ಮುಂಬಯಿಯ ಇಂಗ್ಲಿಷರ ಮೋರೆಗೆ ಮಸಿ ಬಳಿದಂತಾಯಿತು; ಹಾಗು ತಾವು ಇನ್ನು ರಾಘೋಬನಿಗೆ ಏನು ಹೇಳಬೇಕೆಂಬ ಬಗ್ಗೆ ಅವರಿಗೆ ನಾಚಿಕೆಯುಂಟಾಯಿತು.

ಕೂಡಲೆ ಅವರು ತಮ್ಮ ಹುಳುಕು ಮುಚ್ಚಿಕೊಳ್ಳುವದಕ್ಕಾಗಿ ರಘುನಾಥರಾಯನಿಗೆ ಹೀಗೆ ಹೇಳಿ ಕಳಿಸಿದರು:"ಇತ್ತ ಕಡೆಯ ಕಚ್ಚಾ ಸಂಗತಿಯ ಪತ್ರವನ್ನು ಬರೆದು ಕಲಕತ್ತೆಯ ಟೇಲರ ಸಾಹೇಬರ ಕಡೆಗೆ ಮತ್ತೆ ಬೇಕಂತ ಕಳಿಸಿರುತ್ತೇವೆ. ಆ ಪತ್ರವು ಅವರಿಗೆ ಇಪ್ಪತ್ತೇ ದಿನಗಳಲ್ಲಿ ತಲುಪುವದು; ಹಾಗು ಇಂದಿನಿಂದ ೧॥ ತಿಂಗಳಿಗೆ ಅತ್ತ ಕಡೆಯಿಂದ ಖಾತ್ರಿಯಿಂದ ಬರುವ ಉತ್ತರದಲ್ಲಿ ಮತ್ತೆ ಮರಾಟರೊಡನೆ ಯುದ್ಧ ಮಾಡುವ ಅಪ್ಪಣೆ ಬರುವದು." ಅದರಂತೆ ರಾಘೋಬನು ೧॥ ತಿಂಗಳ ವರೆಗೆ ದಾರೀ ನೋಡಿದನು. ಅತ್ತ ಕಡೆಯಿಂದ ಏನೂ ತಿಳಿಯಲಿಲ್ಲ. ಅದೇ ಕಾಲಕ್ಕೆ ಇಂಗ್ಲಿಷರ ಕಡೆಗಿದ್ದ ರಾಘೋಬನ ವಕೀಲನೂ ರಾಘೋಬನಿಗೆ ಹೀಗೆ

ಪತ್ರ ಬರೆದು ಧೈರ್ಯ ಕೊಟ್ಟನು:—"ಶ್ರೀಮಂತರಿಗೆ ಅಭಿವಚನ ಕೊಟ್ಟದ್ದನ್ನು ಜನರಲ್ಲನು ಎಂದೂ ತಪ್ಪಿಸಲಾರನು. ಶ್ರೀಮಂತರ ಇಷ್ಟದಂತೆ ಕೆಲಸವಾದೀತು; ಚಿಂತಿಸಬಾರದು."

ಆದರೆ ಇದರಂತೆ ಯಾವದೂ ಆಗದೆ, ಕಡೆಗೆ ಮುಂಬಯಿಯ ಇಂಗ್ಲಿಷರು ಕರ್ನಲ್ಲ ಕೀಟಿಂಗನ ಮುಖಾಂತರ ರಾಘೋಬನಿಗೆ ತಿಳಿಸಿದರೇನಂದರೆ:—"ಪ್ರಸಂಗ ವಂತೂ ಈ ಮೆಟ್ಟಿಗೆ ಮುಟ್ಟಿರುತ್ತದೆ. ಆದರೂ ನಮ್ಮ ಅಧಿಕಾರದ ಮಟ್ಟಿಗೆ ಹೆಣಗಿ, ನಾವು ಸಹಾಯ ಮಾಡುತ್ತೇವೆ. ಒಪ್ಪಂದ ಮಾಡಿಕೊಳ್ಳುವದೇ ಅವಶ್ಯವಾದರೆ, ನಿಮ್ಮ ಹಿತವಾಗುವಂತಹ ಕಲಮುಗಳನ್ನೇ ಒಪ್ಪಂದದಲ್ಲಿ ಹಾಕುತ್ತೇವೆ ಅದಾ ವುದೂ ನಮ್ಮಿಂದ ಸಾಧಿಸದಿದ್ದರೆ, ನಮ್ಮ ಪ್ರದೇಶದಲ್ಲಿ ನಿರ್ಭಯದಿಂದ ಇರಲಿಕ್ಕೆ ನಿಮಗೆ ಅನುಕೂಲವಾದ ಸ್ಥಳವನ್ನಾದರೂ ಕೊಡುತ್ತೇವೆ." . ಈ ನಿರಾಶಾಜನಕ ಸಂಗತಿಯನ್ನು ಕೇಳಿ ರಘುನಾಥರಾಯನಿಗೇನೆನಿಸಿರಬಹುದೆಂಬದನ್ನು ನಮ್ಮ ವಾಚ ಕರೇ ತರ್ಕಿಸಬಲ್ಲರು.

---

೮ ನೆಯ ಪರಿಚ್ಛೇದ.

## ಫ್ರೆಂಚರ ಪ್ರವೇಶ.

ಶ್ರೀಯುತ ರಾಜವಾಡೆ ಇವರು ಮರಾಟರ ಇತಿಹಾಸದ ೧೨ನೇ ಖಂಡವನ್ನು ಪ್ರಸಿದ್ಧಿಸಿದ್ದು, ಅದರಲ್ಲಿ ಅವರು ರಾಯರೀಕರರ ಹಲವು ಪತ್ರಗಳನ್ನು ಪ್ರಕಟಿಸಿರು ತ್ತಾರೆ. ಅವುಗಳಲ್ಲಿಯ ಕೆಲವು ರಾಘೋಬನು ಇಂಗ್ಲಿಷರಿಗೆ ಬರೆದ ಪತ್ರಗಳಿವೆ; ಕೆಲವು ಇಂಗ್ಲಿಷರ ವಕೀಲನಿಂದ ರಾಘೋಬನಿಗೆ ಬಂದಂಥವುಗಳಾಗಿವೆ. ಅವುಗಳನ್ನು ಓದಿ ದರೆ ಆತನು ಆಶ್ರಯಕ್ಕೆ ಹೋದಂದಿನಿಂದ ಎಂಥ ವಿಪತ್ತಿಗೆ ಗುರಿಯಾದನೆಂಬ ಸಂಗ ತಿಯು ವಿಶದವಾಗಿ ತಿಳಿಯುತ್ತದೆ. ಕಲಕತ್ತೆಯ ಇಂಗ್ಲಿಷರ ಹುಕುಮಿನಿಂದ ಯುದ್ಧವು ನಿಂತಿತು. ಅದರಿಂದ ರಘುನಾಥರಾಯನ ಕಾರ್ಯಕ್ಕೆ ವಿಲಕ್ಷಣವಾದ ಅಡ್ಡಿಯುಂಟಾ ಯಿತು. ಆದರೂ ಹಿಂದೆ ಹೇಳಿದಂತೆ ಮುಂಬಯಿಯ ಇಂಗ್ಲಿಷರು ಅವನಿಗೆ ಸುಳ್ಳು ಹೇಳಿ, ಕೆಲ ಕಾಲವನ್ನು ಹರಣ ಮಾಡಿದರು. ಮುಂದೆ ಅವರು ರಾಘೋಬನ ವಕೀಲನ ಮುಖಾಂತರ ಅವನಿಗೆ ತಿಳಿಸಿದರೇನಂದರೆ:—"ಮುಂಬಯಿಯ ಇಂಗ್ಲಿ ಷರು ಕಲಕತ್ತೆಯ ಇಂಗ್ಲಿಷರ ಹುಕುಮಿನ ವಿಷಯವಾಗಿ ರೊಚ್ಚಿಗೆದ್ದಿರುತ್ತಾರೆ. ಇವರು ಆ ಬಗ್ಗೆ ವಿಲಾಯತಿಗೆ ಟಪಾಲು ಬರೆದಿರುತ್ತಾರೆ. ಅದರಿಂದ ಈಗಿನ ಕಲ ಕತ್ತೆಯ ಇಂಗ್ಲಿಷ ಗವರ್ನರ ಜನರಲ್ಲನನ್ನು ವಿಲಾಯತಿಯವರು ಹಿಂದಕ್ಕೆ ಕರೆಸಿ ಕೊಂಡು, ಅಲ್ಲಿಂದ ಮುಂಬಯಿಯವರಿಗೆ ಅನುಕೂಲನಾದ ಬೇರೊಬ್ಬ ಹೊಸಬನನ್ನು ಕಳಿಸುವರು. ಆದುದರಿಂದ ರಘುನಾಥರಾಯನ ಇಷ್ಟಕಾರ್ಯವು ಹೊಸ ಗವರ್ನರ ಜನರಲ್ಲನಿಂದ ಆಗಿಯೇ ಆಗುತ್ತದೆ. ಈ ಕೆಲಸವು ವಿಲಾಯತಿಯವರ ಹುಕುಮಿನ

ಹೊರತು ಆಗಲಾರದು" ಅಲ್ಲದೆ, "ನೆಲಮಾರ್ಗದಿಂದ ಬೇರೊಬ್ಬ ಮುತ್ಸದ್ದಿಯನ್ನು ಹಿಂದುಸ್ತಾನದಿಂದ ವಿಲಾಯತಿಗೆ ಕಳಿಸಿದರೆ, ಆವನು ೭-೮ ತಿಂಗಳುಗಳಲ್ಲಿ ನಿಮ್ಮ ಕಾರ್ಯವನ್ನು ಕೈಗೂಡಿಸಿಕೊಂಡು ಬರುವನು." ಎಂಬ ಖೊಟ್ಟಿ ಆಶೆಯನ್ನೂ ಅವನಿಗೆ ಹಚ್ಚಿದರು.

"ಗಂಗಾಬಾಯಿಗೆ ಹುಟ್ಟಿದ ಕೂಸು ಸತ್ತಿದ್ದು, ಅದರ ಸ್ಥಳದಲ್ಲಿ ಬೇರೆ ಕೃತ್ರಿಮ ಹುಡುಗನನ್ನು ಇಟ್ಟಿರುತ್ತಾರೆ. ಗಂಗಾಬಾಯಿಯ ಬಳಿಯಲ್ಲಿ ಐದು ಜನ ಬಸಿರು ಹೆಂಗಸರನ್ನು ಬೇಕಂತ ಇರಿಸಿದ್ದರು. ಇದರಿಂದ ರಾಘೋಬನ ಪೇಶ್ವೇ ಪಟ್ಟದ ಹಕ್ಕು ಮತ್ತಿಷ್ಟು ದೃಢವಾಯಿತು"ಎಂದು ಮುಂಬಯಿಯಲ್ಲಿ ಹಬ್ಬಿದ್ದ ಸುಳ್ಳು ಸುದ್ದಿಯನ್ನು ಮುಂಬಯಿಯ ಇಂಗ್ಲಿಷರು ಮುಂದೆ ಮಾಡಿ, ಇಂಗ್ಲಿಷರ ಆಶ್ರಯದಿಂದ ನಿಮಗೆಂದೂ ಕೇಡಾಗದೆಂದು ಅವರು ರಾಘೋಬನಿಗೆ ಧೈರ್ಯ ಕೊಟ್ಟರು; ಆದರೆ ಬರಬರುತ್ತ ಆ ಆಶೆಯು ನಿರಾಶೆಯಾಗಿ ಪರಿಣಮಿಸಹತ್ತಿತು. ರಾಘೋಬನಲ್ಲಿ ಸ್ವಂತದ ಮಾಲಕಿಯ ಹಣ-ಕಾಸುಗಳೇನೂ ಉಳಿದಿರಲಿಲ್ಲ. ಗಾಯಕವಾಡನ ಕಡೆಯಿಂದ ಅವನಿಗೆ ಬರಬೇಕಾಗಿದ್ದ ಬಾಕಿಯನ್ನು ಇಂಗ್ಲಿಷರು ಆತನಿಗೆ ಸಿಗಗೊಡಲೊಲ್ಲರು. ಇಂಗ್ಲಿಷರು ಒಮ್ಮೆ ಗೋವಿಂದರಾಯ ಗಾಯಕವಾಡನಿಗೂ, ಮತ್ತೊಮ್ಮೆ ಫತ್ತೇಸಿಂಗ ಗಾಯಕವಾಡನಿಗೂ ಅನುಕೂಲತೆಯನ್ನು ತೋರಿ. ಅವರಿಂದ ತಮ್ಮ ಖರ್ಚಿನ ಹಣವನ್ನು ಮಾತ್ರ ವಸೂಲ ಮಾಡಿಕೊಳ್ಳುತ್ತಿದ್ದರು. ಗುಜರಾಥದೊಳಗೆ ಕೊಡಲೊಪ್ಪಿದ ಪರಗಣೆಗಳ ಸನದುಗಳನ್ನು ಮಧ್ಯಸ್ತರಿಂದ ಎತ್ತಿ ಹಾಕಿಕೊಂಡರು. ಆದಗೂ ಇಂಗ್ಲಿಷರು ರಾಘೋಬನ ಸ್ವಂತದ ಖರ್ಚಿನ ವ್ಯವಸ್ಥೆಯನ್ನೇನೂ ಮಾಡದಾದರು. ಸ್ವಂತ ದಂಡಿನ ಬಲದಿಂದ ಅವನು ಬಡೋದೆಯನ್ನು ಆಕ್ರಮಿಸುವ ವಿಚಾರ ಮಾಡಿದ್ದನು; ಆದರೆ ಅದಕ್ಕೂ ಇಂಗ್ಲಿಷರು ಅಡ್ಡಾದರು. ಈಗ ಇವರೊಡನೆ ತಕರಾರು ಮಾಡಿದರೆ ಮುಂದಿನ ಮಸಲತ್ತಿಗೆ ಬಾಧೆಬರುತ್ತದೆಂದು ಅವನು ಸುಮ್ಮನಿದ್ದನು. ಸಂಬಳವು ಸಿಗದ್ದರಿಂದ ಆತನ ದಂಡಿನೊಳಗಿನ ಎಷ್ಟೋ ಜನರು ಬಿಟ್ಟು ಹೋಗುವ ಬೇತು ಮಾಡತೊಡಗಿದರು. ಬರುವ ಆಶ್ವೀಜದಲ್ಲಿ ಮತ್ತೆ ಯುದ್ಧ ಹೂಡಬೇಕೆಂದು ಕಲಕತ್ತೆಯಿಂದ ಹುಕುಮು ಬರುವದಿತ್ತು; ಆದರೆ ಕಾರ್ತಿಕ ಮಾಸವು ಮುಗಿಯ ಹತ್ತಿದರೂ ಆ ಹುಕುಮಿನ ಪತ್ತೆಯಿರಲಿಲ್ಲ. ನರ್ಮದೆಯ ತೀರದ ಯಾವುದೊಂದು ಅನುಕೂಲ ಸ್ಥಳ ನೋಡಿ ತಳವೂರಿಕೊಂಡಿರಬೇಕೆಂದರೆ, ಕರ್ನಲ್ಲ ಕೀಟಿಂಗನು ಹಾಗೆ ಮಾಡಗೊಡಲೊಲ್ಲನು; ಮುಕ್ಕಾಮಿನ ಮೇಲೆ ಮುಕ್ಕಾಮು ಮಾಡುತ್ತ ಸಾಗಬೇಕೆಂದು ಆಗ್ರಹ ಮಾಡುತ್ತಿದ್ದನು. ಮಾರ್ಗಶೀರ್ಷದ ಹುಣ್ಣಿವೆಯಾದರೂ ಕಲಕತ್ತೆಯಿಂದ ಯುದ್ಧದ ಹುಕುಂ ಬರಲಿಲ್ಲ. ಆಗ ರಾಘೋಬನ ವಕೀಲನು ಮುಂಬಯಿಯವರಿಗೆ:—"ಕಲಕತ್ತೆಯವರು ನಿಮ್ಮ ಮಾತಿಗೆ ಒಪ್ಪದಿದ್ದರೆ ನೀವು ಏನು ಮಾಡುವಿರಿ? ನಿಮ್ಮ ವಚನದಿಂದ ನಾವು ಮೋಸಗೊಳ್ಳಬೇಕೋ ಹೇಗೆ?" ಎಂದು ಕೇಳಲು, ಅವರು ಮತ್ತೆ ಮೊದಲಿನಂತೆಯೇ:—"ತುಸ ತಾಳಿರಿ, ಚಿಂತಿಸಬೇಡಿರಿ. ಕಲಕತ್ತೆ

ಯುವರು ನಮ್ಮ ಮಾತಿನಂತೆ ಬೇಗನೆ ಹುಕುಂ ಕಳಿಸುವರು" ಎಂದರು; ಆದರೆ ಅವೆಲ್ಲ ಆಶ್ವಾಸನಗಳೂ ಬೇಗನೆ ನಿಷ್ಫಲವಾದವು. ಯಾಕಂದರೆ, ಅದೇ ವರ್ಷದ ಫಾಲ್ಗುಣಮಾಸದಲ್ಲಿ ಕಲಕತ್ತೆಯವರಿಂದ ಕಳಿಸಲ್ಪಟ್ಟ ಆಪ್ಟನ್ನ ಸಾಹೇಬನು ನೆಟ್ಟಗೆ ಪುಣೆಗೆ ಹೋಗಿ, ಬಾರಭಾಯಿಗಳೊಡನೆ ಒಪ್ಪಂದ ಮಾಡಿಕೊಂಡು, ಆ ಸಂಗತಿ ಯನ್ನು ಅವನು ಮುಂಬಯಿ ಇಂಗ್ಲಿಷರಿಗೆ ತಿಳಿಸಿದನು. ಆ ಒಪ್ಪಂದದೊಳಗಿನ ಎಲ್ಲಕ್ಕೂ ಪ್ರಾಮುಖ್ಯವಾದ ಶರ್ತು:—"ಇಂಗ್ಲಿಷರು ರಾಘೋಬನನ್ನು ಕೂಡಲೆ ಬಾರಭಾಯಿಗಳಿಗೆ ಒಪ್ಪಿಸಬೇಕು" ಎಂದಿತ್ತು. ಈ ಸಂಗತಿಯನ್ನು ಮುಂಬಯಿಯ ಇಂಗ್ಲಿಷರು ರಾಘೋಬನಿಗೆ ತಿಳಿಸುವಾಗ ಅವರಿಗೆ ಏನೆನಿಸಿರಬಹುದೆಂಬದನ್ನು ವಾಚಕರೇ ಕಲ್ಪಿಸಿಕೊಳ್ಳಲಿ! ಅದನ್ನು ತಿಳಿದು ಮುಂಬಯಿಯವರು ವಿಶ್ವಾಸಘಾತ ಮಾಡಿದರೆಂದು ರಾಘೋಬನಿಗೆ ಅನಿಸಿತು. "ನಾವು ನಿಮ್ಮ ಆಶ್ರಯಕ್ಕೆ ಬಂದಿದ್ದು, ನೀವು ನಮ್ಮನ್ನು ಬಾರಭಾಯಿಗಳಿಗೆ ಒಪ್ಪಿಸಿ, ಅವರಿಂದ ಕೈದು ಮಾಡಿಸುವದು ನಿಮ್ಮ ಬಿರುದಿಗೆ ಒಪ್ಪತಕ್ಕದ್ದಾಗಿರುವದೆ?" ಎಂದು ಅವನ ಬಾಯಿಯಿಂದ ಸಹಜ ವಾಗಿಯೇ ಉದ್ಗಾರ ಹೊಂಟಿತು. ನಿಮ್ಮ ಕೈಯಿಂದ ನನಗೆ ಸಹಾಯವಾಗದಿದ್ದರೆ ಇಲ್ಲ, ಸುಮ್ಮನೆ ಕೂಡ್ರಲಿಕ್ಕೆ ನೀವೇನು ಕೇಳುವಿರೆಂದು ರಾಘೋಬನು ಮುಂಬ ಯಿಯ ಇಂಗ್ಲಿಷರಿಗೆ ಸವಾಲು ಹಾಕಿದನು. ನಾನು ಒಂದೆರಡು ವರ್ಷ ಈ ಗುಜ ರಾಥದಲ್ಲಿಯೇ ಇದ್ದು, ಹೇಗಾದರೂ ನನ್ನ ಉಪಜೀವನ ನಡೆಸಿಕೊಳ್ಳುವೆನೆಂದು ಆತನು ಅಂದನು. ಭಡೋಚದ ಬಳಿಯ 'ರಣಗಡ' ಎಂಬ ನರ್ಮದಾ ತೀರದ ದುರ್ಗದಲ್ಲಿ ವರ್ಷೆರಡು ವರ್ಷಗಳ ವರೆಗೆ ಅನುಷ್ಠಾನ ಮಾಡುತ್ತಿರುವೆನೆಂದನು. ಅದುವರೆಗೆ ವಿಲಾಯತಿಗೂ ಬಾರಭಾಯಿಗಳ ವೈರಿಗಳ ಕಡೆಗೂ ಸಂಧಾನಕಟ್ಟಿ ದೈವಪರೀಕ್ಷೆ ಮಾಡಿಕೊಳ್ಳುವೆನೆಂತಲೂ ರಘುನಾಥರಾಯನು ಅವರಿಗೆ ಹೇಳಿದನು.

ಆದರೆ ಅದಲ್ಲ ಅಶಕ್ಯವಾಯಿತು. ಯಾಕಂದರೆ, ಮುಂಬಯಿಯ ಇಂಗ್ಲಿಷರು ರಾಘೋಬನನ್ನು ಗುಜರಾಥದಲ್ಲಿರಗೊಡುವದು ಕಲಕತ್ತೆಯ ವರಿಷ್ಠರು ಪುಣೆಯ ಬಾರಭಾಯಿಗಳೊಡನೆ ಮಾಡಿಕೊಂಡ ಒಪ್ಪಂದಕ್ಕೆ ವಿರುದ್ಧವಾಗುತ್ತಿತ್ತು. ಅದರಿಂದ ಮುಂಬಯಿಯವರು ರಾಘೋಬನ ಬೇಡಿಕೆಗಳಿಗೆ ಸಮ್ಮತಿಸದಾದರು. ಆಗ ಆತನು ಹಣೆ ಹಣೆ ಬಡಕೊಳ್ಳುತ್ತ: "ಇಂಗ್ಲಿಷರಂತಹ ಬಲಶಾಲಿಗಳೂ, ಪ್ರಾಮಾಣಿಕರೂ ಅನ್ಯರಿಲ್ಲೆಂದು ನಾನು ಇವರ ಆಶ್ರಯಕ್ಕೆ ಬಂದಿದ್ದೆನು; ಆದರೆ ನನ್ನ ದುರ್ದೈವವು ಇಲ್ಲಿಯೂ ಕೈಕೊಟ್ಟಿತು! ಈ ಬಗ್ಗೆ ಇನ್ನು ಇಂಗ್ಲಿಷ ಗವರ್ನರ ಜನರಲ್ಲನಿಗೆ ದೋಷ ಕೊಡುವದರಲ್ಲ ಅರ್ಥವೇನಿದೆ? ನನ್ನ ದೈವದಲ್ಲಿದ್ದಂತಾಗುವದು!! ಎಲ್ಲರಿಗಿಂತಲೂ ಶ್ರೇಷ್ಠರಾದ ಇಂಗ್ಲಿಷರ ಸಹಾಯದಿಂದ ಹಗೆಗಳ ಪಾರುಪತ್ಯವು ಅರ್ಧಮರ್ಧವಾಗು ತ್ತಿರಲು, ದೈವದುರ್ವಿಪಾಕದಿಂದ ಕಾಲಚಕ್ರವು ತಿರುಗಿತು; ಅದಕ್ಕೆ ಯಾರೇನು ಮಾಡು ವರು? ಇಂಥ ಸ್ಥಿತಿಯಲ್ಲಿ ಅಭಾವ ವೈರಾಗ್ಯದ ಹೊರತು ಬೇರೆ ಆಶ್ರಯಸ್ಥಾನ ವೆಲ್ಲಿದೆ?" ಎಂದುಕೊಂಡನು. ಬಾರಭಾಯಿಗಳು ರಾಘೋಬನಿಗೆ 'ಕೋಪರಗಾವ'

ದಲ್ಲಿ ಇರ ಹೇಳಿದ್ದರು. ಅಲ್ಲಿರುವದೆಂದರೆ, ಪ್ರತ್ಯಕ್ಷ ಬಾರಭಾಯಿಗಳ ಕೈದಿನಲ್ಲಿ ದ್ದಂತೆಯೇ ಸರಿ. ಅದುದರಿಂದ ನಾನು ಕಂಪನೀ ಸರಕಾರದ ಪ್ರಾಂತದೊಳಗಿನ ಯಾವುದೊಂದು ಕ್ಷೇತ್ರದಲ್ಲಿರುತ್ತೇನೆಂದು ರಾಘೋಬನು ಕೇಳಿಕೊಂಡನು. ಅದೂ ಸಾಧಿಸಲಿಲ್ಲ. ಇಷ್ಟೇ ಇಲ್ಲ, ಇಂಗ್ಲಿಷರ ವಶದಲ್ಲಿದ್ದ ರಘುನಾಥರಾಯನ ಮಾಲಕಿಯ ಆರು ಲಕ್ಷ ಬೆಲೆಯ ಹರಳು-ಕಲ್ಲುಗಳನ್ನು ಕೂಡ ಬಾರಭಾಯಿಗಳ ವಶಪಡಿಸುವೆ ವೆಂದು ಆಸ್ಟನ್‌ಸಾಹೇಬನು ಪುಣೆಯ ದರಬಾರದಲ್ಲಿ ಒಪ್ಪಿಕೊಂಡು ಬಂದಿದ್ದನು. ಇದು ಅನ್ಯಾಯದ ಪರಮಾವಧಿಯೆಂದು ರಾಘೋಬನಿಗೆ ಅನಿಸಿತು. ಆಗ ಅವನು ನನ್ನ ಮಾಲಕಿಯ ಹರಳು-ಕಲ್ಲುಗಳನ್ನು ನನ್ನ ವೈರಿಗಳಿಗೆ ಕೊಡುವ ಅಧಿಕಾರವು ಈ ಆಸ್ಟನ್ನನಿಗೆಲ್ಲಿಂದ ಬಂತು? ಎಂದನು; ಆದರೆ ಇಂಗ್ಲಿಷರು ಬಾರಭಾಯಿಗಳೊಡನೆ ಒಪ್ಪಂದ ಮಾಡಿಕೊಂಡದ್ದರಿಂದ ಈ ಪ್ರಶ್ನೆಯನ್ನು ಅವರಿಗೆ ಕೇಳುವ ಅಧಿಕಾರವು ರಾಘೋಬನಿಗಾದರೂ ಎಲ್ಲಿಂದ ಬಂತು? ಎಂಬ ಬಗ್ಗೆ ಅವನು ಆತ್ಮಗತವಾಗಿ ವಿಚಾ ರಿಸಿಕೊಳ್ಳಲಿಲ್ಲ.

ಶಾ. ಶ. ೧೬೯೭ರ ಚೈತ್ರ ಬ|| ೧೪ ರ ಪತ್ರದಲ್ಲಿ ರಾಘೋಬನು ಒಳ್ಳೇ ನಿಕರ ದಿಂದ ಹೀಗೆ ಬರೆದಿರುತ್ತಾನೆ:—"ನಮ್ಮ ಬೇತು ಎಲ್ಲ ಬಗೆಯಿಂದಲೂ ಕೆಟ್ಟಿತು. ಈ ಎಲ್ಲ ಸಂಕಟಗಳು ಈ ಇಂಗ್ಲಿಷರ ಪ್ರತಿಕೂಲತೆಯ ಮೂಲಕವೇ ಪ್ರಾಪ್ತವಾದವು. ಇದುವರೆಗೆ ಇಂಗ್ಲಿಷರ ಆಶ್ರಯಕ್ಕೆ ಹೋದವರನ್ನು ಅವರು ಬಿಟ್ಟುಕೊಟ್ಟದ್ದಿಲ್ಲವೆಂದು ಅವರ ಲೌಕಿಕವಿತ್ತು; ಆದರೆ ಇಂದು ಅದು ನನ್ನ ಪಾಲಿಗೆ ಸುಳ್ಳಾಯಿತು. ಪ್ರಸಿದ್ಧ ವಿಶ್ವಾಸ ಘಾತುಕರೂ ಮೋಸಗಾರರೂ ಬೇ-ಇಮಾನರೂ ಮಾಡದಂತಹ ಸ್ಥಿತಿಯು ಇಂದು ಈ ಇಂಗ್ಲಿಷರಿಂದ ನನಗಾಗಿರುತ್ತದೆ." ತಾನು ಎಲ್ಲಿಗೆ ಹೋಗಬೇಕು? ಏನು ಮಾಡಬೇಕು? ಮುಂತಾದ ಯಾವದೂ ಆಗ ರಾಘೋಬನಿಗೆ ಹೊಳೆಯಲಿಲ್ಲ. ಕಳ ಕಿತ್ತಿ ಎಲ್ಲಿಗಾದರೂ ಹೊರಡಬೇಕೆಂದರೆ, ಸಂಬಳದ ಬಾಕಿಯ ಸಲುವಾಗಿ ದಂಡಿ ನವರು ಗಂಡಾಂತರವನ್ನೊಡ್ಡಿದ್ದರು. ಇದ್ದಲ್ಲಿಯೇ ಸ್ವಸ್ಥವಾಗಿರಬೇಕೆಂದರೆ, ಗ್ಯಾಂ ಬಿಯರನೂ ಕೀಟಿಂಗನೂ ಅವನೆಡೆಗೆ ಬಂದು:—"ನೀವು ಇಲ್ಲಿ ವಾಸಿಸಿರುವದರಿಂದ ಫಡಕೆ ಮುಂತಾದವರ ದಂಡುಗಳ ಉಪದ್ರವವು ನಮಗೂ ನಮ್ಮ ನಾಡಿಗೂ ನಿಷ್ಕಾ ರಣವಾಗಿ ಆಗಿ, ನಾವು ಹಾನಿಗೊಳಗಾಗಬೇಕಾಗುತ್ತದೆ; ಅಲ್ಲದೆ ದಂಡು ಸಹಿತ ನಿಮ್ಮನ್ನು ಇಲ್ಲಿ ಇರಗೊಟ್ಟ ಬಗ್ಗೆ ನಮ್ಮ ಮೇಲೆ ಇಲ್ಲದ ಆರೋಪವೂ ಬರಬಹು ದಾಗಿದೆ; ಮತ್ತು ಪೇಶ್ವೆಯರು ನಮ್ಮ ಮೇಲೆಯೂ ಸಾಗಿ ಬರಬಹುದಾಗಿದೆ. ಆದುದ ರಿಂದ ನೀವು ಇನ್ನು ಇಲ್ಲಿ ಇರದೆ, ಹೊರಟು ಹೋಗಿರಿ. ನೀವು ನಮ್ಮ ಆಶೆ ಹಿಡಿ ಯದೆ, ನಿಮ್ಮ ಇಷ್ಟದಂತೆ ವರ್ತಿಸಬಹುದು. ನಮ್ಮ ಮುಂಬಯಿಯೊಳಗೆ ಬರು ತ್ತಿದ್ದರೆ ಬರೀ ೨೦೦ ಜನರೊಡನೆ ಬರಬಹುದು. ನಿಮ್ಮ ಉಳಿದ ಜನರನ್ನು ನಾವು ನಮ್ಮ ಪಟ್ಟಣದೊಳಗೆ ಪ್ರವೇಶ ಮಾಡಗೊಡುವದಿಲ್ಲ." ಎಂದು ಸ್ಪಷ್ಟವಾಗಿ ತಿಳಿಸಿದರು.

ಕರ್ನಲ್ಲ ಆಸ್ಟನ್ನನು ಕಲಕತ್ತೆಯಿಂದ ಪುಣೆಗೆ ಪರಭಾರೆ ಹೋಗಿ ಕಾರಭಾರಿ

ಗಳೊಡನೆ ಒಡಂಬಡಿಕೆಯನ್ನು ಮಾಡಹತ್ತಿದನು; ಆದರೆ ಅವರು ಮೊದ ಮೊದಲು ಅದಕ್ಕೆ ಇಂಬುಗೊಡಲಿಲ್ಲ. ಮುಂಬಯಿಯವರು ಸುಮ್ಮ ಸುಮ್ಮನೆ ಕಿಳ್ಳಿ ಎಬ್ಬಿಸಿದ್ದ ಕ್ಕಾಗಿ ಸಾಷ್ಟಿ ಸಹಿತವಾಗಿ ಈ ಮೊದಲು ಇಂಗ್ಲಿಷರು ಗೆದ್ದುಕೊಂಡಿದ್ದ ತಮ್ಮ ನಾಡನ್ನೆಲ್ಲ ತಮಗೆ ಬಿಟ್ಟುಕೊಡಬೇಕು; ಹಾಗು ರಘುನಾಥರಾಯನ ಪಕ್ಷವನ್ನು ಬಿನ್‌ಶರ್ತು ಬಿಟ್ಟುಬಿಡಬೇಕು, ಹೀಗೆಂದು ಅವರು ಆಗ್ರಹತೊಟ್ಟರು; ಆದರೆ ಅದಕ್ಕೆ ಇಂಗ್ಲಿಷ ವಕೀಲನು ಒಪ್ಪದಾದನು. ಅದರಿಂದ ಆಗ ಆ ಒಪ್ಪಂದದ ಮಾತು ನಿಂತೇ ಹೋದಂತಾಯಿತು. ತಾರೀಖು ೭-೩-೧೭೭೬ಕ್ಕೆ ಮರಾಟರೊಡನೆ ಮತ್ತೆ ಕಾದು ವದನ್ನು ಕಲಕತ್ತೆಯ ಇಂಗ್ಲಿಷರು ನಿರ್ಧರಿಸಿದರು: ಆದರೆ ಅದಕ್ಕೂ ಮೊದಲು ಹತ್ತುದಿನ ಒಡಂಬಡಿಕೆಗೆ ಪ್ರಾರಂಭವಾಗಿ, ತಾ|| ೧ನೇ ಮಾರ್ಚಿಗೆ ಒಡಂಬಡಿಕೆಯ ಕಾಗದದ ಮೇಲೆ ಉಭಯ ಪಕ್ಷದವರ ಸಹಿ-ಸೂತ್ರಗಳಾದವು. ಆ ಒಡಂಬಡಿಕೆ ಯೊಳಗಿನ ಮುಖ್ಯ ಕರಾರುಗಳಾವವೆಂದರೆ:-ಇಂಗ್ಲಿಷರು ಗೆದ್ದುಕೊಂಡ ಸಾಷ್ಟಿಯು ಅವರ ಕಡೆಗೇ ಇರಬೇಕು. ಅದನ್ನು ಇಂಗ್ಲಿಷರೇ ಮರಳಿ ಕೊಡಲಿಕ್ಕೆ ಎಂದಾದರೂ ಒಪ್ಪಿದರೆ, ಅದರ ಬದಲು ೩ ಲಕ್ಷ ಉತ್ಪತ್ತಿಯ ಪ್ರಾಂತವನ್ನು ಅವರಿಗೆ ಕೊಡಬೇಕು. ಭಡೋಚ ಪಟ್ಟಣ ಮತ್ತು ಅದರ ಸುತ್ತುಮುತ್ತಲಿನ ಪೇಶ್ವೆಯವರ ವಶದಲ್ಲಿದ್ದ ಸರಾಸರಿ ೩ ಲಕ್ಷದ ಪ್ರದೇಶವನ್ನು ಪೇಶ್ವೆಯವರು ಇಂಗ್ಲಿಷರಿಗೆ ಕೊಡತಕ್ಕದ್ದು. ಇಂಗ್ಲಿಷರು ರಘುನಾಥರಾಯನ ಪಕ್ಷವನ್ನು ಬಿಟ್ಟು ತಮ್ಮ ಸೈನ್ಯದೊಡನೆ ಹಿಂದಿರುಗ ಬೇಕು; ಹಾಗು ರಘುನಾಥರಾಯನಾದರೂ ತನ್ನ ದಂಡಿಗೆಲ್ಲ ಅಪ್ಪಣೆಕೊಟ್ಟು ಗೋದಾತೀರದ ಕೋಪರಗಾವದಲ್ಲಿ ತಿಂಗಳಿಗೆ ೨೫ ಸಾವಿರ ರೂಪಾಯಿಗಳ ಉಂಬಳಿ ಯನ್ನು ಪಡೆದು ಸ್ವಸ್ಥವಾಗಿರಬೇಕು. ಈ ಒಡಂಬಡಿಕೆಯಿಂದ ಮರಾಟರಿಗೆ ವರು ಷಕ್ಕೆ ಆರು ಲಕ್ಷಗಳ ಹಾನಿಯಾಯಿತು: ಆದರೆ ಮನೆಜಗಳವನ್ನು ಅಪಸಾತಿನಲ್ಲಿ ಮುರಿಯಲಿಕ್ಕೂ ಪರಕೀಯ ಪ್ರವೇಶವು ತಮ್ಮ ರಾಜಕಾರಣದಲ್ಲಿ ಆಗದ್ದಕ್ಕೂ ವರು ಷಕ್ಕೆ ಆರು ಲಕ್ಷದ ಕರವನ್ನು ಕೊಡುವದು ವಿಹಿತವೆಂದು ಅವರು ತಿಳಕೊಂಡರು; ಆದರೆ ಇಂಗ್ಲಿಷರಿಗೆ ಮಾತ್ರ ಈ ಒಡಂಬಡಿಕೆಯ ಶರ್ತುಗಳಿಂದ ಆಗತಕ್ಕಷ್ಟು ಸಮಾ ಧಾನವಾದಂತೆ ಕಾಣಲಿಲ್ಲ. ಮರಾಟರ ಆರು ಲಕ್ಷದ ಪ್ರದೇಶಕ್ಕಿಂತ, ಮರಾಟರ ನ್ಯಾಯಕ್ಕೆ ಬೀಜಭೂತನಾದ ರಾಘೋಬನು ತಮ್ಮ ಸ್ವಾಧೀನದಲ್ಲಿರುವದೇ ಹೆಚ್ಚು ಲಾಭದಾಯಕವೆಂದು ಅವರಿಗೆ ಅನಿಸಿರಬಹುದು: ಆದರೂ ಆ ಪುರಂದರದ ಹೊಸ ಒಪ್ಪಂದದ ಮೇರೆಗೆ ತಮಗೆ ಸಿಗಬಹುದಾದ ನಾಡನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ಅವರು ಸಿದ್ಧರಾಗಿದ್ದರು. ಇತ್ತ ನಾಡನ್ನೂ ಎತ್ತಿಹಾಕಬೇಕು; ಅತ್ತ ರಾಘೋಬ ನಿಗೂ ಆಶ್ರಯ ಕೊಡಬೇಕು. ಹೀಗೆ ಇಬ್ಬಗೆಯ ವಿಚಾರವು ಅವರ ಮನಸ್ಸಿನಲ್ಲಿತ್ತು. ಅವರು ರಾಘೋಬನನ್ನು ಬಾರಭಾಯಿಗಳ ಸ್ವಾಧೀನ ಮಾಡದೆ, ಆತನಿಗೆ ತಿಂಗಳಿಗೆ ೧೦ ಸಾವಿರ ಪೆನ್ಶನ್ನು ಗೊತ್ತು ಮಾಡಿ, ಅವನನ್ನು ಮುಂಬಯಿಗೆ ಕರೆದೊಯ್ದರು; ಹಾಗು ತಮ್ಮ ದಂಡನ್ನು ಗುಜರಾಥದಲ್ಲಿ ಸಜ್ಜುಗೊಳಿಸಿಟ್ಟರು. ಗವರ್ನರ ಜನರಲ್ಲ

ನಾದ ಸ್ವತಃ ವಾರನ್‌ಹೇಸ್ಟಿಂಗ್ಸನಿಗೆ ಈ ಪುರಂದರದ ಒಪ್ಪಂದವು ಸಮ್ಮತವಾಗಿರ ಲಿಲ್ಲ; ಮತ್ತು ಮುಂಬಯಿಯವರಾದರೂ ಕಲಕತ್ತೆಯವರ ವಿರುದ್ಧ ಇಂಗ್ಲಂಡದ ರಾಜನ ಕಡೆಗೆ ಅಪೀಲು ಮಾಡುವ ಸರಳ ದಾರಿಯನ್ನು ರಾಘೋಬನಿಗೆ ಸೂಚಿಸಿ ಗೊಂದಲವೆಬ್ಬಿಸಿದ್ದರು. ರಘುನಾಥರಾಯನು ಇಂಗ್ಲಂಡದ ಅರಸನಿಗೆ ಬರೆದ ಪತ್ರ ದಲ್ಲಿ ಈ ಪ್ರಕಾರ ಸಂಗತಿಯಿದ್ದಿತು: "ನನ್ನ ಪಕ್ಷವೇ ಸತ್‌ಪಕ್ಷವೆಂಬುದನ್ನು ಮನ ವರಿಕೆ ಮಾಡಿಕೊಂಡೇ ಮುಂಬಯಿಯವರು ನನಗೆ ಸಹಾಯ ಮಾಡಲಿಕ್ಕೆ ಒಪ್ಪಿ ದ್ದರು. ಕರ್ನಲ್ ಕೀಟಿಂಗನ ಶೌರ್ಯದ ಮೂಲಕ ನಾವು ಗುಜರಾಥದ ೪-೬ ಕಾಳಗಗಳಲ್ಲಿ ಜಯಶಾಲಿಗಳಾಗಿದ್ದೆವು; ಹಾಗು ಮಳೆಗಾಲ ಕಳೆದ ಮೇಲೆ ನಾವು ಪುಣೆಯ ಮೇಲೆ ಸಾಗಿಹೋಗತಕ್ಕವರಿದ್ದೆವು; ಆದರೆ ಇಷ್ಟರಲ್ಲಿ ಕಲಕತ್ತೆಯವರು ಯುದ್ಧ ನಿಲ್ಲಿಸುವ ಹುಕುಮು ಮಾಡಿದರು. ಇಂಗ್ಲಿಷರಲ್ಲಿಯ ಯಾವನೊಬ್ಬ ಗವ ರ್ನರನು ಯಾವದೊಂದು ಮಹತ್ವದ ಕೆಲಸಕ್ಕೆ ಕೈಹಾಕಿದನೆಂದರೆ, ಉಳಿದ ಎಲ್ಲ ಪ್ರಾಂತಗಳ ಗವರ್ನರರೂ ಅವನಿಗೆ ಸಾಕಷ್ಟು ಸಹಾಯ ಮಾಡಿ, ಆ ಕೆಲಸವನ್ನು ಸಂಪೂರ್ತಿಗೊಳಿಸುವ ರೂಢಿಯಿರುತ್ತದೆ; ಆದರೆ ಗವರ್ನರ ಜನರಲ್ಲ ಹೇಸ್ಟಿಂಗ್ಸನಿಗೆ ಇತ್ತಕಡೆಯ ಸ್ಥಿತಿಗತಿಯ ಅಂದಾಜು ಸರಿಯಾಗಿ ಹತ್ತದಿದ್ದ ಮೂಲಕ ಅವನು ಈ ಯುದ್ಧಕ್ಕೆ ಅಡ್ಡಿಯನ್ನುಂಟು ಮಾಡಿರಬಹುದಾಗಿದೆ. ಇಂಗ್ಲಿಷರ ನ್ಯಾಯಪ್ರಿಯ ತೆಯ ಕೀರ್ತಿಯು ಲೋಕದೊಳಗಿನ ಈ ಭಾಗದಲ್ಲಿ ಒಳ್ಳೇ ಪ್ರಸಿದ್ಧವಾಗಿದೆ. ಆದುದ ರಿಂದ ನನ್ನೊಡನೆ ಮುಂಬಯಿಯ ಇಂಗ್ಲಿಷರು ಮಾಡಿಕೊಂಡ ಒಡಂಬಡಿಕೆಯನ್ನು ಸಂಪೂರ್ತಿಗೊಳಿಸಲಿಕ್ಕೆ ಅವರಿಂದ ನನಗೆ ತಕ್ಕ ಸಹಾಯವಾಗಬೇಕು. ನನ್ನೊಡನೆ ಇರುವ ತಮ್ಮ ಸ್ನೇಹಭಾವವನ್ನು ಮನದಂದು, ನನ್ನನ್ನು ಪುಣೆಯ ಪೇಶ್ವೇಪಟ್ಟದ ಮೇಲೆ ಸ್ಥಾಪಿಸುವ ಸಲುವಾಗಿ ಮುಂಬಯಿ-ಕಲಕತ್ತೆಯ ಇಂಗ್ಲಿಷರು ಒಟ್ಟಾಗಿ ನನಗೆ ಸಹಾಯಮಾಡಬೇಕು, ಎಂಬ ಹುಕುಮನ್ನು ತಾವು ದಯಪಾಲಿಸಬೇಕೆಂದು ಬೇಡಿಕೊಳ್ಳುವೆನು."

ಆದರೆ ಆತನ ಆ ಮೊಳ ಉದ್ದ ಪತ್ರದ ಪ್ರತ್ಯಕ್ಷ ಪರಿಣಾಮವೇನೂ ಆಗಲಿಲ್ಲ. ಪುರಂದರದ ಒಪ್ಪಂದವನ್ನು ಅಲ್ಲಗಳೆದು, ಇಂಗ್ಲಿಷರು ರಘುನಾಥರಾಯನಿಗೆ ಮತ್ತೆ ಆಶ್ರಯ ಕೊಟ್ಟದ್ದನ್ನು ಕಂಡು ಪುಣೆಯ ಕಾರಭಾರಿಗಳು ಕೈ ಬಿಗಿಹಿಡಿದರು; ಹಾಗು ರಘುನಾಥರಾಯನನ್ನು ತಮಗೊಪ್ಪಿಸುವ ವಿಷಯದ ಮುಖ್ಯ ಕರಾರು ಅಮಲಿನಲ್ಲಿ ಬಾರದ ಹೊರತು, ಗುಜರಾಥದೊಳಗಿನ ೩ ಲಕ್ಷಗಳ ಪ್ರಾಂತವನ್ನು ನಿಮಗೆ ಕೊಡುವ ದಿಲ್ಲೆಂದು ಇಂಗ್ಲಿಷರಿಗೆ ಹೇಳಿದರು. ಸಾರಾಂಶ, ಕಟ್ಟುನಿಟ್ಟಾದ ಕಾಳಗವೂ ಇಲ್ಲ, ನಿಶ್ಚಿಂತವಾದ ಒಪ್ಪಂದವೂ ಇಲ್ಲ. ಈ ಸ್ಥಿತಿಯಲ್ಲಿ ಕೆಲವು ಕಾಲ ಕಳೆಯಿತು. ಕಲಕತ್ತೆಯ ಕೌನ್ಸಿಲ್ಲದವರು ಪುರಂದರದ ಪುಪ್ಪಂದವನ್ನು ಮಂಜೂರ ಮಾಡಿದ್ದ ರಿಂದ, ಅವರು ಅದಕ್ಕೆ ತಿರುಗಿ ಬೀಳದಾದರು. ಪುರಂದರದ ಒಪ್ಪಂದದ ಕಲಮು ಗಳು ಬೇಗನೆ ಅಮಲಿನಲ್ಲಿ ಬರಬೇಕೆಂದು ನಾನಾಫಡಣವೀಸನು ಚೆನ್ನಾಗಿ ಪ್ರಯತ್ನಿ

ಸುತ್ತಿದ್ದನು; ಮತ್ತು ಅತ್ತ ರಾಘೋಬನೂ ಮುಂಬಯಿಯ ಇಂಗ್ಲಿಷರು ಸುರತದ ಒಪ್ಪಂದದ ಕಲಮುಗಳನ್ನು ಅಮಲಿನಲ್ಲಿ ತರುವ ವಿಷಯವಾಗಿ ಅಷ್ಟೇ ದೀರ್ಘವಾಗಿ ಪ್ರಯತ್ನಿಸುತಿದ್ದನು. "ನಿಮಗೆ ಇದರಂತೆ ನಡೆಯುವ ಇಚ್ಛೆಯಿರದಿದ್ದರೆ. ನನಗೆ ನಿಮ್ಮ ಆಶ್ರಯದ ಅವಶ್ಯಕತೆಯೇ ಇರುವದಿಲ್ಲ. ನನಗೆ ಯೋಗ್ಯ ಕಂಡ ದಾರಿಯನ್ನು ನಾನು ಹಿಡಿಯುವೆನೆ"ಂದು ರಘುನಾಥರಾಯನು ಇಂಗ್ಲಿಷರಿಗೆ ನಿಕ್ಷುಣ್ಣವಾಗಿ ತಿಳಿಸಿದನು. ಮುಂಬಯಿಯ ಇಂಗ್ಲಿಷರಿಗೆ ರಾಘೋಬನ ಆ ಬೇತು ಒಂದು ಬಗೆಯಿಂದ ಲಾಭದಾಯಕವೇ ಆಗಿದ್ದಿತು; ಯಾಕಂದರೆ, ರಾಘೋಬನು ತಮ್ಮ ಆಶ್ರಯದಲ್ಲಿದ್ದರೆ, ಅವನ ಖರ್ಚು ಸಾಗಿಸುವ ಜಬಾಬುದಾರಿಯು ಅವರ ಮೇಲಿತ್ತು. ಅವನೇ ಹೊರಟು ಹೋದ ಮೇಲೆ, ಅದೂ ತಪ್ಪಿತೆಂದು ಅವರು ಹಿಗ್ಗಿದರು.

ಮುಂದಿನ ವರ್ಷದಲ್ಲಿ ತೀರ ಹೊಸದೊಂದು ಸಂಗತಿಯು ಉದ್ಭವಿಸಿತು. ಫ್ರೆಂಚರು ತಮ್ಮ ವಕೀಲನಾದ ಸೆಂಟ ಲ್ಯೂಬಿನ್ ಎಂಬವನ ಮುಖಾಂತರ ಪುಣೆ ದರ್ಬಾರದೊಡನೆ ಮಾತು-ಕಥೆಗೆ ಪ್ರಾರಂಭಿಸಿದರು. ಇಂಗ್ಲಿಷರಂತೆ ಫ್ರೆಂಚರಿಗಾದರೂ ಮಹಾರಾಷ್ಟ್ರದಲ್ಲಿ ತಮ್ಮ ವ್ಯಾಪಾರ ಬೆಳೆಯಬೇಕೆಂದೂ, ಪೇಶ್ವಾಯಿಯ ರಾಜಕಾರಣದಲ್ಲಿ ತಮ್ಮ ಪ್ರವೇಶವಾಗಬೇಕೆಂದೂ ಇಚ್ಛೆಯಿದ್ದಿತು. ಇಂಗ್ಲಿಷ-ಫ್ರೆಂಚರಲ್ಲಿ ಹಗೆತನವು ಹೆಚ್ಚುತ್ತಿದ್ದುದರಿಂದ, ಅತ್ತ ಅಮೇರಿಕೆಯಲ್ಲಿ ಫ್ರೆಂಚರು ಇಂಗ್ಲಿಷರ ವಿರುದ್ಧ ಅಮೇರಿಕನ್ ವಸಾಹತುಗಾರರಲ್ಲಿ ಹೇಗೆ ವೈಮನಸ್ಸನ್ನುಂಟು ಮಾಡಿದ್ದರೋ, ಅದರಂತೆಯೇ ಇತ್ತ ಹಿಂದುಸ್ತಾನದಲ್ಲಿಯೂ ಇಂಗ್ಲಿಷರ ವಿರುದ್ಧ ಪೇಶ್ವೆಯರಿಗೆ ಸಹಾಯ ಮಾಡಬೇಕೆಂದು ಅವರ ಉದ್ದೇಶವಿದ್ದಿತು. ಪೇಶ್ವೆಯರಿಗಾದರೂ ಫ್ರೆಂಚರನ್ನು ತಮ್ಮ ಕೈಯಲ್ಲಿರಿಸುವದು ಇಂಗ್ಲಿಷರ ಕೈಯೊಳಗಿಂದ ರಾಘೋಬನನ್ನು ಬಿಡಿಸಿಕೊಳ್ಳಲಿಕ್ಕೆ ಯೋಗ್ಯ ಉಪಾಯವಾಗಿತ್ತು. ಅಂತೆಯೇ ಸೆಂಟ ಲ್ಯೂಬಿನ್ ಇವನಿಗೆ ಬೇಕಂತಲೇ ಪರಮಾವಧಿ ಮಾನಕೊಟ್ಟು, ಇಂಗ್ಲಿಷರಲ್ಲಿ ಹೇವವನ್ನುಂಟು ಮಾಡುವ ಉದ್ಯೋಗವನ್ನು ಪೇಶ್ವೆಯವರು ಕೈಕೊಂಡರು. ಪೇಶ್ವೆಯರಿಗೂ ಫ್ರೆಂಚರಿಗೂ ಆಗ ಕಾಯಮವಾದ ಒಪ್ಪಂದವಾಗಿ ಹೋಗಿದ್ದರೆ, ಅದರ ಪರಿಣಾಮವೇನಾಗುತ್ತಿತ್ತೆಂಬದನ್ನು ಅನುಮಾನಿಸುವದು ಕಠಿಣವೇ ಸರಿ. ಹೀಗಾಗಿದ್ದರೆ ಫ್ರೆಂಚರ ಸಹಾಯದಿಂದ ಪೇಶ್ವೆಯರು ತಮ್ಮ ಕವಾಯತಿನ ದಂಡುಗಳನ್ನು ಸಿದ್ಧಗೊಳಿಸುತ್ತಿದ್ದರು; ಹಾಗು ಪೇಶ್ವೆಯರ ನೆರವಿನಿಂದ ಫ್ರೆಂಚರು ಪುಣೆಯಲ್ಲಿ ತಮ್ಮದೊಂದು ವ್ಯಾಪಾರದ ವಖಾರನ್ನು ಸ್ಥಾಪಿಸಿ, ಮುಂಬಯಿ ಬಳಿಯ ಯಾವುದೊಂದು ಬಂದರವನ್ನು ಸಂಪಾದಿಸುತ್ತಿದ್ದರು. ಫ್ರೆಂಚ-ಪೇಶ್ವೆಯರಲ್ಲಿ ಒಪ್ಪಂದವಾಗಲಿಲ್ಲೆಂಬದು ವ್ಯಕ್ತವೇ ಇದೆ; ಆದರೂ ನಾನಾಫಡಣವೀಸ ಮತ್ತು ಲ್ಯೂಬಿನ್ ಇವರಲ್ಲಿ ಒಪ್ಪಂದವಾಗಿಬಿಟ್ಟಿತೆಂದು ಆಗ ವರ್ತಮಾನವೇನೋ ಹಬ್ಬಿತ್ತೆಂಬದು ನಿಸ್ಸಂದೇಹದ ಸಂಗತಿಯು.

---

## ೯ನೆಯ ಪರಿಚ್ಛೇದ.

# ವಡಗಾವದ ಯುದ್ಧ.

"ಒಂದು ದಿನ ನಾನಾಫಡಣೀಸನ ಮನೆಯಲ್ಲಿ ಸೆಂಟ ಲ್ಯೂಬಿನ್ ಮತ್ತು ಬೇರೆ ಎಷ್ಟೋ ಪ್ರಮುಖ ಫ್ರೆಂಚ ಜನರು ಕಲೆತರು. ಎಲ್ಲರ ಸಮಕ್ಷದಲ್ಲಿ ಸೆಂಟ ಲ್ಯೂಬಿನ್ನನು ಬಾಯಬಲ್ಲ ಪುಸ್ತಕದ ಹಾಗು ನಾನಾನ ಪ್ರೀತಿಯ ಆಕಳ ಆಣೆಮಾಡಿ ಒಪ್ಪಂದ ಮಾಡಿಕೊಂಡನು; ಆ ಒಪ್ಪಂದದ ಮೇರೆಗೆ ಪೇಶ್ವೆಯವರು ಚೌಲ ಬಂದರ ವನ್ನು ಫ್ರೆಂಚರಿಗೆ ಕೊಡಬೇಕು; ಫ್ರೆಂಚರು ತಮ್ಮ ದಂಡಿನೊಡನೆ ಇಂಗ್ಲಿಷರ ವಿರುದ್ಧ ಯುದ್ಧ ಮಾಡಲಿಕ್ಕೆ ಪೇಶ್ವೆಯರಿಗೆ ಸಹಾಯ ಮಾಡಬೇಕು, ಮುಂತಾದ ಕಲಮುಗಳಿದ್ದವು" ಎಂಬ ಒಪ್ಪಂದದ ವಿವರಣದ ಸುದ್ದಿಯು ಆಗ ಹಬ್ಬಿತ್ತು. ಫ್ರೆಂಚ ವಕೀಲನು ತಮ್ಮ ಭೆಟ್ಟಿಗೆ ಬರುವದಾದರೆ ಪೇಶ್ವೆಯರು ಅವನಿಗೆ ತಮ್ಮ ದರ್ಬಾರದ ಆನೆಯನ್ನು ಕಳಿಸುತ್ತಿದ್ದರು; ಹಾಗು ನಾನಾ ಮತ್ತು ಬಾಪೂ ಇವರು ತಮ್ಮ ಡೇರೆಯ ಕನಾತಿನ ಹೊರಗೆ ಬಂದು, ಅವನನ್ನು ಸನ್ಮಾನಪೂರ್ವಕವಾಗಿ ಒಳಗೆ ಕರೆದೊಯ್ಯುತ್ತಿದ್ದರು. ಅದೇ ಇಂಗ್ಲಿಷರ ವಕೀಲನು ಭೆಟ್ಟಿಗೆಂದು ಬಂದರೆ, ಅವ ನನ್ನು ಎದುರ್ಗೊಳ್ಳಲಿಕ್ಕೆ ಯಾವನೊಬ್ಬ (ದುಯ್ಯಂ) ಹಸ್ಯಕ ಸರದಾರನನ್ನು ಕಳಿ ಸುತ್ತಿದ್ದರು. ಈ ಪಂಕ್ತಿಪ್ರಪಂಚವು ಇಂಗ್ಲಿಷರಿಗೆ ಹೊಳೆಯಿತಷ್ಟೇ ಅಲ್ಲ, ಅದು ಅವರಿಗೆ ತಿಳಿಯಲೇಬೇಕೆಂದು ನಾನಾನು ಬೇಕಂತ ಯೋಜಿಸಿದ್ದುದು ಹೆಚ್ಚು ಸಂಭ ವನೀಯವಾಗಿದೆ; ಆದರೆ ಪರಿಣಾಮದಲ್ಲಂತೂ ಫ್ರೆಂಚ ಮತ್ತು ಪೇಶ್ವೆಯರಲ್ಲಿ ಅಂಥ ನಿಕಟದ ಸಂಬಂಧವುಂಟಾಗಲಿಲ್ಲೆಂಬದು ಪ್ರತ್ಯಕ್ಷವೇ ಆಗಿದೆ.

ಫ್ರೆಂಚರು ಆಗ ಪುಣೆಯ ದರ್ಬಾರದಲ್ಲಿ ಸ್ಥಿರಗೊಂಡಿದ್ದರೆ, ಮರಾಟರು ಇಡಿ ಹಿಂದುಸ್ಥಾನವನ್ನೇ ಪಾದಾಕ್ರಾಂತಗೊಳಿಸುತ್ತಿದ್ದರೆಂದು ಎಷ್ಟೋ ಜನ ಇಂಗ್ಲಿಷ ಗ್ರಂಥಕಾರರು ಬರೆದಿಟ್ಟಿರುತ್ತಾರೆ. ಮೊದಲು ಕಾರೋಮಂಡಲ ದಂಡೆಯಲ್ಲಿ ಹೇಗೆ ಸಂಭವಿಸಿತೋ, ಅಂದರೆ ಇಂಗ್ಲಿಷರಿಗೂ ಫ್ರೆಂಚರಿಗೂ ಬಡಿದಾಟ ಹುಟ್ಟಿ, ಅಲ್ಲಿಂದ ಇಂಗ್ಲಿಷರು ಹೇಗೆ ಹಿಂದಕ್ಕೆ ಸರಿದಿದ್ದರೋ, ಹಾಗೆಯೇ ಫ್ರೆಂಚರ ಕಾರಸ್ಥಾನಗಳ ಮೂಲಕ ಇಂಗ್ಲಿಷರು ಇತ್ತ ಮುಂಬಯಿ ಕಡೆಯಿಂದಲೂ ಹೊರ ಹೊರಡಬೇಕಾಗು ವದೋ ಏನೋ ಎಂಬ ಅಂಜಿಕೆಯು ಅವರಲ್ಲಿ ಹುಟ್ಟಿತ್ತೆಂಬದು ಮುಂಬಯಿ ಸರಕಾರದ ಆಗಿನ ಕಾಲದ ಕಾಗದ-ಪತ್ರಗಳಿಂದ ತಿಳಿಯುತ್ತದೆ. ಆಗ ಫ್ರೆಂಚರು ಪುಣೆಯಲ್ಲಿ ಸ್ಥಿರಗೊಳ್ಳದ್ದಕ್ಕೆ ಕಾರಣವೇನಂದರೆ, ಇಂಗ್ಲಿಷರು ಅವರಿಗಿಂತ ನೂರುವರ್ಷಗಟ್ಲೆ ಮೊದಲು ಮುಂಬಯಿ ಪ್ರಾಂತದಲ್ಲಿ ತಮ್ಮ ಬೀಡನ್ನು ಬಿಟ್ಟು ಸ್ಥಿರಗೊಂಡಿದ್ದರು; ಮತ್ತು ಪಶ್ಚಿಮ ಸಮುದ್ರ ದಂಡೆಯಲ್ಲಿ ಸುರಕ್ಷಿತವಾಗಿ ಕಾಲಿಡಲಿಕ್ಕೆ ಫ್ರೆಂಚರಿಗೆ ಸಾಕಷ್ಟು ಅನುಕೂಲತೆಯೂ ಇರಲಿಲ್ಲ. ನಾನಾನಿಗೆ ಇದು ಚೆನ್ನಾಗಿ ಗೊತ್ತಿತ್ತು. ಆದರೂ ಅವನು ಇಂಗ್ಲಿಷರ ಮೇಲೆ ಕೇವಲ ತಮ್ಮ ಛಾಪು ಕೆಡಹುವದಕ್ಕಾಗಿಯೇ

ಫ್ರೆಂಚರ ಕಡೆಗೆ ತಮ್ಮ ಒಲವು ಹೆಚ್ಚಾಗಿದೆಯೆಂದು ತೋರಿಕೆಯಲ್ಲಿ ತೋರಿಸಿರ ಬಹುದು. ಪೋರ್ತುಗೀಜ ಹಾಗು ಇಂಗ್ಲಿಷ ಈ ಎರಡು ಯುರೋಪಿಯನ್ನ ರಾಷ್ಟ್ರಗಳ ಜನಾಂಗಗಳ ಅನುಭವವು ಅವನಿಗೆ ಚೆನ್ನಾಗಿ ಬಂದಿತ್ತು; ಅವರೊಡನೆಯೇ ಈ ಒನೇ ಫ್ರೆಂಚ ಜನಾಂಗವೊಂದು ಬಂದರೆ, ಮರಾಟರ ತೊಂದರೆಗಳು ಕಡಿಮೆಯಾಗುತ್ತಿದ್ದ ವೆಂತಲ್ಲ; ಆದರೆ ಅವರಲ್ಲಿಯ ಒಬ್ಬನ ಹೆದರಿಕೆಯನ್ನು ಮತ್ತೊಬ್ಬನಿಗೆ ತೋರಿಸಿ, ಕಾರ್ಯ ಸಾಧಿಸಿಕೊಳ್ಳುವ ಧೋರಣವು ಮುತ್ಸದ್ದಿಗಿರಿಯದೆಂದು ನಾನಾನು ತಿಳಿದಿದ್ದನು. "ಎಲ್ಲ ಯುರೋಪಿಯನ್ನರನ್ನು ನಾವು ಪುಣೆಯಿಂದ ಹೊರಹೊರಡಿಸುವವರಿದ್ದೇವೆ. ಅವರ ಕಡೆಯ ವಕೀಲನೆಂದು ಯಾರಾದರೂ ಬರಹೋಗುವವರ ಅವಶ್ಯಕತೆಯೇ ಕಂಡುಬಂದರೆ, ಅವರ ವತಿಯ ಯಾವನೊಬ್ಬ ಕಾರಕೂನನನ್ನು ಮಾತ್ರ ಇಲ್ಲಿ ಇಟ್ಟುಕೊಂಡರೆ ಸಾಕು" ಎಂದು ನಾನಾನು ಬಜಾಯಿಸಿದ ಸಂಗತಿಯನ್ನು ಇಂಗ್ಲಿಷರ ಕಡೆಯ ವಕೀಲನು ಮುಂಬಯಿಗೆ ಬರೆದು ತಿಳಿಸಿದ್ದನು.

ಆಗ ಮಹಾರಾಷ್ಟ್ರದಲ್ಲಿ ಸೇರಬೇಕೆಂಬ ಬಗ್ಗೆ ಯುರೋಪಿಯನ್ನರೊಳಗೆ ಹೇಗೆ ಪರಸ್ಪರರಲ್ಲಿ ಸ್ಪರ್ಧೆಯಿದ್ದಿತೋ, ದುರ್ದೈವದಿಂದ ಹಾಗೆಯೇ ಪುಣೆಯಲ್ಲಿ ಒಂದೇ ದರ್ಬಾರದ ಇಬ್ಬರು ಕಾರಭಾರಿಗಳಲ್ಲಿ ಸ್ಪರ್ಧೆಯುಂಟಾಗಿದ್ದಿತು. ಯಾಕಂದರೆ, ಇದೇ ಕಾಲಕ್ಕೆ ಪುಣೆಯೊಳಗಿನ ರಘುನಾಥರಾಯನ ಪಕ್ಷದ ಜನರು ತುಸ ಹುರುಪುಗೊಂಡು ರಘುನಾಥರಾಯನನ್ನು ಪುಣೆಗೆ ಕರೆತರುವ ಬಗ್ಗೆ ಮುಂಬಯಿಯ ಇಂಗ್ಲಿಷರ ಕೂಡ ಸಂಧಾನ ನಡೆಸಿದರು; ಹಾಗು ಅದರ ಲಾಭವನ್ನು ಮುಂಬಯಿಯ ಇಂಗ್ಲಿಷರು ಸಹಜವಾಗಿಯೇ ಪಡೆದರು. ಈ ಹೊಸ ಉದ್ಯೋಗಕ್ಕೆ ಸಖಾರಾಮ ಬಾಪೂ, ಮೋರೋಬಾ ಫಡಣೀಸ, ಬಜಾಬಾ ಪುರಂದರೆ ಮತ್ತು ತುಕೋಜೀ ಹೋಳಕರ ಇಷ್ಟು ಜನರು ಸಹಾಯಕರಾಗಿದ್ದರು. ಈ ನಾಲ್ವರೂ ಪ್ರಮುಖ ಜನರೇ; ವಿಶೇಷವಾಗಿ ಸಖಾರಾಮ ಬಾಪುವು ಪೇಶ್ವೆಯರ ಮುಖ್ಯ ಕಾರಭಾರಿಯಿದ್ದು, ಪುರಂದರದ ಒಪ್ಪಂದದ ಕಾಗದದ ಮೇಲೆ ಆತನ ಸಹಿಯೇ ಮೊದಲನೆಯದಾಗಿದ್ದು, ನಾನಾಫಡಣವೀಸನ ಸಹಿಯು ಅದರ ಕೆಳಗೆ ಆಗಿತ್ತು. ಸಖಾರಾಮ ಬಾಪುವೇ ರಾಘೋಬನನ್ನು ಪುಣೆಗೆ ಕರೆತರಲಿಕ್ಕೆ ಪ್ರವೃತ್ತನಾಗುವದೆಂದರೆ, ಸ್ವತಃ ಪುಣೆಯ ದರ್ಬಾರದವರೇ ಪುರಂದರದ ಒಪ್ಪಂದವನ್ನು ರದ್ದು ಪಡಿಸುವ ಉಪಕ್ರಮಕ್ಕೆ ಹತ್ತಿದಂತೆಯೇ ಆಯಿತೆಂದು ಮುಂಬಯಿಯ ಇಂಗ್ಲಿಷರು ನೆವ ಹುಡುಕಿದರು. ಆ ಪುರಂದರದ ಒಪ್ಪಂದ ಮುರಿಯಲಿಕ್ಕೆ ಮತ್ತೊಂದು ಕಾರಣ ಬೇಕಾಗಿದ್ದರೆ, ಪುಣೆಯ ದರ್ಬಾರದವರು ಫ್ರೆಂಚರ ಕೂಡ ನಡೆಸಿದ ಕಾರಸ್ಥಾನದ ಕಾರಣವು ಸಾಕಾಗುವಂತಿತ್ತು. ಒಬ್ಬ ನಾನಾಫಡಣವೀಸನ ಹೊರತು ಮಿಕ್ಕ ಕಾರಭಾರಿಗಳೆಲ್ಲ ರಘುನಾಥರಾಯನಿಗೆ ಅನುಕೂಲರಾಗಿರುವರೆಂದು ಮುಂಬಯಿಯ ಇಂಗ್ಲಿಷರು ತಿಳಕೊಂಡರು. ವಿಲಾಯತಿಯಿಂದ ಬಂದ ಕಾಗದ-ಪತ್ರಗಳಿಂದಲೂ ರಾಘೋಬನ ಕಡೆಗೇ ಕಂಪನಿಯ ಮುಖ್ಯಸ್ಥರ ಒಲವು ಇರುತ್ತದೆಂದು ಕಂಡು ಬಂದಿತು; ಮತ್ತೂ ಅದೇ

ಕಾಲಕ್ಕೆ ಒಂದು ಬಹು ದೊಡ್ಡ ಇಂಗ್ಲಿಷ ಹಡಗವು ಬರತಕ್ಕದಿದ್ದು, ಅದೂ ತಮ್ಮ ಕಾರಸ್ಥಾನಗಳಿಗೆ ಉಪಯೋಗವಾಗತಕ್ಕ ಸಂಗತಿಯಾಗಿದೆ ಎಂದು ತಿಳಿದು, ಮುಂಬಯಿಯವರು ಸಖಾರಾಮ ಬಾಪುವಿನೊಡನೆ ಗುಪ್ತವಾಗಿ ಸಂಧಾನ ಕಟ್ಟಲಿಕ್ಕೆ ಪುಣೆಯೊಳಗಿನ ತಮ್ಮ ವಕೀಲನಿಗೆ ತಿಳಿಸಿದರು. ಆಗ ಅವರ ಆ ಕಾರಸ್ಥಾನಕ್ಕೆ ಒಂದೇ ಒಂದು ಸಂಗತಿಯು ಮಾತ್ರ ಅಡ್ಡಿಯನ್ನುಂಟು ಮಾಡುವಂತಹದಿತ್ತು. ಸವಾಯಿ ಮಾಧವರಾಯನು ನಾರಾಯಣರಾಯನ ಖಾಸ ಹೊಟ್ಟೆಯ ಮಗನೂ ಪೇಶ್ವೆಯ ಗಾದಿಗೆ ನಿಜವಾದ ಹಕ್ಕುದಾರನೂ ಎಂಬ ಬಗ್ಗೆ ಇಡಿ ಮಹಾರಾಷ್ಟ್ರದಲ್ಲಿ ಯಾರಿಗೂ ಸಂಶಯ ಉಳಿದಿರಲಿಲ್ಲ; ಮತ್ತು ಈ ಪ್ರಾಮುಖ್ಯ ಸಂಗತಿಯ ಬಗ್ಗೆ ಖುದ್ದ ರಾಘೋಬನ ಪಕ್ಷದವರಿಗೆ ಕೂಡ ಏನೂ ಹೆಚ್ಚು-ಕಡಿಮೆ ಮಾಡಬರುವಂತಿರಲಿಲ್ಲ. ಅದ್ದರಿಂದ ರಘುನಾಥರಾಯನನ್ನು ಇನ್ನು ಪುಣೆಗೆ ಕರೆದೊಯ್ದು, ಬಳಿಕ ಅವನನ್ನು ಅಲ್ಲಿಯ ಪೇಶ್ವೆಯ ಗಾದಿಯ ಮೇಲೆ ಕೂಡ್ರಿಸುವ ಗೊಡವೆಗೆ ಹೋಗದೆ, ಸವಾಯಿ ಮಾಧವರಾಯನು ವಯಸ್ಸಿಗೆ ಬರುವರೆಗೆ ರಾಘೋಬನನ್ನೇ ಮುಖ್ಯ ಕಾರಭಾರಿಯ ಸ್ಥಳಕ್ಕೆ ನೇಮಿಸುವದು ಉತ್ತಮವೆಂದು ಮುಂಬಯಿಯವರು ತಮ್ಮ ವಕೀಲನಿಗೆ ತಿಳಿಸಿದರು. ರಾಘೋಬನು ಪೇಶ್ವೆಯ ಪಟ್ಟವನ್ನೇರಿದರೂ ಅಥವಾ ಅವನು ಪೇಶ್ವೆಯ ಮುಖ್ಯ ಕಾರಭಾರಿಯಾದರೂ ಇಂಗ್ಲಿಷರಿಗೆ ಅವನಿಂದಾಗುವ ಲಾಭವು ಒಂದೇ ಆಗಿತ್ತು. ಆಗ ಪೇಶ್ವಾಯಿಯ ಮಾಲಕನು ಅಜ್ಞಾನಿಯಿದ್ದುದರಿಂದ, ಆತನ ಅಷ್ಟಾಧಿಕಾರಗಳೆಲ್ಲ ಆತನ ಮುಖ್ಯ ಕಾರಭಾರಿಗೇ ಸಲ್ಲತಕ್ಕವು. ಅದರಿಂದ ಇಂಗ್ಲಿಷರಿಗೆ ಆಗತಕ್ಕ ಲಾಭವು ರಘುನಾಥರಾಯನು ಪ್ರತ್ಯಕ್ಷ ಪೇಶ್ವೆಪಟ್ಟವನ್ನೇರದೆ, ಮುಖ್ಯ ಕಾರಭಾರಿಯಾದರೂ ಆಗಿಯೇ ಆಗುತ್ತಿತ್ತು. ಅಂದ ಮೇಲೆ ಕೇವಲ ಅನ್ಯಾಯದ ಮಾರ್ಗವನ್ನು ಹಿಡಿಯುವದಕ್ಕಿಂತ, ಅಂದರೆ ಅನಧಿಕಾರಿಯಾದ ರಘುನಾಥರಾಯನನ್ನು ಪಟ್ಟಕ್ಕೆ ಕೂಡ್ರಿಸುವ ಅಗ್ರಹತಾಳುವದಕ್ಕಿಂತ, ತಮ್ಮ ಸ್ವಾರ್ಥವು ಸುಲಭವಾಗಿ ಸಾಧಿಸುವ ಆ ಎರಡನೇ ಮಾರ್ಗವನ್ನೇ ಅವರು ಅನುಸರಿಸಿದರು.

ಪುರಂದರದ ಒಪ್ಪಂದವಾಗಿದ್ದರೂ ಮುಂಬಯಿಯವರು ಕೆದರಿ ತೆಗೆದ ಈ ಹೊಸ ಕಾರಸ್ಥಾನಕ್ಕ ಕಲಕತ್ತೆಯವರೂ ಸಮ್ಮತಿಸಿದರು. ಆ ಕಾಲದ ಕಲಕತ್ತಾ ಕೌನ್ಸಿಲ್ಲದೊಳಗಿನ ಫ್ರಾನ್ಸಿಸ್ ಮತ್ತು ವ್ಹೀಲರ ಎಂಬ ಇಬ್ಬರು ಸಭಾಸದರು ಅದಕ್ಕೆ ವಿರುದ್ಧ ಮತ ಕೊಟ್ಟರು. ಆದರೂ ವಾರನ್ ಹೆಸ್ಟಿಂಗ್ಸನ ಮನಃಸ್ಥಿತಿಯು ಇತ್ತೀಚೆಗೆ ಬದಲಾದ್ದರಿಂದ, ಮರಾಟರ ಈ ಒಳಜಗಳದಲ್ಲಿ ಸೇರಿ ಪೇಶ್ವೆಯರೊಡನೆ ವೈರ ಕಟ್ಟಿಕೊಳ್ಳುವದು ಅಯೋಗ್ಯವೆಂದೂ ಅನ್ಯಾಯವೆಂದೂ ಮೊದಲು ಅವನಿಗೆ ಹೇಗೆ ಅನಿಸುತ್ತಿತ್ತೋ ಹಾಗೆ ಈಗ ಅನಿಸದೆ, ಕಂಪನಿಯ ಹಿತದ ದೃಷ್ಟಿಯಿಂದ ಹಾಗೆ ಮಾಡುವದೇ ಯೋಗ್ಯವೆಂದು ಆತನಿಗೆ ಅನಿಸಹತ್ತಿತ್ತು. ಈ ಪೇಶ್ವೆಯರ ಒಳಜಗಳದಲ್ಲಿ ತಾವು ಸೇರುವದರಿಂದ ತಮ್ಮ ಮಹತ್ವವು ಪುಣೇದರಬಾರದಲ್ಲಿ ಹೆಚ್ಚಿ, ಅದು

ಅಲ್ಲಿ ಕಾಯಮವಾಗಿರುವ ಕಮಿಟಿಯು ಅವರನ್ನು ಅನುಮೋದಿಸಿದ್ದರಿಂದಲೂ, ಪರವಾನದ ಒ-ಡಂಬಡಿಕೆಯ ಕಾಗದದ ಮೇಲೆ ಸಹಿ ಮಾಡುವವರಲ್ಲಿಯ ಒಬ್ಬನೇ ಏಕಾಗಲೊಲ್ಲನು, ಪೇಶ್ವೆಯರ ಪ್ರಮುಖ ಕಾರಭಾರಿಯು ಆ ಒಪ್ಪಂದದ ಶರತುಗಳನ್ನು ನಿರಾಕರಿಸಲಿಕ್ಕೆ ತಾನಾಗಿ ಸಿದ್ಧನಾದುದರಿಂದಲೂ ರಾಘೋಬನನ್ನು ಪುಣೆಗೆ ಕರೆದೊಯ್ಯಬಹುದೆಂದು ಆತನು ಮುಂಬಯಿಯವರಿಗೆ ಸೂಚಿಸಿದನು; ಮತ್ತು ಆ ಕೂಡಲೆ ಅವರ ಸಹಾಯಕ್ಕೆಂದು ಹತ್ತು ಲಕ್ಷ ರೂಪಾಯಿ ಕೊಡುವದನ್ನು ನಿಶ್ಚಯಿಸಿ, ಕರ್ನಲ್ ಲೆಸ್ಲೀ ಎಂಬುವನ ಕೈಕೆಳಗೆ ಸಾಕಷ್ಟು ದಂಡು ಕೊಟ್ಟು, ಅವನನ್ನು ಮುಂಬಯಿಯ ಕಡೆಗೆ ಕಳಿಸಿದನು. ಈ ಮಧ್ಯದಲ್ಲಿ ನಾನಾಫಡಣೀಸನು ಫಿತೂರಾದ ಮೋರೋಬಾ ಫಡಣೀಸನನ್ನು ಸೆರೆ ಹಿಡಿದು, ಅವನನ್ನು ದುರ್ಗದಲ್ಲಿರಿಸಿದನು; ಆದರೂ ಮುಂಬಯಿಯವರು ಗೊತ್ತು ಮಾಡಿಕೊಂಡ ಸಂಗತಿಗಳ ಮೇಲಿಂದ ಪುಣೆಯಲ್ಲಿ ಒಬ್ಬರ ಮಾತು ಮತ್ತೊಬ್ಬರಿಗೆ ರುಚಿಸದಂತೆ ಕೇವಲ ಅರಾಜಕತೆಯುಂಟಾಗಿತ್ತು. ಅಂತೆಯೇ ರಾಘೋಬನನ್ನು ಪುಣೆಗೆ ತರುವ ತಮ್ಮ ಬೇತನ್ನು ಅವರು ಕಾಯಮ ಮಾಡಿದರು; ಹಾಗು ಅವರು ಕಲಕತ್ತೆಯಿಂದ ಸಹಾಯಕ್ಕಾಗಿ ಬರುವ ದಂಡಿನ ಹಾದಿ ಕೂಡ ನೋಡಲಿಲ್ಲ. ಅವರು ೨೪ನೇ ನವಂಬರ ೭೭ಲಕ್ಕೆ ರಾಘೋಬನೊಡನೆ ಹೊಸ ಒಪ್ಪಂದ ಮಾಡಿಕೊಂಡು, ಮರುದಿನವೇ ಕರ್ನಲ್ಲ ಎಗರ್ಟನ್ ಎಂಬವನ ಕೈಕೆಳಗೆ ೬೦೦ ಜನ ಸೋಲ್ಜರರನ್ನೂ, ೩೦೦೦ ಜನ ದೇಶೀ ದಂಡಾಳುಗಳನ್ನೂ ಕೊಟ್ಟು ಮುಂಬಯಿ ಬಂದರದಿಂದ ರವಾನಿಸಿದರು. ರಾಜಕಾರಣದ ಮಾತು-ಕಥೆಗಳನ್ನಾಡಲಿಕ್ಕೆ ಜಾನ್ ಕಾರನ್ಯಾಕ್ ಮತ್ತು ಟಾಮಸ್ ಮಾಸ್ಟಿನ್ ಈ ಈರ್ವರು ಸಿವ್ಹಿಲ್ ಅಧಿಕಾರಿಗಳನ್ನು ಕರ್ನಲ್ ಎಗರ್ಟನ್ನನೊಡನೆ ತಮ್ಮ ಕಡೆಯ ಮುಖತ್ಯಾರಿಗಳೆಂದು ಕಳಿಸಿದರು

ಕರ್ನಲ್ಲ ಎಗರ್ಟನ್ನನ ದಂಡು ಪನವೇಲಕ್ಕೆ ಇಳಿದು ಸರಾಸರಿ ೧೫ ದಿನಗಳಿಗೆ ಖಂಡಾಳಘಟ್ಟವನ್ನೇರಿ ಬಂತು ಇಂಗ್ಲಿಷರ ಸಂಬಂಧದ ಎಲ್ಲ ಸಂಗತಿಗಳು ನಾನಾನಿಗೆ ಪ್ರತಿನಿತ್ಯವೂ ತಿಳಿಯುತ್ತಿದ್ದುದರಿಂದ ಆತನು ಇಂಗ್ಲಿಷರ ಮೇಲೆ ಸಾಗಿಹೋಗುವ ಎಲ್ಲ ಜಬಾಬುದಾರಿಯನ್ನು ಸಿಂಧೇನಿಗೊಪ್ಪಿಸಿ, ಆ ಬಗ್ಗೆ ಅವನಿಗೆ ಬಹರ್ಹಾಣಪುರ ಪ್ರಾಂತವನ್ನು ಕೊಡಲೊಪ್ಪಿ ದಂಡಿನೊಡನೆ ಅವನನ್ನು ಅತ್ತಕಡೆಗೆ ಕಳಿಸಿದನು. ವಿಜಯ ದಶಮಿಯಾದ ಬಳಿಕ ಸಿಂಧೆ, ಹೋಳಕರ, ರಾಸ್ತೆ, ಪ್ರತಿನಿಧಿ ಇವರುಗಳ ಸೈನ್ಯಗಳೆಲ್ಲ ಬಂದವು. ಆ ದಂಡಿನ ಸಂಖ್ಯೆಯು ೪೦ ಸಾವಿರಕ್ಕೆ ಮಿಕ್ಕಿತ್ತು. ಇಂಗ್ಲಿಷರೊಡನೆ ಕಾದುವ ಪ್ರಸಂಗವಿದ್ದುದರಿಂದ ತೋಫಖಾನೆಯನ್ನು ಚೆನ್ನಾಗಿ ಸಜ್ಜುಗೊಳಿಸಿ, ಅದನ್ನು ಭಾವೂರಾವ ಪಾನಸೆ ಎಂಬವನ ಕಡೆಗೆ ಕೊಟ್ಟು ಕಳಿಸಿದರು. ಇಂಗ್ಲಿಷರ ದಂಡು ಸದ್ದಿಲ್ಲವೆ ಮುಂದುವರಿಯುವದನ್ನು ಕಂಡು, ಮರಾಟರು ತಮ್ಮ ದಂಡನ್ನು ಅಲ್ಪ-ಸ್ವಲ್ಪ ಹಿಂದಕ್ಕೆಳೆಕೊಂಡು, ಅದನ್ನು ಸಾಕಷ್ಟು ಮುಂದಕ್ಕೆ ಬರಗೊಟ್ಟರು; ಹಾಗು ಅವಶ್ಯಕಂಡರೆ ತಳೇಗಾವನ್ನು ಸುಟ್ಟು, ಚಿಂಚವಡ-ಪುಣೆ

ಗಳನ್ನೂ ಸುಟ್ಟು ಸೂರೆಗೊಳ್ಳುವ ವಿಚಾರವು ಅವರದಿತ್ತು! ಜಾನೇವಾರಿಯ ಪ್ರಾರಂಭಕ್ಕೆ ಕರ್ನಲ್ಲ ಎಗರ್ಟನ್ನನು ಬೇನೆ ಬಿದ್ದುದರಿಂದ, ತನ್ನ ಸೈನ್ಯಾಧಿಪತಿಯ ಸ್ಥಳಕ್ಕೆ ರಾಜೀನಾಮೆ ಕೊಟ್ಟು ಮುಂಬಯಿಗೆ ಹೊರಟನು; ಆದರೆ ಘಟ್ಟದ ಕೆಳಗಿನ ಕೊಂಕಣ ಪಟ್ಟಿಯೊಳಗಿನ ದಾರಿಗಳನ್ನು ಮರಾಟರು ಕಟ್ಟು ಮಾಡಿರುವರೆಂಬದನ್ನು ತಿಳಿದು, ಆತನು ತಳೇಗಾವದ ವರೆಗೆ ಬಂದನು. ಖಂಡಾಳದಲ್ಲಿ ಮರಾಟರ ಬಾಣವು ಬಡೆದು ಕರ್ನಲ್ಲ ಕೇ ಎಂಬವನು ಗಾಯಪಟ್ಟನು; ಮತ್ತು ಕರ್ನಲ್ಲ ಸ್ಟೂಅರ್ಟನಿಗೆ ತೋಫಿನ ಗುಂಡು ತಾಕಲು ಅವನು ಕಾರ್ಲಾದಲ್ಲಿ ಮಡಿದನು. ಮಿಸ್ಟರ ಮಾಸ್ಟಿನ್ನನಿಗೆ ಬೇನೆ ಬರಲು ಅವನೂ ತೀರಿಕೊಂಡನ. ತಾವು ಘಟ್ಟವನ್ನೇರಿ ಹೋದ ಕೂಡಲೆ ಪುಣೆಯೊಳಗಿನ ರಘುನಾಥರಾಯನ ಪಕ್ಷದ ಸರದಾರರು ತಮಗೆ ಕೂಡುವರೆಂದಿದ್ದ ಇಂಗ್ಲಿಷರ ಭರವಸೆಯು ವ್ಯರ್ಥವಾಯಿತು. ಮುಂದೆ ಸಾಗಿಹೋಗುವಂತಿದ್ದಿಲ್ಲ; ಹಿಂದೆಯೂ ತಿರುಗುವಂತಿಲ್ಲ. ಈ ಬಗೆಯ ಸಂಕಟವು ಪ್ರಾಪ್ತವಾಗಲು, ಇಂಗ್ಲಿಷರ ದಂಡು ತಳೇಗಾವದಲ್ಲಿ ಆಶ್ರಯ ಹೊಂದಿ ನಿಂತಿತು; ಆದರೆ ತಳೇಗಾವವು ಬೇಚಿರಾಖವಾಗಿದ್ದು, ಅಲ್ಲಿ ತಮಗೆ ಧಾನ್ಯ ಮುಂತಾದ ಯಾವ ಸಾಮುಗ್ರಿಯೂ ಸಿಗುವಂತಿಲ್ಲೆಂಬದು ಅವರಿಗೆ ತೀವ್ರವೇ ತಿಳಿಯಬಂತು. ಈ ಸಂಧಿಯನ್ನು ಸಾಧಿಸಿ, ಎರಡು ಹರದಾರಿಗಳ ಅಂತರದಿಂದ ಮರಾಟರ ದಂಡು ಅವರನ್ನು ಸುತ್ತುಗಟ್ಟಿತು. ಇಂಥ ಸ್ಥಿತಿಯಲ್ಲಿ ಮುಂದುವರಿದು ಪುಣೆಯ ಮೇಲಂತೂ ಸಾಗಿಹೋಗುವಂತೆ ಇಲ್ಲ; ಆದರೆ ಕಾಳಗದಲ್ಲಿ ಹಿಂಜರಿಯಬೇಕೆಂದರೂ ಆಗ ತಮಗೆ ಅವಕಾಶ ಸಿಗಲಿಕ್ಕಿಲ್ಲೆಂದು ತಿಳಿದು, ಅವರು ಆಗಲೆ ಹಿಂದಕ್ಕೆ ಖಂಡಾಳದ ಕಡೆಗೆ ತಿರುಗುವದನ್ನು ನಿಶ್ಚಯಿಸಿದರು. ತಾ॥ ೧ನೇ ಜಾನೇವಾರಿಗೆ ಇಂಗ್ಲಿಷರ ದಂಡು ಪುಣೆಯ ಮಾರ್ಗವನ್ನು ಬಿಟ್ಟು, ಖಂಡಾಳದ ಹಾದಿಯ ಹಿಡಿಯಿತು; ಆದರೆ ಅವರ ಈ ಚಲನವಲನವು ಮರಾಟರಿಗೆ ಹತ್ತಿದ ಕೂಡಲೆ ಅವರು ತಮ್ಮ ಗುಂಡಿನ ಮಳೆಯುನ್ನು ಸುರಿಸಲಾರಂಭಿಸಿದರು. ಅದೊಂದೇ ರಾತ್ರಿಯಲ್ಲಿ ಇಂಗ್ಲಿಷರ ಕಡೆಯ ೪-೫ ನೂರು ಜನರು ಕೊಲ್ಲಲ್ಪಟ್ಟರು. ೫ ತೋಫುಗಳು, ೨ ಗರ್ನಲ್ಲುಗಳು ಹಾಗು ೨ ಸಾವಿರ ಬಂದೂಕುಗಳು ಇಂಗ್ಲಿಷರಿಂದ ಸುಲಿಯಲ್ಪಟ್ಟವು. ಇಂಗ್ಲಿಷರ ದಂಡು ಅತ್ಯಂತ ಪ್ರಯಾಸದಿಂದ ಒಂದು-ಒಂದೂವರೆ ಹರದಾರಿಯಷ್ಟು ಹಿಂದಕ್ಕೆ ಸರಿದು, ವಡಗಾವದಲ್ಲಿ ಹೊಕ್ಕಿತು; ಆದರೆ ಅಲ್ಲಿಯೂ ಮರಾಟರು ತೋಫಿನ ಗುಂಡುಗಳ ಮಳೆಸುರಿಸಹತ್ತಿದ್ದರಲ್ಲದೆ, ತಮ್ಮ-ಕುದುರೆಯ ಸವಾರರ ಮತ್ತು ಕಾಲಾಳುಗಳ ದಂಡುಗಳನ್ನು ಕೂಡಿಸಿಕೊಂಡು ಇಂಗ್ಲಿಷರ ಮೇಲೆ ಸಾಗಿ ಹೋದರು.

ತಾ॥ ೧೪ನೇ ಜಾನೇವಾರಿಯ ದಿವಸ ಇಂಗ್ಲಿಷರು ಫಾರ್ಮರ ಎಂಬ ಹೆಸರಿನ ತಮ್ಮ ವಕೀಲನನ್ನು ಒಪ್ಪಂದದ ಮಾತು-ಕತೆಗಾಗಿ ಮರಾಟರ ಛಾವಣಿಗೆ ಕಳಿಸಿದರು. ಎಲ್ಲಕ್ಕೂ ಮೊದಲು ರಘುನಾಥರಾಯನನ್ನು ತಮ್ಮ ಸ್ವಾಧೀನ ಪಡಿಸಬೇಕೆಂಬ ಕರಾರನ್ನು ನಾನಾನು ಅವನಿಗೆ ತಿಳಿಸಿ, ಪುರಂದರದ ಒಪ್ಪಂದವನ್ನು ನೀವಾಗಿ ಮುರಿದುದ

ರಿಂದ ಅದು ಈಗ ರದ್ದಾದಂತಾಯಿತು. ಆದ್ದರಿಂದ ಸಾಷ್ಟಿ, ಉರಣ, ಜಂಬೂಸರ ಮುಂತಾದ ಪೇಶ್ವೆ ಮತ್ತು ಗಾಯಕವಾಡರಿಂದ ಗೆದ್ದುಕೊಂಡ ಪ್ರದೇಶಗಳನ್ನು ನೀವು ಬಿಟ್ಟುಕೊಡಬೇಕು; ಹಾಗು ಈ ಮೊದಲು ನಾನಾಸಾಹೇಬ ಮತ್ತು ಮಾಧವರಾವ ಪೇಶ್ವೆಯರೊಡನೆ ಆದ ಒಪ್ಪಂದಗಳಿಗನುಸರಿಸಿ ಹೊಸ ಪ್ರದೇಶಗಳ ಆಶೆಯನ್ನು ಬಿಟ್ಟು, ನಮ್ಮೊಡನೆ ಕೇವಲ ಸ್ನೇಹಭಾವದಿಂದ ಇರಬೇಕೆಂದನು. ನಾನಾನ ಈ ಕರಾರುಗಳು ತೀರ ಕಠಿಣವೆಂದು ತಿಳಿದು ಇಂಗ್ಲಿಷ ವಕೀಲನು ಸಿಂದೆಯೊಡನೆ ಸೌಮ್ಯ ಕರಾರುಗಳಿಗಾಗಿ ಮಾತಾಡಹತ್ತಿದನು; ಆದರೆ ಆಗ ಆತನೂ ಅವನಿಗೆ ಬಿಕ್ಕೆ ಹಾಕ ಲಿಲ್ಲ. ನಾನಾನ ಈ ಕಠಿಣ ಶರ್ತುಗಳನ್ನು ಮನ್ನಿಸುವದಕ್ಕಿಂತ ಆದಷ್ಟು ಹಾನಿ ಸೋಸಿ, ಘಟ್ಟವನ್ನಿಳಿಯುವ ಪ್ರಯತ್ನ ಮಾಡಬೇಕೆಂಬ ಕಲ್ಪನೆಯು ಮತ್ತೆ ಅವರಲ್ಲುದ್ಭವಿಸಿತು; ಆದರೆ ಆ ಮಾರ್ಗವು ಎಷ್ಟರಮಟ್ಟಿಗೆ ಶಕ್ಯವಿದೆಯೆಂಬ ಬಗ್ಗೆ ಇಂಗ್ಲಿಷ ಅಧಿಕಾರಿಗಳಲ್ಲಿಯೇ ಮತಭೇದವಾಯಿತು. ಆದರಿಂದ ಮತ್ತೆ ಸಿಂಧೆಯೊಡನೆ ಒಪ್ಪಂದದ ಮಾತಿಗೆ ಪ್ರಾರಂಭವಾಯಿತು. ಆಗ ಇಂಗ್ಲಿಷರು ಅವರಿಗೆ:—"ಇಂದು ನಾವು ನಿರುಪಾಯದಿಂದ ನೀವು ಹೇಳಿದ ಕರಾರುಗಳಿಗೊಪ್ಪಿ ಒಡಂಬಡಿಕೆ ಮಾಡಿಕೊಳ್ಳಬೇಕೆಂದರೆ, ಹಾಗೆ ಮಾಡುವ ಅಧಿಕಾರವು ನಮಗಿರುವದಿಲ್ಲ. ಕಲಕತ್ತೆಯ ನಮ್ಮ ವರಿಷ್ಠರು ಒಂದುವೇಳೆ ಅದನ್ನು ಮನ್ನಿಸಲಿಕ್ಕಿಲ್ಲ ಸಹ." ಎಂದು ತಿಳಿಸಿದರು. ಅದಕ್ಕೆ ಸಿಂದೆಯು ಹೇಳಿದನೇನಂದರೆ:—"ಪುರಂದರದ ಒಪ್ಪಂದ ಮುರಿಯಲಿಕ್ಕೆ ಮಾತ್ರ ಮುಂಬಯಿಯ ಇಂಗ್ಲಿಷರಿಗೆ ಅಧಿಕಾರವು ಪ್ರಾಪ್ತವಾಗುತ್ತಿದ್ದರೆ, ಈ ಹೊಸ ಒಪ್ಪಂದ ಮಾಡಿಕೊಳ್ಳಲಿಕ್ಕೂ ಅವರಿಗೆ ಆ ಅಧಿಕಾರವಿದ್ದೇ ಇರಬೇಕು. ರಾಘೋಬನನ್ನು ನಮ್ಮ ಸ್ವಾಧೀನ ಪಡಿಸುವದು ನಿಮಗೆ ಕಠಿಣವೆನಿಸುತ್ತಿದ್ದರೆ, ಅದನ್ನು ನೀವು ಸ್ವತಃ ಮಾಡಬೇಡಿರಿ; ಆ ಕೆಲಸವನ್ನು ನಾವೇ ನೋಡಿಕೊಳ್ಳುತ್ತೇವೆ; ಆದರೆ ನಾನಾ ಫಡಣೀಸರು ತಿಳಿಸಿದ ಬೇರೆ ಕರಾರುಗಳಿಗಂತೂ ನೀವು ಒಪ್ಪಲೇ ಬೇಕು; ಒಪ್ಪದಿದ್ದರೆ ಮಾತ್ರ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ. ನಾವು ನಿಮ್ಮ ದಂಡನ್ನು ಒಂದು ಹೆಜ್ಜೆ ಕೂಡ ಸರಿಯಗೊಡಲಿಕ್ಕಿಲ್ಲ." ಕಡೆಗೆ ನಿರುಪಾಯರಾಗಿ ಇಂಗ್ಲಿಷರು ಒಪ್ಪಂದ ಮಾಡಿಕೊಂಡರು. ೧೭೭೩ರಿಂದ ಸಾಷ್ಟಿಸಹಿತವಾಗಿ ತಾವು ಗೆದ್ದುಕೊಂಡ ಎಲ್ಲ ಪ್ರದೇಶವನ್ನು ಬಿಟ್ಟುಕೊಡಲಿಕ್ಕೆ ಸಿದ್ಧರಾದರು; ಮತ್ತು ಕಲಕತ್ತೆಯಿಂದ ಸಸೈನ್ಯವಾಗಿ ಬರುತ್ತಿದ್ದ ಕರ್ನಲ್ಲ ಗಾಡರ್ಡನಿಗೆ ಮರಳಿ ಹೋಗುವಂತೆ ಬರೆದು ತಿಳಿಸಿ ರಾಘೋಬನನ್ನು ನಿಮ್ಮ ಸ್ವಾಧೀನ ಪಡಿಸುವೆವೆಂದೂ, ಸಿಂದೆಯು ಆತನನ್ನು ಬೇಕಾದ ಬಂದೋಬಸ್ತಿನಲ್ಲಿಡಬಹುದೆಂದೂ, ರಘುನಾಥರಾಯನಿಂದ ಇದುವರೆಗೆ ಒಪ್ಪಂದ ಮುಂತಾದ್ದರ ಬಗ್ಗೆ ಯಾವ ಕಾಗದ-ಪತ್ರಗಳನ್ನು ನಾವು ಮಾಡಿಸಿಕೊಂಡಿರುವೆವೋ ಅವನ್ನೆಲ್ಲ ನಿಮ್ಮ ಸ್ವಾಧೀನ ಪಡಿಸುವೆವೆಂದೂ ಒಪ್ಪಿಕೊಂಡರು! ಈ ಒಪ್ಪಂದವು ಸರಿಯಾಗಿ ಪಾಲಿಸಲ್ಪಡುವ ಖಾತ್ರಿಗಾಗಿ ಲೆಫ್ಟನಂಟ ಸ್ಟುಅರ್ಟ ಮತ್ತು ಮಿಸ್ಟರ ಫಾರ್ಮರ ಇವರಿಬ್ಬರು ಅಧಿಕಾರಿಗಳು ಮರಾಟರ ಕಡೆಗೆ ಅಡವಾಗಿರಬೇಕೆಂದೂ ನಿರ್ಣಯಿಸಲ್ಪಟ್ಟಿತು;

ಮತ್ತು ಈ ಒಪ್ಪಂದವಾಗಲಿಕ್ಕೆ ಸಿಂದೆಯು ಚನ್ನಾಗಿ ಸಹಾಯ ಮಾಡಿದನೆಂದು ಆತನಿಗೆ ಭಡೋಚವನ್ನೂ ೪ ಲಕ್ಷ ರೂಪಾಯಿಗಳನ್ನೂ ಇಂಗ್ಲಿಷರು ಕೊಡಲೊಪ್ಪಿದರು!

ಮೇಲೆ ವಿವರಿಸಿದಂತೆ ಒಪ್ಪಂದವಾಗಲು, ರಘುನಾಥರಾಯನು ಮುನ್ನೂರು ಜನ ಸ್ವಾರರು, ೧೮-೧೨ ನೂರು ಮಂದಿ ಕಾಲಾಳುಗಳು, ಕೆಲವು ತೋಫುಗಳು ಮುಂತಾದ ಸರಂಜಾಮುದೊಡನೆ ಸಿಂದೆಯ ಛಾವಣಿಯನ್ನು ಸೇರಿದನು. ರಾಘೋಬನ ಸುತ್ತಮುತ್ತು ಸಿಂಧೆಯ ಪಹರೆಯುವರೇ ಇರುತ್ತಿದ್ದರೂ, ಅವರು ತುಸ ದೂರದಲ್ಲಿಯೇ ಇರುವದು ಗೊತ್ತಾಯಿತು. ಆಗ ರಾಘೋಬನು ಕೇವಲ ನಜರ ಕೈದಿನಲ್ಲಿದ್ದನು; ಆದರೂ ಆತನ ಬಂದೋಬಸ್ತಿನ ಜವಾಬುದಾರಿಯನ್ನು ಸಿಂದೆಯು ತಕ್ಕೊಂಡ ಮೂಲಕ, ದೂರಿನಿಂದಾದರೂ ಸಿಂದೆಯು ಅವನನ್ನು ಕಣ್ಣಲ್ಲಿ ಎಣ್ಣೆಹಾಕಿಕೊಂಡು ನೋಡುತ್ತಿರಬೇಕಾಯಿತು; ಆದರೆ ರಘುನಾಥರಾಯನ ಉಳಿದ ಸಹಕಾರಿಗಳಿಗೆ ಈ ಸೌಕರ್ಯವು ಸಿಗಲಿಲ್ಲ. ಚಿಂತೋ ವಿಠ್ಠಲ ರಾಯರೀಕರ ಮತ್ತು ಖಿರಕಸಿಂಗ ಇವರನ್ನು ಸಾದಾ ಕೈದಿನಲ್ಲೇ ಇಟ್ಟರು. ಆಗ ಪುಣೆಯ ಕಾರಭಾರಿಗಳು ರಾಘೋಬನಿಗೆ ಭೆಟ್ಟಿ ಕೂಡ ಆಗಲಿಲ್ಲ; ಆದರೆ ಅವರು ಸಿಂದೆಯ ಮುಖಾಂತರ:—"ಇನ್ನು ಮುಂದೆ ಪೇಶ್ವಾಯಿಯ ಪಟ್ಟಕ್ಕೆ ತಾನು ಯಾವ ಬಗೆಯಿಂದಲೂ ಹಕ್ಕುತೋರಿಸಲಿಕ್ಕಿಲ್ಲ"ೆಂದು ಅವನ ಕಡೆಯಿಂದ ಹಕ್ಕು ಬಿಟ್ಟ ಪತ್ರವನ್ನು ಮಾತ್ರ ಬರೆಸಿಕೊಂಡರು!

— —

೧೧ನೆಯ ಪರಿಚ್ಛೇದ.

## ಸವಾಯಿ ಮಾಧವರಾಯನು ವಿಲಾಯತಿಯ ಬಾದಶಹನಿಗೆ ಬರೆದ ಪತ್ರ

ಆಗ ಸಖಾರಾಮ ಬಾಪುವಿಗೂ ಚೆನ್ನಾಗಿ ದಂಡನೆಯಾಗತಕ್ಕದ್ದೇ; ಯಾಕಂದರೆ, ಆತನ ಫಿತೂರಿಯ ಲೇಖೀ ಪ್ರಮಾಣವೆಯು ಕಾರಭಾರಿಗಳ ಹಸ್ತಗತವಾಗಿತ್ತು; ಆದರೆ ಸಿಂದೆಯು ಆಗ ಆ ಪ್ರಕರಣವನ್ನು ಒತ್ತಿಟ್ಟನು. ಇಂಗ್ಲಿಷರು ಹೊರಟು ಹೋದ ಬಳಿಕ ದಾದಾಸಾಹೇಬನ ಸಹಿತವಾಗಿ ಸಿಂದೇನ ದಂಡು ಒಂದು ತಿಂಗಳ ವರೆಗೆ ತಳೇಗಾವದಲ್ಲಿಯೇ ತಳವೂರಿತ್ತು. ಕಡೆಗೆ ರಾಘೋಬನನ್ನು ಝಾಂಶಿಯಲ್ಲಿಡಬೇಕೆಂದು ಗೊತ್ತಾಯಿತು; ಮತ್ತು ಆತನ ಖರ್ಚಿಗಾಗಿ ೬-೭ ಲಕ್ಷ ರೂಪಾಯಿಗಳನ್ನೂ, ಆತನ ಬಂದೋಬಸ್ತಿಗೆಂದು ಸಿಂದೇನ ಖರ್ಚಿಗೆ ೪-೫ಲಕ್ಷ ರೂಪಾಯಿಗಳನ್ನೂ ಕೊಡಲಿಕ್ಕೆ ಪುಣೆಯ ಕಾರಭಾರಿಗಳು ಒಪ್ಪಿಕೊಂಡರು. ಆಗ ಸಿಂಧೆಯು ತನ್ನ ಸರದಾರನಾದ ಹರಿ ಬಾಬಾಜಿ ಎಂಬವನ ಕೈಕೆಳಗೆ ರಾಘೋಬನನ್ನು ನಜರ ಕೈದಿಯೆಂದು ಕೊಟ್ಟು ಝಾಂಶಿಯ ಕಡೆಗೆ ರವಾನಿಸಿದನು. ರಾಘೋಬನ ಬಗ್ಗೆ ಇಷ್ಟೆಲ್ಲ ವ್ಯವಸ್ಥೆಯಾದ ನಂತರ ಸಖಾರಾಮ ಬಾಪುವಿಗೆ ಆತನ ಕೈಬರೆಹದ ಫಿತೂರಿಯ ಲೇಖ

ಗಳನ್ನು ತೋರಿಸಲಾಯಿತು; ಹಾಗು ಸಿಂದೆಯು ಅವನನ್ನು ಸೆರೆಹಿಡಿದು, ಸಿಂಹ ಗಡದ ಮೇಲಿಟ್ಟನು.

ಮರಾಟರೂ ಇಂಗ್ಲಿಷರೂ ಇವರ ಸಂಬಂಧದ ಪೂರ್ವರಂಗವನ್ನು ಮುಗಿಸುವ ಮೊದಲು ರಘುನಾಥರಾಯನ ಕಾರಸ್ಥಾನವನ್ನೆಬ್ಬಿಸಿದ ಬಗ್ಗೆ ಇಂಗ್ಲಿಷರಿಗೆ ದೋಷ ಕೊಟ್ಟು, ಪೇಶ್ವೆಯು ವಿಲಾಯತಿಯ ಇಂಗ್ಲಿಷ ಬಾದಶಹನಿಗೆ ಬರೆದ ಪತ್ರವನ್ನಷ್ಟು ಇಲ್ಲಿ ಕೊಡುವೆವು ಅವರಲ್ಲಿಯ ಮರಾಟರ ಹಾಗು ಇಂಗ್ಲಿಷರ ಸಂಬಂಧದ ಪೂರ್ವ ರಂಗದೊಳಗಿನ ಉತ್ಕ್ರಾಂತಿಯ ಬಗ್ಗೆ ನಾನಾಫಡಣೀಸನ ವಿವೇಚನವು ಮಹತ್ವ ದ್ದಿದ್ದು, ಮನೋರಂಜಕವೂ ಆಗಿರುತ್ತದೆ.

"ಎಷ್ಟೋ ದಿನಗಳಾದವು. ಮೆಹೆರಬಾನರವರಿಂದ ಮಿತ್ರತ್ವದ ಪತ್ರ ಬಂದು ಕ್ಷೇಮುಸಮಾಚಾರವು ತಿಳಿಯಲಿಲ್ಲ. ಮಿತ್ರತ್ವದಲ್ಲಿ ಈ ತರದ ನಿಷ್ಕಾರಣವಾದ ಬಿಗು ವಿರಕೂಡದು. ಆಗಾಗ್ಗೆ ಕ್ಷೇಮುಸಮಾಚಾರದ ಪತ್ರವ್ಯವಹಾರವು ನಡೆಯುತ್ತಿರ ಬೇಕು. ಜಗತ್ತಿನಲ್ಲಿಯ ಅತ್ಯುತ್ತಮ ವಸ್ತುಗಳಲ್ಲಿ ಮೈತ್ರಿಯನ್ನು ಸರಿಗಟ್ಟುವ ವಸ್ತುವೇ ಇಲ್ಲ. ಉಭಯತರಲ್ಲಾದ ಕರಾರುಗಳ ಪ್ರಕಾರ ನಡೆದು, ಮಿತ್ರತ್ವವನ್ನು ದಿನೇ ದಿನೇ ವೃದ್ಧಿಸುತ್ತಿರಬೇಕೆಂದು ಇಚ್ಛಿಸುತ್ತೇವೆ. ಈ ಪೂರ್ವದಲ್ಲಿ ನಮ್ಮ ರಾಜ್ಯ ದೊಳಗೆ ಪೋರ್ತುಗೀಜರೂ ಡಚ್ಚರೂ ತಮ್ಮ ವ್ಯಾಪಾರವನ್ನು ನಡೆಸುತ್ತಿದ್ದರು. ಆ ಕಾಲಕ್ಕೆ ಮುಂಬಯಿಯು ಒಂದು ಸಣ್ಣ ವಖಾರಿನ ಸ್ಥಳವಾಗಿತ್ತು; ಮತ್ತು ಆಗ ಇಂಗ್ಲಿಷರು ತಮ್ಮ ಸಾಮಾನ್ಯ ಸನ್ನಾಹದೊಡನೆ ವಿಲಾಯತಿಯಿಂದ ಮುಂಬಯಿಗೆ ಬರ ಹೋಗುತ್ತಿದ್ದರು. ಆಗಿನ ಮುಂಬಯಿಯ ಇಂಗ್ಲಿಷ ಜನರಲ್ಲನು ಕೈ. ವಾ. ಬಾಜೀರಾಯನೊಡನೆ ಮಿತ್ರತ್ವದ ಒಪ್ಪಂದವನ್ನು ಮಾಡಿಕೊಂಡಿದ್ದನು. ಆಗ್ಗೆ "ಟೊಪ್ಪಿಗೆ ಹಾಕುವವರಲ್ಲಿ ಇಂಗ್ಲಿಷ ಬಾದಶಹನೇ ಒಳ್ಳೇ ಸುಸ್ವಭಾವದವನೂ, ಸತ್ಯವಾದಿಯೂ, ನಡೆ-ನುಡಿಗಳಲ್ಲಿ ಹಾಗು ನ್ಯಾಯ-ನೀತಿಗಳಲ್ಲಿ ಏಕವಚನಿಯೂ, ಒಳ್ಳೇ ಕರಾರು ಮಾಡಿಕೊಂಡ ಬಳಿಕ ಕಡೆಯವರಗೂ ಅದರಂತೆ ತಪ್ಪದೆ ನಡೆಯು ವವನೂ" ಎಂದು ನಿಮ್ಮ ಕೀರ್ತಿಯು ಈ ದೇಶದಲ್ಲಿ ಹಬ್ಬಿತ್ತು. ಆ ನಿಮ್ಮ ಕೀರ್ತಿಯ ಕಡೆಗೆ ಲಕ್ಷ್ಯಗೊಟ್ಟು, ಆಗಿನ ನಿಮ್ಮ ಮುಂಬಯಿಯ ಜನರಲ್ಲನ ವಿನಂತಿಯನ್ನು ಮಾನ್ಯಮಾಡಿ, ನಿಮ್ಮೊಡನೆ ಯೋಗ್ಯ ಕರಾರುಗಳಾಗಿ ಒಡಂಬಡಿಕೆಯಾಯಿತು; ಮತ್ತು ಆ ಒಪ್ಪಂದಕ್ಕನುಸರಿಸಿ, ಪೋರ್ತುಗೀಜ-ಡಚ್ಚರ ವ್ಯಾಪಾರವನ್ನು ನಿಲ್ಲಿಸಿ, ನಿಮ್ಮ ಇಂಗ್ಲಿಷರ ವ್ಯಾಪಾರವೇ ನಮ್ಮ ದೇಶದಲ್ಲಿ ಪ್ರಾಮುಖ್ಯವಾಗಿ ನಡೆಯುವಂತೆ ವ್ಯವಸ್ಥೆಯು ಮಾಡಲ್ಪಟ್ಟಿತು. ಅದರಂತೆಯೇ ಕೈ. ವಾ. ನಾನಾಸಾಹೇಬ ಪೇಶ್ವೆ ಯವರೂ ನಿಮ್ಮೊಡನೆ ಮಿತ್ರತ್ವದಿಂದ ನಡಕೊಳ್ಳುತ್ತಿರಲು, ತುಳಾಜಿ ಆಂಗ್ರೆಯು ಪೇಶ್ವೆಸರಕಾರದ ಹುಕುಮಿನಂತೆ ನಡೆಯದೆ, ಮುಂಬಯಿಯ ಇಂಗ್ಲಿಷರೊಡನೆ ಹಗೆ ತನ ನಡಿಸಲುಪಕ್ರಮಿಸಿದನು; ಹಾಗೆ ಇಂಗ್ಲಿಷರೊಡನೆ ವೈರತಾಳಬಾರದೆಂದು ಪೇಶ್ವೆ ಸರಕಾರದ ಹುಕುಂ ಆಂಗ್ರೇನಿಗೆ ಹೋಯಿತು. ಆದರೂ ಅವನು ಆದರಂತೆ ನಡೆಯ

ದಾಗಲು, ಪೇಶ್ವೆ ಸರಕಾರದಿಂದ ರಾಮಾಜಿ ಮಹಾದೇವನಿಗೆ ಆಂಗ್ರೆಯ ವಿಜಯ ದುರ್ಗ ಮುಂತಾದ ಪ್ರದೇಶಗಳನ್ನು ಮುತ್ತುವ ಬಗ್ಗೆ ಆಜ್ಞೆಯಾಯಿತು. ಅದೇ ಕಾಲಕ್ಕೆ ಇಂಗ್ಲಿಷರು ತಮ್ಮ ಹೊಸ ಕುಮುಕಿನೊಡನೆ ಸುರತದ ದುರ್ಗವನ್ನು ತಕ್ಕೊಂಡರು. ಅದರಿಂದ ರಾಮಾಜಿಯು ಇಂಗ್ಲಿಷರ ಸಹಾಯದಿಂದ ವಿಜಯದುರ್ಗ ಮುಂತಾದ ಆಂಗ್ರೇನ ಪ್ರದೇಶಗಳನ್ನು ಗೆದ್ದುಕೊಂಡನು. ಆ ದಾಳಿಯಲ್ಲಿ ಆ ದುರ್ಗದೊಳಗಿನ ಎಲ್ಲ ಸಾಮಾನುಗಳನ್ನು (ದನ-ಕರುಗಳನ್ನು ಕೂಡ) ಪೇಶ್ವೆ ಸರಕಾರಕ್ಕೆ ಸಲ್ಲಿಸಬೇಕೆಂದು ಕರಾರವಾಗಿದ್ದರೂ, ಇಂಗ್ಲಿಷರು ಹಾಗೆ ನಡೆಯದೆ, ಎಲ್ಲ ಸಾಮಾನುಗಳನ್ನು ತಾವೇ ತಕ್ಕೊಂಡು, ಬರೀ ದುರ್ಗವನ್ನು ಮಾತ್ರ ಪೇಶ್ವೆಸರಕಾರದ ಸ್ವಾಧೀನಪಡಿಸಿದರು! ಕರಾರಿನಂತೆ ಆ ದುರ್ಗದೊಳಗಿನ ಎಲ್ಲ ಒಡವೆಗಳೂ ಪೇಶ್ವೇ ಸರಕಾರಕ್ಕೆ ಬರಬೇಕಾಗಿದ್ದರೂ ನಿಮ್ಮೊಡನೆ ಆದ ಮೈತ್ರಿಯನ್ನು ನೆನೆದು, ನಾವು ಆ ಬಗ್ಗೆ ನಿಮಗೆ ತಗಾದೆ ಕೊಡಲಿಲ್ಲ. ಬಳಿಕ ನಾನಾಸಾಹೇಬರು ತೀರಿಕೊಳ್ಳಲು, ಮಾಧವರಾಯರು ಪೇಶ್ವೇ ಪಟ್ಟಕ್ಕೆ ಅಧಿಕಾರಿಗಳಾದರು ಅವರೂ ಇಂಗ್ಲಿಷರೊಡನೆ ಆ ಮೊದಲು ಆದ ಕರಾರುಗಳಂತೆ ನಡೆಯುತ್ತ ಬಂದರು. ಅವರ ಕಾಲಕ್ಕೆ ವಿಲಾಯತಿಯಿಂದ ಥಾಮಸ್ ಮಾಸ್ಟಿನ್ ಸಾಹೇಬನು ಮೆಹರ್ಬಾನರವರ ಪತ್ರ ತಕ್ಕೊಂಡು ಬಂದಿದ್ದನು. ಆ ಪತ್ರದ ಸಂಗತಿಯೇನಂದರೆ, "ನೀವು ನಮ್ಮ ಮಾಸ್ಟಿನ್ ಸಾಹೇಬನನ್ನು ಸದಾ ನಿಮ್ಮ ದರಬಾರದಲ್ಲಿರಗೊಡಬೇಕು ನಮ್ಮ ಕಡೆಯ ಇಂಗ್ಲಿಷರಾರಾದರೂ ಗೈರರೀತಿಯಿಂದ ನಡೆದರೆ, ಮಾಸ್ಟಿನ್ನನು ಅವರಿಗೆ ಚೆನ್ನಾಗಿ ತಾಕೀದು ಮಾಡುವನು; ಅಂದರೆ ಅದರಿಂದ ನಮ್ಮ ನಿಮ್ಮ ಮಿತ್ರತ್ವಕ್ಕೆ ಭಂಗಬರಲಿಕ್ಕಿಲ್ಲ" ಪೇಶ್ವೇ ಸರಕಾರವು ಆ ಮೊದಲೇ ಇಂಗ್ಲಿಷರೊಡನೆ ಮಿತ್ರತ್ವದ ಕರಾರು ಮಾಡಿಕೊಂಡು ನಡೆಯುತ್ತಿರಲು, ಮೇಲೆ ವಿವರಿಸಿದಂತೆ ಮೆ॥ ರವರ ಖಾಸ ಪತ್ರ ಬರಲು, ಪೇಶ್ವೆಯವರು ಬಹು ಸಂತೋಷಬಟ್ಟು, ಇಂಗ್ಲಿಷರ ವಕೀಲನನ್ನು ತಮ್ಮ ದರಬಾರದಲ್ಲಿರಿಸಿಕೊಳ್ಳುವ ಕಾಯಿದೇ ಇರದಿದ್ದರೂ, ಮೆ॥ ರವರ ಪತ್ರದ ಮೇರೆಗೆ ಮಾಸ್ಟಿನ್ನನನ್ನು ಸನ್ಮಾನಪೂರ್ವಕವಾಗಿ ಪುಣೆಯಲ್ಲಿಟ್ಟುಕೊಂಡರು ಮುಂದೆ ೬ ವರ್ಷಗಳ ವರೆಗೆ ಯಾವಗೊಂದಲವೂ ಇಲ್ಲದೆ ಸುರಳೀತವಾಗಿತ್ತು. ಕೆಲ ಕಾಲದ ಮೇಲೆ ಮಾಧವರಾಯರು ಕೈಲಾಸವಾಸಿಗಳಾದರು. ತದನಂತರ ನಾರಾಯಣರಾಯ ರಾವಸಾಹೇಬರೇ ಪಟ್ಟಕ್ಕೆ ಅಧಿಕಾರಿಗಳಾದುದರಿಂದ, ಅವರು ಪೇಶ್ವೆ ಪಟ್ಟಕ್ಕೆ ಕುಳಿತು ಅಧಿಕಾರ ನಡೆಸಲುಪಕ್ರಮಿಸಿದರು; ಆದರೆ ಪೇಶ್ವೆಯರ ದಾಯಾದಿಯಾದ ರಘುನಾಥರಾಯನು ಅವರನ್ನು ಕೊಲ್ಲಿಸಿ, ಪೇಶ್ವೆಪಟ್ಟವನ್ನೇರಿದನು. ಹೀಗೆ ಲೋಕರೀತಿಯ ವಿರುದ್ಧದಾಗಿ ಆಗ ಅವನು ಆಚರಿಸಿದನು. ಅವನ ಆ ಕೃತಿಯು ಹಿಂದೂಧರ್ಮದ ದೃಷ್ಟಿಯಿಂದ ಬಹು ನೀಚತನದ್ದಾಗಿರುವದು; ಅದರಂತೆಯೇ ಅದು ಮುಸಲ್ಮಾನ ಮತ್ತು ನಿಮ್ಮ ಟೊಪ್ಪಿಗೆ ಹಾಕುವವರ ಧರ್ಮದಲ್ಲಿಯೂ ಅಯೋಗ್ಯವಾಗಿರಬೇಕೆಂದು ತಿಳಿದು, ದೌಲತ್ತಿನ ಕಾರಭಾರಿಗಳೂ, ಎಲ್ಲ ಸಣ್ಣ-ಪುಟ್ಟ ಸರದಾರರೂ, ಹಿತಚಿಂತಕರೂ ಒಮ್ಮ

ನಸ್ಸಿನಿಂದ ಕೂಡಿ, ರಘುನಾಥರಾಯನನ್ನು ಪಟ್ಟದಿಂದ ತಳ್ಳಿಬಿಟ್ಟರು. ಆಗ ನಿಮ್ಮ ಮುಂಬಯಿಯವರು ಆ ಸಂಧಿ ಸಾಧಿಸಿ, ನಮ್ಮ ನಿಮ್ಮೊಳಗಿನ ಮಿತ್ರತ್ವದ ಕರಾರು ಗಳನ್ನು ಮುರಿದು, ಪೇಶ್ವೆಯರ ಕಾರಭಾರಿಗಳು ಬೇರೆ ಕಡೆಗೆ ದಂಡೆತ್ತಿ ಹೋಗಿರು ವಾಗ ನಮ್ಮ ಸಾಷ್ಟೀಬೆಟ್ಟವನ್ನು ಸೆಳಕೊಂಡರು! ಹಾಗು ಮುಂದೆ ಅವರು ರಘು ನಾಥರಾಯನಿಗೂ ಆಶ್ರಯವನ್ನಿತ್ತರು!! ಕಳೆದ ೪-೫ ವರ್ಷಗಳಿಂದ ಅವರ ನಮ್ಮ ನಡುವೆ ತೀವ್ರವಾದ ವೈಮನಸ್ಸುಂಟಾಗಿ, ಕಾಳಗಗಳು ನಡೆದಿರುತ್ತವೆ ಇದೇ ಕಾಲಕ್ಕೆ ಫ್ರೆಂಚ ವಗೈರೆ ಜನರು ತಮ್ಮ ವಕೀಲರನ್ನು ನಮ್ಮ ಕಡೆಗೆ ಕಳಿಸಿ, ನಮ್ಮೊ ಡನೆ ಮಿತ್ರತ್ವದ ಕರಾರು, ಒಡಂಬಡಿಕೆ ಮಾಡಿಕೊಳ್ಳಲಿಕ್ಕೆ ಒಳ್ಳೇ ಉತ್ಕಂಠೆಯಿಂದ ಪ್ರಯತ್ನಿಸುತ್ತಿರುವರು; ಆದರೆ ದೂರ ದೃಷ್ಟಿಯಿಂದ ನಾವು ಇದು ವರೆಗೆ ಬೇರೆ ಯಾರೊಡನೆಯೂ ಯಾವ ಕರಾರುಗಳನ್ನೂ ಮಾಡಿಕೊಂಡಿರುವದಿಲ್ಲ. ಯಾಕಂ ದರೆ, "ನಮಗೆ ಆಗಲೆ ತಿಳಿಸಿದ್ದರೆ ನಾವು ನಮ್ಮ ಇಂಗ್ಲಿಷರಿಗೆ ಚೆನ್ನಾಗಿ ಕಿವಿ ಹಿಂಡಿ, ನಿಮ್ಮೊಡನೆ ಆಗಿರುವ ಕರಾರುಗಳಂತೆ ನಡೆಯಹಚ್ಚುತ್ತಿದ್ದೆವು." ಎಂದು ಮೆ॥ರವರು ಹಿಂದಿನಿಂದ ಸಹಜವಾಗಿ ಅಂದು, ನಮ್ಮ ನಿಮ್ಮ ಮೈತ್ರಿಭಂಗದ ಎಲ್ಲ ದೋಷವನ್ನು ನಮ್ಮ ಮೇಲೆಯೇ ಹೊರಿಸಬಹುದೆಂದು ನೆನಿಸಿ, ನಾವು ಇದುವರೆಗೆ ದಾರಿ ನೋಡಿ, ಈಗ ಈ ಪತ್ರವನ್ನು ನಿಮ್ಮ ಕಡೆಗೆ ಬೇಕಂತ ಕಳಿಸಿರುತ್ತೇವೆ. ಮುಂಬಯಿಯವರು ನಮ್ಮೊಡನೆ ಹೇಗೆ ವರ್ತಿಸುವರೆಂಬದೂ, ಅವರಿಂದ ನಮಗೆ ಯಾವ ತೊಂದರೆಗಳಾದ ವೆಂಬುದೂ, ಮೆ॥ರವರಿಗೆ ಚೆನ್ನಾಗಿ ತಿಳಿಯುವದಕ್ಕೆಂದು, ಅವರ ಗೈರವರ್ತಣೂಕಿಯ ತಪಶೀಲನ್ನು ಇಲ್ಲಿ ವಿವರಿಸುವೆವು; ಪರಾಂಬರಿಸಬೇಕು:—

(೧) ನಾನಾಸಾಹೇಬನು ತೀರಿಕೊಳ್ಳಲು, ಅವನ ತರುವಾಯ ಪೇಶ್ವೆಪಟ್ಟಕ್ಕೆ ಮಾಧವರಾಯ ಹಾಗು ನಾರಾಯಣರಾಯ ಇವರೇ ಯೋಗ್ಯ ಅಧಿಕಾರಿಗಳು. ಮಾಧವರಾಯರು ನಿಪುತ್ರಿಕರಾಗಿ ಕೈಲಾಸವಾಸಿಗಳಾದ ಮೇಲೆ ನಾರಾಯಣರಾಯ ರು ಪೇಶ್ವೆ ಅಧಿಕಾರವನ್ನು ಕೈಕೊಂಡರು. ಆಗ ಮನೆಯೊಳಗಿನ ದಾಯಾದಿಯಾದ ರಾಘೋಬನು ಮೋಸದಿಂದ ಅವರನ್ನು ಕೊಲ್ಲಿಸಿ, ತಾನು ಫೇಶ್ವೆಯಾಗಲಿಕ್ಕೆ ಹವಣಿ ಸಿದನು. ಅವನ ಆ ಕೃತಿಯು ಹಿಂದೂಧರ್ಮದ ದೃಷ್ಟಿಯಿಂದ ತೀರ ಆಯೋಗ್ಯ ವಾದುದು. ಆವನನ್ನು ಪಟ್ಟದಿಂದ ತಳ್ಳಿ, ಆವನಿಗೆ ಯೋಗ್ಯ ರೀತಿಯಿಂದ ದಂಡಿ ಸುವ ಉದ್ಯೋಗದಲ್ಲಿ ಪೇಶ್ವೆಯ ಕಾರಭಾರಿಗಳು ತೊಡಗಿರುವ ಸಂಧಿಯನ್ನು ಸಾಧಿಸಿ, ಪುಣೆಯಲ್ಲಿ ಇಂಗ್ಲಿಷ ವಕೀಲನಾಗಿದ್ದ ಥಾಮಸ್ ಮಾಸ್ಟಿನ್ನನು ಮುಂಬಯಿಯವರಿಗೆ ಹೇಳಿ, ಅವರಿಂದ ಪೇಶ್ವೆ ಸರಕಾರದ ಸಾಷ್ಟಿ ಮುಂತಾದ ನಾಲ್ಕು ಠಾಣ್ಯಗಳನ್ನು ಸೆಳಕೊಂಡನು; ಅಲ್ಲಿದ್ದ ನಮ್ಮ ಹೆಚ್ಚಾದ ಸರಂಜಾಮು, ರೈತರ ವಿಪುಲ ಧನ-ಧಾನ್ಯ ಮುಂತಾದ ಸಾಮುಗ್ರಿಗಳನ್ನೂ ತನ್ನ ಸ್ವಾಧೀನಪಡಿಸಿಕೊಂಡನು. ದೂರದೃಷ್ಟಿ ಯನ್ನಿಡದೆ ನಮ್ಮ ನಿಮ್ಮಗಳಲ್ಲಿಯ ಮೈತ್ರಿಯ ಕರಾರುಗಳನ್ನು ಮುರಿದು, ಹೀಗೆ ನಿಮ್ಮವರೇ ವ್ಯಾಜ್ಯ ಹೂಡಿರುತ್ತಾರೆ. ಥಾಮಸ್ ಮಾಸ್ಟಿನ್ನನು ಮೆ॥ರವರ ಪತ್ರ

ತಂದು ನಮ್ಮ ದರ್ಬಾರದಲ್ಲಿದ್ದು, ನಮ್ಮ ನಿಮ್ಮಗಳ ಮೈತ್ರಿಯನ್ನು ದೃಢಪಡಿಸ ಲಿಕ್ಕಂದು ಬಂದವನು; ಆದರೆ ಆತನ ಬೆಂಬಲದಿಂದಲೇ ಮುಂಬಯಿಯವರು ಮೇಲೆ ವಿವರಿಸಿದ ಅನ್ಯಾಯವನ್ನು ಮಾಡಿರುತ್ತಾರೆ; ಅಂದ ಮೇಲೆ ಬಾದಶಹರ ಹುಕುಂ ಹಾಗು ಕರಾರು-ಒಪ್ಪಂದಗಳು ಎಲ್ಲಿ ಅಡಗಿದವು?

(೩) ಬಾಜೀರಾಯರ ಕಾಲದಿಂದ ೮-೫ ಸಾರೆಯಾದರೂ ಇಂಗ್ಲಿಷರೊಡನೆ ಕರಾರು-ಒಪ್ಪಂದಗಳಾದವು. ಇವೆಲ್ಲವುಗಳಲ್ಲಿಯೂ ಇಂಗ್ಲಿಷರು ಪೇಶ್ವೇ ಸರಕಾರದ ವೈರಿಗೂ, ಅವರ ದಂಡಿನಲ್ಲಿ ಅಥವಾ ಮನೆತನದಲ್ಲಿ ಫಿತೂರಿಯಾದವನಿಗೂ ಆಶ್ರಯ ವನ್ನೂ ಸಹಾಯವನ್ನೂ ಕೊಡಬಾರದು; ಅವನನ್ನು ಕೂಡಲೆ ನಮಗೆ ಒಪ್ಪಿಸಬೇಕೆಂಬ ಮುಖ್ಯ ಕರಾರಾಗಿವೆ ಹೀಗಿದ್ದೂ, ನಮ್ಮ ದಾಯಾದಿ ರಘುನಾಥರಾಯನಿಗೆ ಮುಂಬ ಯಿಯವರು ಆಶ್ರಯ ಕೊಟ್ಟು ತಮ್ಮ ಕರ್ನಲ್ಲ ಕೀಟಿಂಗ ಮುಂತಾದ ಸೇನಾನಿಗಳ ಸಹಾಯ ಕೊಟ್ಟು, ಪೇಶ್ವೇಸರಕಾರದ ಗುಜರಾಥದೇಶದೊಳಗಿನ ಕೆಲ ತಾಲೂಕು ಗಳನ್ನು ಸೇರಿಕೊಂಡು, ಕೋಟಿಗಟ್ಲೆ ರೂಪಾಯಿಗಳ ಪ್ರಾಂತವನ್ನು ಹಾಳು ಮಾಡಿ, ೪೦-೪೫ ಲಕ್ಷ ರೂಪಾಯಿಗಳನ್ನು ವಸೂಲ ಮಾಡಿಕೊಂಡಿರುತ್ತಾರೆ. ಅವರಿಗೆ ಎದು ರಾಗಿ ಅವರನ್ನು ದಂಡಿಸಲಿಕ್ಕೆ ನಾವು ನಮ್ಮ ದಂಡು ಕಳಿಸಬೇಕಾದ್ದರಿಂದ, ಆ ಬಗ್ಗೆ ಯೂ ನಮಗೆ ಕೋಟಿಗಟ್ಲೆ ರೂಪಾಯಿಗಳ ಖರ್ಚು ಬಂದಿದೆ. ನೀವು ಹೀಗೆ ಕರಾರು ಗಳನ್ನು ಮುರಿದುದೇಕೆಂದು ಕೇಳಲು, ಮುಂಬಯಿಯವರು ಹೇಳಿದ್ದೇನಂದರೆ:— "ಪೋರ್ತುಗೀಜರು ನಿಮ್ಮ ಸಾಷ್ಟಿ ಮುಂತಾದವುಗಳನ್ನು ಮುತ್ತುವವರಿದ್ದುದರಿಂದ, ನಾವೇ ನೆಳಕೊಂಡೆವು." ಮೆ॥ರವರೇ, ಇದೆಲ್ಲಿಯ ನ್ಯಾಯವು?

(೪) ಕರ್ನಲ್ಲ ಕೀಟಿಂಗನು ರಘುನಾಥರಾಯನನ್ನು ಮುಂದೆ ಮಾಡಿಕೊಂಡು ಗುಜರಾಥದಲ್ಲಿ ಗೊಂದಲವೆಬ್ಬಿಸಿದನು. ಅವನ ಆ ಗೊಂದಲವನ್ನು ತಗ್ಗಿಸಲಿಕ್ಕೆ ಪೇಶ್ವೆಸರಕಾರವು ತನ್ನ ದೊಡ್ಡ ದಂಡು ಕಳಿಸಿ, ಅವನೊಡನೆ ಒಂದೆರಡು ಕಡೆಗೆ ಕಾಳಗ ಸಹ ಮಾಡಿತು. ಆ ಯುದ್ಧಗಳು ನಡೆದಿರಲಿಕ್ಕೆ ಕಲಕತ್ತೆಯವರು "ನಮಗೆ ಬೇರೆಯವರ ಪ್ರದೇಶಗಳು ಬೇಕಿಲ್ಲ, ಹಾಗು ಯಾರೊಬ್ಬರಿಗೆ ಸಹಾಯ ಮಾಡಿ, ಜಗಳವಾಡುವದು ಇಂಗ್ಲಿಷ ಬಾದಶಹನಿಗೂ ಕಂಪನಿಗೂ ಮಾನ್ಯವಿಲ್ಲ. ಈ ಬಗ್ಗೆ ಗಾಗಿ ಮುಂಬಯಿಯವರು ಇದಕ್ಕೆ ವಿರುದ್ಧವಾಗಿ ನಡೆದಿರುವದರಿಂದ, ಅವರು ತಮ್ಮ ದಂಡನ್ನು ಕೂಡಲೆ ಹಿಂದಕ್ಕೆ ತಕ್ಕೊಳ್ಳಬೇಕು; ಹಾಗು ಉಭಯತರಲ್ಲಿಯ ಮೈತ್ರಿ ಯನ್ನು ವೃದ್ಧಿಸಬೇಕು. ಇದೇ ಕೆಲಸಕ್ಕಾಗಿ ನಮ್ಮ ಕಡೆಯ ಒಬ್ಬ ಸನ್ಮಾನ್ಯ ಗೃಹ ಸ್ಥನು ಪೇಶ್ವೆಯವರ ದರ್ಬಾರಿಗೆ ರವಾನಿಸಲ್ಪಡುವನು. ಆದ್ದರಿಂದ ಪೇಶ್ವೆಸರಕಾರಕ್ಕೆ ಕಲಕತ್ತೆಯ ಇಂಗ್ಲಿಷರು ಈ ಪತ್ರದ ಮೂಲಕ ವಿನಂತಿಮಾಡುವದೇನಂದರೆ, ಈ ಪತ್ರ ತಲುಪಿದ ಕೂಡಲೆ ಸದ್ಯದ ಕಾಳಗವನ್ನು ಒಮ್ಮೆಲೆ ನಿಲ್ಲಿಸಿಬಿಡಬೇಕು" ಎಂದು ಪತ್ರ ಬರೆದರು. ಕಲ್ಕತ್ತೆಯ ಇಂಗ್ಲಿಷ ಅಧಿಕಾರಿಗಳು ಬಾದಶಹರ ಹಾಗು ಕಂಪ ನಿಯ ಮುಖತ್ಯಾರರು. ಅವರ ಬರೆಹವು ಯೋಗ್ಯವೆಂದು ತಿಳಿದು, ಮತ್ತು ನಮ್ಮ

ನಿಮ್ಮಗಳ ಮೈತ್ರಿಯ ಕಡೆಗೆ ಲಕ್ಷ್ಯಗೊಟ್ಟು, ಪೇಶ್ವೆಸರಕಾರವು ತನ್ನ ದಂಡಿಗೂ ಸರದಾರರಿಗೂ ಹಿಂದಕ್ಕೆ ಬರುವ ಬಗ್ಗೆ ಹುಕುಂ ಮಾಡಿತು; ಹಾಗು ಕೂಡಲೆ ನಮ್ಮ ದಂಡುಗಳು ಹಿಂದಿರುಗಿದವು. ನಾವು ಹಿಂದಿರುಗಿದ್ದನ್ನು ನೋಡಿ, ಕರ್ನಲ್ಲ ಕೀಟಿಂಗನು ಹರ್ಷನಿರ್ಭರನಾಗಿ, ಕಲಕತ್ತೆಯವರ ಹುಕುಮನ್ನು ಕಾಲ್ಗಸವೆಂದು ತಿಳಿದು, ರಘುನಾಥರಾಯನೊಡನೆ ಮುಂದರಿದು, ನಮ್ಮ ಕಡೆಯ ಫತ್ತೇಸಿಂಗ ಗಾಯಕವಾಡನನ್ನು ಮುತ್ತಿ, ಅವನಿಂದ ಹೇರಳವಾಗಿ ಹಣವನ್ನು ಸೆಳೆದನು; ಹಾಗು ಆತನ ಎಷ್ಟೋ ನಾಡನ್ನೂ ಆಕ್ರಮಿಸಿದನು. ಬಳಿಕ ಕಲ್ಕತ್ತೆಯಿಂದ ಕರ್ನಲ್ಲ ಜಾನ್ ಆಸ್ಟನ್ನನು ಪುಣೆಯ ದರ್ಬಾರಿಗೆ ಬಂದನು ಆತನು ಆಗ ಜಾಹೀರಪಡಿಸಿದುದೇನಂದರೆ:—"ಉತ್ತರ ಹಾಗು ದಕ್ಷಿಣ ಹಿಂದುಸ್ತಾನದೊಳಗಿನ ಇಂಗ್ಲಿಷರ ಎಲ್ಲ ಬಂದರಗಳಿಗೂ ವಖಾರುಗಳಿಗೂ ಕಲ್ಕತ್ತೆಯ ಇಂಗ್ಲಿಷ ಕೌನ್ಸಿಲ್ಲೇ ಮುಖತ್ಯಾರವಾಗಿರುತ್ತದೆ. ನಾನು ಅಂಥ ಆ ಕಲಕತ್ತೆಯ ಕೌನ್ಸಿಲ್ಲದಿಂದ ಮುಖತ್ಯಾರನಾಮೆ ಪಡೆದು ಇಲ್ಲಿಗೆ ಬಂದಿರುತ್ತೇನೆ. ನಾನು ಇಂಗ್ಲಿಷರ ವತಿಯಿಂದ ಪೇಶ್ವೆಯವರೊಡನೆ ಮಾಡಿಕೊಳ್ಳುವ ಕರಾರುಗಳನ್ನೂ ಒಪ್ಪಂದವನ್ನೂ ಇಂಗ್ಲಿಷರ ಎಲ್ಲ ಬಂದರಗಳ ಅಧಿಕಾರಿಗಳೂ ಮನ್ನಿಸತಕ್ಕದ್ದು" ಆಗ ಪೇಶ್ವೆಯವರ ಮುಖತ್ಯಾರರು ಆ ಆಸ್ಟನ್ನನಿಗೆ:— "ನಿಮ್ಮ ಮುಂಬಯಿಯ ಇಂಗ್ಲಿಷರೇ ಈ ಎಲ್ಲ ಫಿತೂರಿಯ ಅನರ್ಥಕ್ಕೆ ಮೂಲ ಕಾರಣರು! ನಿಮ್ಮ ಕಲ್ಕತ್ತೆಯ ಹುಕುಂ ಬಂದ ಮೇಲೆ ಸಹ ಕರ್ನಲ್ಲ ಕೀಟಿಂಗನು ನಮ್ಮ ಮೇಲೆ ಏರಿ ಬಂದಿರುತ್ತಾನೆ. ಆದ್ದರಿಂದ ನಿಮ್ಮ ಮುಖತ್ಯಾರಿಯನ್ನು ನಾವು ಮನ್ನಿಸುವ ಬಗೆ ಹೇಗೆ? ನೀವು ಈಗ ನಮ್ಮೊಡನೆ ಒಪ್ಪಂದವನ್ನೇ ಮಾಡಬೇಕಾಗಿದ್ದರೆ, ನಿಮ್ಮ ಮುಂಬಯಿಯ ಇಂಗ್ಲಿಷರೊಳಗಿನ ಯಾವನೊಬ್ಬ ಮಾನ್ಯ ಅಧಿಕಾರಿಯನ್ನು ಕರೆಸಿಕೊಳ್ಳಬೇಕು; ಅಂದರೆ ನಿಮ್ಮೊಡನೆ ಒಪ್ಪಂದದ ಮಾತನ್ನೆತ್ತಲಿಕ್ಕೆ ಸರಿಹೋಗುವದು" ಎಂದು ಹೇಳಿದರು. ಅದಕ್ಕೆ ಆ ಕರ್ನಲ್ಲನು ಅಂದದ್ದೇನಂದರೆ:—"ಇಂಗ್ಲಿಷರ ಮುಖತ್ಯಾರನು ಮಾಡಿಕೊಂಡ ಕರಾರುಗಳು ಇಂಗ್ಲಿಷರೆಲ್ಲರಿಗೂ ಸಮ್ಮತವಾಗುವವು. ನಮ್ಮ ಕಲಕತ್ತೆಯವರು ಮಾಡಿಕೊಂಡ ಕರಾರುಗಳನ್ನು ಮುರಿಯುವ ಸಾಮರ್ಥ್ಯವು ಮುಂಬಯಿಯವರಿಗೆಲ್ಲಿಂದ ಬರಬೇಕು?" ಹೀಗೆಂದು ಕರ್ನಲ್ಲ ಆಸ್ಟನ್ನನು ತನ್ನ ಸಂಗಡ ತಂದಿದ್ದ ಕಂಪನಿಯ ಮೋಹರನಿಶಿಯ ಮುಖತ್ಯಾರನಾಮೆಯನ್ನು ಪೇಶ್ವೆಯರ ದರ್ಬಾರಿಗೆ ಹಾಜರು ಪಡಿಸಿದನು. ಕಡೆಗೆ ಉಭಯ ಸರಕಾರಗಳಲ್ಲಿಯೂ ಕರಾರುಗಳಾಗಿ ಒಪ್ಪಂದವಾಯಿತು. ಅದರಂತೆ ಸದರ ಕರ್ನಲ್ಲನು ಕಲ್ಕತ್ತೆಯ ಕೌನ್ಸಿಲ್ಲಿನವರ ಸಹಿ ಹಾಗು ಕಂಪನಿಯ ಮೋಹರನಿಶಿಯ ಆ ಒಪ್ಪಂದದ ಕಾಗದವನ್ನು ನಮ್ಮ ಸರಕಾರಕ್ಕೆ ಹಾಜರ ಪಡಿಸಿದನು; ಹಾಗು ನಮ್ಮಿಂದಲೂ ಪ್ರತಿಕರಾರಿನ ಕಾಗದವನ್ನು ವಶಪಡಿಸಿಕೊಂಡನು. ನಂತರ ಕರ್ನಲ್ಲ ಜಾನ್ ಆಸ್ಟನ್ನನು ಅದನ್ನು ಮುಂಬಯಿಯವರಿಗೆ ತಿಳಿಸಿದನು. ಅವರು ಆ ಒಪ್ಪಂದದ ಸುದ್ದಿಯನ್ನು ತಮ್ಮ ಪಟ್ಟಣದಲ್ಲಿ ಡಂಗುರ

ಮುಖಾಂತರ ಸಾರಿದರು; ಹಾಗು ತಾವು ಅದರಂತೆ ನಡೆಕೊಳ್ಳುತ್ತೇವೆಂದು ಅಸ್ಟನ್ನನಿಗೆ ತಿಳಿಸಿದರು. ಕೂಡಲೆ ಕರ್ನಲ್ಲ ಕೀಟಿಂಗನಿಗೆ ಮುಂಬಯಿಯುವರೂ ಅಸ್ಟನ್ನನೂ ಪತ್ರಕಳಿಸಿ, ನೀವು ರಾಘೋಬನ ಸಂಗತಿಯನ್ನು ಬಿಟ್ಟು ಹಿಂದಿರುಗಬೇಕೆಂದು ತಿಳಿಸಿದರು. ಅವನು ೨ ತಿಂಗಳ ನಂತರ ಸುರತಿಗೆ ಹಿಂದಿರುಗಿದನು. ಆಗಲೂ ಅವನು ಒಪ್ಪಂದದ ಕರಾರಿಗೆ ವಿರುದ್ಧವಾಗಿ ರಾಘೋಬನನ್ನು ತನ್ನ ಸಂಗಡವೇ ಸುರತಿಗೆ ಕರೆದೊಯ್ದನು. ಪೇಶ್ವೇ ಸರಕಾರದ ದಂಡುಗಳು ಮತ್ತೆ ಯುದ್ಧಕ್ಕೆ ಸನ್ನದ್ಧವಾದುದನ್ನು ತಿಳಿದು, ರಾಘೋಬನನ್ನು ಸುರತದಿಂದ ಭೂಮಾರ್ಗವಾಗಿ ಮುಂಬಯಿಗೆ ಕಳಿಸಹತ್ತಿದರು. ಆಗ ಇಂಗ್ಲಿಷರ ದಂಡಿನವರು ಪೇಶ್ವೇ ಸರಕಾರದ ಪ್ರಾಂತಕ್ಕೆ ತೊಂದರೆ ಕೊಡುತ್ತಾರೆಂಬದನ್ನು ಕೇಳಿ, ಪೇಶ್ವೆಯರ ದಂಡುಗಳು ಇಂಗ್ಲಿಷರ ಮೇಲೆ ಮತ್ತೆ ಸಾಗಿ ಹೋಗಬೇಕಾಯಿತು. ಈ ವರ್ತಮಾನವನ್ನು ತಿಳಿದು, ಮುಂಬಯಿಯುವರು ಹಡಗ ಕಳಿಸಿ, ಸುರತದಿಂದ ರಾಘೋಬನನ್ನು ಜಲಮಾರ್ಗದಿಂದಲೇ ಮುಂಬಯಿಗೆ ಕರೆಸಿಕೊಂಡನು. ಮುಂಬಯಿಯ ಇಂಗ್ಲಿಷರ ಈ ಗೈರವರ್ತನದ ಬಗ್ಗೆ ನಾವು ಕಲಕತ್ತೆಯ ಕೌನ್ಸಿಲ್ಲಿಗೆ ಪತ್ರಬರೆದು ತಿಳಿಸಿದೆವು. ಅದಕ್ಕೆ ಅವರು ಉತ್ತರಕೊಟ್ಟದ್ದೇನಂದರೆ, "ನಾವು ಮುಂಬಯಿಯುವರಿಗೆ ಮತ್ತೆ ತಾಕೀದು ಮಾಡಿದ್ದೇವೆ. ಅವರು ಇನ್ನು ಮೇಲೆ ರಾಘೋಬನನ್ನು ಕಂಪನಿಯ ಮುಲುಖಿನಲ್ಲಿರಗೊಡಲಾರರು" ಹೀಗಾದರೂ ಮುಂಬಯಿಯುವರು ಕಲಕತ್ತೆಯುವರ ಹುಕುಮಿಗೆ ಅಮಾನ್ಯ ಮಾಡಿ ರಾಘೋಬನನ್ನು ತಮ್ಮ ಬಳಿಯಲ್ಲೇ ಇಟ್ಟುಕೊಂಡು, ಪೇಶ್ವೆಸರಕಾರದಲ್ಲಿ ಮತ್ತೆ ಫಿತೂರಿಯ ಉದ್ಯೋಗಕ್ಕೆ ಹತ್ತಿದರು. ಉಭಯತರಲ್ಲಿ ಹೊಸ ಕರಾರು ಆದ ಮೇಲೂ ಮುಂಬಯಿಯುವರು ಹೀಗೆ ನಡೆದರು; ಅಂದಮೇಲೆ ಅವರಲ್ಲಿ ಸರಳ ನಡತೆಯ ನಿರಂತರದ ಮೈತ್ರಿಯು ಎಲ್ಲಿ ಉಳಿಯಿತು?

(೪) ಮೇಲಿನ ಕಲಮಿನಲ್ಲಿ ಹೇಳಿದಂತೆ ಕಲಕತ್ತೆಯ ಕೌನ್ಸಿಲ್ಲೇ ಇಂಗ್ಲಿಷರ ಮುಖ್ಯ ಮುಖತ್ಯಾರವೆಂದು ತಿಳಿದು, ನಾವು ಅವರಿಗೆ ಮುಂಬಯಿಯುವರ ಮಾತಿನ ಅನ್ಯಾಯಗಳನ್ನು ಸಪ್ರಮಾಣವಾಗಿ ತಿಳಿಸಿ, ನಮ್ಮ ಹಾನಿಯನ್ನೂ ಹಾಗು ನಮ್ಮಿಂದ ನಿಷ್ಕಾರಣವಾಗಿ ತಕ್ಕೊಂಡ ಸಾಷ್ಟಿ, ಜಂಜೀರೆ ಮುಂತಾದ ಠಾಣ್ಯಗಳನ್ನೂ ಮರಳಿ ಕೊಡಿಸಬೇಕೆಂದು ಕೇಳಿದರೆ, ಅವರು ಅದರಂತೆ ನಡೆಯದೆ, "ಆ ಬಗ್ಗೆ ನಿಮ್ಮ ಅಂಬೋಣವನ್ನು ಸಹಾನುಭೂತಿಪೂರ್ವಕವಾಗಿ ವಿಚಾರ ಮಾಡಲಾಗುವದೆ"ಂಬ ಸ್ವಾರ್ಥಸಾಧಕತೆಯ ಬೆಲ್ಲದ ಅಚ್ಚಿನಂತಹ ಮಾತನ್ನು ಹೇಳಿ ಸುಮ್ಮನಾಗಿ ಬಿಟ್ಟರುವರು! ಅಂದಮೇಲೆ ಕಲಕತ್ತೆಯುವರ ಮುಖತ್ಯಾರಿಯು ಹಾಗು ನ್ಯಾಯ ನಡತೆಯ ಡೌಲು ಎತ್ತ ಅಡಗಿತು?

(೫) ಕೊಂಕಣ ಪ್ರಾಂತದಲ್ಲಿ ಎದ್ದ ಬಂಡನ್ನು ಪೇಶ್ವೆ ಸರಕಾರದ ದಂಡುಗಳು ಮುರಿದವು. ಬಂಡುಗಾರರು ಸಾಷ್ಟಿಗೆ ಓಡಿ ಹೋದರು. ಸಾಷ್ಟಿಯ ಇಂಗ್ಲಿಷ ಅಮಲದಾರನು ಆ ನಮ್ಮ ವೈರಿಗಳಿಗೆ ಆಶ್ರಯವನ್ನಿತ್ತನು. ನಮ್ಮ ಪ್ರಾಂತಗಳಲ್ಲಿ

ಲಕ್ಷಗಟ್ಲೆ ಸುಲಿದ ಸುಲಿಗೆಯ ಹಣವು ಆತನಲ್ಲೇ ಉಳಿಯಿತು. ಆ ಬಂಡುಗಾರನು ಹಡಗದಲ್ಲಿ ಕುಳಿತು ಮುಂಬಯಿಗೆ ನಡೆದಿರುವಾಗ, ರಾಘೋಜಿ ಆಂಗ್ರ್ಯೆಯು ಆತನನ್ನು ಸೆರೆಹಿಡಿದುಕೊಂಡು ಬಂದನು. ಆಗ ಮುಂಬಯಿಯ ಇಂಗ್ಲಿಷರು ಆಂಗ್ರೇನಿಗೆ ಬರೆದು ತಿಳಿಸಿದ್ದೇನಂದರೆ, "ನಮ್ಮ ಮುಂಬಯಿಗೆ ಬರುತ್ತಿದ್ದ ಆ ಆಸಾಮಿಯನ್ನು ನೀವು ಸೆರೆ ಹಿಡಿದುದೇಕೆ? ಕೂಡಲೆ ಆತನನ್ನು ನಮ್ಮ ಕಡೆಗೆ ಕಳಿಸಿಕೊಡಿರಿ; ಇಲ್ಲದಿದ್ದರೆ ನಾವು ನಿಮ್ಮ ಮೇಲೆ ದಂಡೆತ್ತಿ ಬರುತ್ತೇವೆ." ನಮ್ಮ ನಿಮ್ಮಲ್ಲಿ ಈ ಬಗ್ಗೆ ಮೊದಲೇ ಯೋಗ್ಯ ಕರಾರುಗಳಾಗಿ ಮೈತ್ರಿಯ ಒಪ್ಪಂದವಾಗಿರಲಿಕ್ಕೆ ನಿಮ್ಮವರು ಹೀಗೆ ಆಗಾಗ್ಗೆ ವರ್ತಿಸಿ, ಫಿತೂರಿಗಳಿಗೆ ಆಶ್ರಯ ಕೊಟ್ಟು, ಅವರ ಬೆನ್ನ ಕಟ್ಟಿ ಬರುವದು ಯಾವ ದೇಶದ ರೀತಿಯು?

(೬) ಫ್ರೆಂಚ ಬಾದಶಹನ ಕಡೆಯ ವಕೀಲನು ನಮ್ಮ ದರ್ಬಾರಿಗೆ ತಾನಾಗಿಯೇ ಬಂದಿದ್ದನು. ನಾವು ಕರ್ನಲ್ಲ ಅಪ್ಟನ್ನನೊಡನೆ ಮಾಡಿದ ಒಪ್ಪಂದದಲ್ಲಿ "ಪೇಶ್ವೆಯರು ಫ್ರೆಂಚ ವಕೀಲನನ್ನು ತಮ್ಮ ದರ್ಬಾರದಲ್ಲಿಟ್ಟುಕೊಳ್ಳಕೂಡದು; ಅವರೊಡನೆ ರಾಜಕಾರಣ ನಡೆಸಲಾಗದು." ಎಂಬ ಕರಾರು ಇರಲೇ ಇಲ್ಲ; ಆದರೂ ನಾವು ನಮ್ಮ ನಿಮ್ಮಗಳ ದೃಢ ಮೈತ್ರಿಯನ್ನು ಮನದಂದು, ಆ ಫ್ರೆಂಚ ವಕೀಲನನ್ನು ನಮ್ಮಲ್ಲಿಟ್ಟುಕೊಳ್ಳಲಿಲ್ಲ; ಹಾಗು ಅವರೊಡನೆ ಯಾವ ರಾಜಕಾರಣವನ್ನೂ ನಡೆಸಿರುವದಿಲ್ಲ. ಮೆ॥ರವರು ನಮ್ಮ ಈ ಮೈತ್ರಿಯ ಶೀಲವನ್ನು ಲಕ್ಷ್ಯದಲ್ಲಿಡಬೇಕು.

(೭) ಪೇಶ್ವೆಯರ ಸರದಾರನಾದ ಫತ್ತೇಸಿಂಗ ಗಾಯಕವಾಡನ ಚಿಖಲಿ ಮುಂತಾದ ಪ್ರಾಂತಗಳನ್ನು ಇಂಗ್ಲಿಷರು ವಶಪಡಿಸಿಕೊಂಡರು. ಆ ಬಗ್ಗೆ ಕರ್ನಲ್ಲ ಅಪ್ಟನ್ನನೊಡನೆ ವಿಚಾರ ವಿನಿಮಯವಾಯಿತು. ಆತನು ಆಗ ಕರಾರ ಮಾಡಿದ್ದೇನಂದರೆ, "ಮಹಾಲು-ಮುಲುಖಗಳನ್ನು ಕೊಡ-ತಕ್ಕೊಳ್ಳುವ ಅಧಿಕಾರವು ಪೇಶ್ವೆಸರಕಾರದ್ದು; ಆ ಅಧಿಕಾರವು ನಮ್ಮದಲ್ಲ, ಎಂಬ ಲೇಖೀಪತ್ರವನ್ನು ಫತ್ತೇಸಿಂಗನು ಇಂಗ್ಲಿಷರಿಗೆ ಬರಕೊಡಬೇಕು; ಅಂದರೆ ನಾವು ಆ ಪ್ರಾಂತವನ್ನು ನಿಮ್ಮ ಸ್ವಾಧೀನ ಮಾಡುತ್ತೇವೆ" ನಾವು ಆ ಪ್ರಕಾರ ಫತ್ತೇಸಿಂಗನಿಂದ ಪತ್ರ ಬರೆಸಿ ಕೊಟ್ಟರೂ, ಆ ಕರ್ನಲ್ಲನು ಆ ಪ್ರಾಂತವನ್ನು ನಮ್ಮ ಸ್ವಾಧೀನ ಪಡಿಸದಿದ್ದದ್ದು ನ್ಯಾಯವೇ ಹೇಗೆ?

(೮) ಆ ಒಪ್ಪಂದದ ಮೇರೆಗೆ ಪೇಶ್ವೇಸರಕಾರವು ಹುಕುಮುಗಳನ್ನು ಹೊರಡಿಸಿ, ಅವೆಲ್ಲವನ್ನೂ ಅಮಲಿನಲ್ಲಿ ತಂದಿರಲು, ಮುಂಬಯಿಯವರು ಆ ಒಪ್ಪಂದದ ಪ್ರಕಾರ ಸ್ವಲ್ಪವೂ ನಡೆದಿರುವದಿಲ್ಲ; ಇಷ್ಟೇ ಅಲ್ಲ, ಆ ಒಪ್ಪಂದಕ್ಕೆ ವಿರುದ್ಧವಾಗಿ ಇಂಗ್ಲಿಷರ ದಂಡು ಒತ್ತಟ್ಟಿಗೆ ಸೇರಿ, ಸಂಗಡ ರಘುನಾಥರಾಯನನ್ನು ಕಟ್ಟಿಕೊಂಡು ಪೇಶ್ವೆಯರ ಕೊಂಕಣ ಪ್ರಾಂತಕ್ಕೆ ಬಂದಿತು. ಅಲ್ಲಿಂದ ರಘುನಾಥರಾಯನ ಹೆಸರಿನಿಂದ ಹಾಗು ಕಂಪನಿಯ ಶಿಕ್ಕೆ-ಮೊಹರುಗಳೊಡನೆ ಪೇಶ್ವೇ ಸರಕಾರದ ಎಲ್ಲ ಸರದಾರರಿಗೂ ಹೀಗೆ ಹುಕುಮುಗಳನ್ನು ಕಳಿಸಿರುತ್ತದೆ-"ರಘುನಾಥರಾಯನನ್ನೇ ಪೇಶ್ವೆಪಟ್ಟಕ್ಕೆ ಕಾಯಮ ಅಧಿಕಾರಿಯೆಂದು ತಿಳಿಯಬೇಕು. ಈ ಸಲಹೆಯನ್ನು ನಾವೂ

ಕಲ್ಕತ್ತೆಯ ನಮ್ಮ ವರಿಷ್ಠ ಕೌನ್ಸಿಲ್ಲಿನವರೂ ಕೂಡಿ ಐಕಮತ್ಯದಿಂದ ಪ್ರಕಟಿಸಿರುತ್ತೇವೆ." ಅವರ ಆ ಹುಕುಮಿನ ಮೂಲ ಪ್ರತಿಯೊಂದನ್ನು ಇದರೊಂದಿಗೆ ಕಳಿಸಿದೆ. ಈ ತರದ ಹುಕುಮನ್ನು ಹೊರಡಿಸಿ, ನಮ್ಮ ಸರದಾರರಿಗೆ ಕಳಿಸಲಿಕ್ಕೆ ಇವರಿಗೆ ಅಧಿಕಾರವೇನೆಂದು ವಿಚಾರಿಸಬೇಕು.

(೯) ಮಿತ್ರತ್ವದ ಕರಾರುಗಳನ್ನು ಬದಿಗೊತ್ತಿ, ಮುಂಬಯಿಯವರು ರಘುನಾಥರಾಯನನ್ನು ತಮ್ಮ ದಂಡಿನ ಮುಖ್ಯಸ್ಥನಾದ ಕಾರ್ನ್ಯಾಕನೊಡನೆ ಕಳಿಸಿದರು. ಅವರು ಘಟ್ಟವನ್ನೇರಿ ಬಂದು ಪುಣೆಯ ಬಳಿಯ ತಳೇಗಾವವನ್ನು ಮುತ್ತಿದರು. ಪೇಶ್ವೇ ಸರಕಾರದ ನೌಕರರೂ ಸರದಾರರೂ ಹೀಗೇಕೆಂದು ಅವರಿಗೆ ಕೇಳಿದರು; ಆದರೆ ಉಪಯೋಗವೇನೂ ಆಗಲಿಲ್ಲ. ಆದರಿಂದ ನಾವು ಅವರೊಡನೆ ವಡಗಾವದ ಬಳಿಯಲ್ಲಿ ಕಾದಿ, ಅವರನ್ನು ನಭೂತಪೂರ್ವವಾಗಿ ಸೋಲಿಸಿದೆವು. ಈ ಸುದ್ದಿಯು ಮೆ॥ರವರಿಗೆ ಮುಂಬಯಿಯವರಿಂದ ಈ ಮೊದಲೇ ತಿಳಿದಿರಬಹುದು. ಆಗ ಕಾರ್ನ್ಯಾಕ ಮುಂತಾದವರು ಕೂಡಿ ಒಪ್ಪಂದ ಮಾಡಿಕೊಂಡದ್ದೇನಂದರೆ—"ನಾವು ಕಂಪನಿಯ ವತಿಯಿಂದ ಪ್ರಸ್ತುತದ ಯುದ್ಧ ನಿಲ್ಲಿಸಲಿಕ್ಕೂ, ಒಪ್ಪಂದ ಮಾಡಿಕೊಳ್ಳಲಿಕ್ಕೂ ಮುಖತ್ಯಾರರಾಗಿರುತ್ತೇವೆ; ಹಾಗು ನಮ್ಮ ಹತ್ತರ ಕಂಪನಿಯ ಶಿಕ್ಕೆಯೂ (ಮೊಹರು) ಇರುತ್ತದೆ. ಆದರಿಂದ ನಾವು ನಿಮ್ಮೊಡನೆ ಮಾಡಿಕೊಳ್ಳುವ ಒಪ್ಪಂದವು ನಮ್ಮವರೆಲ್ಲರಿಗೂ ಮಾನ್ಯವಾಗಿರುವದು. ಮುಂಬಯಿಯವರು ಈ ಮೊದಲಿನ ಒಪ್ಪಂದಕ್ಕೆ ವಿರುದ್ಧವಾಗಿ ನಡೆದು ತಕ್ಕೊಂಡ ಸಾಷ್ಟಿ ಮತ್ತು ಜಂಬೂಸರಗಳನ್ನೂ, ಗಾಯಕವಾಡನ ಮಹಾಲ ಮತ್ತು ಭಡೋಚ ಪಟ್ಟಣಗಳನ್ನೂ ನಾವು ನಿಮಗೆ ತಿರುಗಿ ಕೊಡಿಸುತ್ತೇವೆ. ರಘುನಾಥರಾಯನನ್ನು ನಮ್ಮ ಮುಲಖಿನಲ್ಲಿರಗೊಡುವದಿಲ್ಲ. ಕರ್ನಲ್ಲ ಅಪ್ಟನ್ನನ ಮುಖಾಂತರ ಆದ ಒಪ್ಪಂದದಂತೆ ಮುಂಬಯಿಯವರು ನಡೆಯದ್ದರಿಂದ ಅದನ್ನು ರದ್ದುಪಡಿಸಿ, ಈಗಾದ ಈ ಒಪ್ಪಂದದಂತೆಯೇ ಇನ್ನು ಮುಂದೆ ಉಭಯತರೂ ನಡೆಕೊಳ್ಳತಕ್ಕದ್ದು." ಈ ಪ್ರಕಾರ ಆಗ ಉಭಯತರಲ್ಲಿ ಒಪ್ಪಂದವಾಗಿ, ಒಪ್ಪಂದದ ಕರಾರುಗಳಂತೆ ಪೂರಾ ಅಮಲು ನಡೆಯುವವರೆಗೆ ಚಾರ್ಲಸ್ ಸ್ಟುಅರ್ಟ ಮತ್ತು ಫಾರ್ಮರ ಎಂಬ ಇಬ್ಬರು ಸಿಪ್ಪಿಲಯನ್ಸರನ್ನು ನಮ್ಮಲ್ಲಿ ಅಡವಾಗಿಟ್ಟರು! ಬಳಿಕ ಪೇಶ್ವೇ ಸರಕಾರವು ತನ್ನ ದಾರಿಕಾರರನ್ನೂ ಸಹಾಯಕ ದಂಡನ್ನೂ ನೆರವಿಗೆ ಕೊಟ್ಟು, ಕಾರ್ನ್ಯಾಕ್ ಮುಂತಾದವರನ್ನು ಮುಂಬಯಿಗೆ ಮುಟ್ಟಿಸಿತು. ಆಗ ರಘುನಾಥರಾಯನು ಇಂಗ್ಲಿಷರ ಸದರಿನೊಳಗಿಂದ ಪೇಶ್ವೇಯರ ಅಧೀನಕ್ಕೆ ಬಂದನು. ಹೀಗೆ ಹೊಸ ಒಪ್ಪಂದವಾದರೂ ಕೂಡ ಮುಂಬಯಿಯವರು ಅದರಂತೆ ನಡೆಯಲಿಲ್ಲ; ಅವರು ಕಲ್ಕತ್ತೆಯವರಿಗೆ ಈ ಹೊಸ ಒಪ್ಪಂದದ ಸುದ್ದಿ ಕೂಡ ಮುಟ್ಟಿಸದೆ, ಅವರಿಗೆ ಏನೇನೋ ಹೇಳಿ, ಅವರಿಂದ ಸಹಾಯಕ ದಂಡು ತರಿಸಿರುತ್ತಾರೆ. ಕಲ್ಕತ್ತೆಯವರಾದರೂ ಸಾರಾಸಾರ ವಿಚಾರವನ್ನು ಬಿಟ್ಟು, ಮುಂಬಯಿಯವರ ಬರೆಹದ ಮೇಲೆಯೇ ವಿಶ್ವಾಸವಿಟ್ಟು, ತಮ್ಮ ಕಡೆಯ ಲೆಸ್ಲಿನ್

ಎಂಬ ಸೇನಾನಿಯನ್ನು ಸೈನ್ಯದೊಡನೆ ಕಳಿಸಿ ಕೊಟ್ಟರು. ಹೀಗೆ ಇಲ್ಲಿ ಭೂಮಾರ್ಗದಿಂದ ತಮ್ಮ ದಂಡಿನ ಚಲನವಲನವನ್ನು ಮಾಡುವ ಅಧಿಕಾರವು ಇಂಗ್ಲಿಷರಿಗೆ ಎಂದಿನಿಂದಲೂ ಇರಲಿಲ್ಲ; ಜಲಮಾರ್ಗದಿಂದಲೇ ಅವರು ತಮ್ಮ ದಂಡುಗಳನ್ನು ತರ-ಬರುವ ಪರಿಪಾಠವಿದ್ದಿತು. ಅದ್ದರಿಂದ ನೀವು ನಿಮ್ಮ ದಂಡನ್ನು ಭೂಮಾರ್ಗವಾಗಿ ಸಾಗಿಸುತ್ತಿರುವದೇಕೆಂದು ಪೇಶ್ವೇ ಸರಕಾರವು ಕಲ್ಕತ್ತೆಯವರಿಗೆ ಬರೆದು ಕೇಳಲು, "ಮುಂಬಯಿಯವರು ದಂಡು ಕಳಿಸಲಿಕ್ಕೆ ಕೇಳಿಕೊಂಡರು. ಅದರಿಂದ ಅತ್ತಕಡೆಯ ಬಂದರದ ಬಂದೋಬಸ್ತಿಗೆಂದು ಕಳಿಸಿರುತ್ತೇವೆ." ಎಂಬ ಉತ್ತರವು ಕಲ್ಕತ್ತೆಯಿಂದ ಬಂದಿತು. ಕಲ್ಕತ್ತೆಯಿಂದ ತನ್ನ ದಂಡಿನೊಡನೆ ಹೊರಟ ಲೆಸ್ಲಿನ್ನನು ದಾರಿಯಲ್ಲೇ ಮಡಿದನು. ಕೂಡಲೆ ಕರ್ನಲ್ಲ ಗಾಡರ್ಡನು ಮುಖ್ಯಸೇನಾನಿಯಾಗಿ ಆ ಸೈನ್ಯದೊಡನೆ ಸುರತಿಗೆ ಬಂದನು. ಬಳಿಕ ಅವನು ಪೇಶ್ವೇ ಸರಕಾರಕ್ಕೆ ಬರೆದು ಕಳಿಸಿರುವದೇನಂದರೆ:—"ನಿಮ್ಮ ಕಡೆಯ ಯಾವನೊಬ್ಬ ಸನ್ಮಾನ್ಯನನ್ನು ಒಪ್ಪಂದಕ್ಕಾಗಿ ಕಳಿಸಿ ಕೊಡಬೇಕು. ಸುರತದಲ್ಲಿಯೇ ಮಾರ್ಗಪ್ರತೀಕ್ಷೆ ಮಾಡುತ್ತಿರುವೆನು; ಅಥವಾ ಬೇರೆ ಸ್ಥಳವನ್ನು ಒಪ್ಪಂದಕ್ಕೆಂದು ನಿರ್ಧರಿಸಿ ತಿಳಿಸಿರಿ; ಅಂದರೆ ನಾನೇ ಅಲ್ಲಿಗೆ ಬರುತ್ತೇನೆ." ಈ ಬಗೆಯ ರೀತಿ ಮರ್ಯಾದೆಯ ಪತ್ರ ಬರಲು, ಅದನ್ನು ಮನ್ನಿಸಿ, ನಮ್ಮ ಕಡೆಯ ಮಾನ್ಯರು ಸುರತಿಗೆ ರವಾನಿಸಲ್ಪಟ್ಟರು. ಇಷ್ಟರಲ್ಲಿ ರಘುನಾಥರಾಯನು ಪೇಶ್ವೆಯರ ಸರದಾರರ ದಂಡಿನಲ್ಲಿ ಗೊಂದಲವೆಬ್ಬಿಸಿ, ಮತ್ತೆ ಸುರತಿಗೆ ಓಡಿ ಹೋದನು. ಆಗ ಕರ್ನಲ್ಲ ಗಾಡರ್ಡನ ಮಾತು-ಕಥೆಗಳೂ ದೃಷ್ಟಿಯೂ ಬೇರೆಯಾಯಿತು. ಅದರಿಂದ ಅವನು ಮಾತು ಒಂದು, ಕೃತಿಯು ಮತ್ತೊಂದು ಹೀಗೆ ಮಾಡಲಾರಂಭಿಸಿದನು; ಮತ್ತು ನಮ್ಮ ವಕೀಲರಿಗೆ ಹೇಳಿದನೇನಂದರೆ, "ನಮಗೆ ಕಲ್ಕತ್ತೆಯವರ ಪತ್ರ ಬಂದಿದ್ದು, ನಮ್ಮ-ನಿಮ್ಮಲ್ಲಿ ಇನ್ನು...."

(೧೦) ನಂತರ ಕರ್ನಲ್ಲ ಗಾಡರ್ಡನು ತನ್ನ ದಂಡಿನೊಡನೆ ಸುರತದಿಂದ ಹೊರಟು ಗುಜರಾಥವನ್ನು ಹೊಕ್ಕು ಪೇಶ್ವೆಸರಕಾರದ ಪ್ರಾಂತದಲ್ಲಿ ಗೊಂದಲವನ್ನೆಬ್ಬಿಸಿ ಬಹಳ ಹಾನಿ ಮಾಡಿದನು. ಕೂಡಲೆ ನಮ್ಮ ಸರಕಾರದ ದಂಡುಗಳೂ ಸರದಾರರೂ ಅತ್ತಕಡೆಗೆ ರವಾನಿಸಲ್ಪಟ್ಟರು. ಅಲ್ಲಿ ಸದ್ಯಕ್ಕೆ ಉಭಯ ಪಕ್ಷಗಳಲ್ಲಿ ಯುದ್ಧಕ್ಕೆ ಪ್ರಾರಂಭವಾಗಿದೆ. ಇತ್ತ ಮುಂಬಯಿಯವರು ನಮ್ಮ ಕೊಂಕಣ ಪ್ರಾಂತದಲ್ಲಿ ಮತ್ತೆ ಗೊಂದಲವನ್ನೆಬ್ಬಿಸಿರುವರು. ಅದರಿಂದ ಇತ್ತ ಕಡೆಗೂ ನಮ್ಮ ದಂಡುಗಳು ಕಳಿಸಲ್ಪಟ್ಟಿವೆ. ಹೀಗೆ ಎರಡೂ ಕಡೆಗೆ ಯುದ್ಧಗಳು ನಡೆದಿರುತ್ತವೆ. ಪೇಶ್ವೆ ಸರಕಾರವು ಯಾವ ಬಾಬಿನಲ್ಲಿಯೂ ನಮ್ಮ-ನಿಮ್ಮ ಮೈತ್ರಿಯ ಕರಾರಿನ ವಿರುದ್ಧವಾಗಿ ನಡೆದಿಲ್ಲ; ಆದರೆ ಮುಂಬಯಿ ಹಾಗು ಕಲ್ಕತ್ತೆಯವರು ಮಾತ್ರ ಮಾತಿನಲ್ಲಿ ಒಂದು, ಕೃತಿಯಲ್ಲಿ ಬೇರೊಂದು ಹೀಗೆ ನಡೆಯುತ್ತಿರುವರು. ಮುಂಬಯಿಯವರು ಅನ್ನುವದೇನಂದರೆ:—ತಮಗೆ ಕಲಕತ್ತೆಯವರ ಅಂಬೋಣವು ಮಾನ್ಯವಿಲ್ಲೆಂದು, ಕಲ್ಕತ್ತೆಯವರು ಅನ್ನುವದೇನಂದರೆ, ಮುಂಬಯಿಯವರು ತಪ್ಪಿ ನಡೆದಿರುವರು;

ಆದರಿಂದ ಅವರು ಮಾಡಿಕೊಂಡ ಒಪ್ಪಂದವು ನಮಗೆ ಮಾನ್ಯವಿಲ್ಲ. ಹೀಗೆ ಅವ ರೀರ್ವರೂ ಒಬ್ಬರ ಮೇಲೊಬ್ಬರು ಆ ದೋಷವನ್ನು ಹೊರಿಸುತ್ತಾರೆ; ಆದರೆ ಕಲ್ಕತ್ತೆ ಯುವರೂ ಮುಂಬಯಿಯವರೂ ಒಳಗಿಂದೊಳಗೆ ಒಂದಾಗಿದ್ದು, ತೋರಿಕೆಯಲ್ಲಿ ಮಾತ್ರ ಇಬ್ಬಣವನ್ನು ತೋರಿಸುತ್ತಿರುತ್ತಾರೆ. ಆದರಿಂದ ಇವರಾರ ಮಾತನ್ನೂ ನಂಬಲಿಕ್ಕೆ ಸಾಧ್ಯವಿಲ್ಲದಾಗಿದೆ. ರಾಜಕಾರಣದಲ್ಲಿ ಎಲ್ಲಕ್ಕೂ ಮಹತ್ವದ ಹಾಗು ಮುಖ್ಯ ವಿಷಯವೆಂದರೆ, ನುಡಿಯಂತೆ ನಡೆಯುವದು; ಆದರೆ ಇತ್ತ ಕಡೆಯ ಇಂ- ಗ್ಲಿಷರಲ್ಲಿ ನುಡಿಗೂ ನಡೆಗೂ ಘಾರಖತ್ತಾದಂತೆ ಕಾಣುತ್ತದೆ. ಇವರ ಈ ಲಜ್ಜಾ ಸ್ಪದ ವ್ಯವಹಾರವನ್ನು ನೋಡಿ, ನಮಗೆ ಬಹು ವಿಷಾದವೆನಿಸುತ್ತದೆ. ಇಲ್ಲಿ ನಡೆದ ಸಂಗತಿಗಳೆಲ್ಲ ಮೆ॥ರವರಿಗೆ ಸಾದ್ಯಂತವಾಗಿ ತಿಳಿಯಲೆಂದು ಇಷ್ಟು ವಿಸ್ತಾರವಾಗಿ ತಪಶೀಲು ಕೊಟ್ಟಿದೆ. ಇನ್ನು ಮಾಡತಕ್ಕ ಬಂದೋಬಸ್ತನ್ನು ಮೆ॥ ರವರೇ ಮಾಡ ತಕ್ಕವರು.

(೧೧) ಕಲ್ಕತ್ತೆಯವರು ತಮ್ಮ ದಂಡನ್ನು ಮುಂಬಯಿಗೆ ರವಾನಿಸುವಾಗ ನಮಗೆ ತಿಳಿಸಿದರೇನಂದರೆ:-“ಫ್ರೆಂಚರ ಬಂದೋಬಸ್ತಿಗಾಗಿ ನಾವು ನಮ್ಮ ದಂಡನ್ನು ಕಳಿಸುತ್ತಿರುವೆವು; ಪರವಾನಿಗೆಯಿರಬೇಕು.” ನಾವು ಅದಕ್ಕೆ:—“ನಿಮ್ಮ ದಂಡನ್ನು ನಮ್ಮ ಪೇಶ್ವೆಸರಕಾರದ ನಾಡಿನಲ್ಲಿ ತರ-ಬರುವ ಕರಾರಿರುವದಿಲ್ಲ.” ಎಂದು ಉತ್ತರ ಕಳಿಸಿದೆವು. ಅದಕ್ಕೆ ಅವರು:—“ನಾವು ನಮ್ಮ ದಂಡನ್ನು ಹಿಂದಕ್ಕೆ ತಕ್ಕೊಳ್ಳಲಾ ರೆವು. ಮುಂಬಯಿಯವರು ತಾವೇ ಬಾದಶಹರಿಗೂ ಕಂಪನಿಗೂ ಮುಖತ್ಯಾರರೆಂದು ಅಂದುಕೊಂಡು, ಕಾರ್ನೋಸ್ಯಾಕ್ ಮುಂತಾದವರು ನಿಮ್ಮೊಡನೆ ಮಾಡಿಕೊಂಡ ಹೊಸ ಒಪ್ಪಂದದ ಮೇರೆಗೆ ಅವರು ನಮ್ಮ ಗಾಡರ್ಡನಿಗೆ ಕಳಿಸಿದ 'ನೀವು ಮರಳಿ ಕಲ್ಕತ್ತೆಗೆ ಹೋಗಿರೆ'ಂಬ ಪತ್ರವೂ, ನಿಮ್ಮ ಪೇಶ್ವೆಸರಕಾರದಿಂದ ಅವನಿಗೆ ಬಂದ ಅದೇ ಅರ್ಥದ ಪತ್ರವೂ ನಮಗೆ ಮಾನ್ಯವಿಲ್ಲ. ನಾವು ಕಲಕತ್ತೆಯ ವರಿಷ್ಠ ಕೌನ್ಸಿಲ್ಲಿ ನವರು ಮುಂಬಯಿಯವರಿಗೆ ಅಧೀನರಲ್ಲ” ಎಂದರು. ಆಗ ನಾವು ಆ ಗಾಡರ್ಡ ನನ್ನು ನಡುವೇ ನಮ್ಮ ದಂಡಿನೊಡನೆ ಅಡ್ಡಗಟ್ಟಬಹುದಾಗಿತ್ತು; ಆದರೆ ನಾವು ನಮ್ಮ ನಿಮ್ಮಗಳ ಮೈತ್ರಿಯ ಕಡೆಗೆ ಲಕ್ಷ್ಯಗೊಟ್ಟು ಹಾಗೆ ಮಾಡಲಿಲ್ಲ. ಆದರಿಂದ ಅವನು ನೆಟ್ಟಗೆ ಸುರತಿಗೆ ಹೋದನು.

(೧೨) ಮೇಲೆ ಬರೆದ ಕಲಮುಗಳಲ್ಲಿಯ ಸಂಗತಿಯು ಸಾರಾಂಶಭೂತವಾಗಿ ಕೊಟ್ಟಿದೆ. ಆದರಿಂದ ನಿಮ್ಮ ಬಂದರದ ಇಂಗ್ಲಿಷರ ರೀತಿ-ನಡಾವಳಿಗಳು ಮೆ॥ರವರಿಗೆ ಚನ್ನಾಗಿ ತಿಳಿಯಬಹುದು. ಬಂಗಾಲ ದೇಶವು ಒಂಬತ್ತುಕೋಟಿ ವಸೂಲಿಯದು. ಅದು ಕಲ್ಕತ್ತೆಯವರ ವಶದಲ್ಲಿದೆ. ಅತ್ತ ನಮ್ಮ ಪೇಶ್ವೆ ಸರಕಾರದ ದಂಡು ಕಳಿಸಿ, ಲೂಟಿಯನ್ನೂ ಸುಲಿಗೆಯನ್ನೂ ನಡೆಸಿದರೆ, ಕಂಪನಿಯವರಿಗೆ ಅಲ್ಲಿಯ ವಸೂ ಲಿಯು ಹೆಚ್ಚಾಗಿ ಬರಲಾರದು; ಅದು ನಮಗೆ ಅಷ್ಟೊಂದು ಕಠಿಣ ಕೆಲಸವೂ ಆಗಿಲ್ಲ; ಆದರೆ ನಮ್ಮ-ನಿಮ್ಮಗಳಲ್ಲಿಯ ಮೈತ್ರಿಯನ್ನು ಮನದಂದು, ನಾವು ಇದು

ವರೆಗೂ ಆ ಉದ್ಯೋಗಕ್ಕೆ ಹತ್ತಿರುವದಿಲ್ಲ. ನಮ್ಮ ಕಡೆಯ ಭೋಸಲೆ ಮುಂತಾದವರ ದಂಡುಗಳಿಗೆ ಬಂಗಾಲದಲ್ಲಿ ಕಾಲಿಡಕೂಡದೆಂದು ಇದುವರೆಗೆ ಪೇಶ್ವೆಸರಕಾರದವರು ಬಜಾಯಿಸುತ್ತ ಬಂದಿರುತ್ತಾರೆ. ಇಂಗ್ಲಿಷರು ನಮ್ಮನ್ನು ಎಷ್ಟೇ ರೀತಿಯಿಂದ ಕಾಡಿ-ಕಾಡಿ ಹಾನಿಗೆ ಗುರಿಮಾಡಿದರೂ, ನಾವು ಅದನ್ನೆಲ್ಲ ಸಹಿಸಿಕೊಂಡು ಸುಮ್ಮನಿರುತ್ತೇವೆ. ನಿಮ್ಮ ಎಲ್ಲ ಬಂದರದವರೂ ಮೆ॥ರವರಿಗೆ ನಮ್ಮ ವಿಷಯವಾಗಿ ಯಾವ ಯಾವ ಖೊಟ್ಟಿವರ್ತಮಾನವನ್ನು ತಿಳಿಸುತ್ತಿರುವರೋ ತಿಳಿಸಲಿ. ಮೆ॥ರವರು ಅವರ ನಡೆ-ನುಡಿಗಳ ಕಡೆಗೆ ಸೂಕ್ಷ್ಮರೀತಿಯಿಂದ ಪರಿಶೀಲಿಸಿದರೆ, ನಿಜಸ್ಥಿತಿಯು ಕೂಡಲೆ ಗೊತ್ತಾಗದೆ ಇರದು. ಮೆ॥ರವರು ಸೂಜ್ಞರೂ, ಸತ್ಯವಚನರೂ, ಸೂಕ್ಷ್ಮನಿರೀಕ್ಷಕರೂ, ನ್ಯಾಯರೀತಿಯಂತೆ ನಡೆಯುವವರೂ, ದೃಢನಿಶ್ಚಯದವರೂ ಇರುವರೆಂಬದಕ್ಕೆ ಇಡಿ ಹಿಂದುಸ್ತಾನವೇ ಹೊಗಳುತ್ತದೆ. ಮೆ॥ರವರು ಇದನ್ನೆಲ್ಲ ಪರ್ಯಾಲೋಚಿಸಿ, ಬಹು ದೂರದವರೆಗೆ ನಜರಿಟ್ಟು, ಕಲ್ಕತ್ತೆ ಹಾಗು ಮುಂಬಯಿಯವರಿಗೆ ಚೆನ್ನಾಗಿ ಬಜಾಯಿಸಿ ತಿಳಿಸಬೇಕೇನಂದರೆ:-"ನೀವು ಮೂಲ ಪೇಶ್ವೆಯವರೊಡನೆ ಆದ ಮೈತ್ರಿಯ ಕರಾರಿನಂತೆ ತಪ್ಪದೆ ನಡೆಯಬೇಕು; ಇಲ್ಲದ ಗೊಂದಲಕ್ಕೂ ಹವ್ಯಾಸಕ್ಕೂ ಹೋಗಬಾರದು, ಎಂದು ಸಕ್ತ ತಾಕೀದು ಮಾಡಬೇಕು." ಹಿಂದುಸ್ತಾನದೊಳಗಿನ ಬಂದರದ ಅಧಿಕಾರಿಗಳು ಮೆ॥ರವರ ಆಧೀನದಲ್ಲಿರದಿದ್ದರೆ ಅಥವಾ ತಮ್ಮ ಮತದಂತೆ ನಡೆಯುತ್ತಿರದಿದ್ದರೆ, ತಾವು ಮಾಡುವದಾದರೂ ಏನು? ಯಾವದಕ್ಕೂ ಉತ್ತರವನ್ನು ತೀವ್ರವಾಗಿ ಕಳಿಸತಕ್ಕದ್ದು; ಅಂದರೆ ಅದನ್ನು ನೋಡಿಕೊಂಡು, ಪೇಶ್ವೆಸರಕಾರವು ತನ್ನ ಬಂದೋಬಸ್ತಿಗೆ ಹತ್ತಲಿಕ್ಕೆ ಅನುಕೂಲವಾಗುತ್ತದೆ. ಅಧಿಕಾರ-ದೌಲತ್ತುಗಳು ಆ ಜಗನ್ನಿಯಾಮಕನ ಅನುಗ್ರಹದಿಂದಲೇ ಪ್ರಾಪ್ತವಾಗತಕ್ಕವುಗಳು. ಯಾವ ಕಡೆಗೆ ನಿಜವಾದ ನ್ಯಾಯವೂ ನೀತಿಯೂ ಇರುವದೋ ಅತ್ತೇ ದೇವರಿರುತ್ತಾನೆಂಬದು ಜಗತ್ತಿನೊಳಗಿನ ಎಲ್ಲ ಧರ್ಮಗಳಲ್ಲಿಯೂ ಸುಪ್ರಸಿದ್ಧವೂ ಜಾಹೀರವೂ ಆದ ಸಂಗತಿಯೇ ಇದೆ. ಇನ್ನು ಮುಂದೆ ನಡೆಯತಕ್ಕ ಸಂಗತಿಗಳು ಕಾಲಕಾಲಕ್ಕೆ ತಿಳಿದೇ ತಿಳಿಯುವವು. ಮೆ॥ರವರ ಉತ್ತರದ ನಿರೀಕ್ಷಣೆಯಲ್ಲಿರುವೆವು."

---

೧೧ನೆಯ ಪರಿಚ್ಛೇದ.

## ಸಾಲ್ಬಾಯಿಯ ಒಪ್ಪಂದ

ವಡಗಾಂವದ ಆ ಅಪಮಾನಾಸ್ಪದವಾದ ಒಪ್ಪಂದವು ಮುಂಬಯಿಯ ಇಂಗ್ಲಿಷರಿಗೆ ಸ್ವಾಭಾವಿಕವಾಗಿಯೇ ಸೇರಲಿಲ್ಲ; ಮತ್ತು ಕಲಕತ್ತೆಯ ಇಂಗ್ಲಿಷರಾದರೂ ಅದೇ ಮತದವರಾಗಿದ್ದರು. ಆದರಿಂದ ಕೂಡಲೆ ಕರ್ನಲ್ಲ ಗಾಡರ್ಡನಿಗೆ ದಂಡಿನೊಡನೆ ಪುಣೆಯ ಮೇಲೆ ಸಾಗಿ ಹೋಗಲಿಕ್ಕೆ ಆಜ್ಞೆ ಮಾಡಿದರು; ಮತ್ತು ಮೊದ

ಲಿನ ಪುರಂದರದ ಒಪ್ಪಂದವು ಮತ್ತೆ ಕಾಯಮವಾಗಬೇಕು; ಪೇಶ್ವೆಯರು ಫ್ರೆಂಚ ರಿಗೆ ಯಾವ ಬಗೆಯಿಂದಲೂ ಆಧಾರ-ಆಶ್ರಯಗಳನ್ನು ಕೊಡಬಾರದು. ಈ ಕರಾರು ಗಳು ಪೇಶ್ವೆಯರ ಕಾರಭಾರಿಗಳಿಗೆ ಸಮ್ಮತವಿದ್ದರೆ, ಅವರೊಡನೆ ಹೊಸ ಒಡಂಬಡಿಕೆ ಯನ್ನು ಮಾಡಿಕೊಳ್ಳತಕ್ಕದ್ದು; ಇಲ್ಲದಿದ್ದರೆ ಯುದ್ಧ ಮಾಡತಕ್ಕದ್ದು; ಎಂಬ ಬಗ್ಗೆ ಆ ಗಾಡರ್ಡನಿಗೆ ಕಲಕತ್ತೆಯ ಕೌನ್ಸಿಲ್ಲಿನವರು ಸಂಪೂರ್ಣ ಅಧಿಕಾರ ಕೊಟ್ಟು ಕಳಿಸಿದ್ದರು. ಪೇಶ್ವೆಯ ಕಾರಭಾರಿಗಳು ವಡಗಾಂವದ ಒಪ್ಪಂದವನ್ನು ರದ್ದುಪಡಿಸ ಲಿಕ್ಕೆ ಒಪ್ಪಲಿಲ್ಲ. ಕರ್ನಲ್ಲ ಗಾಡರ್ಡನು ಬುಂದೇಲಖಂಡದೊಳಗಿಂದ ಹಾಯ್ದು ಮೊದಲು ಸುರತಿಗೆ ಬಂದನು. ಅಲ್ಲಿಂದ ಅವನು ಡಭೋಯಿಗೆ ಬಂದು, ಗಾಯಕ ವಾಡನೊಡನೆ ಗುಜರಾಥದ ಪಾಲು ಮಾಡುವ ವಿಷಯದ ಒಪ್ಪಂದವನ್ನು ಗೊತ್ತು ಮಾಡಿ, ಅಹಮ್ಮದಾಬಾದದ ಮೇಲೆ ಸಾಗಿಬಂದನು. ಅಹಮ್ಮದಾಬಾದವನ್ನು ಪೇಶ್ವೆಯರ ಕೈಯಿಂದ ಕಸಕೊಂಡು ಅದನ್ನು ಅವನು ಆ ಹೊಸ ಒಪ್ಪಂದದಂತೆ ಫತ್ತೇಸಿಂಗನಿಗೆ ಒಪ್ಪಿಸಬೇಕಾಗಿತ್ತು. ಆದರಿಂದ ಅವನು ಅಹಮ್ಮದಾಬಾದಿಗೆ ಮುತ್ತಿಗೆ ಹಾಕಿ ಹಾಗು ದಾಳಿ ಮಾಡಿ, ಅದನ್ನು ಹಸ್ತಗತ ಮಾಡಿಕೊಂಡನು.

ಇಷ್ಟರಲ್ಲಿ ಸಿಂದೆ-ಹೋಳಕರರು ೪೦ ಸಾವಿರ ದಂಡಿನೊಡನೆ ತನ್ನ ಮೇಲೆ ಸಾಗಿ ಬರುತ್ತಿರುವರೆಂಬ ಸುದ್ದಿ ಹತ್ತಲು, ಅವನು ಕೂಡಲೆ ಬಡೋದೆಯ ಮೇಲೆ ಸಾಗಿ ಹೋದನು. ಗಾಡರ್ಡನು ಬರುತ್ತಿರುವನೆಂಬದು ತಿಳಿದ ಕೂಡಲೆ, ಸಿಂದೆಯು ತನ್ನಲ್ಲಿ ವಡಗಾವದಲ್ಲಿ ಅಡವಾಗಿರಿಸಿದ್ದ ಇಂಗ್ಲಿಷ ಅಧಿಕಾರಿಗಳನ್ನು ತಮ್ಮ ವಕೀಲ ನೊಡನೆ ಅವನ ಕಡೆಗೆ ಕಳಿಸಿ, "ಈ ಮೊದಲು ಗೊತ್ತಾದ ಮೇರೆಗೆ ರಾಘೋಬನು ಪೇಶ್ವೆಪಟ್ಟದ ಮೇಲಿನ ತನ್ನ ಹಕ್ಕನ್ನು ಬಿಟ್ಟುಕೊಡಬೇಕು; ಆದರೂ ಆತನ ಮಗ ನಾದ ಬಾಜೀರಾಯನನ್ನು ಪೇಶ್ವೆಯರ ದಿವಾಣನೆಂದು ನೇಮಿಸಿ, ಎಲ್ಲ ಕಾರಭಾರ ವನ್ನು ತಮ್ಮ ಸ್ವಾಧೀನ ಪಡಿಸಲಿಕ್ಕೆ ಸಮ್ಮತಿಸಿದರೆ, ತಾವು ವಡಗಾವದ ಒಪ್ಪಂದದಲ್ಲಿ ಹೆಚ್ಚು ಕಡಿಮೆ ಮಾಡುವ ಬಗ್ಗೆ ವಿಚಾರ ಮಾಡುವೆವು." ಎಂದು ಹೇಳಿ ಕಳಿಸಿದನು; ಆದರೆ ಗಾಡರ್ಡನು ಅದಕ್ಕೆ ಸಮ್ಮತಿಸದಾಗಲು, ಉಭಯ ಪಕ್ಷದವರೂ ಯುದ್ಧಕ್ಕೆ ತತ್ಪರರಾದರು. ಗಾಡರ್ಡನು ಆಗ ಸಿಂದೆ-ಹೋಳಕರರ ಮೇಲೆ ಸಾಗಿ ಹೋಗದೆ, ಮೊದಲು ವಸಯಿಯ ಬಂದೋಬಸ್ತನ್ನು ಚನ್ನಾಗಿ ಮಾಡುವದೇ ಅವಶ್ಯಕವೆಂದು ಮುಂಬಯಿಯವರ ಅಭಿಪ್ರಾಯವಾಗಿತ್ತು; ಆದರೆ ಗಾಡರ್ಡನು ಅವರ ಆ ಸಲಹೆ ಯನ್ನು ಕೇಳದೆ, ಕರ್ನಲ್ಲ ಹಾರ್ಟಲೆ ಎಂಬವನನ್ನು ಅವನ ಕೈಕೆಳಗಿನ ಮುಂಬ ಯಿಯ ಸೈನ್ಯದೊಡನೆ ವಸಯಿಗೆ ಕಳಿಸಿದನು; ಮತ್ತು ಮಳೆಗಾಲವು ಸಮೀಪಿಸಿದ್ದ ರಿಂದ, ಸ್ವಂತದ ದಂಡಿನ ವ್ಯವಸ್ಥೆಯನ್ನು ಮಾಡಿ, ತಾನು ತನ್ನ ಛಾವಣಿಯಲ್ಲಿರ ಹತ್ತಿದನು. ಮಳೆಗಾಲ ಸಮೀಪಿಸಿದ್ದರಿಂದ ದಂಡಿನ ಚಲನವಲನವು ವಿಶೇಷವಾಗಿ ಆಗಲಿಕ್ಕಿಲ್ಲೆಂದು ತಿಳಿದು, ಸಿಂದೆ-ಹೋಳಕರರು ತಂತಮ್ಮ ಪ್ರಾಂತಗಳಿಗೆ ಹೊರಟು ಹೋದರು. ಇದೇ ಕಾಲಕ್ಕೆ ಹೈದರ ಅಲ್ಲಿಯು ತನ್ನ ೬೦ ಸಾವಿರ ದಂಡಿನೊಡನೆ

ಕರ್ನಾಟಕದ ಮೇಲೆ ದಾಳಿಯನ್ನಿಕ್ಕಿರುವನೆಂಬ ವರ್ತಮಾನ ಬಂದಿತು; ಅದರಿಂದ ಪುಣೆಯ ಕಡೆಯ ಕೆಲಸವನ್ನು ತೀವ್ರ ಮುಗಿಸಬೇಕೆಂದು ಗಾಡರ್ಡನಿಗೆ ಕಲಕತ್ತೆಯಿಂದ ಬರೆದು ಬಂತು. ಅದೇ ವರ್ಷದ ಡಿಸೆಂಬರದಲ್ಲಿ ಅವನು ವಸಯಿಯನ್ನು ತಕ್ಕೊಂಡನು; ಹಾಗು ಅವೇ ಹುರುಪಿನಿಂದ ಪುಣೆಯ ಮೇಲೆ ಸಾಗಿ ಹೋಗಲಿಕ್ಕೆಂದು ಆತನು ೧೭೮೧ ನೇ ಫೆಬ್ರುವಾರಿಯಲ್ಲಿ ಬೋರಘಟ್ಟಕ್ಕೆ ಬಂದು ತಲುಪಿದನು; ಆದರೆ ತಾನು ಹೀಗೆಯೇ ಮುಂದೆ ಸಾಗಿ ಹೋದರೆ ಧಕ್ಕೆ ತಿನ್ನಬೇಕಾಗುವದೆಂಬದು ಅವನಿಗೆ ಹೊಳೆಯಿತು.

ಇತ್ತ ಮುಂಬಯಿಯವರಾದರೂ ನೀವು ಕಲ್ಯಾಣಕ್ಕೆ ಹಿಂತಿರುಗಿ, ಮಳೆಗಾಲದ ದಂಡಿನ ಛಾವಣಿಯನ್ನು ಖುದ್ದ ಮುಂಬಯಿಯಲ್ಲೇ ಮಾಡಬೇಕೆಂದು ಆತನಿಗೆ ಆಗ್ರಹಪೂರ್ವಕವಾಗಿ ಸೂಚಿಸಿದರು; ಆದ್ದರಿಂದ ಆತನು ತನ್ನ ದಂಡಿನ ಮುಖವನ್ನು ತಿರುಗಿಸಿ ಕಲ್ಯಾಣದ ದಾರಿಯನ್ನು ಹಿಡಿದನು; ಆದರೆ ದಾರಿಯಲ್ಲಿ ಮರಾಟರ ಸೈನ್ಯವು ಅವನನ್ನು ಮುತ್ತಿ ಹಣ್ಣು-ಹಣ್ಣು ಮಾಡಿತು. ಆ ಮುತ್ತಿಗೆಯಲ್ಲಿ ಹರಿಪಂತನೂ ಪರಶುರಾಮಭಾವುಪೂ ಪ್ರಮುಖರಾಗಿದ್ದರು. ಈ ಪ್ರಕಾರವಾಗಿ ಆಗ ಪುಣೆಯ ಮೇಲಿನ ಇಂಗ್ಲಿಷರ ಸ್ವಾರಿಯ ಸಂಕಟವು ನಿವಾರಣವಾಯಿತು. ಎದುರಿಗೆ ಮರಾಟರ ದೊಡ್ಡ ಸೈನ್ಯವಿದ್ದರೂ, ಗಾಡರ್ಡನು ಘಟ್ಟದ ವರೆಗೆ ಸಾಗಿಬಂದನೆಂಬದನ್ನು ಕೇಳಿ, ಪುಣೇ ಪಟ್ಟಣದೊಳಗಿನ ಜನರ ಹಾಹಾರಿತ್ತು! ಇಂಗ್ಲಿಷರು ಬಂದು ಇನ್ನು ಪುಣೆಯನ್ನು ಖಂಡಿತವಾಗಿಯೇ ಮುತ್ತುವರೆಂದು ತಿಳಿದು, ಪುಣೆಯ ನಾಗರಿಕರು ಓಡಿ ಹೋಗಹತ್ತಿದ್ದರು! ಅವರೆ ಕಡೆಗೆ ಹಾಗೆ ಆಗದೆ ಮೇಲೆ ವಿವರಿಸಿದಂತೆ ಗಾಡರ್ಡನು ಮರಳಿ ಹೋಗಬೇಕಾಯಿತು. ತಾ|| ೧೬, ೨೬, ೩೯ನೇ ಮಾರ್ಚ ಹಾಗು ೨೦ ಮತ್ತು ೭ನೇ ಎಪ್ರೀಲ ಈ ದಿವಸಗಳಲ್ಲಿ ಉಭಯ ಪಕ್ಷಗಳಲ್ಲಿ ದೊಡ್ಡ ಕಾಳಗಗಳಾಗಿ, ಇಂಗ್ಲಿಷರ ದಂಡು ಹೆಚ್ಚಾಗಿ ನಾಶಹೊಂದಿತು; ಮುಂಬಯಿಯಿಂದ ಧನ-ಧಾನ್ಯಗಳು ಬರುವದು ಬಹು ಕಠಿಣವಾಯಿತು; ಆದರೂ ಗಾಡರ್ಡನು ಬಹಳ ಕುತ್ತುಗಳನ್ನು ದಾಟಿ ಕಡೆಗೆ ಪನವೇಲಕ್ಕೆ ಹೋಗಿ ತಲುಪಿದನು.

ಇತ್ತ ಇದೇ ಕಾಲಕ್ಕೆ ಉತ್ತರಹಿಂದುಸ್ತಾನದಲ್ಲಿ ಇಂಗ್ಲಿಷರಿಗೂ ಸಿಂದೆಗೂ ಯುದ್ಧ ನಡೆದಿತ್ತು. ಮಾರ್ಚ ತಿಂಗಳಲ್ಲಿ ಕರ್ನಲ್ಲ ಕ್ಯಾಮಕ್ ಮತ್ತು ಕರ್ನಲ್ಲ ಮೂರರೊಡನೆ ಸಿಂದೇನ ದಂಡಿನ ಎಷ್ಟೋ ಸಣ್ಣ-ಪುಟ್ಟ ಕಾಳಗಗಳಾದವು ಆ ಕಾಳಗಗಳಲ್ಲಿ ಇಂಗ್ಲಿಷರೇ ಅಲ್ಪ ಸ್ವಲ್ಪ ವಿಜಯಿಗಳಾಗಿದ್ದರು; ಆದರೂ ಸಿಂದೆಯು ಇನ್ನೂ ಅವರಿಗೆದುರಾಗಿ ತನ್ನ ಛಾವಣಿಯನ್ನಿಟ್ಟುಕೊಂಡು ನಿಂತೇ ಇದ್ದನು; ಆದರೆ ಇತ್ತ ಹೈದರನು ತಲೆಯೆತ್ತಿದ್ದರಿಂದ, ಇಂಗ್ಲಿ-ಮರಾಟರ ಯುದ್ಧವು ಮೆಲ್ಲಮೆಲ್ಲನೆ ಶಿಥಿಲವಾಗಹತ್ತಿತು. ಇಡಿ ಹಿಂದುಸ್ತಾನದ ತುಂಬ ಇಂಗ್ಲಿಷರೊಡನೆ ಒಮ್ಮೆಲೆ ಯುದ್ಧಹೂಡಬೇಕೆಂದು ನಿಜಾಮಅಲ್ಲಿ, ಭೋಸಲೆ, ಹೈದರಲ್ಲಿ ಮತ್ತು ಮರಾಟರು ಇವರೆಲ್ಲರಲ್ಲಿಯೂ ಗೊತ್ತಾಗಿದ್ದರೂ, ನಿಜಾಮನು ಏನೂ ಗೊಂದಲ

ವೆಚ್ಚಿಸದೆ ಸುಮ್ಮನಿದ್ದನು. ಭೋಸಲೆಯು ಬಂಗಾಲದ ಮೇಲೆ ಸ್ವಾರಿಮಾಡುವ ಮಿಷ ಮಾಡಿ, ಕಡೆಗೆ ತನ್ನಷ್ಟಕ್ಕೆ ತಾನು ಸ್ವಾರ್ಥಸಾಧಕತೆಯ ಒಪ್ಪಂದವನ್ನು ಇಂಗ್ಲಿಷ ರೊಡನೆ ಮಾಡಿಕೊಂಡನು. ಇನ್ನುಳಿದ ಮರಾಟರೂ ಹೈದರನೂ ಮಾತ್ರ ಇಂಗ್ಲಿಷ ರೊಡನೆ ಕಾದುತ್ತ ನಿಂತರು. ಇವರಲ್ಲಿ ಮರಾಟರೊಡನೆ ಕಾದಿ ಸೋತು, ರಾಘೋ ಬನ ಪಕ್ಷಬಿಟ್ಟು ಒಡಂಬಡಿಕೆಮಾಡಿಕೊಳ್ಳಬೇಕಾದ್ದರಿಂದ, ಮರಾಟರಿಗೂ ಇಂಗ್ಲಿಷ ರಿಗೂ ಇದ್ದ ವೈರವು ಅರ್ಧಮರ್ಧ ಕಡಿಮೆಯಾಗಿತ್ತು; ಆದರೆ ರಾಘೋಬನು ಉತ್ತರ ಹಿಂದುಸ್ತಾನಕ್ಕೆ ತಿರುಗಿ ಹೋಗುವಾಗ ೧೭೭೯ರ ಜೂನ ತಿಂಗಳಲ್ಲಿ ಸಿಂದೆಯ ಸರ ದಾರನಾದ ಹರಿ ಬಾಬಾಜಿಯನ್ನು ಕೊಂದು, ಅವನ ಛಾವಣಿಯನ್ನು ಸುಲಿದು, ಸುರತಿಗೆ ಹೋಗಿ ಗಾಡರ್ಡನನ್ನು ಕೂಡಿಕೊಂಡನು; ಮತ್ತು ಇಂಗ್ಲಿಷರು ಅವನಿಗೆ ತಿಂಗಳಿಗೆ ೫೦೦೦ ರೂ ಗಳ ನೇಮಣೂಕಿ ಮಾಡಿಕೊಟ್ಟು ಅವನನ್ನು ತಮ್ಮ ಆಶ್ರಯದಲ್ಲಿಟ್ಟುಕೊಂಡರು ಇದರಿಂದಲೇ ಗಾಡರ್ಡನು ಪುಣೆಯ ಕಾರಭಾರಿಗಳ ಕೂಡ ನಡೆದ ಒಪ್ಪಂದದ ಮಾತುಗಳನ್ನು ಅಲ್ಲಗಳೆದನು. ಸಾಷ್ಟಿಯನ್ನೂ ರಾಘೋಬ ನನ್ನೂ ಮೊದಲು ನಮ್ಮ ಸ್ವಾಧೀನಪಡಿಸಿರಿ; ಅಂದರೆ ಆ ಮೇಲೆ ಒಪ್ಪಂದದ ಮಾತು ಮಾತಾಡೋಣ, ಎಂದು ಅವನು ಉತ್ತರವಿತ್ತದ್ದರಿಂದ, ಮತ್ತೆ ಮರಾಟರಿಗೂ ಇಂಗ್ಲಿಷರಿಗೂ ಯುದ್ಧವು ಪ್ರಾರಂಭವಾಯಿತು; ಆದರೆ ಮೇಲೆ ವಿವರಿಸಿದಂತೆ ಯಾವ ಪಕ್ಷಕ್ಕೂ ನಿರ್ಣಯಾತ್ಮಕವಾದ ಯಶವು ಪ್ರಾಪ್ತವಾಗದೆ, ದಿನದಿನಕ್ಕೆ ಉಭಯತ ರಲ್ಲೂ ಸಡಿಲು ಹುಟ್ಟಿ, ಹಲವು ಕಿಸಳುಗಳುಂಟಾಗಹತ್ತಿದವು ಇಂಥ ಕಾಲಕ್ಕೆ ಹೈದರ ನೊಬ್ಬನೇ ದಾಳಿಯಿಕ್ಕಿ, ಇಂಗ್ಲಿಷರನ್ನು ಸೋಲಿಸಿ, ಅರ್ಕಾಟನ್ನು ತೆಗೆದುಕೊಂಡ ನಿಷ್ಟೇ ಅಲ್ಲ; "ಮದ್ರಾಸದ ಇಂಗ್ಲಿಷರ ಅಂಜಿಕೆಯುಳಿಯದ್ದರಿಂದ, ನಾನು ಇನ್ನು ನನ್ನ ದೊಡ್ಡ ದಂಡಿನೊಡನೆ ಮುಂಬಯಿಯ ಇಂಗ್ಲಿಷರ ವಿರುದ್ಧವಾಗಿ ಕಾದಲಿಕ್ಕೆ ನಿಮಗೆ ಸಹಾಯ ಮಾಡಲಿಕ್ಕೆ ಬರತಕ್ಕವನಿರುತ್ತೇನೆ''ಂದು ಅವನು ಪುಣೆಯ ಕಾರಭಾರಿ ಗಳಿಗೆ ಹೇಳಿಕಳಿಸಿದನು!

ಇದನ್ನೆಲ್ಲ ಪರ್ಯಾಲೋಚಿಸಿ, ಮರಾಟರ ಕೂಡ ಕಾದುವದನ್ನು ನಿಲ್ಲಿಸಿ, ರಾಘೋ ಬನ ಪಕ್ಷವನ್ನು ಬಿಟ್ಟುಕೊಟ್ಟರೂ ಚಿಂತೆಯಿಲ್ಲ; ಆದರೆ ಈಗ ಹೈದರನನ್ನು ತಲೆ ಭಾರವಾಗಗೊಡಕೂಡದೆಂದು ಯೋಚಿಸಿ, ಕಲ್ಕತ್ತೆ-ಮದ್ರಾಸ-ಮುಂಬಯಿ ಹೀಗೆ ಮೂರೂ ಕಡೆಯ ಇಂಗ್ಲಿಷರು ಪುಣೆಯ ಪೇಶ್ವೆಯರ ಕಡೆಗೆ ಒಳ್ಳೇ ಆಸ್ಥೆಯಿಂದ ಒಪ್ಪಂದದ ಸಂಧಾನವನ್ನು ನಡೆಸಿದರು. ನಾಗಪುರದ ಭೋಸಲೆಯೂ ಇಂಗ್ಲಿಷ ರೊಡನೆ ಬೆರೆತು, ಅವರ ಪರಿಯಿಂದ ಮಧ್ಯಸ್ಥಿಕೆ ನಡೆಸಿದನು. ಕಾರಭಾರಿಗಳೊಡನೆ ಒಡಂಬಡಿಕೆ ಮಾಡಿಕೊಳ್ಳುವ ಕೆಲಸಕ್ಕೆ ಮಹದಾಜಿ ಸಿಂದೆಯಂಥ ಬೇರೆ ದೊಡ್ಡ ಮನುಷ್ಯನಿಲ್ಲವೆಂಬದು ಅಂದಿನವರೆಗಿನ ಅನುಭವದಿಂದ ಇಂಗ್ಲಿಷರಿಗೆ ಖಾತ್ರಿ ಯೇ ಆಗಿತ್ತು. ಅದರಿಂದ ಅವರು ಉಳಿದ ಎಲ್ಲ ಪ್ರಯತ್ನಗಳನ್ನು ಬಿಟ್ಟು, ಸಿಂದೆ ಯೊಡನೆಯೇ ಒಳ್ಳೇ ಆಸ್ಥೆಯಿಂದ ಮಾತು-ಕಥೆಗೆ ಪ್ರಾರಂಭಿಸಿದರು. ಅದರಿಂದ

ಸಿಂದೆಯ ಪ್ರದೇಶದೊಳಗಿನ ಹಾಗು ಮ್ಹಾಳವ ಪ್ರಾಂತದೊಳಗಿನ ತಮ್ಮ ದಾಳಿಗಳನ್ನು ಅವರು ಸ್ವಾಭಾವಿಕವಾಗಿಯೇ ನಿಲ್ಲಿಸಬೇಕಾಯಿತು. ಪ್ರಸ್ತುತದ ಯುದ್ಧವನ್ನು ನಿಲ್ಲಿಸಿ, ಸಿಂಧೆಯನ್ನು ಒಪ್ಪಂದದ ಮಾತು-ಕಥೆಗಳಿಗೆ ಕೂಡಲೆ ಹೋಗಗೊಡಬೇಕೆಂದು ಕಲ್ಕತ್ತೆಯ ವರಿಷ್ಠ ಇಂಗ್ಲಿಷರು ಕರ್ನಲ್ಲ ಮೂರನಿಗೆ ಹೇಳಿಕಳುಹಿಸಿದರು. ಆಗ ಆ ಸಾಹೇಬನು ತನ್ನ ದಂಡಿನೊಡನೆ ಯಮುನಾನದಿಯನ್ನು ದಾಟಿ ಹಿಂದಿರುಗಿದನು ೧೭೮೧ರ ಡಿಸೆಂಬರದಲ್ಲಿ ಇಂಗ್ಲಿಷರ ಕಡೆಯ ಮಿಸ್ಟರ ಡೆವ್ಹಿಡ್ ಅಂಡರಸನ್ನ ಮತ್ತು ಮಹದಾಜಿಸಿಂದೆ ಇವರ ವಿದ್ಯಮಾನದಲ್ಲಿ ಒಪ್ಪಂದದ ಮಾತುಗಳು ಪ್ರಾರಂಭವಾದವು; ಮತ್ತು ಕಡೆಗೆ ೧೭೮೨ರ ಮೇ ತಿಂಗಳ ೭ನೇ ತಾರೀಖಿಗೆ ಸಾಲ್ಬಾಯಿ ಎಂಬಲ್ಲಿ ಇಂಗ್ಲಿಷರಿಗೂ ಪೇಶ್ವೆಯರಿಗೂ ಒಪ್ಪಂದವಾಯಿತು. ಪುರಂದರದ ಒಡಂಬಡಿಕೆಯ ನಂತರ ಗೆದ್ದುಕೊಂಡ ಪೇಶ್ವೆಯರ ಎಲ್ಲ ನಾಡುಗಳನ್ನು ಇಂಗ್ಲಿಷರು ಪೇಶ್ವೆಯರಿಗೆ ಬಿಟ್ಟುಕೊಡಬೇಕು; ಮತ್ತು ಹೈದರಅಲ್ಲಿಯು ಇಂಗ್ಲಿಷರಿಂದ ಸೆಳಕೊಂಡ ಪ್ರದೇಶವನ್ನು ಪೇಶ್ವೆಯರು ಇಂಗ್ಲಿಷರಿಗೆ ಕೊಡಿಸಬೇಕು. ಇಂಗ್ಲಿಷ ಮತ್ತು ಪೋರ್ತುಗೀಜ ಇವೆರಡು ರಾಷ್ಟ್ರಗಳ ಜನರ ಹೊರತು ಮಿಕ್ಕ ಯಾವ ಯುರೋಪಿಯನ್ ರಾಷ್ಟ್ರದ ಜನರನ್ನೂ ಪೇಶ್ವೆಯರು ತಮ್ಮ ನಾಡಿನಲ್ಲಿರಗೊಡಬಾರದು. ಸಿಂದೆಯ ಕಾಮಗಿರಿಯ ಬಗ್ಗೆ ಹಾಗು ಒಪ್ಪಂದ ಪಾಲಿಸುವ ಜಾಮೀನಿನ ಬಗ್ಗೆ ಅವನಿಗೆ ಭಡೋಚವನ್ನು ಕೊಡಬೇಕು. ಇಂಗ್ಲಿಷರು ರಾಘೋಬನ ಪಕ್ಷವನ್ನು ಕಾಯಮವಾಗಿ ಬಿಟ್ಟುಬಿಡಬೇಕು. ರಾಘೋಬನು ತಿಂಗಳಿಗೆ ೨೫ ಸಾವಿರ ರೋಖ ನೇಮಣೂಕಿ ತಕ್ಕೊಂಡು ಗೋದಾತೀರದಲ್ಲಿ ತನ್ನ ಇಚ್ಛೆಗೆ ಬಂದ ಊರಲ್ಲಿ ಇರಬೇಕು, ಹೀಗೆಂದು ಆ ಸಾಲ್ಬಾಯಿ ಒಪ್ಪಂದದ ಶರ್ತುಗಳಿದ್ದವು. ಆ ಒಪ್ಪಂದದ ಕಾಗದದ ಮೇಲೆ ತಾ॥೨೬-೨-೧೭೮೩ರ ವರೆಗೆ ಪೇಶ್ವೆಯರ ಸಹಿಯಾಗಿದ್ದಿಲ್ಲ, ಆದರೆ ಈ ಮಧ್ಯೆ ಹೈದರಅಲ್ಲಿಯು ತಾ॥೭-೧೨-೧೭೮೨ರಲ್ಲಿ ತೀರಿಕೊಂಡ ಸುದ್ದಿಯು ಬರಲು, ಇನ್ನು ಹೆಚ್ಚು ಜಗ್ಗಿ ಹಿಡಿಯುವದರಲ್ಲಿ ಅರ್ಥವಿಲ್ಲೆಂದು ಪೇಶ್ವೆಯರು ತಿಳಿದಿರಬಹುದು. ೧೭೮೩ನೇ ಫೆಬ್ರುವರಿ ತಿಂಗಳ ೧೦ನೇ ತಾರೀಖಿಗೆ ಪುಣೆಯಲ್ಲಿ ಪೇಶ್ವೆ ಸವಾಯಿ ಮಾಧವರಾಯನ ಲಗ್ನವು ಒಳ್ಳೇ ವಿಜೃಂಭಣೆಯಿಂದ ನೆರವೇರಿತು. ಆ ಕಾಲಕ್ಕೆ ಶ್ರೀಮಂತ ಛತ್ರಪತಿ ಮಹಾರಾಜರೂ ಎಲ್ಲ ದೊಡ್ಡ ದೊಡ್ಡ ಸರದಾರರೂ ಆ ಸಮಾರಂಭಕ್ಕಾಗಿ ಪುಣೆಗೆ ಬಂದಿದ್ದರು. ಆ ಆನಂದೋತ್ಸವಕ್ಕೆ ಸಾಲ್ಬಾಯಿ ಒಪ್ಪಂದದಿಂದ ಮತ್ತಿಷ್ಟು ಕಳೆಯೇರಿತು.

ಸಾಲ್ಬಾಯಿಯ ಒಡಂಬಡಿಕೆಯಾದ ಬಳಿಕ ಸಹ ರಾಘೋಬನು ಪೇಶ್ವೆಯ ಕಾರಭಾರಿಗಳ ಸ್ವಾಧೀನವಾಗಲಿಕ್ಕೆ ಮೊದಮೊದಲು ಒಪ್ಪಲಿಲ್ಲ; ಆದರೆ ಆ ಒಪ್ಪಂದದ ನಂತರ ಅವನನ್ನು ತಮ್ಮ ನಾಡಿನಲ್ಲಿರಗೊಡುವದೂ, ಅವನ ನೇಮಣೂಕಿಯನ್ನು ನಡೆಸುವದೂ ಇಂಗ್ಲಿಷರಿಗೆ ಶಕ್ಯವಿರಲಿಲ್ಲ. ಅದು ವರೆಗೆ ತಮ್ಮ ರಾಜಕಾರಣಕ್ಕೆ ಹೆಚ್ಚಾಗಿ ಸಹಾಯಕನಾದ ಆ ತಮ್ಮ ಪರಮ ಸ್ನೇಹಿತನಿಗೆ "ನೀವು ಇನ್ನು

ನಮ್ಮ ಸುರತದಿಂದ ಹೊರಟು ಹೋಗಲೇಬೇಕೆ"ಂಬ ಸೂಕ್ಷ್ಮ ಸೂಚನೆಯನ್ನು ಕೊಡುವ ಪ್ರಸಂಗವು ಆ ಇಂಗ್ಲಿಷರಿಗೆ ಪ್ರಾಪ್ತವಾಯಿತು! "ನೀವು ಪುಣೆಯ ಕಾರಭಾರಿಗಳ ಪ್ರದೇಶದಲ್ಲಿರಲಿಕ್ಕೆ ಒಪ್ಪದಿದ್ದರೆ, ನಾನು ನನ್ನ ಪ್ರದೇಶದಲ್ಲಿ ನಿಮಗೆ ಇಂಬು ಕೊಡುತ್ತೇನೆ"ಂದು ಶಿಂದೆಯು ಅವನಿಗೆ ಬರೆದು ಕಳಿಸಿದ್ದನು; ಆದರೂ ರಾಘೋಬನು ಗೋದಾತೀರದಲ್ಲಿಯೇ ಆಹ್ನಿಕ ಮಾಡುತ್ತ ಕಾಲಹರಣ ಮಾಡಬೇಕೆಂದು ನಿಶ್ಚಯಿಸಿ, ಪರಶುರಾಮ ಭಾವು, ಹರಿಪಂತ ಫಡಕೆ ಮತ್ತು ತುಕೋಜಿ ಹೋಳಕರ ಇವರಿಂದ ಪ್ರತ್‌ಪ್ರತ್ಯೇಕವಾದ ಲೇಖೀ ಆಶ್ವಾಸನಗಳನ್ನೂ, ಭಂಡಾರ-ಪತ್ರಿ ಮುಂತಾದವುಗಳನ್ನು ಮುಟ್ಟಿ ಆಣೆ-ಹೂರಿಗಳನ್ನೂ ಮಾಡಿಸಿಕೊಂಡ ನಂತರ, ತಾಪೀನದಿಯ ದಂಡೆಗುಂಟ ಖಾನದೇಶಕ್ಕೆ ಹೋಗಿ, ಅಲ್ಲಿಂದ ಗೋದಾತೀರದ ಕೋಪರಗಾಂವ ಎಂಬಲ್ಲಿಗೆ ಹೋಗಿ ನಿಂತುಕೊಂಡನು; ಆದರೆ ಇಷ್ಟು ಪರಿಶ್ರಮದಿಂದಲೂ, ಅವಮಾನದಿಂದಲೂ ಸಂಪಾದಿಸಿದ ಆ ನೇಮಣೂಕಿಯನ್ನು ಉಪಭೋಗಿಸಲಿಕ್ಕೆ ಆವನು ಮುಂದೆ ಹೆಚ್ಚು ದಿನ ಬಾಳಲಿಲ್ಲ. ಕೋಪರಗಾಂವಿಗೆ ಬಂದಿರಹತ್ತಿದ ಬಳಿಕ ನವಂಬರ ತಿಂಗಳಿಂದಲೇ ಆತನ ದೇಹದ ಸ್ವಾಸ್ಥ್ಯವು ನಷ್ಟವಾಯಿತು; ಹಾಗು ತಾ॥ ೧೧ನೇ ಡಿಸೆಂಬರ ೧೭೮೩ರಲ್ಲಿ ಆತನು ತೀರಿಕೊಂಡನು. ಆ ಕಾಲಕ್ಕೆ ಆತನ ದತ್ತಕ ಮಗನಾದ ಅಮೃತರಾಯನೂ, ೧೭೭೫ರಲ್ಲಿ ಧಾರದಲ್ಲಿ ಹುಟ್ಟಿದ್ದ ಆತನ ಔರಸ(ಹೊಟ್ಟೆಯ) ಮಗನಾದ ಬಾಜೀರಾಯನೂ ಹಾಜರಿದ್ದರಲ್ಲದೆ, ಚಿಮಣಾಜಿ ಅಪ್ಪಾ ಎಂಬ ಆತನ ಎರಡನೇ ಔರಸ ಮಗನು ಆಗ ೪ ತಿಂಗಳ ಗರ್ಭಾವಸ್ಥೆಯಲ್ಲಿದ್ದನು!

ಮುಂದೆ ಎರಡು ವರ್ಷಗಳ ವರೆಗೆ ಪುಣೆಯ ಕಾರಭಾರಿಗಳು ಸ್ವಸ್ಥತೆಯಲ್ಲಿ ಕಾಲ ಕಳೆದರು. ಆಗ ಇವರೊಡನೆ ವೈರ ತಾಳಲಿಕ್ಕೆ ಇಂಗ್ಲಿಷರಿಗೆ ನೆವವೇ ಉಂಟಾಗಲಿಲ್ಲ. ಕಾರಣ ಹೈದರ ಅಲ್ಲಿಯು ಸತ್ತನು, ಆತನ ಮಗನಾದ ಪ್ರಚಂಡ ಟೀಪುವು ತನ್ನ ತಂದೆಯಂತೆ ಇಂಗ್ಲಿಷರೊಡನೆ ಹಗೆತನದಿಂದಲೇ ನಡೆಯಹತ್ತಿದನು. ಮೊದಮೊದಲು ಇಂಗ್ಲಿಷರು ಆತನ ಎಷ್ಟೋ ಠಾಣ್ಯಗಳನ್ನು ಗೆದ್ದುಕೊಂಡರು; ಆದರೆ ಒಂದು ಲಕ್ಷ ದಂಡು ಹಾಗು ತೋಫಖಾನೆಯೊಡನೆ ಟೀಪುವು ಇಂಗ್ಲಿಷರ ಮೇಲೆ ಸಾಗಿ ಹೋಗಿ, ಜಾನೇವಾರಿ ೧೭೮೪ರ ವರೆಗೆ ಇಂಗ್ಲಿಷರು ಗೆದ್ದುಕೊಂಡ ಸಮುದ್ರದಂಡೆಯ ವರೆಗಿನ ಬಹುತರ ಎಲ್ಲ ಪ್ರದೇಶವನ್ನೂ ಮರಳಿ ತನ್ನ ಹಸ್ತಗತ ಮಾಡಿಕೊಂಡನು.

ಸಾಲ್ಬಾಯಿ ಒಪ್ಪಂದವಾದ ಮೂರು ವರ್ಷಗಳ ಮೇಲೆ ಇಂಗ್ಲಿಷರು ತಮ್ಮ ವಕೀಲನನ್ನು ಪುಣೆಯ ದರ್ಬಾರದಲ್ಲಿ ಕಾಯಮವಾಗಿಡಬೇಕೆಂದು ವಿಚಾರ ಮಾಡಹತ್ತಿದರು. ಈ ಕೆಲಸವು ಆಗಬೇಕಾದರೆ ಶಿಂದೆಯ ಮಧ್ಯಸ್ಥಿಕೆಯಿಂದಲೇ ಆಗಬಹುದೆಂದೂ ಅದರ ಹೊರತು ಆಗಲಾರದೆಂದೂ ಇಂಗ್ಲಿಷರಿಗೆ ಅನಿಸುತ್ತಿದ್ದದರಿಂದ, ಅವರು ತಮ್ಮ ಆ ಮಾತನ್ನು ಶಿಂದೆಗೆ ತಿಳಿಸಿದರು. ಪೇಶ್ವೇ ದರ್ಬಾರದ ಭಾವೀ ವಕೀಲನಾದ ಮಿಸ್ಟರ ಚಾರ್ಲಸ ಮ್ಯಾಲೆಟನೆಂಬುವನು ತಾ॥ ೧೫ನೇ ಮಾರ್ಚ ೧೭೮೫ಕ್ಕೆ ಸುರತದಿಂದ ಹೊರಟು, ಉಜ್ಜನಿ-ಗ್ವಾಲ್ಹೇರಗಳ ಮೇಲೆ ಹಾಯ್ದು ಆಗ್ರಾ

ಕ್ಕೆ ಹೋಗಿ, ಅಲ್ಲಿಂದ ಮಥುರೆಗೆ ತಲುಪಿ ಶಿಂಥೆಯ ಭೆಟ್ಟಿ ತಕ್ಕೊಂಡನು. ಅದೇ ಕಾಲಕ್ಕೆ ಅಲ್ಲಿಗೆ ಮೊಗಲ ಬಾದಶಹನಾದ ಶಹಾಆಲಮ್ಮನೂ ಬಂದಿದ್ದನು. ಮ್ಯಾಲೆಟನು ಅವನಿಗೂ ಭೇಟಿಯಾದನು; ಆದರೆ ಉಡುಗರೆ ಮತ್ತು ನಜರಾಣೆ ಇವುಗಳ ಕೊಡ-ಕೊಳ್ಳುಯ ಹೊರತು, ಮೊಗಲ ಬಾದಶಹನೊಡನೆ ಅವನ ಅನ್ಯ ಕರ್ತವ್ಯವಿರಲಿಲ್ಲ. ಯಾಕಂದರೆ, ಆಗ ಎಲ್ಲ ಬಾದಶಾಹೀ ಸತ್ತೆಯು ಶಿಂಥೆಯ ಹಸ್ತಗತವಾಗಿ ಬಿಟ್ಟಿತ್ತು. ಶಿಂಥೆಯೊಡನೆ ಆದ ಭೆಟ್ಟಿಯಿಂದ ಪುಣೆಯಲ್ಲಿ ಸ್ಥಾಪಿತವಾಗಬೇಕಾಗಿದ್ದ ವಕಾಲತಿಯ ಕೆಲಸವು ಕೊನೆಗಾಣಲಿಲ್ಲ. ಇಂಗ್ಲಿಷರ ಕಡೆಯ ವಕೀಲನು ಪುಣೆಯಲ್ಲಿರುವದು ಶಿಂಥೆಗೆ ಸಮ್ಮತವಾಗಿರಲಿಲ್ಲ; ಆದರೆ ಮುಂಬಯಿಯ ಇಂಗ್ಲಿಷರಿಗೆ ಅದು ಇಷ್ಟವಾಗಿತ್ತು. ತನ್ನ ದರಬಾರದಲ್ಲಿ ಕಲಕತ್ತೆಯ ಇಂಗ್ಲಿಷರ ವಕೀಲನು ಈ ಮೊದಲೇ ಇರಹತ್ತಿದ್ದು, ಮತ್ತೆ ಪುಣೆಯಲ್ಲಿ ಇನ್ನೊಬ್ಬ ಇಂಗ್ಲಿಷ ವಕೀಲನನ್ನಿರಿಸಿಕೊಂಡು, ಇಂಗ್ಲಿಷರೊಡನೆ ನಡೆಯುವ ವ್ಯವಹಾರವನ್ನು ದ್ವಿಮುಖವಾಗಗೊಡಬೇಕೆಂಬ ಮಾತು ಶಿಂಥೆಗೆ ಸೇರುವಂತಹದಿರಲಿಲ್ಲ. ಇಂಗ್ಲಿಷರ ಕೆಲಸಗಳ ಕೊನೆಯ ನಿರ್ಣಯವು ಪೇಶ್ವೆಯ ದರಬಾರದಲ್ಲಿ, ಪುಣೆಯಲ್ಲೇ ಆಗತಕ್ಕದ್ದು; ಹೀಗಿದ್ದು ಇಂಗ್ಲಿಷರ ವಕೀಲನು ಮಾತ್ರ ಪುಣೆಯಿಂದ ನೂರಾರು ಮೈಲುಗಳ ದೂರದಲ್ಲಿ? ಇಂಗ್ಲಿಷರ ವಕೀಲನು ಪುಣೆಯಲ್ಲಿರದೆ, ಶಿಂಥೆಯ ದರಬಾರದಲ್ಲಿರುವದು ಪೇಶ್ವೆಯರಿಗೂ ಹೆಚ್ಚಾಗಿ ಪ್ರಿಯಕರವಾಗಿರಲಿಲ್ಲ. ಶಿಂಥೆಯು ಇದೇಕಾಲಕ್ಕೆ ದಿಲ್ಲೀ ಬಾದಶಹಸಿಂದ ಪೇಶ್ವೆಯರ ಹೆಸರಿಗೆ ವಕೀಲ ಉಲ್‌ಮುತಲಕಿಯ ಸನದುಗಳನ್ನು ಪಡೆದ ಮೂಲಕ, ಈ ದುತಂತ್ರೀ ದುಹೇರೀ ಕಾರಭಾರವು ಮತ್ತಷ್ಟು ತೊಡಕಿನ ವಿಷಯವಾಯಿತು. ಪುಣೆಯ ದರ್ಬಾರದಲ್ಲಿ ಮುಂಬಯಿಯ ಇಂಗ್ಲಿಷರ ವಕೀಲನನ್ನಿಡುವದಕ್ಕೆ ಮಹದಾಜಿ ಶಿಂಥೆಯು ಪ್ರತಿಕೂಲನಾಗಿದ್ದನು; ಹಾಗು ಶಿಂಥೆಯ ದರ್ಬಾರದಲ್ಲಿ ಕಲ್ಕತ್ತೆಯ ಇಂಗ್ಲಿಷರ ವಕೀಲನಿದ್ದದರಿಂದ ಮಹಾದಾಜಿಯ ಮನಸ್ಸು ಮುರಿದು, ಮುಂಬಯಿಯವರ ಸೂಚನೆಯಂತೆ ನಡೆಯಲಿಕ್ಕೆ ಕಲ್ಕತ್ತೆಯವರೂ ಒಪ್ಪದಾರರು. ಹೊಸದಾಗಿ ಸಂಪಾದಿಸಿದ ಬಾದಶಾಹೀ ಸನದಿನ ಬಲದಿಂದ ಶಿಂಥೆಯು ಬಂಗಾಲದಲ್ಲಿಯ ಇಂಗ್ಲಿಷರ ವಶದೊಳಗಿನ ಬಾದಶಾಹೀ ಪ್ರದೇಶಗಳಲ್ಲಿ ಚೌಥಾಯಿ ಕರವಸೂಲ ಮಾಡುವ ಹಕ್ಕು ತನಗಿದೆಯೆಂದು ಅನ್ನಹತ್ತಿದನು. ಈ ಮೂಲಕ ಪೇಶ್ವೆಯರಿಗಿಂತ ಸಿಂಥೆಯ ಕಡೆಗೇ ಇಂಗ್ಲಿಷರ ಕೆಲಸವು ಹೆಚ್ಚು ಮಹತ್ವದ್ದಾಯಿತು. ಮ್ಯಾಲೆಟ್ ಮತ್ತು ಮಹದಾಜಿ ಇವರ ಭೆಟ್ಟಿಯಲ್ಲಿ ಮಹದಾಜಿಯು ಮ್ಯಾಲೆಟ್ಟನಿಗೆ ನಕಾರದ ಉತ್ತರವನ್ನೇ ಹೇಳಿದನು. "ಈ ಬಗ್ಗೆ ಪುಣೆಯ ದರ್ಬಾರದ ಮತವನ್ನು ನಾವು ಮೊದಲು ಕೇಳಿಕೊಳ್ಳಬೇಕಾಗುತ್ತದೆ. ಪೇಶ್ವೆಯರ ದರ್ಬಾರದಲ್ಲಿ ನಿಮ್ಮ ವಕೀಲನಿರುವ ಸಂಗತಿಯು ಅವರಿಗೆ ಇಷ್ಟವೊ-ಅನಿಷ್ಟವೋ ಎಂಬುದನ್ನು ಅವರಿಂದ ತಿಳಿಯಬೇಕಾಗುತ್ತದೆ" ಮುಂತಾದ ನೆವ ಹೇಳಿ, ಮಹದಾಜಿಯು ಮ್ಯಾಲೆಟ್ಟನನ್ನು ಹಾದಿಗೆ ಹಚ್ಚಿದನು. ಮ್ಯಾಲೆಟ್ಟನು ಆಗ್ರಾದಿಂದ ಕಾನಪುರಕ್ಕೆ ಬಂದು, ಅಲ್ಲಿಂದ ಕಲಕತ್ತೆಯ ಗವರ್ನರ

ಜನರಲ್ಲನ ಭೆಟ್ಟಿಗೆ ಹೋದನು. ಮುಂದೆ ಎಷ್ಟೋ ತಿಂಗಳ ಮೇಲೆ ಶಿಂಧೆಯ ಒಪ್ಪಿಗೆ ದೊರೆತು, ಮ್ಯಾಲೆಟ್ಟನಿಗೆ ಗವರ್ನರ ಜನರಲ್ಲನ ಕಡೆಯಿಂದ ಪುಣೆಯ ದರ್ಬಾರದ ಇಂಗ್ಲಿಷ ವಕೀಲನೆಂಬ ಅಧಿಕಾರ ಪತ್ರವು ದೊರಕಿತು.

---

## ೧೩ನೆಯ ಪರಿಚ್ಛೇದ.

## ಟೀಪುವಿನ ಯುದ್ಧಗಳು.

ಸಾಲ್ಬಾಯಿಯ ಒಪ್ಪಂದದ ನಂತರ ಕೆಲವು ವರ್ಷಗಳ ವರೆಗೆ ಇಂಗ್ಲಿಷ-ಮರಾಟರಲ್ಲಿ ಅನೈಕ್ಯವಿರಲಿಲ್ಲ. ೧೭೮೬ರಲ್ಲಿ ಪೇಶ್ವೆಯರು ಟೀಪುವಿನ ಮೇಲೆ ಮೊದಲನೇ ಸಾರೆ ಏರಿ ಹೋದರು. ಈ ದಾಳಿಯಲ್ಲಿ ತಮಗೆ ಇಂಗ್ಲಿಷರೂ ನೆರವಾಗಬೇಕೆಂದು ನಾನಾಫಡಣವೀಸನ ಪ್ರಯತ್ನವಿದ್ದಿತು; ಆದರೆ ಟೀಪುವಿನೊಡನೆ ಮೊನ್ನೆ ಮೊನ್ನೆ ಒಪ್ಪಂದ ಮಾಡಿಕೊಂಡಿರುವದದಿಂದ, ಅದಕ್ಕೆ ವಿರುದ್ಧವಾಗಿ ನಡೆಯಲಿಕ್ಕೆ ನಾವು ಸಿದ್ಧರಿಲ್ಲೆಂದು ಇಂಗ್ಲಿಷರು ಪೇಶ್ವೆಯರಿಗೆ ತಿಳಿಸಿದರು; ಆದರೂ ತಮ್ಮ ಐದ್ಯೆದು ಪಲಟಣಗಳನ್ನು ಪೇಶ್ವೆ ಹಾಗು ನಿಜಾಮರ ಗಡಿನಾಡುಗಳಿಗೆ ಒಳನಾಡುಗಳ ರಕ್ಷಣಕ್ಕಾಗಿ ಕಳಿಸುತ್ತೇವೆಂದು ಇಂಗ್ಲಿಷರು ಒಪ್ಪಿಕೊಂಡರು; ಆದರೆ ಪೇಶ್ವೆಯರು ಇಂಗ್ಲಿಷರ ಈ ಸಹಾಯವನ್ನು ನಿರಾಕರಿಸಿದರು; ಆದರೂ ತಮ್ಮ ಮತ್ತು ಇಂಗ್ಲಿಷರಲ್ಲಿ ಸಖ್ಯವಿದೆಯೆಂಬುದು ವ್ಯಕ್ತವಾಗಿ, ಟೀಪುವು ಇಂಗ್ಲಿಷರ ಸಹಾಯದ ಆಶೆ ಹಿಡಿಯಬಾರದೆಂದು ನಾನಾನು ಟೀಪುವಿಗೆ ಒಡೆದು ಕಾಣಿಸುವ ಹಾಗೆ ಪುಣೆಯೊಳಗಿನ ಇಂಗ್ಲಿಷರ ವಕೀಲನಾದ ಚಾರ್ಲಸ್ ಮ್ಯಾಲೆಟ್ಟನನ್ನು ಬದಾಮಿಯೊಳಗಿನ ತಮ್ಮ ಛಾವಣಿಗೆ ಕರೆಸಿಕೊಂಡನು. ತಾ|| ೨೦ನೇ ಮೇಕ್ಕೆ ಮರಾಟರ ಸೈನ್ಯವು ಬದಾಮಿಯ ಕೋಟೆಗೆ ದಾಳಿಯಿಕ್ಕಿ, ಅದನ್ನು ಟೀಪುವಿನ ಸರದಾರನಿಂದ ಸೆಳಕೊಂಡಿತು. ಬದಾಮಿಯು ಹಸ್ತಗತವಾಗುವ ಮೊದಲೇ ನಿಜಾಮನು ಆ ಸವಾರಿಯೊಳಗಿಂದ ಹಿಂದಿರುಗಿದ್ದನು. ಬಳಿಕ ನಾನಾ, ಪರಶುರಾಮಭಾವು ಮತ್ತು ಭೋಸಲೆ ಇವರೂ ಹಿಂದಿರುಗಿದರು. ಹರಿಪಂತನೊಬ್ಬನೇ ಅಲ್ಲಿ ಉಳಿದು, ತನ್ನ ೭೫ ಸಾವಿರ ದಂಡಿನೊಡನೆ ಆ ದಾಳಿಯ ಕೆಲಸವನ್ನು ಸಾಗಿಸಿದನು. ಹೋಳಕರ ಮುಂತಾದವರು ತಮ್ಮ ೪೦ ಸಾವಿರ ದಂಡಿನೊಡನೆ ಸವಣೂರ, ಹುಬ್ಬಳ್ಳಿಯ ಕಡೆಗಿದ್ದರು; ಆದರೆ ಆ ದಾಳಿಯಲ್ಲಿ ಖಡ್ಗಪಾಣಿಯಾದ ಶೂರ ಟೀಪುವು ತನ್ನ ಯುದ್ಧ ಕೌಶಲ್ಯವನ್ನು ಮರಾಟರಿಗೆ ಚೆನ್ನಾಗಿ ತೋರ್ಪಡಿಸಿದನು. ಅವನು ಹಲವು ಸಣ್ಣ-ಪುಟ್ಟ ದಾಳಿಯನ್ನಿಕ್ಕಿ ಅವರನ್ನು ಹಣ್ಣಿಗೆ ತಂದನು. ಅಂಥ ಆತನದೊಂದು ದಾಳಿಯ ಕಾಲಕ್ಕೆ ಹೋಳಕರನ ಸೈನ್ಯದೊಳಗಿದ್ದ ಪೆಂಡಾರಿಗಳು ಸುಲಿಗೆಗೆ ಇದೊಳ್ಳೇ ಸಮಯ್ವವೆಂದು ತಿಳಿದು, ಮರಾಟರ ಛಾವಣಿಯನ್ನೇ ಸುಲಿದರು! ಅಲ್ಲದೆ ಟೀಪುವು ನಂಬಿಗೆ ದೋರುತ್ತ, ಹೋಳಕರನಿಗೆ ಒಪ್ಪಂದದ ಆಶೆ ಹಚ್ಚುತ್ತ, ಅವನ್ನು ಹಲವು ಸಾರೆ

ಮೋಸಗೊಳಿಸಿದನು; ಹಾಗು ಆತನ ಅನೇಕ ಠಾಣ್ಯಗಳನ್ನು ಗೆದ್ದುಕೊಂಡನು. ೧೭೮೭ನೇ ಎಪ್ರೀಲದಲ್ಲಿ ಉಭಯತರಿಗೆ ನಿರಂತರದ ಒಪ್ಪಂದವಾಗಿ, ಟೀಪುವು ಮರಾಟರಿಗೆ ೪೮ ಲಕ್ಷ ರೂಪಾಯಿ ಹಾಗು ಕೆಲವು ಸಂಸ್ಥಾನ ಮತ್ತು ದುರ್ಗಗಳನ್ನು ಕೊಡಲಿಕ್ಕೆ ಸಿದ್ಧನಾದನು; ಆದರೆ ಆ ದಾಳಿಯಲ್ಲಿ ಮರಾಟರಿಗೆ ಸರಾಸರಿ ಒಂದೂಕಾಲು ಕೋಟಿ ರೂಪಾಯಿಗಳ ಖರ್ಚಾದ್ದರಿಂದ ಒಟ್ಟಿನಲ್ಲಿ ಮರಾಟರಿಗೆ ಹಾನಿಯೇ ಆಯಿತು. ಆ ಯುದ್ಧದಲ್ಲಿ ಟೀಪುವಿಗೆ ಜಯವಾಗಿದ್ದರೂ ಅವನು ಹೀಗೆ ಒಡಂಬಡಿಕೆ ಮಾಡಿಕೊಂಡ ಕಾರಣವೇನಂದರೆ, ಇಂಗ್ಲಿಷರು ತನ್ನ ಮೇಲೆ ಸಾಗಿಬರುವರೆಂಬ ಪಕ್ಕಾ ಸುದ್ದಿಯು ಆತನಿಗೆ ಹತ್ತಿತ್ತು.

ಮುಂದೆ ಎರಡೇ ವರ್ಷಕ್ಕೆ ಮರಾಟರೂ ನಿಜಾಮನೂ ಒಂದಾಗಿ ಟೀಪುವಿನ ಮೇಲೆ ಎರಡನೇ ಸಾರೆ ಸಾಗಿ ಹೋದರು; ಆದರೆ ಈ ಕಾಲಕ್ಕೆ ಇವರಿಗೆ ಇಂಗ್ಲಿಷರ ಪ್ರತ್ಯಕ್ಷ ಸಹಾಯವೂ ಇದ್ದಿತು; ಇಷ್ಟೇ ಅಲ್ಲ, ಈ ಯುದ್ಧ ಪ್ರಸಕ್ತಿಗೆ ಅವರೇ ಮೂಲ ಕಾರಣರಾಗಿದ್ದರು; ಮತ್ತು ಅವರೇ ನಿಜಾಮನನ್ನು ತಮ್ಮ ಸಹಾಯಕ್ಕೆ ಕರೆಕೊಂಡಿದ್ದರು. ತಮ್ಮ ದಂಡಿನೊಡನೆ ಸ್ವತಃ ಪೇಶ್ವೆಯರು ರಣಭೂಮಿಗೆ ಬರಬೇಕೆಂದು ಮ್ಯಾಲೆಟ್ಟನು ಆಗ್ರಹಪಡಹತ್ತಿದ್ದನು; ಆದರೆ ಕಡೆಗೆ ಪರಶುರಾಮಭಾವೂನ ಮೇಲೆಯೇ ಪ್ರಸಂಗ ನೀಗಿತು ಆ ಯುದ್ಧದಲ್ಲಿ ಆ ತ್ರಿವರ್ಗರೂ ಒಬ್ಬರಿಗೊಬ್ಬರು ನೆರವಾಗಿ ಸಂಪಾದಿಸಿದ ನಾಡನ್ನು ತ್ರಿವರ್ಗರೂ ಸರಿಯಾಗಿ ಹಂಚಿಕೊಳ್ಳತಕ್ಕದ್ದೆಂದು ಗೊತ್ತಾಗಿತ್ತು. ಆ ತ್ರಿವರ್ಗರಲ್ಲಿಯ ಮರಾಟರನ್ನು ತನ್ನ ಕಡೆಗೆ ಒಡಕೊಳ್ಳಬೇಕೆಂದು ಟೀಪುವು ಕಾರಸ್ಥಾನ ನಡೆಸಿದ್ದನು; ಆದರೆ ಅದು ಸಾಧಿಸಲಿಲ್ಲ. ನಾನಾಫಡಣೀಸನು ಮಾತ್ರ ಟೀಪುವಿನೊಡನೆ ಕಡೆಯವರೆಗೂ ಸವಿಮಾತಾಡಿ, ಅವನಿಂದ ಹಿಂದಿನ ಒಪ್ಪಂದದ ಬಾಕಿ ಹಣವನ್ನು ಶಕ್ಯವಾದಷ್ಟು ವಸೂಲ ಮಾಡಿಕೊಂಡನು! ೧೭೯೦ನೇ ಮೇ-ಜೂನ ತಿಂಗಳುಗಳಲ್ಲಿ ಮುಂಬಯಿಯ ಇಂಗ್ಲಿಷರ ಪಲಟಣಗಳು ಜಯಗಡದ ಒತ್ತಿನೊಳಗಿಂದ ಸಂಗಮೇಶ್ವರದ ಮೇಲೆ ಹಾಯ್ದು, ಅಂಬೇಘಟ್ಟವನ್ನೇರಿ ತಾಸಗಾಂವಕ್ಕೆಬಂದು ಸೇರಿದವು. ಕ್ಯಾಪ್ಟನ್ ಲಿಟಲ್ಲನೆಂಬವನು ಇಂಗ್ಲಿಷರ ಆ ೨೫೦೦ ದಂಡಿನ ಮುಖ್ಯಸ್ಥನಾಗಿದ್ದನು. ಪರಶುರಾಮಭಾವು ಅವನೊಡನೆ ಅಗಷ್ಟ ತಿಂಗಳಲ್ಲಿ ಟೀಪುವಿನ ಮೇಲೆ ಹೊರಟನು. ಘಟಪ್ರಭಾ ನದಿಯನ್ನು ದಾಟಿದ ಬಳಿಕ ಉಭಯತರ ದಂಡುಗಳ ಮೊದಲನೇ ಭೆಟ್ಟಿಯು ಧಾರವಾಡದ ಮುತ್ತಿಗೆಯಲ್ಲಾಯಿತು. ಧಾರವಾಡದ ಮುತ್ತಿಗೆಯಲ್ಲಿ ಇಂಗ್ಲಿಷರ ರಣಕೌಶಲ್ಯಕ್ಕೂ ಅತ್ಯುತ್ಕೃಷ್ಟ ತೋಫುಗಳ ಹೊಡತಕ್ಕೂ ಮೆಚ್ಚಿ ಮರಾಟರು ಅವರನ್ನು ಹೆಚ್ಚಾಗಿ ಕೊಂಡಾಡಿದರು. ಧಾರವಾಡ ದುರ್ಗಾಧಿಪತಿಯಾದ ಬದ್ರೀಜಮಾಲನೂ ಒಳ್ಳೇ ಶೌರ್ಯದಿಂದ ಕಾದಿದನು; ಆದರೆ ಕಡೆಗೆ ಆತನ ಆಟವೇನೂ ಸಾಗಲಿಲ್ಲ, ೩ನೇ ಎಪ್ರೀಲ ೧೭೯೧ರ ವರೆಗೆ ೭ ತಿಂಗಳು ಒಂದೇಸವನೆ ಕಾದಿದ ನಂತರ ಅವನು ಆ ದುರ್ಗವನ್ನು ಬಿಟ್ಟುಕೊಡಬೇಕಾಯಿತು. ಧಾರವಾಡವನ್ನು ಹಸ್ತಗತ ಮಾಡಿಕೊಂಡ ನಂತರ ಮರಾಟರೂ ಇಂಗ್ಲಿಷರೂ ಕೂಡಿ ಶ್ರೀರಂಗಪಟ್ಟಣದ

ಕಡೆಗೆ ಸಾಗಿದರು. ಹರಿಪಂತನು ತನ್ನ ದಂಡಿನೊಡನೆ ಬೇರೆ ಮಾರ್ಗದಿಂದ ಬರುತ್ತಿದ್ದು, ಮೇ ತಿಂಗಳಲ್ಲಿಯೇ ಆತನ ಹಾಗು ಪರಶುರಾಮ ಭಾವೂನ ದಂಡುಗಳು ಏಕತ್ರವಾಗಿದ್ದವು. ಅತ್ತ ಲಾರ್ಡ ಕಾರ್ನವಾಲೀಸನೂ ನಿಜಾಮನ ದಂಡನ್ನು ಸಂಗಡ ತಕ್ಕೊಂಡು ಬಂದನು. ಎಲ್ಲರೂ ಕೂಡಿ ಟೀಪೂನನ್ನು ಹಣ್ಣಿಗೆ ತಂದರು; ಹಾಗು ಕಡೆಗೆ ಟೀಪುವು ಅವರೆಲ್ಲರೊಡನೆ ಒಡಂಬಡಿಕೆ ಮಾಡಿಕೊಂಡು, ತನ್ನ ಶ್ರೀರಂಗಪಟ್ಟಣದ ಮೇಲಿನ ಆವರ ಮುತ್ತಿಗೆಯನ್ನು ಎಬ್ಬಿಸಿಕೊಳ್ಳಬೇಕಾಯಿತು. ಆಗ ಟೀಪುವು ೩ಕೋಟಿ ರೂಪಾಯಿ ಕಪ್ಪ ಹಾಗು ತನ್ನ ಅರ್ಧರಾಜ್ಯ ಕೊಡುವದನ್ನು ಗೊತ್ತುಮಾಡಿಕೊಂಡನು. ಆದರಿಂದ ಆ ಸಂಯುಕ್ತರಲ್ಲಿ ಪ್ರತಿಯೊಬ್ಬನ ಪಾಲಿಗೆ ೪೦ ಲಕ್ಷ ಉತ್ಪನ್ನಿನ ಟೀಪೂನ ಪ್ರದೇಶವು ಬಂದಿತು. ಮರಾಟರು ವರದಾ ಹಾಗು ಕೃಷ್ಣಾ ಹೊಳೆಗಳ ನಡುವಿನ ಪ್ರಾಂತವನ್ನಲ್ಲದೆ ಸೊಂಡೂರ ಮುಂತಾದವುಗಳನ್ನು ತಕ್ಕೊಂಡರು. ಗುತ್ತಿ, ಕಡಪಾ, ಕೊಪ್ಪಳ ಮುಂತಾದ ಕೃಷ್ಣಾ-ತುಂಗಭದ್ರಾ ಹೊಳೆಗಳ ನಡುವಿನ ಪ್ರದೇಶವು ನಿಜಾಮನ ಪಾಲಿಗೆ ಹೋಯಿತು ಇಂಗ್ಲಿಷರು ದಿಂಡಿಗಲ್, ಕೊಡಗು, ಮಲಬಾರ ಮುಂತಾದ ನಾಡುಗಳನ್ನು ನುಂಗಿ ನೀರು ಹಿಡಿದರು! ಈ ಯುದ್ಧದ ಪಾಲಿನಲ್ಲಿ ಇಂಗ್ಲಿಷರಿಗೂ ಮರಾಟರಿಗೂ ಅಲ್ಪಸ್ವಲ್ಪ ಮನಸ್ತಾಪವೂ ಆಯಿತು; ಆದರೆ ಅದು ಪ್ರಜ್ವಲಿಸದೆ, ಅಷ್ಟಕ್ಕೇ ನಂದಿಹೋಯಿತು. ಆಗ ಲಾರ್ಡ ಕಾರ್ನವಾಲೀಸನು ಪರಶುರಾಮಭಾವೂನಿಗೆ ೧೭ ತೋಫುಗಳನ್ನು ಕಾಣಿಕೆಯಾಗಿ ಕೊಟ್ಟನು!

ಟೀಪುವಿನೊಡನೆ ಆದ ಮೂರನೇ-ಕಡೆಯ-ಯುದ್ಧದಲ್ಲಿ ಮಾತ್ರ ಮರಾಟರಿಗೂ ಇಂಗ್ಲಿಷರಿಗೂ ಮೊದಲಿನಂತೆ ಸಹಕಾರ ಉಂಟಾಗಲಿಲ್ಲ. ಇಷ್ಟರಲ್ಲಿ ಸವಾಯಿಮಾಧವರಾಯನು ತೀರಿಕೊಂಡದ್ದರಿಂದ ೨ನೇ ಬಾಜೀರಾಯನು ಪೇಶ್ವೆಯಾದನು. ಆತನು ದೌಲತರಾವ ಸಿಂದೆಯ ಹಸ್ತಕನಾಗಿದ್ದನು ೭೯೮ರಲ್ಲಿ ನಿಜಾಮನು ಅಲ್ಲಿಯು ಇಂಗ್ಲಿಷರೊಡನೆ ಹೊಸ ಒಪ್ಪಂದವನ್ನು ಮಾಡಿಕೊಂಡು, ತನ್ನ ಕವಾಯತದ ಪಲಟಣಗಳನ್ನೆಲ್ಲ ತೆಗೆದು ಬಿಟ್ಟು, ಇಂಗ್ಲಿಷರ ಆರುಸಾವಿರ ಸೈನ್ಯವನ್ನೂ ತೋಫುಖಾನೆಯನ್ನೂ ತನ್ನಲ್ಲಿಟ್ಟುಕೊಂಡು, ಆ ದಂಡಿನ ಖರ್ಚಿಗಾಗಿ ವರ್ಷಕ್ಕೆ ೨೪ ಲಕ್ಷ ರೂಪಾಯಿ ಕೊಡುವದನ್ನು ಗೊತ್ತುಮಾಡಿಕೊಂಡನು. ಚೌಥಾಯಿ ಸರದೇಶಮುಖೀ ಕರದ ವಸೂಲಿಯ ಮರಾಟರ ಉಪಟಳವನ್ನು ತಪ್ಪಿಸಲಿಕ್ಕೆ ಇಂಗ್ಲಿಷರ ಹೊರತು ಅನ್ಯರಾರೂ ತನಗೆ ನೆರವಾಗರೆಂದು ಮನದಂದು, ನಿಜಾಮನು ಇಂಗ್ಲಿಷರೊಡನೆ ಸ್ನೇಹ ಬೆಳೆಸುವ ಆ ಹೊಸ ಒಡಂಬಡಿಕೆ ಮಾಡಿಕೊಂಡನು. ಇದರಿಂದ ಇಂಗ್ಲಿಷರ ಕಾರ್ಯವು ಮಾತ್ರ ಸಹಜವಾಗಿಯೇ ಆಯಿತು. ತಮ್ಮ ದಂಡಿನ ಖರ್ಚನ್ನು ನಿಜಾಮನು ಕೊಡುವನು, ಆ ದಂಡು ತಮ್ಮ ಅಧಿಕಾರಕ್ಕೆ ಒಳಪಟ್ಟಿರುವದು, ನಿಜಾಮನು ತಮ್ಮ ಶತ್ರುಗಳ ಮಾಲಿಕೆಯೊಳಗಿಂದ ಕಾಯಮವಾಗಿಯೇ ಇಲ್ಲದಂತಾಗುವನು; ಮತ್ತು ನಿಜಾಮನನ್ನು ತಮ್ಮ ಸ್ನೇಹಿತನಾಗಿ ಮಾಡಿಕೊಂಡ ಮೂಲಕ, ಪೇಶ್ವೆಯರೂ ತನಗೆ

ಅಂಜಹತ್ತುವರು! ಹೀಗೆ ಈ ವ್ಯವಸ್ಥೆಯಿಂದ ಎಲ್ಲ ಬಗೆಯಿಂದಲೂ ಇಂಗ್ಲಿಷರಿಗೆ ಲಾಭವಾಗುತ್ತಿತ್ತು. ಇವೇ ಶರ್ತುಗಳನ್ನು ಪೇಶ್ವೆಯು ಒಪ್ಪಿಕೊಂಡರೆ ಅವರೂ ತಮ್ಮ ಸೂತ್ರದ ಬೊಂಬೆಗಳಾಗಿ ಬಿಡುವರೆಂದು ಇಂಗ್ಲಿಷರ ಬೇತಾಗಿದ್ದಿತು; ಆದರೆ ದೌಲತರಾವ ಸಿಂದೆಯೂ ನಾನಾಫಡಣವೀಸನೂ ಈ ಬಗೆಯ ಒಪ್ಪಂದಮಾಡಿಕೊಳ್ಳಬೇಡಿರೆಂದು ಬಾಜೀರಾಯನಿಗೆ ಸಲಹೆ ಕೊಟ್ಟ ಮೂಲಕ ಆಗ ಇಂಗ್ಲಿಷರ ಬೇತು ಈಡೇರಲಿಲ್ಲ. ಆದರೂ ಟೀಪೂನ ಕೂಡ ಮತ್ತೆ ಯುದ್ಧ ಮಾಡುವ ಪ್ರಸಂಗ ಬಂದರೆ, ನಾವು ನಿಮಗೆ ಸಹಾಯ ಮಾಡುವೆವೆಂದು ಬಾಜೀರಾಯನು ಇಂಗ್ಲಿಷರಿಗೆ ಅಭಿವಚನವಿತ್ತನು; ಹಾಗು ಮುಂದೆ ಯುದ್ಧವು ಪ್ರಾರಂಭವಾದರೆ, ಪರಶುರಾಮ ಭಾವುವಿನ ಕೈಕೆಳಗೆ ಮೊದಲಿನ ಯುದ್ಧದಂತೆ ಸೈನ್ಯಕೊಟ್ಟು ಇಂಗ್ಲಿಷರ ನೆರವಿಗೆ ಕಳಿಸತಕ್ಕದ್ದೆಂದು ಗೊತ್ತಾಯಿತು. ಅವರೊಡನೆ ರಾಸ್ತೆ, ವಿಂಚೂರಕರ ಮುಂತಾದ ಸರದಾರರೂ ಹೋಗಬೇಕೆಂದು ನಾನಾನು ನಿಶ್ಚಯಿಸಿದನು; ಆದರೆ ಈ ಬಗೆ ದೌಲತರಾಯನು ಆಗ್ರಹತೊಟ್ಟದ್ದೇನಂದರೆ, ಟೀಪುವಿನ ವಿರುದ್ಧ ದಾಳಿಯಲ್ಲಿ ಮರಾಟರು ಪ್ರತ್ಯಕ್ಷ ಭಾಗತಕ್ಕೊಳ್ಳಬಾರದೆಂದು. ಟೀಪುವು ಸಿಂದೆಯ ಮುಖಾಂತರ ಪೇಶ್ವೆಗೆ ೧೩ ಲಕ್ಷ ರೂಪಾಯಿ ಕೊಟ್ಟ ಬೊಬ್ಬಾಟವಿತ್ತು. ಅದು ಸಟೆಯೋ ದಿಟವೋ ಎಂಬದು ತಿಳಿಯದಿದ್ದರೂ ಯುದ್ಧಕ್ಕೆ ಹೊರಡಲಿರುವ ತಮ್ಮ ದಂಡಿಗೆ ಆಯುತಕಾಲಕ್ಕೆ ಅಪ್ಪಣೆ ಕೊಡದೆ, ಬಾಜೀರಾಯನು ತಡೆಹಾಕಿದ್ದನ್ನು ಕಂಡು ನಾನಾನಿಗೂ ವಿಚಿತ್ರವೆನಿಸಿತು! ಕಡೆಗೆ ಇಂಗ್ಲಿಷರು ಸ್ವಸಾಮರ್ಥ್ಯದಿಂದಲೇ ಶ್ರೀರಂಗಪಟ್ಟಣದ ಮೇಲೆ ಸಾಗಿಹೋಗಬೇಕಾಯಿತು. ಟೀಪುವಿನೊಡನೆ ಸಖ್ಯಬೆಳೆಯಿಸಿ, ನಿಜಾಮನ ಮೇಲೆ ದಾಳಿಮಾಡಬೇಕೆಂದು ಬಾಜೀರಾಯನೂ ದೌಲತರಾಯನೂ ಯೋಚಿಸಿದ್ದರು; ಆದರೆ ಶ್ರೀರಂಗಪಟ್ಟಣದ ಆ ಯುದ್ಧದಲ್ಲಿ ಟೀಪುವು ಸೋತು ಮರಣಹೊಂದಿದನು. ಅದರಿಂದ ಬಾಜೀರಾಯನ ಆ ಬೇತು "ಉತ್ಪದ್ಯಂತೇ ವಿಲೀಯಂತೇ............" ಎಂಬಂತಾಗಿ ಹೋಯಿತು. ಟೀಪುವಿನ ಮರಣ ವಾರ್ತೆಯನ್ನು ಕೇಳಿ ಬಾಜೀರಾಯನು ಸಂತಸಬಟ್ಟಂತೆ ನಟಿಸಿ, ನಿಮ್ಮ ಸಹಾಯಕ್ಕೆ ಆಯುತ ಕಾಲಕ್ಕೆ ದಂಡು ಕಳಿಸದಿರುವದಕ್ಕೆ ಫಡಣವೀಸ ನಾನಾನೇ ಕಾರಣನೆಂದ ಇಂಗ್ಲಿಷರಿಗೆ ತಿಳಿಸಿಬಿಟ್ಟನು! ಟೀಪುವಿನ ಮರಣದ ನಂತರ ಮೈಸೂರ ರಾಜ್ಯವನ್ನು ಹಂಚಿಕೊಳ್ಳುವಾಗ, ಇಂಗ್ಲಿಷರು ಪೇಶ್ವೆಯರಿಗಾಗಿ ಒಂದು ಸಣ್ಣಭಾಗವನ್ನು ತೆಗೆದಿಟ್ಟರು; ಹಾಗು ಅದನ್ನು ಪಡೆಯಬೇಕಾದರೆ, ನಿಜಾಮನಂತೆ ಪೇಶ್ವೆಯರೂ ಇಂಗ್ಲಿಷರ ದಂಡನ್ನಿಟ್ಟುಕೊಳ್ಳುವ (ಈ ಮೊದಲು ರಹಿತವಾದ) ಒಪ್ಪಂದವನ್ನು ಮಾಡಿಕೊಳ್ಳಬೇಕೆಂದು ತಿಳಿಸಿದರು; ಆದರೆ ಆ ಒಡಂಬಡಿಕೆ ಮಾಡಿಕೊಳ್ಳುವದು ಘಾತುಕತನವೆಂದು ನಾನಾನಿಗೆ ಅನಿಸಿದ್ದರಿಂದ, ಆ ತರದ ಒಡಂಬಡಿಕೆಯಾಗದಂತೆ ನಾನಾನು ಬಾಜೀರಾಯನಿಗೆ ನೆರವಾದನು. ಕಡೆಗೆ ಮೈಸೂರ ರಾಜ್ಯದ ಆ ಭಾಗವನ್ನು ನಿಜಾಮ ಮತ್ತು ಇಂಗ್ಲಿಷರೇ ಹಂಚಿಕೊಂಡರು; ಆದರೆ ಆ ಉಭಯತರಲ್ಲಿ ಅದೇ ಕಾಲಕ್ಕೆ

ಮತ್ತೊಂದು ಹೊಸ ಒಪ್ಪಂದವಾಗಿ, ೧೭೯೧ನೇ ಹಾಗು ೧೭೯೯ನೇ ಇಸ್ವಿಗಳ ಟೀಪೂನ ಯುದ್ಧಗಳಲ್ಲಿ ನಿಜಾಮನ ಪಾಲಿಗೆ ಬಂದ ಟೀಪುವಿನ ಎಲ್ಲ ರಾಜ್ಯವೂ ಇಂಗ್ಲಿಷರಿಗೇ ದೊರೆತು, ಅದಕ್ಕೆ ಪ್ರತಿಯಾಗಿ ಇಂಗ್ಲಿಷರ ೮೦೦೦ ದಂಡನ್ನು ಆತ್ಮ ರಕ್ಷಣಾರ್ಥವಾಗಿ ನಿಜಾಮನು ತನ್ನ ಕೊರಳಲ್ಲಿ ಕಟ್ಟಿಕೊಳ್ಳಬೇಕಾಯಿತು! ತಾತ್ಪರ್ಯ ವಿಷ್ಟೇ, ಇಂಗ್ಲಿಷ ಹಾಗು ಮರಾಟರ ಸಹಕಾರ್ಯದಿಂದ ಆದ ಒಂದೇ ಒಂದು ದೊಡ್ಡ ಯುದ್ಧವೆಂದರೆ, ಟೀಪೂನ ೨ನೇ (೧೭೯೧) ಕಾಳಗವೇ ಸರಿ.

---

೧೩ನೆಯ ಪರಿಚ್ಛೇದ.

## ನಾ ನಾ ನ ಕೈ ದು.

ನಾನಾಫಡಣೀಸನೂ ೨ನೇ ಬಾಜೀರಾಯನೂ ಮುಂದೆ ಬೇಗನೆ ಇಂಗ್ಲಿಷರ ಸಹಾಯ ಪಡೆಯಬೇಕಾಯಿತು; ಆದರೆ ಅದು ನಿಜವಾದ ಸಹಕಾರತೆಯಾಗಿರದೆ, ತಮ್ಮ ಮನೆತನದ ಜಗಳದಲ್ಲಿ ತಾವಾಗಿಯೇ ೨ನೇ ಸಾರೆ ಆ ಇಂಗ್ಲಿಷರನ್ನು ಸೇರಿಸಿ ಕೊಂಡಂತಾಯಿತು. ಭೇದವಿಷ್ಟೇ, ರಾಘೋಬನು ಆ ಅಪಯಶವನ್ನು ಪ್ರಾರಂಭದಲ್ಲಿಯೇ ಹೊಂದಿದ್ದು, ಅವನು ಎಲ್ಲ ಜನರ ನಿಂದೆಗೂ ಪಾತ್ರನಾಗಿದ್ದನು; ಆದರೆ ಮುಂದೆ ಕಾಲವೇ ವಿಪರೀತವಾಗಿ, ರಾಘೋಬನ ಪ್ರತಿಸ್ಪರ್ಧಿಯೂ ಮುತ್ಸದ್ದಿಯೂ ಆದ ನಾನಾಫಡಣೀಸನಿಗೇ ಆ ಕೆಲಸ ಮಾಡುವ ಪ್ರಸಂಗ ಒದಗಿತು! ನಾನಾ ಮತ್ತು ಮಹದಾಜಿ ಇವರೀರ್ವರಲ್ಲಿ ಒಂದು ಬಗೆಯ ಪರಸ್ಪರ ಸ್ಪರ್ಧೆಯಿದ್ದರೂ, ಅವರಿಬ್ಬರೂ ಪೇಶ್ವಾಯಿ ದೌಲತ್ತಿನ ಆಧಾರಸ್ತಂಭಗಳಾಗಿದ್ದರು. ಮಹದಾಜಿ ಸಿಂದೆಯ ಮರಣದಿಂದ ನಾನಾನ ಬಲಗೈ ಅಂದರೆ ಖಡ್ಗಪಾಣಿಯೇ ಉದುರಿ ಬಿದ್ದಂತಾಯಿತು. ಮಹದಾಜಿಯ ಮರಣದಿಂದ ಉತ್ತರ ಹಿಂದುಸ್ತಾನದೊಳಗಿನ ನಾನಾನ ವರ್ಚಸ್ಸು ಕಳೆಗುಂದಿ, ದಿಲ್ಲಿಯೊಳಗಿನ ಮರಾಟರ ಸತ್ತೆಯು ಲೋಪವಾದಂತಾಗಿತ್ತು. ಆದರೂ ಮಹದಾಜಿಯ ನಿಧನದ ನಂತರ, ೨ನೇ ವರ್ಷವೇ ನಾನಾನು ಖರ್ಡೆಯ ಕಾಳಗದಲ್ಲಿ ಜಯ ಸಂಪಾದಿಸಿ, ದಕ್ಷಿಣ ಹಿಂದುಸ್ತಾನದ ಮಟ್ಟಿಗಾದರೂ ಮರಾಟರ ವರ್ಚಸ್ಸು ಇನ್ನೂ ಶಾಶ್ವತವಾಗಿದೆಯೆಂಬದನ್ನು ಜಗತಿನವರ ನಿದರ್ಶನಕ್ಕೆ ತಂದು ಕೊಟ್ಟನು. ಖರ್ಡೆಯ ಕಾಳಗವೆಂದರೆ, ನಾನಾನ ವೈಭವದ ಶಿಖರವೇ ಆಗಿತ್ತು; ಆದರೆ ಮರುವರ್ಷವೇ ಸವಾಯಿ ಮಾಧವರಾಯನಿಗೆ ಅಪಮೃತ್ಯುವೊದಗಲು ಹಾಗು ನಾನಾನ ನಿಜಶತ್ರುವಾದ ೨ನೇ ಬಾಜೀರಾಯನೇ ಪೇಶ್ವೆಯ ಪಟ್ಟವನ್ನೇರುವ ಪ್ರಸಂಗವೊದಗಿ ಬರಲು, ನಾನಾನಿಗೆ ಇಡೀ ವಿಶ್ವವೇ ತಲೆಕೆಳಗಾದಂತಾಯಿತು! ಬಾಜೀರಾಯನಿಂದ ನಾನಾನಿಗೆ ಇಬ್ಬಗೆಯ ಅಂಜಿಕೆ ಇದ್ದಿತು. ತನ್ನ ತಂದೆಯನ್ನು ಗೋಳಾಡಿಸಿದ ಸೇಡು ತೀರಿಸಿಕೊಳ್ಳುವದಕ್ಕಾಗಿ ಬಾಜೀರಾಯನು ತನಗೆ ವ್ಯಕ್ತಿಶಃ ತೊಂದರೆಯನ್ನೂ, ಘಾತವನ್ನೂ ಮಾಡಬಹು

ದೆಂಬುದು ಮೊದಲನೇ ತರದ ಹೆದರಿಕೆಯಾಗಿತ್ತು; ಅಲ್ಲದೆ ಅದಕ್ಕೂ ದೊಡ್ಡ ಅಂಜಿಕೆಯೆಂದರೆ ಇಂಥ ಹೀನಬುದ್ಧಿಯ ಕಲಿಪುರುಷನು ಪೇಶ್ವಾಯಿಯ ಪಟ್ಟಕ್ಕೆ ಬಂದರೆ, ಈ ಪೇಶ್ವಾಯಿಯು ಬೇಗನೆ ಹಾಳಾಗಬಹುದೆಂದು. ಈ ಭೀತಿಯ ಮೂಲಕ ನಾನಾನು ಕೂಡಲೆ ಎಲ್ಲ ದೊಡ್ಡ ದೊಡ್ಡ ಸರದಾರರನ್ನು ಪುಣೆಗೆ ಬರಮಾಡಿಕೊಂಡು, ಬಾಜೀರಾಯನನ್ನು ಪೇಶ್ವೇ ಪಟ್ಟಕ್ಕೆ ಕೂಡ್ರಿಸುವದೆಂದರೆ, ಇಂಗ್ಲಿಷರ ಅಂಗವನ್ನು ಪೇಶ್ವಾಯಿಯ ದರಬಾರದಲ್ಲಿ ಸೇರಿಸಿಕೊಂಡಂತೆಯೇ ಸರಿಯೆಂದು ತಿಳಿಸಿದನು. ಪಟವರ್ಧನ ಪರಶುರಾಮ ಪಂತನು ನಾನಾನಿಗೆ ಅನುಕೂಲವಾಗಿಯೇ ಇದ್ದನು; ಆದರೆ ಬೇರೆ ಕಡೆಯ ದೊಡ್ಡ ಸರದಾರರಲ್ಲಿ ಹೋಳಕರನಿಗೂ ನಾನಾನ ಬೇತು ಸಮ್ಮತವಾಯಿತು; ಸಿಂಧೆಯ ಕಾರಭಾರಿಗಳಲ್ಲಿ ಮತಭೇದವಿದ್ದರೂ, ಅವರೆಲ್ಲರು ಕಡೆಗೆ ನಿಶ್ಚಯಿಸಿದ್ದೇನಂದರೆ, ತಮ್ಮ ಒಡೆಯನಾದ ದೌಲತರಾಯನು ಅಲ್ಪವಯಸ್ಕನಿರುವದರಿಂದ, ಹೋಳಕರನಂಥ ಹಿರಿಯ ಮುತ್ಸದ್ದಿಗಳು ಹೇಗೆ ಅಭಿಪ್ರಾಯ ಪಡುವರೋ ತಾವೂ ಹಾಗೆಯೇ ನಡೆಯತಕ್ಕದ್ದೆಂದು ನಿರ್ಧರಿಸಿದರು. ಆಗ ಎಲ್ಲರೂ ಕೂಡಿ ಸವಾಯಿ ಮಾಧವರಾಯನ ನಿಪುತ್ರಿಕ ಹೆಂಡತಿಗೆ ದತ್ತಕ ಮಗನನ್ನು ಮಾಡಿ, ಪೇಶ್ವಾಯಿ ಕಾರಭಾರ ಸಾಗಿಸಬೇಕೆಂದು ನಿಶ್ಚಯಿಸಿದರು; ಆದರೆ ಬಾಜೀರಾಯನಿಗೆ ಈ ಸಂಗತಿ ತಿಳಿಯಲು, ಅವನು ಸಿಂಧೆಯ ಕಾರಭಾರಿಯಾದ ಬಾಳೋಬಾ ತಾತ್ಯಾ ಎಂಬವನನ್ನು ವಶಪಡಿಸಿಕೊಂಡು, ನಾನಾನ ಬೇತನ್ನು ವಿಧ್ವಂಸಗೊಳಿಸುವ ಯತ್ನಕ್ಕೆ ಹತ್ತಿದನು. ವಿಕಲ್ಪವುಂಟಾದ ಬಳಿಕ ಅತ್ತಕಡೆಯಿಂದಲೂ ಹಲವು ಕಾರಣಗಳು ಮುಂದೆ ಬರಹತ್ತಿದವು. ಬಾಳಾಜಿ ವಿಶ್ವನಾಥನ ವಂಶವೃಕ್ಷವು ಸ್ಥಿರವಾಗಿರಲಿಕ್ಕೆ, ಬೇರೆ ಮನೆತನದ ಹುಡುಗನನ್ನು ಯಾಕೆ ದತ್ತಕ ಮಾಡಬೇಕೆಂಬ ಮಾತು ಹಲವರ ವಿಚಾರಕ್ಕೆ ಆಸ್ಪದವಾಯಿತು. ಬಾಜೀರಾಯನು ನಾಲ್ಕು ಲಕ್ಷ ವಸೂಲಿಯ ಪ್ರಾಂತವನ್ನೂ ಪಟ್ಟಾಭಿಷೇಕದ ಖರ್ಚನ್ನೂ ಕೊಡುವ ಆಮಿಷವನ್ನು ಸಿಂದೆಗೆ ತೋರಿಸಿದ್ದರಿಂದ, ಮೇಲಿನ ದತ್ತಕದ ಅಡ್ಡಿಗೆ ಮತ್ತಿಷ್ಟು ಮಹತ್ವವು ಪ್ರಾಪ್ತವಾಯಿತು.

ಈ ಸುದ್ದಿಯು ಹತ್ತಲು, ನಾನಾನು ಪರಶುರಾಮಭಾವುವನ್ನು ಕೂಡಲೆ ಪುಣೆಗೆ ಕರೆಸಿಕೊಂಡನು; ಆದರೆ ವಿಚಾರಾಂತ್ಯದಲ್ಲಿ ಉಭಯತರಿಗೂ ಮನವರಿಕೆಯಾದುದೇನಂದರೆ, ಹೇಗಾದರೂ ಸಿಂದೆಯು ತನ್ನ ದಂಡಿನ ಬಲದಿಂದ ಬಾಜೀರಾಯನನ್ನು ಪಟ್ಟಕ್ಕೆ ಕೂಡ್ರಿಸುವವನೇ. ಅಂದಮೇಲೆ ಅದೇ ಕೆಲಸವನ್ನು ನಾವೇ ಮಾಡಿಬಿಟ್ಟರೆ, ಸಿಂದೆಯೇ ಬದಿಗಾಗುವನು; ಮತ್ತು ಅದರಿಂದ ಬಾಜೀರಾಯನು ಒಂದುವೇಳೆ ಕೃತಜ್ಞನಾಗಿ ತಮ್ಮ ಹಸ್ತಕನಾಗಬಹುದು, ಎಂದು ನಿರ್ಧರಿಸಿದರು. ಕೂಡಲೆ ಪರಶುರಾಮಭಾವುವು ಶಿವನೇರಿಯ ದುರ್ಗಕ್ಕೆ ಹೋಗಿ, ಬಾಜೀರಾಯನನ್ನು ಬಂಧಮುಕ್ತ ಮಾಡಿದನು; ಹಾಗು ಕಪಟ ಮುಂತಾದುದೇನೂ ಇಲ್ಲೆಂಬ ಬಗ್ಗೆ ಆಣೆ-ಚೂರಿ ಮಾಡಿ ಖಾತ್ರಿಮಾಡಿಕೊಟ್ಟ ಬಳಿಕ, ಬಾಜೀರಾಯನು ಚಿಮಾಜಿ ಅಪ್ಪಾನೊಡನೆ ಪುಣೆಗೆ ಬಂದನು. ನಾನಾನಿಗೂ ಆತನಿಗೂ ಭೆಟ್ಟಿಯಾಗಿ, ತೋರಿಕೆ

ಯಲ್ಲಾದರೂ ಅವರೀರ್ವರಲ್ಲಿ ಐಕಮತವಾದಂತಾಯಿತು. ಆಗ ಬಾಜೀರಾಯನು ನಾನಾನಿಗೆ "ಸಂದಿಹೋದ ಪ್ರಸಂಗಗಳನ್ನು ಎಲ್ಲರೂ ಮರೆಯತಕ್ಕದ್ದು. ನಾನು ನಿಮ್ಮ ಕಡೆಗೇ ಎಲ್ಲ ಕಾರಭಾರವನ್ನು ವಹಿಸಿ, ನಿಮ್ಮ ಸಲಹೆಯ ಮೇರೆಗೇ ನಡೆಯುತ್ತೇನೆ" ಎಂದು ಬರೆಕೊಟ್ಟನು. ಆ ಮೇಲೆ ಬಾಜೀರಾಯನನ್ನು ಪಟ್ಟಕ್ಕೆ ಕೂಡ್ರಿಸಿದ್ದಾಯಿತು. ಇದನ್ನು ಕೇಳಿ ಬಾಳೋಬಾ ತಾತ್ಯಾನಿಗೆ ಸಿಟ್ಟು ಬಂತು. ಆತನ ಸಲಹೆಯ ಮೇರೆಗೆ ಸಿಂದೇ ದೌಲತರಾಯನು ಗೋದಾತೀರದೊಳಗಿನ ತನ್ನ ದಂಡನ್ನೆಲ್ಲ ತಕ್ಕೊಂಡು ಪುಣೆಗೆ ಬಂದು ತಳವೂರಿ ನಿಂತನು. ಸಿಂದೆಯ ದಂಡು ಮಿತಿಮೀರಿತ್ತು. ಆದರಿಂದ ಇನ್ನು ತನ್ನ ಆಟವೇನೂ ನಡೆಯಸೆಂದು ನಾನಾನಿಗೆ ಅನಿಸಿದ್ದರಿಂದ, ಅವನು ಹೆಚ್ಚಾಗಿ ಅಂಜಿದನು. ಪರಶುರಾಮಪಂತನು ಅವನಿಗೆ ಎಷ್ಟೋ ಧೈರ್ಯ ಹೇಳಿದನು; ಇಷ್ಟೇ ಅಲ್ಲ, ಪ್ರಸಂಗ ಬಂದರೆ ಸಿಂದೆಯ ಕೂಡ ಯುದ್ಧಮಾಡಬಹುದೆಂದೂ ಆತನ ಪ್ರತಿಷ್ಠೆ ಎಷ್ಟೆಂದೂ ನಾನಾನಿಗೆ ತಿಳಿಸುವ ಪ್ರಯತ್ನ ಮಾಡಿದನು; ಆದರೆ ಬಾಳೋಬಾ ತಾತ್ಯಾನ ಅಂಜಿಕೆ ಹಾಗು ಬಾಜೀರಾಯನು ಯಾವ ಕಾಲಕ್ಕೆ ಹೇಗೆ ಘಾತಮಾಡಿಯಾನೆಂಬ ಅವಿಶ್ವಾಸ ಇವುಗಳಿಂದ ಗ್ರಸ್ತನಾಗಿ, ನಾನಾನು ಪೇಶ್ವಾಯಿಯ ಕಾರಭಾರವನ್ನು ಬಿಟ್ಟುಗೊಟ್ಟು ಪುಣೆಯಿಂದ ಹೊರಟುಹೋದನು. ಪುಣೆಯಲ್ಲಿ ತನ್ನ ಹಿಂದೆ ಎಂಥ ಗೊಂದಲವೆದ್ದೀತೆಂಬ ಅರಿವು ಕೂಡ ಆಗ ಅವನಿಗುಳಿಯಲಿಲ್ಲ. ಬಾಜೀರಾಯನು ಅದೇಕಾಲಕ್ಕೆ ವ್ಯಕ್ತವಾಗಿ ವಿಶ್ವಾಸಘಾತ ಮಾಡಿದನು. ಆತನು ಮೊದಲು ಸಿಂದೆಯ ಕೂಡ ಸಂಧಾನ ನಡೆಯಿಸಿ ಆಯತಕಾಲಕ್ಕೆ ನಾನಾನ ನೆರವು ತಕ್ಕೊಂಡು ಪಟ್ಟವೇರಿದನು. ಸಿಂದೆಗೆ ಮಂಕುಬೂದಿಹಚ್ಚಿದ ಪ್ರಾಯಶ್ಚಿತ್ತವೆಂದು ಬಾಳೋಬನು ಬಾಜೀರಾಯನನ್ನು ಪಟ್ಟದಿಂದ ತಳ್ಳುವದನ್ನು ನಿಶ್ಚಯಿಸಿದನು; ಮತ್ತು ಆ ಕಟ್ಟಿನಲ್ಲಿ ಪರಶುರಾಮಭಾವುವನ್ನೂ ಸೇರಿಸಿಕೊಳ್ಳುವ ಸಂಚನ್ನು ನಡೆಸಿದನು. ನಾನಾನು ಪರಶುರಾಮಭಾವುವನ್ನು ಕಾರಭಾರದಲ್ಲಿ ತೊಡಕಿಸಿ ತಾನು ಪುಣೆಯಿಂದ ಹೊರಟು ಹೋಗಲು, ಪರಶುರಾಮಭಾವುವು ನಿರಾಶ್ರಿತನಾದನು! ತನ್ನ ಸ್ವಂತದ ಜಬಾಬುದಾರಿಯ ಮೇಲೆ ಸಿಂದೆಯ ಕೂಡ ವೈರ ತಾಳುವದಕ್ಕಿಂತ, ತಾನೂ ಆ ಹೊಸಕಟ್ಟಿನಲ್ಲಿ ಸೇರುವದೇ ವಿಹಿತವೆಂದು ಪರಶುರಾಮಭಾವುವು ಗೊತ್ತುಮಾಡಿಕೊಂಡನು. ಬಾಜೀರಾಯನನ್ನು ಪದಚ್ಯುತಗೊಳಿಸಿ, ಸವಾಯಿ ಮಾಧವರಾಯನ ಹೆಂಡತಿಯ ಉಡಿಯಲ್ಲಿ ಚಿಮಾಜಿ ಅಪ್ಪಾನನ್ನು ಹಾಕುವದೇ ಆ ಹೊಸಕಟ್ಟಿನ ಉದ್ದೇಶವಾಗಿತ್ತು; ಮತ್ತು ಆ ಹೊಸ ಪೇಶ್ವೆಗೆ ನಾನಾನ ಸ್ಥಳದಲ್ಲಿ ಪರಶುರಾಮಭಾವುವೇ ಕಾರಭಾರಿಯಾಗಬೇಕೆಂದು ನಿಶ್ಚಯಿಸಲ್ಪಟ್ಟಿತ್ತು; ಆದರೆ ಪರಶುರಾಮಭಾವುವು ನಾನಾನಿಗೆ ಈ ಸಂಗತಿಯನ್ನು ತಿಳಿಸಿ, ಅವನ ಸಮ್ಮತಿ ಪಡೆಯದ ಹೊರತು ಆ ಕಟ್ಟಿನಲ್ಲಿ ಸೇರಲಿಲ್ಲ. ನಾನಾ, ಭಾವು ಮತ್ತು ಬಾಳೋಬಾ ಇವರೆಲ್ಲರ ಐಕಮತವಾಗಲು, ಬಾಜೀರಾಯನು ಮತ್ತೆ ಸೆರೆಮನೆಯ ಸೋಬತಿಯಾಗಬೇಕಾಯಿತು!

ನಾನಾಫಡಣೀಸನು ಪುಣೆಯಿಂದ ಹೊರಟವನು ಮೊದಲು ಪುರಂದರಕ್ಕೂ ನಂತರ ವಾಯಿಗೂ ಹೋದನು. ಸಾತಾರೆಯ ಮಹಾರಾಜರನ್ನು ಬಂಧಮುಕ್ತ ಮಾಡಿ, ತಿರುಗಿ ಅವರ ಹೆಸರಿನಿಂದಲೇ ಕಾರಭಾರವನ್ನು ಪ್ರಾರಂಭಿಸಿ, ಮರಾಟಾ ಸರದಾರರನ್ನೆಲ್ಲ ಒಟ್ಟುಗೂಡಿಸಿ, ಏಕಮುಖೀ ಸತ್ತೆಯನ್ನು ಸ್ಥಾಪಿಸಬಹುದೆಂದು ಊಹಿಸಿಯೇ ನಾನಾನು ಆ ಪ್ರಯತ್ನ ನಡೆಸಿದನು; ಆದರೆ ಅದೂ ಸಾಧಿಸಲಿಲ್ಲ. ಇಷ್ಟರಲ್ಲಿ ಚಿಮಾಜಿ ಅಪ್ಪಾನ ದತ್ತಕ ವಿಧಾನವು ನೆರವೇರಲು, ನಾನಾನು ಸ್ವತಃ ಸಾತಾರೆಗೆ ಹೋಗಿ, ಆ ಪೇಶ್ವೇಗಾಗಿ ಮಹಾರಾಜರಿಂದ ಹೊಸ ಉಡುಪುಗಳನ್ನು ಸಂಪಾದಿಸಿದನು! ಈ ಮೊದಲು ಪರಶುರಾಮಭಾವುವೇ ಪೇಶ್ವೆಯ ಕಾರಭಾರ ನಡೆಸಬೇಕೆಂದು ಗೊತ್ತುಮಾಡಲ್ಪಟ್ಟಿತ್ತು; ಆದರೆ ಈಗ ನಾನಾನೇ ಕಾರಭಾರ ನಡೆಸಬೇಕೆಂದೂ, ಭಾವುವು ಸೇನಾನಿಯಾಗಬೇಕೆಂದೂ ಹೊಸ ವಿಚಾರವುಂಟಾಗಿ, ಅದಕ್ಕನುಸರಿಸಿ ನಾನಾನು ಪುಣೆಗೆ ಬರಬೇಕೆಂಬ ಮಾತು ನಡೆಯಿತು; ಆದರೆ ಬಾಜೀರಾಯನಂತೆ ನಾನಾನನ್ನೂ ಸೆರೆಹಿಡಿಯುವದು ಸಿಂದೆಯ ಬೇತಿರುವದೆಂಬ ಸುದ್ದಿ ಬಡಿಯಲು, ನಾನಾನು ನೆಟ್ಟಗೆ ಪುಣೆಗೆ ಬರದೆ, ಮಹಾಡದ ಕಡೆಗೆ ಹೊರಟು ಹೋದನು; ಹಾಗು ಅಲ್ಲಿ ನಿಂತು ರಾಯಗಡವನ್ನು ಹಸ್ತಗತ ಮಾಡಿಕೊಳ್ಳುವ ಸಿದ್ಧತೆ ನಡೆಸಿದನು. ಹೀಗೆ ಆಕಸ್ಮಿಕವಾಗಿ ನಾನಾ ಹಾಗು ಬಾಜೀರಾವ ಇವರಿಬ್ಬರೂ ಸಮದುಃಖಿಗಳಾಗಲು, ಇಬ್ಬರೂ ಕೂಡಿ ಒಮ್ಮನಸಿನಿಂದ ವಿಚಾರ ಮಾಡುವ ಪ್ರಸಂಗವೊದಗಿತು! ಹಾಗು ಬಾಳೋಬಾ ಕುಂಜರನ ಮಧ್ಯಸ್ಥಿಕೆಯಿಂದ ಅವರೀರ್ವರಲ್ಲಿ ಪತ್ರವ್ಯವಹಾರಕ್ಕೂ ಪ್ರಾರಂಭವಾಯಿತು. ತುಕೋಜಿ ಹೋಳಕರನು ಸಿಂದೆಯ ವಿರುದ್ಧ ಸಸೈನ್ಯವಾಗಿ ನಾನಾನಿಗೆ ನೆರವಾಗುವಂತಿದ್ದನು; ಅಲ್ಲದೆ ಬಾಳೋಬಾ ತಾತ್ಯಾನ ಪ್ರತಿಸ್ಪರ್ಧಿಯಾದ ರಾಯಾಜಿ ಪಾಟೀಲನ ಮುಖಾಂತರ ನಾನಾನು ಸಿಂದೆಗೆ ೧೦ ಲಕ್ಷ ವಸೂಲಿಯ ನಾಡನ್ನೂ, ಅಹಮ್ಮದನಗರದ ಕಿಲ್ಲೆಯನ್ನೂ ಪರಶುರಾಮಭಾವೂನ ಜಹಗೀರನ್ನೂ ಕೊಡುವದಲ್ಲದೆ, ಘಾಟಗೆ ಇವರ ರೂಪಸುಂದರಿಯಾದ ಕನ್ಯೆಯನ್ನೂ ಕೊಡುವದನ್ನು ತಿಳಿಸಿದನು! ಮಾನಾಜಿ ಫಾಕಡೆ ಎಂಬವನು ಸಿಂದೆಯ ಈ ಕಟ್ಟಿಗನುಸರಿಸಿ ಲಷ್ಕರ ಭರತಿಯ ಕೆಲಸವನ್ನು ನಡೆಸಿದ್ದನು; ಆದರೆ ಬಾಜೀರಾಯನ ಕೆಲ ದುಷ್ಕೃತ್ಯಗಳ ಮೂಲಕ ಆ ಕಟ್ಟು ಹೊರಬೀಳಲು, ಬಾಳೋಬಾ ತಾತ್ಯಾನು ಬಾಜೀರಾಯನನ್ನು ಉತ್ತರ ಹಿಂದುಸ್ತಾನದ ಕಡೆಗೆ ಕಠಿಣವಾದ ಪಹರೆಯಲ್ಲಿ ರವಾನಿಸಿದನು; ಆದರೂ ಬಾಜೀರಾಯನು ತನ್ನ ಕಾವಲುಗಾರನಾದ ಘಾಟಗೆ ಎಂಬವನನ್ನು ಒಡಕೊಂಡು, ಅವನಿಗೆ ಸಿಂದೆಯ ದಿವಾಣಗಿರಿಯನ್ನೂ ಮತ್ತು ಸಿಂದೆಗೆ ೨ ಕೋಟಿ ರೂಪಾಯಿಗಳನ್ನೂ ಕೊಡುವದನ್ನು ಗೊತ್ತುಮಾಡಿಕೊಂಡು, ನಡುವೇ ತಳಪುರಿ ನಿಂತನು. ಇತ್ತ ನಾನಾನು ರಘೂಜಿ ಭೋಸಲೆ ಮತ್ತು ನಿಜಾಮ ಇವರನ್ನು ತನ್ನ ಪಕ್ಷಕ್ಕೆ ಒಲಿಸಿಕೊಂಡನು. ಇಷ್ಟೆಲ್ಲ ಸಿದ್ಧತೆಯಾದ ನಂತರ ನಾನಾನು ಸೈನ್ಯದೊಡನೆ ಪುಣೆಗೆ ಬಂದನು. ಆತನು

ಬಾಜೀರಾಯನನ್ನು ತಿರುಗಿ ಕರೆಯಿಸಿ, ತಾ॥೪-೧೨-೧೭೯೬ಕ್ಕೆ ಪುನಃ ಪೇಶ್ವೆ ಪಟ್ಟಗಟ್ಟಿದನು; ಹಾಗು ಸ್ವಂತದ ಕಡೆಗೆ ಕಾರಭಾರ ತಕ್ಕೊಂಡು ಶಾಸ್ತ್ರಿಗಳ ಕಡೆಯಿಂದ ಚಿಮಾಜಿ ಅಪ್ಪಾನ ದತ್ತಕ ವಿಧಾನವು ಅಶಾಸ್ತ್ರವೆಂದು ನಿಶ್ಚಯಿಸಿ, ಜಾಹೀರು ಪಡಿಸಿದನು!

ಆದರೆ ಇಷ್ಟಾಗುವದರೊಳಗೇ ಮತ್ತೆ ಕಾರಸ್ಥಾನಗಳೆದ್ದವು. ತುಕೋಜಿ ಹೋಳಕರನು ತೀರಿಕೊಂಡನು; ಮತ್ತು ನಾನಾನು ನಿಜಾಮನಿಗೆ ಕೊಟ್ಟ ವಚನವನ್ನು ಬಾಜೀರಾಯನು ಪಾಲಿಸದ್ದರಿಂದ, ನಿಜಾಮನೂ ಸಿಟ್ಟಾದನು. ಬಾಜೀರಾಯನಂತೂ ಸಾಧಿಸಿದರೆ ನಾನಾ ಮತ್ತು ಸಿಂದೆ ಇವರಿಬ್ಬರನ್ನೂ ಹಿಂದೂಡಿ, ತನ್ನ ಕಾರಭಾರವನ್ನು ತಾನೇ ಮನಸೋಕ್ತವಾಗಿ ನಡೆಸಬೇಕೆಂದು ಯೋಚಿಸಿದ್ದನು; ಆದರೆ ಅದರಲ್ಲೂ ನಾನಾನ ವಿರುದ್ಧವಾಗಿಯೇ ಆತನು ಹೆಚ್ಚಾಗಿ ಕಾರಸ್ಥಾನ ನಡೆಸಿ, ತಾ॥ ೩೧ನೇ ಡಿಸೆಂಬರಕ್ಕೆ ನಾನಾನು ಸಿಂದೆಯ ಭೆಟ್ಟಿಗೆ ಹೋದಾಗ, ಸಿಂದೆಯ ಸೇನಾಪತಿಯಾದ ಮಾಯಕೇಲ ಫಿಲೋಜ ಎಂಬವನಿಂದ ನಾನಾನನ್ನು ಸಿಂದೆಯ ಛಾವಣಿಯಲ್ಲೇ ಕೈದು ಮಾಡಿಸಿದನು! ಹಾಗು ಸರ್ಜೇರಾವ ಘಾಟಗೆಯು ತನ್ನ ಜನರನ್ನು ಊರಲ್ಲಿ ಕಳಿಸಿ, ಅವರಿಂದ ನಾನಾನ ವಾಡೆ ಮತ್ತು ಆತನ ಪಕ್ಷದ ಜನರ ವಾಡೆಗಳನ್ನೆಲ್ಲ ಲೂಟಿ ಮಾಡಿಸಿದನು! ಪುಣೆಯಲ್ಲಿ ಕಂಡ ಕಂಡ ಜನರನ್ನು ಕೈದು ಮಾಡುವದು, ರಕ್ತಪಾತಗೊಳಿಸುವದು ಇದರ ಹೊರತು ಎಷ್ಟೋ ದಿನಗಳ ವರೆಗೆ ಬೇರೆ ಸುದ್ದಿಯು ಕೇಳುತ್ತಲೇ ಇರಲಿಲ್ಲ. ಮನೆಯಿಂದ ಹೊರಬೀಳುವದೆಂದರೆ, ಕೆಲ ಜನರನ್ನು ಕೂಡಿಸಿ, ಕೈಯಲ್ಲಿ ಕತ್ತಿ-ಢಾಲುಗಳನ್ನು ಹಿಡಕೊಂಡೇ ಹೊರಬೀಳಬೇಕಾಗುತ್ತಿತ್ತು! ನಾನಾನನ್ನು ಸೆರೆ ಹಿಡಿದು ಅಹಮ್ಮದನಗರದ ದುರ್ಗಕ್ಕೆ ಕಳಿಸಿಕೊಟ್ಟ ನಂತರ, ಬಾಜೀರಾಯನು ಸಿಂದೆಯ ವರ್ಚಸ್ಸನ್ನು ಕಡಿಮೆ ಮಾಡುವ ಉದ್ಯೋಗಕ್ಕೆ ತೊಡಗಿದನು. ಇದನ್ನು ಕಂಡು ಸಿಂದೆಯು ತನ್ನ ದಂಡಿನ ಪ್ರತಿಶಿಂಗಳ ಖರ್ಚು ೨೦ ಲಕ್ಷದ ವರೆಗಿರುವದರಿಂದ, ತನ್ನ ಖರ್ಚಿನ ಬಾಕಿ ಹಣವನ್ನೆಲ್ಲ ಕೊಡಬೇಕೆಂದು ಉಪದ್ರವ ಕೊಡಲಾರಂಭಿಸಿದನು; ಆದರೆ ಬಾಜೀರಾಯನು ಅಷ್ಟು ದುಡ್ಡು ಕೊಡುವದೆಲ್ಲಿಂದ? ಅದರಿಂದ ಕರಾರ ಪ್ರಕಾರ ಘಾಟಗೇನನ್ನು ಸಿಂದೆಯ ಕಾರಭಾರಿಯೆಂದು ನೇಮಿಸಿ, ಊರವರಿಂದ ಬೇಕಾದ ರೀತಿಯಿಂದ ಹಣ ವಸೂಲ ಮಾಡಬಹುದೆಂದು ಬಾಜೀರಾಯನು ಅವನಿಗೆ ತಿಳಿಸಬೇಕಾಯಿತು. ಆ ಕಾಲಕ್ಕೆ ಆ ಘಾಟಗೆಯು ಪುಣೇದಲ್ಲಿ ನಡೆಸಿದ ಉಪಟಳವು ಅವರ್ಣನೀಯವಾಗಿತ್ತು. ಆತನು ಪ್ರತಿಷ್ಠಿತ ಜನರ ಅವಮಾನವನ್ನು ಹೇಗೆ ಹೇಗೆ ಮಾಡಿದನೆಂಬದನ್ನು ನೆನೆಸಿದರೆ, ಮೈ ಮೇಲೆ ಮುಳ್ಳೇಳದಿರವು!

---

## ೧೪ನೆಯ ಪರಿಚ್ಛೇದ.

## ಮೂರೂಮುಕ್ಕಾಲು ಗಳಿಗೆಯ ಪೇಶ್ವೆ!

ಆ ಅತ್ಯಾಚಾರದ ಯೋಗದಿಂದ ಸಿಂದೆಯು ಪುಣೇಪಟ್ಟಣದಲ್ಲಿ ತೀರ ಅಪ್ರಿಯನಾದನು. ಆ ಸಂಗತಿಯ ಲಾಭ ಪಡೆದು, ಅಮೃತರಾಯನ ಸಹಾಯದಿಂದ ಇಂಗ್ಲಿಷ ಅಧಿಕಾರಿಗಳ ಕೈಕೆಳಗೆ ಸೈನ್ಯವನ್ನು ಸಿದ್ಧಗೊಳಿಸಿ, ಸಿಂದೆಯನ್ನು ಸೆರೆ ಹಿಡಿಯಬೇಕೆಂದು ಬಾಜೀರಾಯನು ಯೋಚಿಸಿದನು; ಆದರೆ ಕಡೆಗೂ ಸಿಂದೆಯನ್ನು ಪ್ರತ್ಯಕ್ಷವಾಗಿ ಸೆರೆ ಹಿಡಿಯುವ ಧೈರ್ಯವು ಬಾಜೀರಾಯನಿಗಾಗಲಿಲ್ಲ.

ತಾನು ತನ್ನ ಪ್ರಾಂತಕ್ಕೆ ಹೊರಟು ಹೋಗುತ್ತೇನೆಂದು ಹೇಳಿ, ಸಿಂದೆಯು ದರ್ಬಾರದೊಳಗಿಂದ ಹೊರಟನು; ಆದರೆ ಎಷ್ಟೋ ದಿನಗಳಾದರೂ ಅವನು ಪುಣೇ ಪಟ್ಟಣವನ್ನು ಬಿಟ್ಟು ಹೊರಡಲೇ ಇಲ್ಲ. ಆದರೂ ಎಲ್ಲ ಕಡೆಯಿಂದಲೂ, ವಿಶೇಷ ವಾಗಿ ಗೃಹಕಲಹದಿಂದ, ಅವನು ಹೆಚ್ಚಾಗಿ ಜರ್ಜರನಾಗಿದ್ದನು. ಅದರಿಂದ ಕಡೆಗೆ ಅವನು ಇಂಗ್ಲಿಷರ ಮಧ್ಯಸ್ತಿಕೆ ಮತ್ತು ಸಹಾಯಗಳನ್ನು ಕೋರಬೇಕಾಯಿತು. ಬಾಜೀರಾಯನು ತತ್ಪೂರ್ವದಲ್ಲೇ ಕರ್ನಲ್ಲ ಪಾಮರ ಎಂಬವನ ಮುಖಾಂತರ ಸಿಂದೆ ಯ ಕೂಡ ಮಿತ್ರತ್ವದ ಸಂಧಾನ ನಡೆಸಿದ್ದನು; ಆಗ ಸಿಂದೆಯು ಅದನ್ನು ಅಲ್ಲಗಳೆ ದಿದ್ದನು. ಅದರಿಂದ ಈಗ ಸಿಂದೆಯು ತಾನಾಗಿಯೇ ಇಂಗ್ಲಿಷರ ಸಹಾಯವನ್ನು ಯಾಚಿಸಬೇಕಾಯಿತು. ತನ್ನ ದಂಡಿನೊಡನೆ ತಾನಿನ್ನು ನಿಜವಾಗಿಯೇ ತನ್ನ ಪ್ರಾಂತಕ್ಕೆ ಹೊರಟು ಹೋಗಬೇಕೆಂದು ಸಿಂದೆಗೆ ಅನಿಸಹತ್ತಿತು; ಆದರೆ ದಂಡಾಳು ಗಳ ಸಂಬಳ ಸಲ್ಲದ ಹೊರತು, ಅವರು ಹೊರಡುವದೆಂತು? ಕಡೆಗೆ ನಾನಾನನ್ನು ಬಂಧಮುಕ್ತ ಮಾಡಿದರೆ, ಅವನಿಂದ ತನಗೆ ಸಾಕಷ್ಟು ಹಣವು ದೊರೆಯಬಹು ದೆಂದೂ, ಅದರಿಂದ ಬಾಜೀರಾಯನಿಗೂ ಬೆದರಿಕೆಯುಂಟಾಗಬಹುದೆಂದೂ ಭಾವಿಸಿ, ಸಿಂದೆಯು ನಾನಾನನ್ನು ಬಂಧಮುಕ್ತಗೊಳಿಸಿ, ಆತನನ್ನು ಪುಣೆಗೆ ಕರೆತಂದನು; ಹಾಗು ಆತನಿಂದ ೧೦ ಲಕ್ಷ ರೂಪಾಯಿಗಳನ್ನು ತಕ್ಕೊಂಡು, ತನ್ನ ತಾತ್ಕಾಲಿಕ ಅಡಚಣೆಯನ್ನು ನೀಗಿಸಿದನು. ನಾನಾನ ಬಿಡುಗಡೆಯ ಸಲುವಾಗಿ ಸಿಂದೆಯು ಇಂಗ್ಲಿಷರ ಸಹಾಯವನ್ನು ಯಾಚಿಸಿದ್ದನು; ಮತ್ತು ಅದರಿಂದ ಆತನ ಉದ್ದಿಷ್ಟವು ತತ್ಕಾಲಕ್ಕೆ ಸಫಲವೂ ಆಯಿತು. ಮರಾಟರೊಡನೆ ಸ್ನೇಹ ಬೆಳಿಸಿ, ಟೀಪೂನನ್ನು ಬೊಗ್ಗು ಬಡಿಯಬೇಕೆಂದು ಇಂಗ್ಲಿಷರ ಆಗಿನ ಮನೋದಯವಾಗಿತ್ತು; ಮತ್ತು ಅದ ಕ್ಕಾಗಿ ಸಿಂದೆಯು ತನ್ನ ಪ್ರಾಂತಕ್ಕೆ ಹೊರಟು ಹೋಗಿ, ನಾನಾನೊಬ್ಬನೇ ಪುಣೆಯಲ್ಲಿ ಉಳಿದರೆ, ತಮ್ಮ ಆ ಬೇತು ಈಡೇರುವದೆಂದು ಅವರ ತಿಳುವಳಿಕೆಯಾಗಿತ್ತು. ಅದ ರಿಂದ ಆಗ ಅವರು ಬಾಜೀರಾಯನಿಗೆ ಹೇಳಿದರೇನಂದರೆ:—"ಸಿಂದೆಯು ಇಲ್ಲಿಂದ ಹೊರಟು ಹೋದರೂ ಹೋಗಲಿ, ನೀವು ಯೋಚಿಸಬೇಡಿರಿ. ನಾವು ನಮ್ಮ ದಂ- ಡನ್ನು ನಿಮ್ಮ ರಕ್ಷಣೆಗೋಸ್ಕರ ಕಳಿಸುವೆವು." ಆದರೆ ಇತ್ತ ಇಂಗ್ಲಿಷರು ಸಿಂದೆಯನ್ನು

ಪುಣೆಯಿಂದ ಹೀಗೆ ಹೊರಹೊರಡಿಸಲೆತ್ನಿಸಹತ್ತಲು, ಅತ್ತ ಬಾಜೀರಾಯನಲ್ಲಿ "ಇದೆಲ್ಲ ನಾನಾನ ಬೇತೇ ಆಗಿರಬಹುದಾಗಿದೆ; ಸಿಂದೆಯನ್ನು ಅತ್ತ ಅಟ್ಟಿಕೊಟ್ಟು, ಇತ್ತ ಇಂಗ್ಲಿಷರನ್ನು ಮನೆಯಲ್ಲಿ ಹೊಗಿಸುವ ವಿಚಾರವು ನಾನಾನದೇ ಆಗಿರುತ್ತದೆ"ಂಬ ಕಲ್ಪನೆಯುಂಟಾಯಿತು. ಹೀಗೆ ಆತನಲ್ಲಿ ಆ ಬಗೆಯ ಕಲ್ಪನೆಯುಂಟಾದ ಕೂಡಲೆ ಆತನ ಕಾರಸ್ಥಾನಗಳು ಮತ್ತೆ ಮರಕಳಿಸಿದವು! "ಸಿಂದೆಗೆ ಹೊರಟುಹೋಗು"ಎನ್ನುವ ಬದಲು, "ಇಲ್ಲಿಯೇ ಇರು." ಎಂದು ಆತನು ಒಳಗಿಂದೊಳಗೆ ಹೇಳಲಾರಂಭಿಸಿದನು! ಹಾಗು ಇತ್ತ ನಾನಾನನ್ನು ಗುಪ್ತವಾಗಿ ಕಂಡು:—"ನೀವು ನನಗೆ ಪಿತೃಸಮಾನರು. ನೀವು ಹೇಳಿದಂತೆಯೇ ಕೇಳಿಕೊಂಡಿರುತ್ತೇನೆ"ಂದು ಆತನು ನಾನಾನ ಪಾದಮುಟ್ಟಿ ಆಣೆ ಮಾಡಿ ಹೇಳಿ, ನಾನಾನಿಗೆ ಪುನಃ ಮುಖ್ಯ ಕಾರಭಾರಿಯ ಕೆಲಸ ಕೈಕೊಳ್ಳಲಿಕ್ಕೆ ಹಚ್ಚಿದನು; ಮತ್ತು ಅದೇಕಾಲಕ್ಕೆ ನಾನಾನನ್ನು ಮತ್ತೆ ಸೆರೆಹಿಡಿಯುವ ಬಗ್ಗೆ ಸಿಂದೆಯನ್ನೂ ಪ್ರೋತ್ಸಾಹಿಸತೊಡಗಿದನು!!!

ನಾನಾನಾದರೂ ಆಗ ತೋರಿಕೆಯಲ್ಲಿ ಕಾರಭಾರಿಯಾದನು; ಆದರೆ ಅವನು ಮನಸ್ಸಿನಲ್ಲಿ ಉದಾಸವೇ ಆಗಿದ್ದನು; ಯಾಕಂದರೆ, ಆಗ ಯಾರ ವಿಶ್ವಾಸವನ್ನೂ ಹಿಡಿಯುವಂತಿರಲಿಲ್ಲ; ಆದರೂ ಇಂಗ್ಲಿಷರಿಗೆ ಮಾತ್ರ ಈ ಪ್ರಸಂಗದಲ್ಲಿ ತನ್ನ ನೆರವು ಅವಶ್ಯವಾದ್ದರಿಂದ, ವಿಶ್ವಾಸವಿಡುವದೇ ಆದರೆ, ಪ್ರಸಂಗದ ಮಟ್ಟಿಗೆ ಅವರಲ್ಲಿ ವಿಶ್ವಾಸವಿಡಬೇಕು; ಹಾಗು ಅಂಥ ಕಠಿಣ ಪ್ರಸಂಗವೇ ಒದಗಿದರೆ, ಅವರ ಸಹಾಯ ಪಡೆಯಬೇಕು, ಎಂದು ಆತನು ಮನಸ್ಸಿನಲ್ಲಿ ನಿರ್ಧರಿಸಿದನು ಇದೇ ಸ್ಥಿತಿಯಲ್ಲಿ ಮತ್ತೆ ಎರಡು ವರ್ಷಗಳು ಕಳೆದವು. ಇಷ್ಟರಲ್ಲಿ ನಾನಾನು ತಾ|| ೧೩ನೇ ಮಾರ್ಚ ೧೮೦೦ ರಲ್ಲಿ ತೀರಿಕೊಂಡನು. ನಾನಾನ ಮರಣದಿಂದ ಬಾಜೀರಾಯನದೇ ಆಗಲಿ, ಸಿಂದೆಯದೇ ಆಗಲಿ ಸ್ಥಿತಿಯೇನೂ ಸುಧಾರಿಸಲಿಲ್ಲ; ತದ್ವಿರುದ್ಧವಾಗಿ ಅವರಿಬ್ಬರ ಮುಖ್ಯ ಆಧಾರವೇ ಲೋಪವಾಯಿತು. ಕಡೆಗೆ ಸಿಂದೆಗೆ ತನ್ನ ಪ್ರಾಂತವನ್ನು ಬಿಟ್ಟುಗೊಟ್ಟು ಇಷ್ಟು ದೂರ ಪುಣೆಯಲ್ಲಿರುವದು ಅಶಕ್ಯವಾಯಿತು; ಯಾಕಂದರೆ, ಯಶವಂತರಾವ ಹೋಳಕರನು ಅಮೀರಖಾನನೆಂಬ ಪಠಾಣನ ಸಖ್ಯಬೆಳೆಸಿ, ಸಿಂದೆಯ ನಾಡು ಸುಲಿಯುವ ಉಪಕ್ರಮವನ್ನು ಒತ್ತರದಿಂದ ನಡೆಸಿದನು. ಆದರಿಂದ ಕಡೆಗೆ ನವಂಬರ ೧೮೦೦ರಲ್ಲಿ ಸಿಂದೆಯು ಪೇಶ್ವೆಯಿಂದ ೪೭ ಲಕ್ಷ ರೂಪಾಯಿಗಳನ್ನು ಪಡಕೊಂಡು, ಉತ್ತರಹಿಂದುಸ್ತಾನದ ಹಾದೀ ಹಿಡಿದನು. ಹೋಗುವಾಗ ಆತನು ತನ್ನ ಸರದಾರನಾದ ಘಾಟಗೇನ ಕೈಕೆಳಗೆ ಕೆಲವು ದಂಡು ಕೊಟ್ಟು, ಅವನನ್ನು ಪುಣೆಯಲ್ಲಿಯೇ ಇರಿಸಿ ಹೋದನು.

ನಾನಾಫಡಣೀಸನು ತೀರಿಕೊಳ್ಳಲು ಹಾಗು ಸಿಂದೆಯು ತನ್ನ ಪ್ರಾಂತಕ್ಕೆ ಹೊರಟು ಹೋಗಲು, ಬಾಜೀರಾಯನು ಸ್ವಸ್ಥವಾಗಿ ಕಾಲಹರಣ ಮಾಡಬಹುದಾಗಿತ್ತು; ಆದರೆ ಆತನು ಹಾಗೆ ಮಾಡದೆ, ಮೊದಲು ತನ್ನ ತಂದೆ-ರಘುನಾಥರಾಯನ ವಿರೋಧಿ ಪಕ್ಷದ ಜನರ ಮೇಲೆ ಕುನುಸು ಮಾಡತೊಡಗಿದನು. ಬಾಜೀರಾಯನು

ಎಲ್ಲಕ್ಕೂ ಮೊದಲು ರಾಸ್ತೇ ಸರದಾರನನ್ನು ಸೆರೆ ಹಿಡಿದನು. ಬಳಿಕ ವಿಠೋಜಿ ಹೋಳಕರನನ್ನು ಆನೆಯಿಂದ ತುಳಿಸಿ ಕೊಲ್ಲಿಸಿದನು! ಸಿಂಧೆಯು ಉತ್ತರಕ್ಕೆ ಬಂದ ಕೂಡಲೆ ಯಶವಂತರಾಯ ಹೋಳಕರನು ಅವನ ಕೂಡ ಅಲ್ಪ ಸ್ವಲ್ಪ ಬಡಿದಾಡಿ ಅಲ್ಲಿಂದ ದಕ್ಷಿಣಕ್ಕೆ ಹೊರಟನು; ಹಾಗು ತಮ್ಮ ವಿಠೋಜಿ ಹೋಳಕರನ ಖೂನಿನ ಸೇಡು ತೀರಿಸಿಕೊಳ್ಳುವದಕ್ಕೆಂದು ದಾರಿಯಲ್ಲಿ ಬೆಂಕಿ ಹಚ್ಚುವದು, ಕೊಲೆ-ಸುಲಿಗೆ ನಡೆಸುವದು ಮುಂತಾದ ದುಷ್ಕೃತ್ಯಗಳನ್ನು ನಡೆಸುತ್ತ ಖಾನದೇಶಕ್ಕೆ ಬಂದನು. ಆಗ ಬಾಜೀರಾಯನಿಗೆ ಮತ್ತೆ ಶಿಂಧೆಯ ದಂಡಿನ ಹಾಗು ಇಂಗ್ಲಿಷರ ದಂಡಿನ ಸಹಾಯ ಪಡೆಯುವ ಭಾಗ ಬಿತ್ತು; ಆದರೆ ಆಗಿನ ಇಂಗ್ಲಿಷರ ಕರಾರುಗಳು ಕಠಿಣ ತೋರಿದ್ದರಿಂದ, ಅವನು ಶಿಂಧೆಯ ದಂಡಿನ ನೆರವನ್ನೇ ಪಡೆಯಬೇಕಾಯಿತು. ಪಟವರ್ಧನ ಮುಂತಾದ ಸರದಾರರ ಸಹಾಯವು ಆಗ ಆತನಿಗೆ ವಿಶೇಷವಾಗಿ ಆಗ ಬೇಕಾಗಿತ್ತು; ಆದರೆ ಬಾಜೀರಾಯನು ಆಗ ರಾಸ್ತೆ ಮೊದಲಾದ ಎಲ್ಲ ಸರದಾರರನ್ನೂ ಸುಲಿಯಲಾರಂಭಿಸಿದ್ದರಿಂದ, ಅವರೆಲ್ಲರೂ ಉದಾಸೀನರೂ, ಶಂಕಿತರೂ ಆಗಿದ್ದರು. ತಾ॥ ೨೩ನೇ ಅಕ್ಟೋಬರಕ್ಕೆ ಹೋಳಕರನು ಹಡಪಸರದ ಬಳಿಗೆ ಸಸೈನ್ಯವಾಗಿ ಬಂದು ತಲುಪಿದನು. ಶಿಂಧೆಯ ಸೈನ್ಯವು ಘೋರಪಡಿಯ ಹತ್ತರ ಮೊದಲೇ ಬಂದಿಳಿದಿತ್ತು. ಉಭಯತರಲ್ಲಿ ತಾ॥ ೨೫ನೇ ಅಕ್ಟೋಬರಕ್ಕೆ ತುಮುಲದ ಕಾಳಗವಾಗಿ, ಶಿಂಧೆಯು ಸೋತನು; ಆತನ ಶಿಬಿರವೆಲ್ಲ ಹೋಳಕರನಿಂದ ಸುಲಿಯಲ್ಪಟ್ಟಿತು. ಆಗ ಬಾಜೀರಾಯನು ೭೦೦೦ ಸೈನ್ಯದೊಡನೆ ಸಿಂಹಗಡಕ್ಕೆ ಓಡಿಹೋದನು; ಹಾಗು ಅಲ್ಲಿಂದ ಕರ್ನಲ್ಲ ಕ್ಲೋಜ ಎಂಬವನ ಮುಖಾಂತರ ಇಂಗ್ಲಿಷರ ಸಹಾಯದ ಬಗ್ಗೆ ಸಂಧಾನ ನಡೆಸಿದನು.

ಇಂಗ್ಲಿಷರು ಬಾಜೀರಾಯನಿಗೆ ನೆರವಾಗಲಿಕ್ಕೆ ಸಿದ್ಧರೇ ಆಗಿದ್ದರು. ನಾನಾ ಫಡಣೀಸನಂಥ ಸುಪ್ರಸಿದ್ಧ ಮರಾಟರ ಮುತ್ಸದ್ದಿಯು ಜೀವಂತವಿರುವಾಗಲೇ ಪೇಶ್ವೆಯರ ಐಶ್ವರ್ಯದ ಒಳ್ಳೇ ಭರಭರಾಟೆಯ ಸಮಯದಲ್ಲೇ-ಯಾವ ಇಂಗ್ಲಿಷರು ರಘುನಾಥರಾಯನಿಗೆ ನೆರವಾಗಿ ಮರಾಟರೊಡನೆ ಯುದ್ಧವನ್ನು ಕೂಡ ಹೂಡಿದ್ದರೋ, ಅಂಥ ಆ ಇಂಗ್ಲಿಷರು ಬಾಜೀರಾಯನಂಥ ತೀರ ಹೇಡಿ ಪೇಶ್ವೇ ಪಟ್ಟಾಧಿಕಾರಿಯು ನಿರಾಶ್ರಿತನಾಗಿ ತಮ್ಮ ಸಹಾಯವನ್ನು ಯಾಚಿಸುತ್ತಿರಲು, ನಾನಾನ ಪಶ್ಚಾತ್ ಅವರು ಅವನಿಗೆ ನೆರವಾಗದಿರುವರೇ? ಇಷ್ಟೇ ಅಲ್ಲ, ಬಾಜೀರಾಯನು ತಮ್ಮ ಸಹಾಯಹೊಂದಬೇಕೆಂದು ಅವರು ಈ ಮೊದಲೇ ಅವನಿಗೆ ಉಪಟಳ ಸಹ ಕೊಡಹತ್ತಿದ್ದರು. ನಿಜಾಮನು ಈ ಮೊದಲು ಹಾಕಿಕೊಟ್ಟ ಪಾಠವನ್ನು ಹಿಂದುಸ್ಥಾನದೊಳಗಿನ ಎಲ್ಲ ರಾಜ-ಮಹಾರಾಜರೂ ಕಲಿಯಬೇಕೆಂದೂ ಮತ್ತು ತಮ್ಮ ದಂಡಿನ ಸಹಾಯ ಪಡೆಯಬೇಕೆಂದೂ ಲಾರ್ಡ ಕಾರ್ನವಾಲೀಸನ ನಿಕರದ ಪ್ರಯತ್ನವು ನಡೆದೇ ಇತ್ತು; ಆದರೆ ಇದುವರೆಗೆ ಯಾವನೊಬ್ಬ ಮರಾಟಾ ಸರದಾರನೂ ಆ ಬಗ್ಗೆ ಇಂಗ್ಲಿಷರಿಗೆ ಅನುಕೂಲವಾಗಿರಲಿಲ್ಲ. ಮಹದಾಜಿ ಶಿಂಧೆ, ನಾನಾಫಡಣವೀಸ ಹಾಗು

ದೌಲತರಾವ ಶಿಂಧೆ ಈ ತ್ರಿವರ್ಗರೂ ಇಂಗ್ಲಿಷರ ಆ ಮಾಯಾವೀ ಸಹಾಯವನ್ನು ಧಿಃಕರಿಸಲಿಕ್ಕೆ ಪೇಶ್ವೆಗೆ ಸಲಹೆ ಕೊಟ್ಟಿದ್ದರು; ಇಷ್ಟೇ ಅಲ್ಲ, ಸ್ವತಃ ಬಾಜೀರಾಯನಲ್ಲೂ ಇಂಗ್ಲಿಷರ ಆ ಧೂರ್ತತನದ ಮರ್ಮವನ್ನು ತಿಳಕೊಳ್ಳುವಷ್ಟು ಬುದ್ಧಿವಂತಿಕೆಯೂ ಇತ್ತು! ಅದಕ್ಕಾಗಿಯೇ ಅವನಾದರೂ ಅದು ವರೆಗೆ ಆ ಬಗ್ಗೆ ಶಕ್ಯವಾದಷ್ಟು ವಿರೋಧಿಯೇ ಆಗಿದ್ದನು ದಂಡು ಇಂಗ್ಲಿಷರದು; ಅದನ್ನು ತಮ್ಮ ಸ್ವಾಧೀನದಲ್ಲಿರಿಸಿಕೊಳ್ಳಬೇಕು; ಅದರ ಮೇಲಿನ ಅಧಿಕಾರಿಗಳು ಇಂಗ್ಲಿಷರೇ; ಅದರ ಖರ್ಚಿಗಾಗಿ ತಮ್ಮ ನಾಡಿನ ಕೆಲಭಾಗವನ್ನು ಬಿಟ್ಟುಕೊಡಬೇಕು; ಮತ್ತು ತಮ್ಮ ಮೇಲೆ ಅಂಥ ಕಠಿಣ ಪ್ರಸಂಗವೇ ಬಂದಾಗ ಮಾತ್ರ ಇಂಗ್ಲಿಷರ ಹುಕುಮಿನ ಮೇರೆಗೆ ಅದರಿಂದ ತಮ್ಮ ರಕ್ಷಣವಾಗಬೇಕು! ಈ ವ್ಯವಸ್ಥೆಯು ನಿಜಾಮನಿಗೆ ಮಾತ್ರ ಸರಿದೋರಿರಬಹುದು; ಯಾಕಂದರೆ ಇಡಿ ದಕ್ಷಿಣ ಹಿಂದುಸ್ತಾನದಲ್ಲಿ ಅವನು ಏಕಾಂಡಿಯಾಗಿದ್ದು, ಅವನಿಗೆ ಬೇರೆ ಯಾರ ಸಹಾಯವೂ ಇದ್ದಿರಲಿಲ್ಲ; ಆದರೆ ಮಹಾರಾಷ್ಟ್ರದಲ್ಲಿಯ ಮರಾಟರಿಗೆ ಇಂಗ್ಲಿಷರ ಹುಕುಮತಿಯ ಅಂಥ ಆ ಬಾಡಿಗೆಯ ದಂಡಿನ ಕಾರಣವೇನಿತ್ತು? ಆದರೂ ಅಂತಃಕಲಹದ ಮೂಲಕ ಮುಂದೆ ಅವರಿಗೂ ಅದರ ಅವಶ್ಯಕತೆಯುಂಟಾಯಿತು! ಈ ಮೊದಲು ನಾಲ್ಕು ನಾಲ್ಕು ನಾರೆ ಅಲ್ಲಗಳೆದ ಬಾಜೀರಾಯನು ಕಡೆಗೆ ಆ ಮಾತನ್ನು ನಿರುಪಾಯವೆಂದು ತಾನೇ ಎತ್ತಿ ಸಮ್ಮತಿಸಬೇಕಾಯಿತು!!

ಸವಾಯಿ ಮಾಧವರಾಯನ ಮರಣದ ನಂತರ ಪುಣೆಯ ದರ್ಬಾರದಲ್ಲಿ ನಡೆದ ಗೊಂದಲವನ್ನು ಮ್ಯಾಲೆಟ್ ಸಾಹೇಬನು ಪುಣೆಯ ಸಂಗಮದ ಹತ್ತಿರ ಕುಳಿತು ಸ್ವಸ್ಥಚಿತ್ತದಿಂದ ಅವಲೋಕಿಸುತ್ತಿದ್ದನು. ಸಿಂದೆ, ಹೋಳಕರ, ಪಟವರ್ಧನಾದಿ ಸರದಾರರೂ; ನಾನಾ, ಪರಶುರಾಮಾದಿ ಮುತ್ಸದ್ದಿಗಳೂ ಹಾಗು ಅವರೆಲ್ಲರ ಮಧ್ಯಮೇರುವಾದ ಬಾಜೀರಾಯನೂ ಮುಂತಾದ ಈ ಗ್ರಹೋಪಗ್ರಹಗಳ ಭ್ರಮಣ, ಯುತಿ, ಗ್ರಹಣ ಮತ್ತು ಯುದ್ಧಗಳು ನಡೆದಿರುವಾಗ, ಇಂಗ್ಲಿಷರಿಗೆ ಬೆದರುವ ಕಾರಣವೇ ಇರಲಿಲ್ಲ. ತಮ್ಮ ಮನೆಯಲ್ಲಿಯೇ ಘೋರವಾದ ಜಗಳ-ತಂಟೆಗಳು ನಡೆದಿರುವಾಗ, ಇಂಗ್ಲಿಷರ ಕಡೆಗೆ ಕೆಕ್ಕರಿಸಿ ನೋಡುವದಕ್ಕೆ ಅವರಾರಿಗೂ ಕಾರಣವೇ ಇರಲಿಲ್ಲ; ಅವಕಾಶವೂ ಇರಲಿಲ್ಲ. ತದ್ವಿರುದ್ಧವಾಗಿ ಪ್ರಸಂಗವಿಶೇಷದಲ್ಲಿ ತ್ರಯಸ್ಥನಾತೇಯಿದಿಂದ ಇಂಗ್ಲಿಷರ ಶಿಷ್ಟಾಯಿಯೇ ಅವರೆಲ್ಲರಿಗೆ ಉಪಯೋಗವಾಗುತ್ತಿತ್ತು; ಮತ್ತು ಅವರ ದಂಡಿನ ಸಹಾಯದ ಗುಪ್ತ ಅಪೇಕ್ಷೆಯು ಅವರೆಲ್ಲರಿಗೂ ಉಂಟಾಗಿದ್ದಿತು. ಪೇಶವೆಯ ರಾಜಧಾನಿಯಲ್ಲಿ ಕಳೆದ ನಾಲ್ಕಾರು ವರುಷಗಳಿಂದ ಗೊಂದಲದ ಮೇಲೆ ಗೊಂದಲಗಳು ಎಡೆಬಿಡದೆ ನಡೆದಿದ್ದವು; ಹಾಗು ಎಷ್ಟೋ ಅನರ್ಥಗಳೂ ಉಂಟಾಗಿದ್ದವು; ಆದರೆ ಸಂಗಮದೊಳಗಿನ ಇಂಗ್ಲಿಷರಿಗಾಗಲಿ, ಅವರ ಆಶ್ರಯದಲ್ಲಿದ್ದ ಇತರೇ ಜನರಿಗಾಗಲಿ ಅವುಗಳ ಉಪಸರ್ಗವು ಕೊಂಚವೂ ತಟ್ಟಿರಲಿಲ್ಲ. ಸಂಗಮದಿಂದ ಮೂರೇ ಮೈಲುಗಳ ಅಂತರದಲ್ಲಿ ಸಿಂದೆ-ಹೋಳಕರರ ನಡುವೆ ತುಮುಲ ಯುದ್ಧವಾಯಿತು; ಆದರೆ ಬ್ರಿಟಿಶ ರೆಸಿಡೆಂಟನಾದ ಕರ್ನಲ್ ಕ್ಲೋಜನು ಒಂದು ಉದ್ದನ್ನ ಕೋಲಿಗೆ ಇಂಗ್ಲಿಷ ನಿಶಾನಿ

ಯನ್ನೇರಿಸಿ, ಸ್ವಸ್ಥವಾಗಿರುತ್ತಿದ್ದನು.; ಯಾಕಂದರೆ ಆ ತಮ್ಮ ನಿಶಾನೆಗೆ ಅವರಿಬ್ಬರಿಂದಲೂ ಸನ್ಮಾನ ದೊರೆಯುವದೆಂದು ಅವನ ಖಾತ್ರಿಯಾಗಿತ್ತು! ಯುದ್ಧದ ಮರು ದಿವಸ ಯಶವಂತರಾಯ ಹೋಳಕರನು ಕರ್ನಲ್ ಕ್ಲೋಜನನ್ನು ತನ್ನ ಶಿಬಿರಕ್ಕೆ ಕರೆಕಳಿಸಿ, ಸಿಂದೆ-ಪೇಶ್ವೆಗೂ ತನಗೂ ಸಂಧಿಯಾಗುವಂತೆ ಮಧ್ಯಸ್ತಿಕೆ ಮಾಡಬೇಕೆಂದು ವಿನಂತಿ ಮಾಡಿಕೊಂಡನು.

ಆಗ ಹೋಳಕರನು ಪುಣೆಯ ಮೇಲೆ ಸಾಗಿ ಬಂದಿದ್ದನು, ಹಾಗು ಆಗ ಆತನಿಗೆ ವಿಜಯವೂ ಪ್ರಾಪ್ತವಾಗಿತ್ತು. ಆದರೂ ಅವನು ಮೊದಲು ತನ್ನ ದಂಡನ್ನು ಪುಣೆಯಲ್ಲಿ ಸೇರಗೊಡಲಿಲ್ಲ. ಬಾಜೀರಾಯನ ಕೂಡ ಆತನು ನಮ್ರತನದಿಂದಲೇ ವರ್ತನ-ಪತ್ರವ್ಯವಹಾರವನ್ನಿಟ್ಟಿದ್ದು, ಬಾಜೀರಾಯನು ಸಿಂಹಗಡದಿಂದ ಪುಣೆಗೆ ಹೊರಟು ಬರಬೇಕೆಂಬ ಬಗ್ಗೆ ವಿನಂತಿಯನ್ನೂ ಮಾಡಿಕೊಂಡಿದ್ದನು; ಆದರೆ ಬಾಜೀರಾಯನ ಅಂತರಂಗದ ಅಂಜಿಕೆಯು ದೂರವಾಗದ್ದರಿಂದ, ಆತನು ಸಿಂಹಗಡದಿಂದ ಮೊದಲು ರಾಯಗಡಕ್ಕೆ ಹೋದನು; ಅಲ್ಲಿಂದ ಅವನು ಮಹಾಡಿಗೆ ಹೋಗಿ, ಮುಂಬಯಿಯ ಇಂಗ್ಲಿಷರ ಕಡೆಗೆ ಪತ್ರ ಕಳಿಸಿ, ಹಡಗು ಹಾಗು ಸಂರಕ್ಷಕರನ್ನು ಕಳಿಸಿ ತನ್ನನ್ನು ಮುಂಬಯಿಗೆ ಕರೆದೊಯ್ಯಬೇಕೆಂದು ಬಿನ್ನೈಸಿಕೊಂಡನು. ಇತ್ತ ಬಾಜೀರಾಯನು ಪುಣೆಗೆ ಬರುವದಿಲ್ಲೆಂಬದನ್ನು ತಿಳಿದು, ಹೋಳಕರನು ಆತನನ್ನು ಹಿಡಿತರುವ ಸಲುವಾಗಿ ಕೊಂಕಣಕ್ಕೆ ಸೈನ್ಯವನ್ನಟ್ಟಿದನು. ಆಗ ಬಾಜೀರಾಯನು ಇಂಗ್ಲಿಷರ ಸರಂಜಾಮಿನ ಮಾರ್ಗ ಕೂಡ ನಿರೀಕ್ಷಿಸದೆ, ಸುವರ್ಣದುರ್ಗದ ಮೇಲೆ ಹಾಯ್ದು, ರೇವದಂಡೆಗೆ ಹೋಗಿ, ಅಲ್ಲಿಯ ಇಂಗ್ಲಿಷರ ಹಡಗಿನಲ್ಲಿ ಕುಳಿತು, ೬ನೇ ಡಿಸೆಂಬರಕ್ಕೆ ವಸಯಿಗೆ ತಲುಪಿದನು.

ಇತ್ತ ಹೋಳಕರನು ಪುಣೆಯಲ್ಲಿ ಹೆಚ್ಚಾಗಿ ಕರವನ್ನು ಎತ್ತಿ, ಜುನ್ನರದಿಂದ ಅಮೃತರಾಯನನ್ನು ಕರೆತಂದು ಪೇಶ್ವೇ ಪಟ್ಟಕ್ಕೆ ಕುಳ್ಳಿರಿಸಿದನು. ಆಗ ನಾನಾ ಹಾಗು ಬಾಜೀರಾಯ ಇವರ ಹಗೆಯಾದ ಚತುರಸಿಂಗ ಭೋಸಲೆ ವಾವೀಕರ ಎಂಬವನು ತನ್ನ ಮುರವತ್ತಿನಿಂದ ಸಾತಾರೆಯ ಮಹಾರಾಜರ ಕಡೆಯಿಂದ ಅಮೃತರಾಯನಿಗೆ ಪೇಶ್ವೇ ವಸ್ತ್ರಗಳನ್ನು ಕೊಡಿಸಿದನು. ಅಮೃತರಾಯನು ಪಟ್ಟವೇರಿದ ಕೂಡಲೆ ಹೋಳಕರನು ಪುಣೆ ನಗರವಾಸಿಗಳ ಮೇಲೆ ಮಾಡಿದ ಅತ್ಯಾಚಾರವು ಕಿವಿಯಿಂದ ಕೇಳಲಶಕ್ಯವಾಯಿತು! ಅವನು ನಗರದ ಉಕ್ಕಡಗಳನ್ನೆಲ್ಲ ಪ್ರತಿಬಂಧಿಸಿ, ಜನರನ್ನು ಪರಿಪರಿಯಿಂದ ಸುಲಿದನು!!

ಬಾಜೀರಾಯನು ಪುಣೆಯಿಂದ ಹೊರಟು ಹೋಗುತ್ತಲೆ, ಪುಣೆಯ ಇಂಗ್ಲಿಷ ರೆಸಿಡೆಂಟನಾದ ಕರ್ನಲ್ಲ ಕ್ಲೋಜನೂ ಪುಣೆಯಿಂದ ವಸಯಿಗೆ ಹೊರಟು ಹೋದನು. ಹೋಳಕರನು ಅವನಿಗೆ ಅಲ್ಲಿಯೇ ಇರಲಿಕ್ಕೆ ಹೇಳುತ್ತಿದ್ದನು. ಪ್ರಸ್ತುತದಲ್ಲಿ ಹೋಳಕರನೊಡನೆ ಒಪ್ಪಂದ ಮಾಡಿಕೊಳ್ಳುವದಕ್ಕಿಂತ, ತಮ್ಮ ಆಶ್ರಯಕ್ಕೆ ಬಂದಿರುವ ಬಾಜೀರಾಯನ ಕೂಡ ಒಡಂಬಡಿಕೆ ಮಾಡಿಕೊಳ್ಳುವದೇ ಶ್ರೇಯಸ್ಕರವೆಂದು ಬಗೆದು, ಅವನು ನೆಟ್ಟಗೆ ವಸಯಿಗೆ ಹೋದನು; ಮತ್ತು ಆತನ ಮುಖಾಂತರ ಬಾಜೀರಾಯ

ಹಾಗು ಇಂಗ್ಲಿಷರು ಇವರಿಗೆ ೩೧ನೇ ಡಿಸೆಂಬರ ೧೮೦೨ರಲ್ಲಿ ಒಪ್ಪಂದವಾಯಿತು. ಆ ಒಡಂಬಡಿಕೆಯ ಕಲಮುಗಳಲ್ಲಿಯ ಮುಖ್ಯ ಕಲಮು ಬಾಜೀರಾಯನು ಇಂಗ್ಲಿಷರ ದಂಡನ್ನು ತನ್ನಲ್ಲಿಟ್ಟುಕೊಳ್ಳಬೇಕೆಂಬದೇ ಇತ್ತೆಂದು ಬೇರೆ ಹೇಳಬೇಕಾಗಿಲ್ಲ! ತೋಫು ಖಾನೆ ಸಹಿತವಾಗಿ ೬೦೦೦ ಜನ ಕಾಲಾಳುಗಳನ್ನು ಇಂಗ್ಲಿಷರು ಬಾಜೀರಾಯನಿಗೆ ನಿರಂತರವಾಗಿ ಪೂರೈಸತಕ್ಕದ್ದು; ಆ ದಂಡು ಪೇಶ್ವೆಯ ನಾಡಿನಲ್ಲೇ ವಾಸಿಸಬೇಕು; ಯುದ್ಧಪ್ರಸಂಗದಲ್ಲಿ ೧೦೦೦ ಸಾವಿರ ದಂಡು ಬಾಜೀರಾಯನ ಆತ್ಮರಕ್ಷಣೆಗಾಗಿ ಆತನ ಹತ್ತಿರವೇ ಇರಬೇಕು. ಆ ಎಲ್ಲ ದಂಡಿನ ಖರ್ಚಿಗೆಂದು ಬಾಜೀರಾಯನು ೨೬ ಲಕ್ಷ ಉತ್ಪನ್ನಿನ ತನ್ನ ಪ್ರದೇಶವನ್ನು ಇಂಗ್ಲಿಷರ ಸ್ವಾಧೀನಪಡಿಸಬೇಕು. ಪೇಶ್ವೆಯು ಬೇರೆ ಯಾವ ಯುರೋಪಿಯನ್ನರಿಗೂ ಆಶ್ರಯ ಕೊಡಕೂಡದು. ಆತನು ಸುರತದ ಮೇಲಿನ ತನ್ನ ಹಕ್ಕು-ಬಾಧ್ಯತೆಯನ್ನು ಬಿಟ್ಟುಬಿಡತಕ್ಕದ್ದು; ಗಾಯಕವಾಡ ಹಾಗು ನಿಜಾಮು ಇವರ ಸಂಬಂಧದ ಕಲಹಗಳನ್ನು ಇಂಗ್ಲಿಷರ ಮುಖಾಂತರವೇ ತೀರಿಸಿಕೊಳ್ಳಬೇಕು. ಬೇರೆ ಯಾವ ರಾಜ-ಮಹಾರಾಜರೊಡನೆ ಯುದ್ಧವನ್ನೂ, ಒಪ್ಪಂದವನ್ನೂ, ದರ್ಬಾರದ ಮಾತು-ಕಥೆಗಳನ್ನೂ ಇಂಗ್ಲಿಷರಿಗೆ ತಿಳಿಸಿದ ಹೊರತು ಪರಸ್ಪರ ಮಾಡಕೂಡದು, ಮುಂತಾದ ಕಲಮುಗಳು ಆ ವಸಯಿಯ ಒಪ್ಪಂದದಲ್ಲಿದ್ದವು. "ಸ್ವಾತಂತ್ರ್ಯವನ್ನು ಮಾರಿ, ಬಾಜೀರಾಯನು ತನ್ನ ಶರೀರವನ್ನು ರಕ್ಷಿಸಿಕೊಂಡನೆ"ಂದು ಗ್ರಾಂಡ ಡಫ್‌ನಂಥ ಇಂಗ್ಲಿಷ ಇತಿಹಾಸಕಾರನು ಕೂಡ ಆ ಒಪ್ಪಂದದ ಕರಾರುಗಳ ಬಗ್ಗೆ ನಿಂದಾವ್ಯಂಜಕವಾದ ಉದ್ಗಾರಗಳನ್ನು ಹೊರಹೊರಡಿಸಿರುವನು!

ಆ ಒಪ್ಪಂದದಿಂದ ಸಿಂದೆಗೆ ಅನಿವಾರವಾದ ಕೋಪವುಂಟಾಯಿತು. ಬಾಜೀರಾಯನ ರಕ್ಷಣಕ್ಕೆಂದು ಸಿಂದೆಯು ತನ್ನ ದಂಡು ಕಳಿಸಿದ್ದನು; ಆದರೆ ವಸಯಿಯ ಒಪ್ಪಂದ ಮಾಡಿಕೊಳ್ಳುವ ಮೊದಲು ಬಾಜೀರಾಯನು ಸಿಂದೆಗಾಗಲಿ, ತನ್ನ ಇನ್ನೊಬ್ಬ ಹಿತಚಿಂತಕನಾದ ರಘೋಜಿ ಭೋಸಲೆಗಾಗಲಿ ಒಂದು ಶಬ್ದದಿಂದ ಕೂಡ ಕೇಳಲಿಲ್ಲ. ಆ ಒಪ್ಪಂದದಿಂದ ಪೇಶ್ವೆಯು ಇಂಗ್ಲಿಷರ ಸೂತ್ರದ ಗೊಂಬೆಯಾದನು. ಅಂದಿನಿಂದ ಸಿಂದೆ, ಹೋಳಕರ, ಪೇಶ್ವೆ ಇವರೆಲ್ಲರ ಸೂತ್ರಗಳೂ ಇಂಗ್ಲಿಷರ ಕೈಸೇರಿಬಿಟ್ಟವು. ಒಡೆಯನ ಒಡೆತನ ಹೋದ ಬಗ್ಗೆ ಒಡೆಯನಿಗೇ ಆಗದಷ್ಟು ದುಃಖವು, ಸೇವಕನ ಸೇವಕವೃತ್ತಿಯು ಗತಿಸಿದ ಬಗ್ಗೆ ಸೇವಕನಿಗೆ ಆಯಿತು! ಬಾಜೀರಾಯನು ಸ್ವಂತದ ಸ್ವಾತಂತ್ರ್ಯದ ಕೂಡ ಬೇರೆಯವರ ಸ್ವಾತಂತ್ರ್ಯವನ್ನೂ ಕಳೆದನು. ಇಂಗ್ಲಿಷರಾದರೂ ಆ ಒಪ್ಪಂದ ಮಾಡಿಕೊಳ್ಳುವ ಗಡಿಬಿಡಿಯಲ್ಲಿ ಬೇರೆಯವರ ಕಡೆಗೆ ನೋಡಿದರೆಲ್ಲಿ? ಸಾಲ್ಬಾಯಿಯ ಒಪ್ಪಂದದ ಅಮಲಬಜಾವಣಿಯ ಬಗ್ಗೆ ಸಿಂದೆಯೇ ಜಾಮೀನದಾರನಾಗಿದ್ದನು; ಆದರೆ ಇಂಗ್ಲಿಷರು ವಸಯಿಯ ಈ ಒಪ್ಪಂದ ಮಾಡಿಕೊಳ್ಳುವಾಗ ಆ ಸಿಂದೆಯನ್ನು ಒಂದು ಶಬ್ದದಿಂದಾದರೂ ಕೇಳಿದರೇ? ಪ್ರಸಂಗ ಸಾಧಿಸಿ ಎಲ್ಲರೂ ಸ್ವಾತಂತ್ರ್ಯದಿಂದ ವರ್ತಿಸುತ್ತಿರಲಿಕ್ಕೆ, ತಾನಾದರೂ ಪರತಂತ್ರನೇಕಾಗಬೇಕೆಂದು ಯೋಚಿಸಿ, ಸಿಂದೆಯು ವಸಯಿಯ ಆ ಒಪ್ಪಂದವನ್ನು ಮನ್ನಿಸ

ಲ್ಲ; ನಾಗಪುರದ ಭೋಸಲೆಯೂ ಹಾಗೆಯೇ ಮಾಡಿದನು.

ಒಡಂಬಡಿಕೆಯ ಕಾಗದದ ಮೇಲೆ ದಸ್ಕತ್ತುಗಳಾಗುತ್ತಲೆ, ಬಾಜೀರಾಯನನ್ನು ಎತ್ತಿ ಪೇಶ್ವೇ ಪಟ್ಟಗಟ್ಟುವ ಉದ್ಯೋಗವು ಇಂಗ್ಲಿಷರಿಗೆ ಪ್ರಾಪ್ತವಾಯಿತು. ಅವರು ಹೈದ್ರಾಬಾದ, ಮೈಸೂರ ಮುಂತಾದ ಕಡೆಯ ತಮ್ಮ ದಂಡನ್ನೆಲ್ಲ ಜನರಲ್ ವೆಲ್ಲ ಸ್ಲಿಯ ಕೈಕೆಳಗೆ ಒಟ್ಟುಗೂಡಿಸಿದರು. ಪಟವರ್ಧನ, ಗೋಖಲೆ, ನಿಪ್ಪಾಣೀಕರ, ವಿಂಚೂರಕರ ಮುಂತಾದ ಮರಾಟಾ ಸರದಾರರೂ ತಂತಮ್ಮ ಸೈನ್ಯಗಳೊಡನೆ ಇಂಗ್ಲಿ ಷರಿಗೆ ಬಂದು ಕೂಡಿದರು. ಹೋಳಕರನು ಪಟ್ಟಕ್ಕೆ ಕೂಡ್ರಿಸಿದ್ದರಿಂದ, ಮೂರೂ ಮುಕ್ಕಾಲು ಗಳಿಗೆಯ ಪೇಶ್ವೆಯಾಗಿದ್ದ ಅಮೃತರಾಯನು ಪುಣೆಪಟ್ಟಣವನ್ನು ಸುಟ್ಟು ಹುರಿಗೊಂಡು, ತನ್ನ ನಿರಾಶೆಯ ಸೇಡು ತೀರಿಸಿಕೊಳ್ಳುವ ವಿಚಾರದಲ್ಲಿದ್ದನು; ಆದರೆ ಅಷ್ಟರಲ್ಲಿ ಬಾಜೀರಾಯನ ಪಕ್ಷದ ಇಂಗ್ಲಿಷರ ಹಾಗು ಮರಾಟರ ದಂಡುಗಳು ಪುಣೆಯು ಮೇಲೆ ಸಾಗಿ ಬರುತ್ತಲಿವೆ ಎಂಬದು ತಿಳಿದ ಕೂಡಲೆ, ಅವನು ಪುಣೆಯಿಂದ ಹೊರಟು ಹೋದನು; ಮತ್ತು ಹೋಳಕರನೂ ದಾರಿಯಲ್ಲಿ ಕೊಲೆ-ಸುಲಿಗೆ-ಲೂಟಿಗಳನ್ನು ಮಾಡುತ್ತ ಹಾಗು ಅಲ್ಲಲ್ಲಿ ಬೆಂಕಿಹಚ್ಚಿ ನಗರ-ಪಟ್ಟಣಗಳನ್ನು ಹಾಳು ಮಾಡುತ್ತ ಔರಂಗಾಬಾದದಿಂದ ಮಾಳವಕ್ಕೆ ಮರಳಿ ಹೋದನು. ಅಮೃತರಾಯನೂ ನಾಶಿ ಕದ ವರೆಗೆ ಅದೇ ಕ್ರಮವನ್ನನುಸರಿಸಿದನು; ಆದರೆ ಕಡೆಗೆ ಜನರಲ್ ವೆಲ್ಲಸ್ಲೀ ಯೊಡನೆ ಒಪ್ಪಂದ ಮಾಡಿಕೊಂಡು ಹಾಗು ಕೆಲ ದಿನಗಳವರೆಗೆ ಅವನ ದಂಡಿನೊಡ ನೆಯೇ ಇದ್ದು, ಕೊನೆಗೆ ೮ ಲಕ್ಷದ ನಕ್ತ ನೇಮಣೂಕ ಮಾಡಿಕೊಂಡು, ಕಾಶಿಗೆ ಹೋಗಿ ಇರಹತ್ತಿದನು. ತಾ|| ೧೩ನೇ ಮೇ ೧೮೦೩ಕ್ಕೆ ಬಾಜೀರಾಯನು ಪುಣೆಗೆ ಮರಳಿ ಬಂದು, ಮತ್ತೆ ಪೇಶ್ವೆಯಾದನು.

---

೧೫ನೆಯ ಪರಿಚ್ಛೇದ.

## ಪೆಂಡಾರಿಗಳ ಪ್ರಾಬಲ್ಯ.

ಶಿಂಧೆಯು ಪುಣೆಯಿಂದ ಮರಳಿ ಹೋಗುತ್ತಿರುವಾಗ ಇಂಗ್ಲಿಷರ ಪಾರುಪತ್ಯದ ವಿಚಾರ ಮಾಡುತ್ತ ನಡೆದಿದ್ದನು. ಆ ಕೆಲಸದಲ್ಲಿ ಅವನಿಗೆ ರಘೂಜಿ ಭೋಸಲೆಯೂ ಶರವಾದನು. ಅವರಿಬ್ಬರೂ ಕೂಡಿ ಹೋಳಕರನನ್ನು ತಮ್ಮ ಆ ಸಂಘದಲ್ಲಿ ಕೂಡಿಸಿ ಕೊಳ್ಳುವ ಬಗ್ಗೆ ಸಂಧಾನ ನಡೆಸಿದರು. ಹೋಳಕರನು ಆ ಮಿತ್ರ ಸಂಘಕ್ಕೆ ಸ್ವಾಭಾ ವಿಕವಾಗಿಯೇ ಕೂಡತಕ್ಕವನು; ಆದರೆ ಮರಾಟರ ದೈವದುರ್ವಿಪಾಕದಿಂದ ಆಗ ಅವನಿಗೆ ಆ ಬುದ್ಧಿಯುಂಟಾಗಲಿಲ್ಲ! ಶಿಂಧೆ ಮತ್ತು ಭೋಸಲೆ ಇವರ ಸರಾಸರಿ ಒಂದು ಲಕ್ಷ ಸೈನ್ಯವು ಒಟ್ಟುಗೂಡಿ ಮೊಗಲಾಯಿಯ ಮೇರೆಗೆ ಬಂದಿತು. ಇತ್ತ ಇಂಗ್ಲಿಷರೂ ತಮ್ಮ ಎಲ್ಲ ಪ್ರಾಂತಗಳೊಳಗಿಂದ ೫೦ ಸಾವಿರ ದಂಡು ಕೂಡಿಸಿದರು.

ಜನರಲ್ಲ ವೆಲ್ಲಸ್ಲಿಯು ಅಹಮ್ಮದನಗರದ ಕೋಟೆಯನ್ನು ಶಿಂಧೆಯ ಕಡೆಯಿಂದ ಸೆಳೆಕೊಂಡನು; ಹಾಗು ತನ್ನ ದಂಡನ್ನು ಉತ್ತರದ ಕಡೆಗೆ ಸಾಗಿಸಿದನು. ಉಭಯ ಸೈನ್ಯಗಳು ಅಸಯಿ ಎಂಬಲ್ಲಿ ಕಲೆತವು. ಅಲ್ಲಿ ಬಹು ದೊಡ್ಡ ಕಾಳಗವಾಯಿತು. ಅದರಲ್ಲಿ ಮರಾಟರು ಸೋತರು. ಅತ್ತ ಉತ್ತರ ಹಿಂದುಸ್ತಾನದಲ್ಲಿ ಜನರಲ್ ಲೇಕ ಎಂಬವನು ಶಿಂಧೆಯ ನಾಡಿನ ಮೇಲೆ ಹಾಳಿಯಿಕ್ಕಿದನು. ಅವನು ಅಲೀಗಡದ ಕೋಟೆಯನ್ನು ತಕ್ಕೊಂಡು ದಿಲ್ಲಿಯ ಕಡೆಗೆ ತಿರುಗಿದನು. ೧೮೦೩ರಲ್ಲಿ ಅವನು ದಿಲ್ಲಿಯನ್ನು ಗೆದ್ದುಕೊಂಡು, ಮೊಗಲರ ಕಡೆಯ ಬಾದಶಹನಾದ ಶಹಾಅಲಮ್ಮನನ್ನು ತನ್ನ ಸ್ವಾಧೀನಪಡಿಸಿಕೊಂಡನು. ಕಡೆಗೆ ಲಾಸವಾರಿ ಎಂಬಲ್ಲಿ ಮರಾಟರ ಪರಾಭವವಾಗಿ ಚಂಬಳಾ ನದಿಯ ಉತ್ತರದ ಪ್ರದೇಶವೆಲ್ಲ ಇಂಗ್ಲಿಷರ ವಶವಾಯಿತು.

೧೮೦೩ನೇ ಇಸ್ವಿಯ ಮೇತಿಂಗಳ ೩೦ನೇ ತಾರೀಖಿಗೆ ರೆಸಿಡೆಂಟನಾದ ಕರ್ನಲ್ಲ ಕ್ಲೋಜನಿಗೆ ಬಂದ ಕಲಕತ್ತೆಯ ವ್ಹಾಯಿಸರಾಯನ ಪತ್ರದಲ್ಲಿ ಇಂಗ್ಲಿಷರ ದೃಷ್ಟಿಯಿಂದ ಆಗಿನ ಮರಾಟಾ ರಾಜ್ಯದ ಪರೀಕ್ಷಣವು ಮಾಡಲ್ಪಟ್ಟಿದೆ. ಅದರಲ್ಲಿ ವ್ಹಾಯಿಸರಾಯನು ಬರೆದಿರುವದೇನಂದರೆ,-ಮೈಸೂರ ರಾಜ್ಯವು ಹಾಳಾದ್ದರಿಂದ, ಹಿಂದುಸ್ತಾನದಲ್ಲಿ ಇನ್ನು ನಮಗೆ ಮರಾಟರ ಹೊರತು ಅನ್ಯ ಯಾವ ಶತ್ರುಗಳೂ ಉಳಿದಿರುವದಿಲ್ಲ. ಮರಾಟರಿಗೆ ಯಾವದೊಂದು ಯುರೋಪಿಯನ್ ರಾಷ್ಟ್ರದ ಸಹಾಯವು ಎಲ್ಲಿಯವರೆಗೆ ದೊರೆಯಲಾರದೋ, ಅಲ್ಲಿಯ ವರೆಗೆ ನಾವು ಅಂಜುವ ಕಾರಣವಿಲ್ಲ. ಆದರೂ ಯಾವನೊಬ್ಬ ಮಧ್ಯವರ್ತೀ ಬಲಿಷ್ಠ ಸಂಸ್ಥಾನಿಕನು ಬೇರೆ ಸಂಸ್ಥಾನಿಕರನ್ನು ಕೂಡಿಸಿಕೊಂಡು ಒಂದು ಸಂಘವನ್ನುಂಟು ಮಾಡಿದರೆ ಮಾತ್ರ ನಾವು ಅಂಜಬೇಕಾಗುತ್ತದೆ. ಇಂಥ ಸಂಘದ ಬಗ್ಗೆ ಕೂಡ ಹೆಚ್ಚಾಗಿ ಅಂಜಬೇಕಾಗಿಲ್ಲ; ಆದರೂ ಶಕ್ತಿಮೀರಿ ಹೆಣಗಿ, ಅಂಥ ಯಾವುದೊಂದು ಸಂಘವುಂಟಾಗದಂತೆ ಪ್ರಯತ್ನಿಸುತ್ತಿರಬೇಕು. ಅದಕ್ಕೆ ತಕ್ಕ ಹಾಗು ಖಾತ್ರಿಯ ಉಪಾಯವೆಂದರೆ, ಮರಾಟರಲ್ಲಿ ಪ್ರಾಮುಖ್ಯರಾದ ಸಂಸ್ಥಾನಿಕರೊಡನೆ ನಾವು ಸ್ನೇಹಭಾವದಿಂದ ವರ್ತಿಸುವದು; ಆದರೆ ಅದಾದರೂ ನಮ್ಮ ವರ್ಚಸ್ಸನ್ನು ನಾವು ಕಾಯ್ದುಕೊಂಡೇ; ನಮ್ಮ ದಂಡಿನ ಸತ್ತೆಯಲ್ಲಿ ಅವರ ಸಂಪೂರ್ಣ ಭರವಸೆಯುಂಟಾಗಬೇಕು. ಬಾಜೀರಾಯನೊಡನೆ ವಸಯಿಯ ಒಪ್ಪಂದ ಮಾಡಿಕೊಂಡ ನಮ್ಮ ಮುಖ್ಯ ಉದ್ದೇಶವಾದರೂ ಇದೇ ಆಗಿರುತ್ತದೆ. ಈ ಒಡಂಬಡಿಕೆಯಿಂದ ಅವನಿಗೆ ಪೇಶ್ವೇಪಟ್ಟವು ಲಭಿಸುವದು; ಆದರೆ ನಮ್ಮ ವರ್ಚಸ್ಸು ಪುಣೆಯಲ್ಲಿ ಮಿತಿಮೀರಿ, ಇತರ ಸರದಾರರ ಹಿತಸಂಬಂಧದ ರಕ್ಷಣವನ್ನೆಲ್ಲ ನಮ್ಮ ಮುಖಾಂತರವೇ ಮಾಡಿಕೊಳ್ಳಬೇಕಾಗಿದೆ. ಪೇಶ್ವೆಗೆ ಕೆಡಕೆನಿಸುವಂತಹ ಸಂಗತಿಯನ್ನು-ವಿಶೇಷವಾಗಿ ಆತನ ಅಂತರ್ವ್ಯವಸ್ಥೆಯ ಬಗ್ಗೆ ನೀವು ಮಾಡಕೂಡದು; ಆದರೆ ನಿಮ್ಮ ಪ್ರಜಾಜನರೂ ನಿಮ್ಮ ಸೇವಕರೂ ಹಾಗು ನಿಮ್ಮ ಮಾಂಡಲಿಕರೂ ನಿಮ್ಮೊಡನೆ ಎಬ್ಬಿಸಿದ ಗೊಂದಲವನ್ನೂ ಅವರು ನಿಮಗೆ ಮಾಡಿದ ಅವಮಾನವನ್ನೂ ನಾವು ನಿವಾರಿಸಿರುತ್ತೇವೆ; ಹಾಗು ಸಿಂದೆ, ಹೋಳಕರ, ಭೋಸಲೆ ಅಥವಾ ಬೇಣಮಾನಿ

ಯಾದ ನಿಮ್ಮ ಅಮೃತರಾಯ ಇವರ ಸಹಾಯದಿಂದ ನಿಮಗೆ ಎಂದಿಗೂ ಲಭಿಸ ದಂತಹ ಶಾಂತತೆಯನ್ನಾಗಲಿ ಸನ್ಮಾನವನ್ನಾಗಲಿ ನಾವು ನಿಮಗೆ ದೊರಕಿಸಿಕೊಟ್ಟಿರುತ್ತೇವೆಂದು ಅವರಿಗೆ ಒಡೆದು ಕಾಣುವಂತೆ ತಿಳಿಸುತ್ತಿರಬೇಕು. ನಮ್ಮ ಆಶ್ರಯವನ್ನು ಪಡೆದಂದಿನಿಂದ ನಿಜಾಮನಿಗೆ ಎಷ್ಟು ಸೌಖ್ಯವುಂಟಾಗಿದೆಯೆಂಬುದನ್ನೂ ಬಾಜೀ ರಾಯನಿಗೆ ತಿಳಿಸಿ ಹೇಳಿರಿ. ವಸಯಿಯ ಒಪ್ಪಂದದ ಮುಖ್ಯ ಹೇತುವೆಂದರೆ, ಫ್ರೆಂಚ ಜನರಿಗೆ ಮರಾಟರ ರಾಜ್ಯದಲ್ಲಿ ಒಂದಿಷ್ಟು ಸದುವೂ ದೊರೆಯಕೂಡದೆಂದು. ಆದುದ ರಿಂದ ಎಲ್ಲ ದರಬಾರಗಳೊಳಗಿನ ಫ್ರೆಂಚ ಜನರನ್ನು ಕೂಡಲೆ ಹೊರಗಟ್ಟುವ ಪ್ರಯತ್ನಕ್ಕೆ ಪ್ರಾರಂಭಿಸಿರಿ. ಸರಂಜಾಮಿ ದಂಡನ್ನು ಒಪ್ಪಂದದ ಮೇರೆಗೆ ಇಟ್ಟು ಕೊಂಡು, ಉಳಿದುದನ್ನು ತಿರುಗಿ ಕಳಿಸಿರಿ; ಹಾಗು ಆ ದಂಡಿನ ಖರ್ಚಿಗಾಗಿ ದೊರೆಯಬೇಕಾಗಿರುವ ಪ್ರಾಂತವನ್ನು ಕೂಡಲೆ ಸ್ವಾಧೀನಪಡಿಸಿಕೊಳ್ಳಿರಿ. ಕಾರ ಭಾರದ ವಿಷಯವಾಗಿ ಕೇಳಿದ ಸಲಹೆಯನ್ನು ಚೆನ್ನಾಗಿ ಹೇಳುತ್ತಿರಬೇಕು; ಆದರೂ ಪೇಶ್ವೆಯ ಕೆಲಸದಲ್ಲಿ ಹೆಚ್ಚಾಗಿ ಕೈಹಾಕಬೇಡಿರಿ; ಆದರೆ ಅಲ್ಪ ಸ್ವಲ್ಪ ಕೈ ಹಾಕದ ಹೊರತು ನಡೆಯಲಾರದೆಂಬದನ್ನು ಲಕ್ಷ್ಯದಲ್ಲಿಡಿರಿ. ಯಾಕಂದರೆ ಜಹ ಗೀರದಾರರ ಸಲುವಾಗಿ ಪೇಶ್ವೆಯೊಡನೆ ಮಧ್ಯಸ್ಥಿಕೆ ಮಾಡುವದನ್ನು ನಾವು ಸಮ್ಮತಿ ಸಿರುತ್ತೇವೆ. ಬಾಜೀರಾಯನು ವಿಶ್ವಾಸಿಗನಲ್ಲ; ಮತ್ತು ಅವನಿಂದಲೇ ಜಹಗೀರ ದಾರರ ಹಿತಸಂರಕ್ಷಣವಾಗಲಾರದು; ಆದ್ದರಿಂದ ಕಾರಭಾರದಲ್ಲಿ ಕೈಹಾಕಬೇಕಾದರೆ, ನೀವು ನ್ಯಾಯದ ತತ್ವಕ್ಕನುಸರಿಸಿಯೇ ನಡೆಯುತ್ತಿರುವಿರೆಂಬದನ್ನು ಪೇಶ್ವೆಯ ನಿದರ್ಶನಕ್ಕೆ ತಂದುಕೊಡಿರಿ. ಪುಣೆಯಲ್ಲಿ ಸರಂಜಾಮಿ ದಂಡನ್ನು ಇದಕ್ಕೂ ಹೆಚ್ಚು ಇಡಲಿಕ್ಕೆ ಬಂದರೆ ಅನುಕೂಲ; ಆದರೆ ಅದನ್ನು ಬೆಳಿಸುವಾಗ ಮಾತ್ರ ಪೇಶ್ವೆ ಹಾಗು ಇತರ ಸರದಾರರ ಮನಸ್ಸಿನಲ್ಲಿ ಆ ಬಗ್ಗೆ ಶಂಕೆ, ಪ್ರತಿಶಂಕೆಗಳುಂಟಾಗದಂತೆ ನೋಡಿ ಕೊಳ್ಳಬೇಕು. ನಾವು ಪೇಶ್ವೆಯೊಡನೆ ಮಾತಾಡುವಾಗ ಯಾವ ಹೇತುವಿನಿಂದ ಮಾತಾಡುತ್ತಿರುವೆವೋ, ಅದಕ್ಕೂ ಭಿನ್ನವಾದ ಹೇತುವು ನಮ್ಮ ಮನಸ್ಸಿನಲ್ಲಿಲ್ಲೆಂದು ಅವನಿಗನಿಸಿರಬೇಕು. ದೌಲತರಾವ ಸಿಂದೆಯು ತನ್ನ ಎಲ್ಲ ದಂಡಿನೊಡನೆ ಪುಣೆಯ ಮೇಲೆ ಸಾಗಿಬರುವ ಸಿದ್ಧತೆಯಲ್ಲಿರುತ್ತಾನೆ. ನಾವು ಅವನಿಗೆ ಸಾಮೋಪಚಾರದಿಂದ ಹೇಳಿ ನೋಡುತ್ತೇವೆ. ಭೋಸಲೆ ಹಾಗು ಹೋಳಕರ ಇವರ ಸಹಾಯದ ಹೊರತು ಸಿಂದೆಯೊಬ್ಬನಿಗೇ ನಮ್ಮೊಡನೆ ಯುದ್ಧಕ್ಕೆ ನಿಲ್ಲುವ ಧೈರ್ಯವಿಲ್ಲ. ಇಂಗ್ಲಿಷರೆಂಬ ಹೆಸರಿನ ಅಂಜಿಕೆಯಿಂದಲೇ ಮರಾಟಾ ದರಬಾರಿಗಳ ಸಂಘವಾಗಲಾರದು! ಆದರೆ ಅಂಥ ಸಂಘವುಂಟಾಗುವ ಹಾರಿಕೆಯ ಸುದ್ದಿಗಳು ಮಾತ್ರ ಹೆಚ್ಚಾಗಿ ಬರುತ್ತಲಿವೆ. ನಮ್ಮನ್ನು ಅಂಜಿಸುವದಕ್ಕೆಂದೇ ಅಂಥ ಸುದ್ದಿಗಳನ್ನು ಅವರು ಹುಲುಬುತ್ತಿರಬಹು ದಾಗಿದೆ; ಆದರೂ ಅಂಥ ಆಧಾರರಹಿತವಾದ ಸುದ್ದಿಗಳನ್ನು ಪ್ರತಿಬಂಧಿಸುತ್ತಿರಬೇಕು. ನಾವು ಅಂಜುತ್ತಿರುವೆವೆಂದು ತೋರಿದರೆ, ಒಂದುವೇಳೆ ಈ ಮೊದಲು ಆಗದಿದ್ದ ಸಂಘವು ಕೂಡಲೆ ತಲೆಯೆತ್ತಬಹುದಾಗಿದೆ; ಮತ್ತು ಮರಾಟರು ಜೀವದ ಮೇಲೆ

ಉದಾರರೂ ಆಗಬಹುದಾಗಿದೆ. ನಾವು ಸಿಂದೆ ಮತ್ತು ಭೋಸಲೆ ಇವರಿಗೆ ಪರಸ್ಪರ ಬಜಾಯಿಸುತ್ತಿದ್ದೇವೆ. ಸಿಂದೆ ಹಾಗು ಹೋಳಕರ ಇವರಲ್ಲಿ ಐಕ್ಯವುಂಟಾಗದಿದ್ದರೆ, ನಮಗೆ ಯಾವ ಚಿಂತೆಯೂ ಇರುವದಿಲ್ಲ; ಆದರೂ ಅವರಿಬ್ಬರ ಐಕ್ಯವಾಗಿ, ಹೋಳಕರನು ಪೇಶ್ವೆ ಇಲ್ಲವೆ ನಿಜಾಮು ಇವರ ವಿರುದ್ಧ ವರ್ತಿಸುವನೋ ಹೇಗೋ ಎಂಬದನ್ನು ನೋಡತಕ್ಕದ್ದಾಗಿದೆ. ಪೇಶ್ವೆಯು ಕೊಡಲೊಪ್ಪಿದ ಪ್ರದೇಶಕ್ಕೆ ಬದಲು, ಹೆಚ್ಚು ಅನುಕೂಲವಾದ ಪ್ರದೇಶವು ಕೊಂಕಣದಲ್ಲಾಗಲಿ ಬುಂದೇಲಖಂಡದಲ್ಲಾಗಲಿ ದೊರೆಯುವದು ಶಕ್ಯವೋ ಅಶಕ್ಯವೋ ಎಂಬುದನ್ನು ನಾವು ನಿರೀಕ್ಷಿಸುತ್ತಿರುವೆವು; ಆದರೆ ಅಷ್ಟರಲ್ಲಿ ಈ ಮೊದಲು ಕೊಡಲೊಪ್ಪಿದ ಪ್ರಾಂತವನ್ನು ಮಾತ್ರ ಬೇಗನೆ ಸ್ವಾಧೀನ ಪಡಿಸಿಕೊಳ್ಳಿರಿ; ಒಂದು ವೇಳೆ ಅದನ್ನು ಕೊಡಲಿಕ್ಕೆ ಪೇಶ್ವೆಯಿಂದ ತಡವಾದರೆ ಆ ಬಗ್ಗೆ ಹಾನಿಯನ್ನು ತುಂಬಿಕೊಡಿರೆಂದು ಅವನನ್ನು ಕೇಳಿರಿ.

ತದನಂತರ ಮೂರೇ ದಿನಗಳಿಗೆ ವ್ಹಾಯಿಸರಾಯನು ಶಿಂದೆಯ ದರ್ಬಾರದೊಳಗಿನ ರೆಸಿಡೆಂಟನಾದ ಕರ್ನಲ್ಲ ಕಾಲಿನ್ಸನಿಗೆ ಒಂದು ಪತ್ರವನ್ನು ಕಳಿಸಿದನು. ಆ ಪತ್ರದ ಸಂಗತಿ ಹೀಗೆ ಇದ್ದಿತು:—"ನರ್ಮದೆಯನ್ನು ದಾಟಿ ಉತ್ತರಕ್ಕೆ ಬರುವಂತೆ ನೀವು ಶಿಂಧೆಗೆ ಹೇಳಿರಿ; ಮತ್ತು ಹೇಗಾದರೂ ಮಾಡಿ ಆತನ ಮನಸ್ಸನ್ನೊಲಿಸಿರಿ. ಅವನಿಗೆ ತಿಳಿಹೇಳುವ ಮಾತುಗಳೆಂದರೆ, ಶಿಂಧೆಯು ಮರಾಟಾ ರಾಜ್ಯದೊಳಗಿನ ಮಾಂಡಲಿಕನಾಗಿರುತ್ತಾನೆ. ಅವನು ಹೋಳಕರನಿಂದ ಪೇಶ್ವೆಯ ಸಂರಕ್ಷಣವನ್ನು ಮೊದಲೇ ಮಾಡಬೇಕಾಗಿತ್ತು; ಆದರೆ ಇನ್ನು ಅವನು ಪುಣೆಗೆ ಹೋಗುವ ಕಾರಣವಿರುವದಿಲ್ಲ. ವಸಯಿಯ ಒಪ್ಪಂದವು ತನಗೆ ಮಾನ್ಯವಾಗಿದೆಯೆಂದು ಶಿಂದೆಯು ಈ ಮೊದಲೇ ನಿಮಗೆ ತಿಳಿಸಿರುತ್ತಾನೆ; ಆದರೆ ಪ್ರಸ್ತುತದ ಆತನ ಆಲೋಚನೆಯು ಭಿನ್ನವಾಗಿರುವಂತೆ ತೋರುತ್ತದೆ. ವಸಯಿಯ ಒಪ್ಪಂದದ ಉದ್ದೇಶವು ಬೇರೆಯವರ ಸ್ವಾತಂತ್ರ್ಯವನ್ನು ಸೆಳಕೊಳ್ಳುವದಿರುವದಿಲ್ಲ; ಎಲ್ಲರ ನ್ಯಾಯವಾದ ಹಕ್ಕುಗಳನ್ನು ಸಂರಕ್ಷಿಸತಕ್ಕದ್ದಾಗಿದೆ. ಯಾರೂ ಬೇರೆಯವರ ಕಾರಭಾರದಲ್ಲಿ ಕೈಹಾಕಬಾರದು. ಪೇಶ್ವೆಯ ಹುಕುಮನ್ನು ಆತನ ಇತರ ದರ್ಬಾರಿಗಳು ಮನ್ನಿಸಬೇಕೆಂಬುದೇ ನಮ್ಮ ಉದ್ದೇಶವಾಗಿರುತ್ತದೆ; ಮತ್ತು ಮಾಂಡಲಿಕ ಈ ನಾತೆಯಿಂದ ಶಿಂದೆಯ ಹೇತುವಾದರೂ ಅದೇ ಆಗಿರಬೇಕು. ಶಿಂದೆಗೆ ಪುಣೆಯ ದರ್ಬಾರದಲ್ಲಿನ ತನ್ನ ವರ್ಚಸ್ಸು ಕಡಿಮೆಯಾಯಿತೆಂದು ಅನಿಸಿರಬಹುದು; ಆದರೆ ಅದು ಈ ವಸಯಿಯ ಒಪ್ಪಂದದಿಂದ ಕಡಿಮೆಯಾಗಿರದೆ, ಹೋಳಕರನ ದಂಡಿನಿಂದ ಪುಣೆಯಲ್ಲಿ ಸೋಲಲು, ಶಿಂದೆಯು ಇಂಗ್ಲಿಷರಿಗೆ ಮಧ್ಯಸ್ತಿಕೆ ಮಾಡಲು ಬಿನ್ನಯಿಸಿದಂದೇ ನಷ್ಟವಾಗಿರುತ್ತದೆಂದು ಅವನಿಗೆ ತಿಳಿಹೇಳಿರಿ. ಪೇಶ್ವೆಯು ತನ್ನನ್ನು ಕೇಳದ ಹೊರತು ಇಂಗ್ಲಿಷರೊಡನೆ ಒಡಂಬಡಿಕೆ ಮಾಡಿಕೊಂಡದ್ದು ಶುದ್ಧ ತಪ್ಪೆಂದು ಶಿಂದೆಯು ತಿಳುವಳಿಕೆಯಾಗಿರಬಹುದು; ಆದರೆ ಅದು ತೀರ ನಿರಾಧಾರದ ಸಂಗತಿಯೆಂದು ಅವನಿಗೆ ತಿಳಿಸಿರಿ. ಸಾಲ್ಬಾಯಿಯ ಒಪ್ಪಂದದಲ್ಲಿ ಮಹದಾಜಿ ಶಿಂದೆಯ ಮಧ್ಯಸ್ಥಿಕೆ ಮತ್ತು ಜಾಮೀನು

ಗಳನ್ನು ಇಂಗ್ಲಿಷರು ಮನ್ನಿಸಿದ್ದರು; ಆದರೆ ಅದು ವಂಶಪರಂಪರಾಗತವಾದ ಹಕ್ಕಾಗಲಾರದು. ಆ ಕಾಲವೂ ಗತಿಸಿತು! ಆ ಮನುಷ್ಯನೂ ಗತಿಸಿದನು! ಹಿಂದಿನದು ಕಟ್ಟಿಕೊಂಡು ಹಿತ್ತಲದಲ್ಲತ್ತರೆಂಬ ಗಾದೆಯೇ ಸರಿ! ಇಷ್ಟೇ ಅಲ್ಲ, ಮರಾಟಾ ರಾಜ್ಯದ ಮುಖ್ಯಸ್ಥನಾದ ಪೇಶ್ವೆಯು ನಮ್ಮೊಡನೆ ಮಾಡಿಕೊಂಡ ಒಪ್ಪಂದವು, ಅವನ ಎಲ್ಲ ಮಾಂಡಲಿಕರಿಗೂ ಬಂಧನಕಾರಕವಾಗಬೇಕು. ಮಹಾರಾಷ್ಟ್ರದ ಹಳೇ ಬಿಗುವು-ಘುತನೆಗಳು ಈಗ ಉಳಿದಿರುವದಿಲ್ಲ. ಮಹದಾಜಿ ಮತ್ತು ದೌಲತ್ತರಾಯರು ನೆರೆಹೊರೆಯ ಸಂಸ್ಥಾನಿಕರೊಡನೆ ಸ್ವತಂತ್ರ ರೀತಿಯಿಂದ ಯುದ್ಧ ಮತ್ತು ಒಡಂಬಡಿಕೆಗಳನ್ನು ಮಾಡಿಕೊಂಡಿದ್ದರೂ, ಅವರು ಪೇಶ್ವೆ ಪಟ್ಟದ ಅಧಿಕಾರವನ್ನು ನಿರಾಕರಿಸಿರಲಿಲ್ಲ. ವರ್ಹಾಡದ ಭೋಸಲೆಯ ವಿಷಯವಾಗಿ ಕದಾಚಿತ್ ಹೀಗೆ ಅನ್ನುವಂತಿರಲಿಕ್ಕಿಲ್ಲ. ಯಾಕಂದರೆ, ಶಾಹೂರಾಜನ ಅಧಿಕಾರವೇ ತನಗೆ ಪ್ರಾಪ್ತವಾಯಿತೆಂದು ಅವನು ಅನ್ನುತ್ತಿರುವನು, ಆದರೆ ಶಾಹೂರಾಜನ ಪ್ರತಿನಿಧಿತ್ವದ ಪರಂಪರೆಯನ್ನು ಪೇಶ್ವೆಯವರು ಸಾಗಿಸುತ್ತಿರಲಿಕ್ಕೆ, ಪೇಶ್ವೆಯರ ಸ್ವಾತಂತ್ರ್ಯವನ್ನು ಕುಗ್ಗಿಸುವ ಅಧಿಕಾರವು ಭೋಸಲೆಗೂ ಇರುವದಿಲ್ಲ. ಪೇಶ್ವೆಯು ಮೇಲಧಿಕಾರಿಯೆಂದು ತಿಳಿದರೂ ಅಥವಾ ಭೋಸಲೆಯು ಸ್ವತಂತ್ರನೆಂದು ತಿಳಿದರೂ ಕೂಡ, ನೀವು ಇಂಥ ಒಡಂಬಡಿಕೆಯನ್ನು ಹೀಗೇಕೆ ಮಾಡಿಕೊಂಡಿರೆಂದು ಪೇಶ್ವೆಯನ್ನು ಕೇಳುವ ಅಧಿಕಾರವು ಭೋಸಲೆಗೆ ಪ್ರಾಪ್ತವಾಗುವದಿಲ್ಲ. ಸಿಂದೆಗಾದರೂ ಅದೇ ಮಾತು ಹತ್ತುವದು; ಆದರೂ ಪೇಶ್ವೆ ಅಥವಾ ಹೋಳಕರ ಇವರೊಡನೆ ಸಿಂದೆಯವೇನಾದರೂ ಹಿತಸಂಬಂಧದ ತೊಡಕುಗಳಿದ್ದರೆ ಅವನು ಅವನ್ನು ನಮಗೆ ತಿಳಿಸಬೇಕು; ಅಂದರೆ ನಾವು ಆ ಬಗ್ಗೆ ಮಧ್ಯಸ್ಥಿಕೆ ಮಾಡಲಿಕ್ಕೆ ಸಿದ್ಧರಿರುತ್ತೇವೆ.

ಅದೇ ದಿವಸ ವ್ಹಾಯಿಸರಾಯ ವೆಲ್ಲಸ್ಲೀ ಸಾಹೇಬನು ಸ್ವತಃ ದೌಲತರಾವ ಸಿಂದೆಗೂ ಒಂದು ಪತ್ರ ಬರೆದನು. ಅದರಲ್ಲಿ ಅವನು ಸ್ಪಷ್ಟವಾಗಿ ತಿಳಿಸಿದ್ದೇನಂದರೆ:—"ನಿಮ್ಮೊಡನೆ ಸ್ನೇಹಭಾವ ಬೆಳೆಸುವದನ್ನು ನಾವು ಸಂಪೂರ್ಣವಾಗಿ ಇಚ್ಛಿಸುತ್ತೇವೆ; ಆದರೆ ಮಿಂಚಿ ಹೋದ ಮಾತಿನ ಬಗ್ಗೆ ಚಿಂತಿಸುತ್ತ, ಅದು ಹಾಗಾಗತಕ್ಕದ್ದಲ್ಲ, ಎಂದೆನ್ನುತ್ತಿದ್ದರೆ ಮಾತ್ರ, ಅದು ನಮಗೆ ಮಾನ್ಯವಿಳುವದಿಲ್ಲ. ನಾವು ಆ ಬಗ್ಗೆ ತಕ್ಕ ರೀತಿಯಿಂದ ಪ್ರತೀಕಾರ ಮಾಡತಕ್ಕವರೇ."

ಮುಂದೆ ಸಿಂದೆ ಹಾಗು ಭೋಸಲೆ ಇವರು ಕೂಡಿ ಬೈಲು ಕಾಳಗ ಮಾಡಿ ಸೋತ ಸಂಗತಿಯು ಹೋಳಕರನಿಗೆ ಮಾನ್ಯವಾಗಲಿಲ್ಲ. "ಗನೀಮಿ ಕಾವಾ" ದಿಂದ ಕಾದಿದರೆ ಅವರ ಗತಿಯು ಹೀಗಾಗುತ್ತಿದ್ದಿಲ್ಲವೆಂದು ಆತನ ಅಭಿಪ್ರಾಯವಾಗಿತ್ತು; ಆದರೆ ಆತನ ಬುದ್ಧಿವಂತಿಕೆಯು ಮರಾಟರ ಕಾರ್ಯಕ್ಕೆ ಉಪಯೋಗಬೀಳಲಿಲ್ಲ. ಯಾಕಂದರೆ, ಸಿಂದೆ ಮತ್ತು ಭೋಸಲೆ ಇವರು ಇಂಗ್ಲಿಷರೊಡನೆ ಕಾದುತ್ತಿರಲಿಕ್ಕೆ, ಹೋಳಕರನು ಅದಾವುದನ್ನೂ ಅರಿಯದವನಂತೆ ಸ್ವಸ್ಥವಾಗಿದ್ದನು. ಇಷ್ಟೇ ಅಲ್ಲ, ಅವನು ಸ್ವಕೀಯರ ನಾಡಿನಲ್ಲೇ ಲೂಟಿ-ಸುಲಿಗೆಗಳನ್ನು ನಡೆಸಿದ್ದನು! ಸಿಂ-

ದೆಯು ಪರಾಭವವಾಗಿ ತಾನೂ ಅವನೂ ಒಂದೇ ಯೋಗ್ಯತೆಯುವರಾಗಬೇಕು; ಮತ್ತು ಹಾಗೆ ಆದ ನಂತರ ತನ್ನ ವರ್ಚಸ್ಸು ಬೆಳೆದೀತೆಂದು ಹೋಳಕರನ ಮನೀಷೆಯಾಗಿತ್ತು; ಆದರೆ ಕಡೆಗೂ ಅದು ಮನಸ್ಸಿನೊಳಗಿನ ಮಂಡಿಗೆಯೇ ಆಯಿತು! ಸಿಂದೆಯು ಸೋತು ಇಂಗ್ಲಿಷರೊಡನೆ ಒಡಂಬಡಿಕೆ ಮಾಡಿಕೊಂಡ ಬಳಿಕ, ಹೋಳಕರನಿಗೆ ಇಂಗ್ಲಿಷರ ವಿರುದ್ಧ ಶಸ್ತ್ರವೆತ್ತುವ ಸ್ಫೂರ್ತಿಯುಂಟಾಯಿತು; ಹಾಗು ಮಾಡಿಕೊಂಡ ಒಪ್ಪಂದವನ್ನು ನಿರಾಕರಿಸಬೇಕೆಂದು ಆತನು ಸಿಂದೆಗೆ ಹೇಳಹತ್ತಿದನು; ಅಲ್ಲದೆ ರಜಪೂತರು, ರೋಹಿಲರು, ಶೀಖರು ಮುಂತಾದವರ ಸಹಾಯ ಪಡೆಯುವ ಬಗ್ಗೆ ಆತನು ಒಂದೇಸವನೆ ಧಡಪಡಿಸತೊಡಗಿದನು; ಆದರೆ ಇಂಗ್ಲಿಷರು ಸಿಂದೆಯನ್ನು ಅಲ್ಪಾವಧಿಯಲ್ಲೇ ಸಂಪೂರ್ಣವಾಗಿ ಸೋಲಿಸಿದ್ದರಿಂದ, ಅವರಿಗೆ ಯುದ್ಧದ ಬಗ್ಗೆ ಒಳ್ಳೇ ಹುರುಪುಂಟಾಗಿದ್ದಿತು; ಮತ್ತು ಆಗ ಹೋಳಕರನು ಯುದ್ಧಕ್ಕೆ ಬಂದಿದ್ದರೆ ಅವರಿಗೊಳ್ಳೇ ಅನುಕೂಲವೇ ಆಗುತ್ತಿತ್ತು. ಹೋಳಕರನ ಬೇಡಿಕೆಗಳು ಅಷ್ಟಿಷ್ಟಾಗಿರಲಿಲ್ಲ. ಕಡೆಗೆ ೧೮೦೪ರಲ್ಲಿ ಉಭಯತರಲ್ಲಿ ಕಾಳಗಕ್ಕೆ ಪ್ರಾರಂಭವಾಗಿ, ಮೊದಲು ಹೋಳಕರನು ಇಂಗ್ಲಿಷರನ್ನು ಹೆಚ್ಚಾಗಿ ಹಣ್ಣಿಗೆ ತಂದನು; ಹಾಗು ಅವರ ಎಷ್ಟೋ ತೋಫುಗಳನ್ನೂ ಸೆಳೆಕೊಂಡನು; ಆದರೂ ಕಡೆಗೆ ದೀಗ ಎಂಬಲ್ಲಿ ಹೋಳಕರನು ಸೋಲಬೇಕಾಯಿತು. ದಕ್ಷಿಣದೊಳಗಿನ ಆತನ ವಶದಲ್ಲಿಯ ಎಲ್ಲ ದುರ್ಗಗಳನ್ನು ಇಂಗ್ಲಿಷರು ವಶಪಡಿಸಿಕೊಂಡರು. ಮಾಳವದೇಶದೊಳಗಿನ ಕೋಟೆಗಳೂ, ಇಂದೂರ ಪಟ್ಟಣವೂ ಆತನ ಕೈ ಬಿಟ್ಟವು. ಭರತಪುರದ ದುರ್ಗವನ್ನು ಮುತ್ತಿ ಇಂಗ್ಲಿಷರು ಅದನ್ನೂ ಗೆದ್ದುಕೊಂಡದ್ದರಿಂದ, ಇನ್ನು ಹೋಳಕರನಿಗೆ ಆ ಪ್ರಾಂತದಲ್ಲಿ ಸ್ವಲ್ಪವೂ ಆಶ್ರಯವುಳಿಯಲಿಲ್ಲ. ಆಗ ಆತನು ಪಂಜಾಬದ ಕಡೆಗೆ ಹೊರಟುಹೋದನು. ಇಷ್ಟು ಪ್ರಕಾರವಾದ ನಂತರ ಹೋಳಕರನ ಕೂಡ ಸಹಕಾರತೆ ಮಾಡಬೇಕೆಂಬ ಬುದ್ಧಿಯು ಸಿಂದೆಗುಂಟಾಯಿತು! ಯಾಕಂದರೆ, ಗೋಹರದ ರಾಣಾನ ಸ್ವಾತಂತ್ರ್ಯವನ್ನೊಪ್ಪುವ ಬಗ್ಗೆ ಇಂಗ್ಲಿಷರು ಆತನಿಗೆ ಒತ್ತಾಯಪಡಿಸತೊಡಗಿದ್ದರು; ಹಾಗು ಆ ಮಾತು ಅವನಿಗೆ ಸಮ್ಮತವಾಗಿರಲಿಲ್ಲ; ಆದರೆ ಅವನಾದರೂ ಮಾಡುವದೇನು? ಕಡೆಗೆ ಸಿಂಧೆ ಹಾಗು ಹೋಳಕರ ಈ ಉಭಯತರೊಡನೆ ಕೂಡಿ ಇಂಗ್ಲಿಷರು ಒಪ್ಪಂದದ ಸಂಧಾನ ನಡೆಸಿದರು. ಕಂಪನೀಸರಕಾರಕ್ಕೆ ಆ ಕಾಲಕ್ಕೆ ಹೆಚ್ಚಾಗಿ ಸಾಲವಾಗಿದ್ದು, ಲಾರ್ಡ ವೆಲ್ಲಸ್ಲಿಯ ಲಷ್ಕರೀ ಧೋರಣವು ವಿಲಾಯತಿಯಲ್ಲಿ ಅವಮಾನ್ಯವಾಗಿತ್ತು. ಲಾರ್ಡ ಕಾರ್ನವಾಲೀಸನು ಪುನಃ ಗವರ್ನರ ಜನರಲ್ಲನಾಗಿ ಬರಲು, ಅವನು ಆ ಒಪ್ಪಂದವನ್ನು ಸಂಪೂರ್ತಿಗೊಳಿಸಿದನು. ೧೮೦೫ರಲ್ಲಿ ಇಂಗ್ಲಿಷರು ಸಿಂಧೆ, ಹೋಳಕರ, ಭೋಸಲೆ, ಗಾಯಕವಾಡ ಇವರೆಲ್ಲರೊಡನೆ ಒಡಂಬಡಿಕೆ ಮಾಡಿಕೊಂಡು, ಆ ಮರಾಟಾ ಮಿತ್ರಸಂಘವನ್ನು ಕಾಯಮವಾಗಿ ಮುರಿದು, ಆಗ ಆಗಬಹುದಾಗಿದ್ದ ಒಂದು ಬಹು ದೊಡ್ಡ ಕಾಳಗವನ್ನು ರಹಿತಪಡಿಸಿದರು.

ಸಾಲ್ಬಾಯಿಯ ಒಪ್ಪಂದದಿಂದ ಮರಾಟರ ಅಧಿಕಾರನ್ಯಾಸದ ಮೊದಲನೇ

ಹಪ್ತೆಯು ಉಡಿಯಲ್ಲಿ ಬಿದ್ದಿತ್ತು; ಮತ್ತು ೧೮೦೫ರ ಒಪ್ಪಂದದಿಂದ ಅದರ ಎರಡನೇ ಹಪ್ತೆಯೂ ಅವರ ಸ್ವಾಧೀನವಾಯಿತು. ತದನಂತರ ಇಂಗ್ಲಿಷರೊಡನೆ ಯುದ್ಧ ಮಾಡುವ ಯೋಗ್ಯತೆಯು ಯಾವ ಮರಾಟರ ರಾಜನಲ್ಲಿಯೂ ಉಳಿಯಲಿಲ್ಲ; ಆದರೆ ಆ ಸ್ಥಿತ್ಯಂತರದ ಸಿಟ್ಟು ಮಾತ್ರ ಯಾರ ಮನಸ್ಸಿನೊಳಗಿಂದಲೂ ಕಡಿಮೆಯಾಗಲಿಲ್ಲ. ಒಕ್ಕಟ್ಟಿನಿಂದ ನಡೆಕೊಳ್ಳುವ ಧೋರಣವೇ ಅಲ್ಲ, ಇಚ್ಛೆಯೂ ಕೂಡ ನಷ್ಟವಾದ ಬಳಿಕ, ಇಂಗ್ಲಿಷರ ಮೇಲೆ ಸಿಟ್ಟಾಗುವದಕ್ಕಿಂತ, ಅವರು ತಮ್ಮ ಸ್ವಂತದ ಮೇಲೆಯೇ ಕೋಪಗೊಳ್ಳುವದು ಹೆಚ್ಚು ಶ್ರೇಯಸ್ಕರವಾಗಿದ್ದಿತು! ಆದರೆ ಆಗ ಇಂಗ್ಲಿಷರ ಭಾಗ್ಯವು ಮಾತ್ರ ಬಲವತ್ತರವಾಗಿತ್ತೆಂಬದಕ್ಕೆ ಎಳ್ಳಷ್ಟೂ ಸಂಶಯವಿರಲಿಲ್ಲ. ವಿಲಾಯತಿಯೊಳಗಿನ ಜನರಿಗೆ ಅಂಜಿಕೆಯುಂಟಾಗುವಷ್ಟು ಬೇಗನೆ ಇಚ್ಛಿತಕ್ಕಿಂತ ಹೆಚ್ಚು ಪ್ರದೇಶಗಳನ್ನು ಅವರ ಹಿಂದುಸ್ತಾನದೊಳಗಿನ ಕೈಯಾಳುಗಳು ತಮ್ಮ ಶಕ್ತಿ, ಸಾಹಸ ಹಾಗು ಜಬಾಬುದಾರಿಗಳ ಬಲದಿಂದ ಕೇವಲ ನಾಲ್ಕೈದು ವರುಷಗಳಲ್ಲೇ ಸಂಪಾದಿಸಿದ್ದರು. ತದ್ವಿರುದ್ಧವಾಗಿ ಶಿಂಧೆ, ಹೋಳಕರ ಮತ್ತು ಭೋಸಲೆ ಇವರ ಕಡೆಗೆ ಖರ್ಚು-ವೆಚ್ಚಗಳನ್ನು ಕಳೆದು ವರ್ಷಕ್ಕೆ ೬೦ ಲಕ್ಷ ಕೂಡ ಉತ್ಪನ್ನ ಬರದಷ್ಟು ಸಣ್ಣ ಪ್ರದೇಶವು ಉಳಯಿತು! ಉತ್ಪನ್ನ ಬರತಕ್ಕ ಪ್ರದೇಶವೇ ಕಡಿಮೆಯಾದ ಬಳಿಕ ಪ್ರತಿಯೊಬ್ಬರೂ ತಂತಮ್ಮ ವಶದಲ್ಲಿಯ ದಂಡನ್ನು ಕಡಿಮೆ ಮಾಡಬೇಕಾಯಿತು. ಬರೇ ಒಬ್ಬ ಹೋಳಕರನಿಗೇ ೨೦ ಸಾವಿರ ಕುದುರೆಯ ಸವಾರರನ್ನು ಕಡಿಮೆ ಮಾಡುವ ಪ್ರಸಂಗವೊದಗಿತು. ಅವರ ಸಂಬಳ ಕೊಡುವದು ಬಾಕಿ ಉಳಿದದ್ದರಿಂದ, ಅವರೆಲ್ಲರೂ ಹೋಳಕರನ ಬಾಗಿಲು ಕಟ್ಟಿ ಕುಳಿತರು. ಸಂಬಳ ಸಿಕ್ಕಬಳಿಕಾದರೂ ಅಷ್ಟು ಜನರು ಒಮ್ಮೆಲೆ ಬೇರೆ ಉದ್ಯೋಗ ಮಾಡುವದಾದರೂ ಯಾವದು? ದಂಡಿನ ನೌಕರರವರು; ಕಮತ-ಕಟ್ಟಿಯ ಕೆಲಸಗಳ ಅಭ್ಯಾಸವವರಿಗಿದ್ದಿಲ್ಲ; ಮತ್ತು ಅವರೊಳಗಿನ ಎಷ್ಟೋ ಜನರಿಗೆ ಹೊಲ-ಮನೆಗಳು ಕೂಡ ಇರಲಿಲ್ಲ! ಅವರ ಕೈಯೊಳಗಿನ ಶಸ್ತ್ರಾಸ್ತ್ರಗಳನ್ನು ಕಸಿದುಕೊಳ್ಳುವ ಕಾಯಿದೆಯು ಇನ್ನೂ ಆಗತಕ್ಕದ್ದಿತ್ತು. ಶಿಂದೆಯು ಮಾತ್ರ ಆಗ ತನ್ನ ದಂಡಿನಲ್ಲಿಯ ಅಷ್ಟೊಂದು ಜನರನ್ನು ಕಡಿಮೆ ಮಾಡಲಿಲ್ಲ; ಆದರೆ ಶಿಬಿರದಲ್ಲಿ ಹೆಚ್ಚಿನ ದಂಡನ್ನಿಟ್ಟು ಅವರೆಲ್ಲರ ಸಂಬಳ ನೀಗಿಸುವಷ್ಟು ಆತನ ಸ ಸ್ಥಾನದ ಉತ್ಪನ್ನವಿರದ್ದರಿಂದ, ಕೆಲಕೆಲವು ದಂಡನ್ನು ಕೆಲಕೆಲವು ಕಾಮಗಿರಿಯ ಮೇಲೆ ಕಳಿಸಿ, ಆ ದಂಡಿನ ಲೂಟ-ಸುಲಿಗೆಗಳ ಕಡೆಗೆ ದುರ್ಲಕ್ಷ್ಯ ಮಾಡುವ ಹೀನಮಾರ್ಗವನ್ನು ಆವನು ಅವಲಂಬಿಸಬೇಕಾಯಿತು. ಯಾವ ಸಣ್ಣ ಸಣ್ಣ ಸಂಸ್ಥಾನಿಕರ ಸಂರಕ್ಷಣೆಯ ಭಾರವನ್ನು ಇಂಗ್ಲಿಷರು ಅದುವರೆಗೂ ಹೊತ್ತಿರಲಿಲ್ಲವೋ, ಅಂಥವರೊಡನೆ ಇಲ್ಲದ್ದೊಂದು ಕಿತಾಪತಿಯನ್ನು ತೆಗೆಯುವದೂ ಹಾಗು ಹಳೇ ಹಗೆತನವನ್ನು ಹೂಡುವದೂ ಮುಂತಾದ ವಾಮಮಾರ್ಗಗಳೇ ಆಗ ಬಾಕಿಯುಳಿದಿದ್ದವು; ಆದರೆ ಆ ಕೆಲಸಗಳಾದರೂ ಎಷ್ಟು ದಿನಗಳಿಗೆ ಸಾಲಬೇಕು? ಅದರಿಂದ ಬೇಕಾರ (ಕೆಲಸವಿಲ್ಲದ) ಶಿಪಾಯಿಗಳ ತಂಡಗಳು

ಪೂರ್ವಪದ್ಧತಿಯು ಪೆಂಡಾರಿಗಳಲ್ಲಿ ಭರತಿಯಾದವು. ಮೊದಲು ಬೇರೆ ಬೇರೆ ಮರಾಟಾ ಸರದಾರರ ಸೈನ್ಯದ ಹೆಸರಿನ, ಅಂದರೆ ಸಿಂದೇಶಾಹಿ, ಹೋಳಕರಶಾಹಿ ಮುಂತಾದ ಪೆಂಡಾರಿಗಳ ತಂಡಗಳಿಗೆ, ಈಗ ಬೇರೆಯವರ ಹೆಸರಿನ ಹೊದಿಕೆಯು ದೊರೆಯದ್ದರಿಂದ, ಅವರು ತಮ್ಮ ಸ್ವಂತದ ಹೆಸರಿನಿಂದಲೇ ತಮ್ಮ ಉದ್ಯೋಗಕ್ಕೆ ಹತ್ತಿ ಉಪಜೀವಿಸತೊಡಗಿದರು! ಅವರಿಗೆ ಯಾವ ಬಂಧನವೂ ಬಾಕಿಯುಳಿಯುವೆ, ಹತ್ತೂ ದಿಕ್ಕುಗಳಲ್ಲಿ ಅವರನ್ನು ಕೇಳುವವರೇ ಇರಲಿಲ್ಲ; ಆದರೆ ಉತ್ತರಕ್ಕೆ ಚಂಬಳಾ ನದಿಯಿಂದ ದಕ್ಷಿಣಕ್ಕೆ ಕೃಷ್ಣಾನದಿಯ ವರೆಗೇ ಅವರು ಪ್ರಾಮುಖ್ಯವಾಗಿ ವ್ಯಾಪಿಸಿದ್ದರು!

---

## ೧೬ನೆಯ ಪರಿಚ್ಛೇದ

## ಗಂಗಾಧರಶಾಸ್ತ್ರಿಯ ಕೊಲೆ!

ಪೆಂಡಾರಿಗಳಿಂದ ಆಗಿನ ಶಾಂತತಾ ಪ್ರಿಯರಾದ ಸುಖವಸ್ತುಗಳಿಗೆ ವಿಶೇಷವಾಗಿ ತೊಂದರೆಯುಂಟಾಯಿತಷ್ಟೇ ಅಲ್ಲ; ಅವರ ಪಾರುಪತ್ಯ ಮಾಡಿ, ಅವರನ್ನು ನಿರ್ನಾಮಗೊಳಿಸಲಿಕ್ಕೆ ಇಂಗ್ಲಿಷರೂ ಹೆಚ್ಚು ಶ್ರಮವಹಿಸಬೇಕಾಯಿತು; ಆ ಪೆಂಡಾರಿಗಳ ಸೈನ್ಯವು ಒಮ್ಮೊಮ್ಮೆ ೨೦-೨೫ ಸಾವಿರಗಟ್ಲೆ ಕೂಡಿದರೆ, ಹಲಕೆಲವು ಪ್ರಸಂಗಗಳಲ್ಲಿ ಅದು ನೂರಿನ್ನೂರರಷ್ಟು ಜನರಿಂದಲೇ ಕೂಡಿ, ದೂರದೂರದವರಿಗೆ ಕೋಲಾಹಲವನ್ನೆಬ್ಬಿಸಿ ಬಿಡುತ್ತಿತ್ತು! ಪೆಂಡಾರಿಗಳಲ್ಲಿ ಮುಸಲ್ಮಾನರ ಸಂಖ್ಯೆಯೇ ಹೆಚ್ಚು; ಅಲ್ಲದೆ ಅವರ ಮುಂದಾಳುಗಳೂ ಮುಸಲ್ಮಾನರೇ ಆಗಿರುತ್ತಿದ್ದರು. ಮರಾಟರಿಗೆ ವಂಶಪರಂಪರಾಗತವಾದ ಭೂಮಿಗಳು ಅಲ್ಪಸ್ವಲ್ಪಾದರೂ ಇದ್ದೇ ಇರುತ್ತಿದ್ದವು; ಅಲ್ಲದೆ ಅವರು ಮುಸಲ್ಮಾನರಷ್ಟು ಎಲ್ಲವನ್ನೂ ತೊರೆದು, ಕೇವಲ ಲಂಡರಾಗಿ ನಿಂತಿರಲಿಲ್ಲ. ಆದರಿಂದ ಮಾನ-ಮರ್ಯಾದೆ, ಪ್ರತಿಷ್ಠೆ-ಅಪ್ರತಿಷ್ಠೆಗಳ ಹಂಬಲವು ಇನ್ನೂ ಅವರಲ್ಲಿತ್ತು. ಪೆಂಡಾರಿಗಳಲ್ಲಿ ಸಾವಿರಕ್ಕೆ ಸರಾಸರಿ ೪೦೦ರಂತೆ ಕುದುರೆಯ ಸ್ವಾರರಿದ್ದು, ೬೦-೬೫ ಜನರ ಬಳಿಯಲ್ಲಿ ಮಾತ್ರ ಬಂದೂಕುಗಳೂ ಇರುತ್ತಿದ್ದವು. ಉಳಿದವರ ಬಳಿಯಲ್ಲಿ ಭಲ್ಲೆ, ಬರ್ಚಿ, ಕೊಡ್ಲಿ-ಕುಡಗೋಲು-ಕಂದ್ಲಿಗಳೇ ಮೊದಲುಮಾಡಿಕೊಂಡು, ಕೈಗೆ ಸಿಕ್ಕ ಆಯುಧಗಳು ಇರುತ್ತಿದ್ದವು. ಇಂಥ ಅಡಮುಟ್ಟ ಜನರು ಇಂಗ್ಲಿಷರ ಅಧಿಕಾರವನ್ನು ಮನ್ನಿಸದೆ, ಸತತ ಹತ್ತುವರ್ಷಗಟ್ಲೆ ನೂರಾರು ಮೈಲುಗಳ ಮಧ್ಯದೊಳಗಿನ ವಿಸ್ತಾರವಾದ ಪ್ರದೇಶದಲ್ಲಿ ತಮ್ಮ ರಾಜ್ಯವನ್ನು ಸುಸೂತ್ರವಾಗಿ ನಡೆಸಿದ್ದರು; ಆದರೆ ಆ ರಾಜ್ಯವು ಯಾವನೊಬ್ಬ ತಲೆಹೊರೆಯ ಪಾಂಥಸ್ಥ ಮನುಷ್ಯನ ಬಿಡಾರಕ್ಕಿಂತ ಹೆಚ್ಚು ಮಹತ್ವದ್ದಾಗಿರಲಿಲ್ಲ. ಮರಾಟಶಾಹಿಯೊಳಗಿನ ಲಷ್ಕರೀಪದ್ಧತಿಯು ಸ್ವಚ್ಛವಾದ ನಿರಿನ ನಿರ್ಮಲ ನದಿಗಳು ಬತ್ತಿ ಹೋಗಿ, ಪೆಂಡಾರಿಗಳ ಆ ಹೊಲಸು ಪದ್ಧತಿಯ ದುರ್ಗಂಧಮಯ

ನೀರಿನಿಂದ ಅಲ್ಲಲ್ಲಿಯ ಹಳ್ಳ-ಕೊಳ್ಳಗಳು ಹರಿಯುತ್ತಿದ್ದವು. ಪೆಂಡಾರಿಗಳು ಯಾವ ಗುಹ್ಯೆ ಮಾಡುವದನ್ನೂ ಬಾಕಿ ಇರಿಸಿರಲಿಲ್ಲ! ಇರಲಿ.

ಅತ್ತ ಉತ್ತರಹಿಂದುಸ್ತಾನದ ಕಡೆಗೆ ಪೆಂಡಾರಿಗಳ ಉಪಟಳವು ಹೀಗೆ ನಡೆದಿರಲು, ಇತ್ತ ಇಂಗ್ಲಿಷರ ಸಹಾಯದಿಂದ ಬಾಜೀರಾಯನಿಗೆ ಪ್ರಾಪ್ತವಾಗಿದ್ದ ಸ್ವಸ್ಥತೆಯನ್ನೂ, ಮಾನ ಮರ್ಯಾದೆಗಳನ್ನೂ, ವರ್ಚಸ್ಸನ್ನೂ ಆತನು ಸುಸೂತ್ರವಾಗಿ ಕಾಯ್ದುಕೊಂಡಿರಲಾರದೆ, ಅವನ್ನೆಲ್ಲ ತನ್ನ ಶತ್ರುಗಳ ಸೇಡು ತೀರಿಸಿಕೊಳ್ಳುವ ಹವ್ಯಾಸಕ್ಕಾಗಿಯೇ ಉಪಯೋಗಿಸತೊಡಗಿದನು. ಅವನ ವೈರಿಗಳು ಅವನಿಗಿಂತ ಅವನ ಬೆನ್ನು ಕಟ್ಟಿ ನಿಂತಿರುವ ಇಂಗ್ಲಿಷರ ೬೦೦೦ ಸಂಖ್ಯೆಯ ಸೈನ್ಯಕ್ಕೇ ಹೆಚ್ಚಾಗಿ ಬೆದರುತ್ತಿದ್ದರು. ೧೮೦೪ರಲ್ಲಿ ಮಹಾರಾಷ್ಟ್ರದಲ್ಲೆಲ್ಲ ಭಯಂಕರವಾದ ಬರಗಾಲವು ಬಿದ್ದು, ಮನುಷ್ಯಕೃತಸಂಕಟಗಳಿಗೆ ಸೃಷ್ಟಿದೇವತೆಯೂ ನೆರವಾಗತೊಡಗಿದಳು. ಎಷ್ಟೋ ಜನ ಮರಾಟರು ಪುಣ್ಯಪತ್ತನವನ್ನು ಬಿಟ್ಟು ಉತ್ತರಹಿಂದುಸ್ತಾನಕ್ಕೆ ಶಿಂದೆಯ ಆಶ್ರಯದಲ್ಲಿ ಹೊಸ ವಸಾಹತು ಮಾಡಿಕೊಂಡಿರಲಿಕ್ಕೆ ಹೊರಟು ಹೋದರು. ಬಾಜೀರಾಯನು ತನ್ನ ಶತ್ರುಪಕ್ಷದ ಸರದಾರರ ಜಹಗೀರುಗಳನ್ನಂತೂ ಜಪ್ತಮಾಡಿಯೇ ಮಾಡಿದನು; ಅಲ್ಲದೆ ತನ್ನೊಡನೆ ಹಿತಗುಜದಿಂದ ನಡೆಯುತ್ತಿದ್ದ ಸರದಾರರ ಗೃಹಕಲಹಗಳಲ್ಲಿಯೂ ಕಾರಭಾರಗಳಲ್ಲಿಯೂ ನಿಷ್ಕಾರಣವಾಗಿ ಕೈಹಾಕಹತ್ತಿದನು. ಬಾಜೀರಾಯನ ಈ ನಿಂದ್ಯವಾದ ಕೃತಿಯಿಂದ ಬಹುತರ ಎಲ್ಲ ಸರದಾರರ ಮನೆತನಗಳಲ್ಲೂ ಗೃಹಕಲಹಾಗ್ನಿಯು ಹೊತ್ತಲಾರಂಭಿಸಿತು. ಬಾಜೀರಾಯನ ಈ ದುಷ್ಕೃತಿಯ ಚಾಳಿಯು ದೃಗ್ಗೋಚರವಾಗುತ್ತಲೆ ಇಂಗ್ಲಿಷರು ಅವನನ್ನು ಬೊಗ್ಗು ಬಡಿದಿದ್ದರೆ, ಪುಣ್ಯ ಪಟ್ಟಣದ ಜನರು ಸುಖಿಯಾಗಿರುತ್ತಿದ್ದರು; ಇಷ್ಟೇ ಅಲ್ಲ, ಅದರಿಂದ ಬಾಜೀರಾಯನ ರಾಜ್ಯವೂ ಹೆಚ್ಚು ದಿನಗಳವರೆಗೆ ಉಳಿಯುತ್ತಿತ್ತೆಂದು ಗ್ರಾಂಟ ಡಫನಂಥ ಇಂಗ್ಲಿಷ ಇತಿಹಾಸಕಾರನೇ ಒಪ್ಪಿಕೊಂಡಿರುತ್ತಾನೆ; ಆದರೆ ರಾಜಕಾರಣದಲ್ಲಿ "ಧಾರಣೆ ಗೊತ್ತಾಗದ ಹೊರತು ಹಣ್ಣುಹರಿಯಬಾರದು; ಮತ್ತು ಹಣ್ಣಾಗದ ಹೊರತು ಕುರವನ್ನೊಡೆಯಬಾರದು" ಎಂಬ ನೀತಿಯನ್ನೇ ಇಂಗ್ಲಿಷರು ಮೊದಲಿನಿಂದಲೂ ಅವಲಂಬಿಸಿ ನಡೆಯುತ್ತ ಬಂದಿರುವರು. ಅಂದಮೇಲೆ ಆ ಕುಟಿಲರು ಆ ಪ್ರಸಂಗದಲ್ಲಿ ಬಾಜೀರಾಯನನ್ನು ತಡೆಯುವರೆ?

ಬಾಜೀರಾಯನು ಅತ್ತ ತನ್ನ ಸರದಾರರ ಜಹಾಗೀರುಗಳನ್ನು ಜಪ್ತಮಾಡುತ್ತಿರಲಿಕ್ಕೆ, ಇತ್ತ ಅವನು ಬ್ರಿಟಿಶ ರೆಸಿಡೆಂಟನೊಡನೆ ಒಳ್ಳೇ ಸಂಭಾವಿತತನದ ಧೋರಣವನ್ನಿಟ್ಟಿದ್ದನು. ಆಗ ಬಾಜೀರಾಯನಿಗೆ ಮಿತ್ರಯೋಗವೂ ಚನ್ನಾಗಿತ್ತು; ಆದರೆ ಆತನ ಗೆಳೆಯರಲ್ಲಿ ಕೈಲಾಗದ ಹೇಡಿಗಳ ಸಂಖ್ಯೆಯೇ ಹೆಚ್ಚಾಗಿತ್ತು. ಹರಿದಾಸ-ಪುರಾಣಿಕರು, ಅಡಿಗೆ-ನೀರಿನವರು, ಶಿಪಾಯಿ-ಪ್ಯಾದೆಗಳು ಮುಂತಾದವರಲ್ಲಿ ಉಚ್ಚ-ನೀಚಗಳ ಭೇದಭಾವವನ್ನು ಎಣಿಸದೆ, ಅವನು ಅವರನ್ನು ತನ್ನ ಗುಂಪಿನಲ್ಲಿ ಸೇರಿಸಿಕೊಂಡಿದ್ದನು. ಆ ಜನರು ತನ್ನೊಡನೆ ನಗುತ್ತ-ಕೆಲೆಯುತ್ತ ವ್ಯವ

ಹರಿಸಿ, ಬೇಕುಬೇಕಾದಂತೆ ಜನರನ್ನು ಸುಲಿದು-ಗೋಳಾಡಿಸಿ, ಬಳಿಕ ಕೂಡಿದಾಗ ಅವರು ಸರಕಾರ-ದರಬಾರಗಳಲ್ಲಿ ತಲೆಹಾಕಬೇಕು, ಹೀಗೆ ಬಾಜೀರಾಯನು ಆ ತನ್ನ ಗೆಳೆಯರ ಗುಂಪಿನವರಿಗೆ ಕಾರ್ಯಕ್ರಮವನ್ನು ಗೊತ್ತುಮಾಡಿಕೊಟ್ಟಿದ್ದನು. ಬಾಜೀರಾಯನ ಕಾಲಕಿರ್ದಿಯಲ್ಲಿ ಕರ್ನಲ್ಲ ಕ್ಲೋಜ, ಹೆನರಿ ರಸೇಲ ಮತ್ತು ಎಲ್ಫಿನ್ಸ್ಟನ್ನ ಎಂಬ ಮೂರು ಜನ ರೆಸಿಡೆಂಟರು ಆಗಿಹೋದರು. ಆ ಮೂವರನ್ನೂ ಅವನು ತನ್ನ ಒಳ್ಳೇ ಮಿಷ್ಟ ಭಾಷಣ-ವರ್ತನಗಳಿಂದ ವಶಪಡಿಸಿಕೊಂಡಿದ್ದನು. ರೆಸಿಡೆಂಟನ ಎಷ್ಟು ಜನ ಗುಪ್ತಚಾರರು ಬಾಜೀರಾಯನ ದರ್ಬಾರದಲ್ಲಿರುತ್ತಿದ್ದರೋ, ಅಷ್ಟೇ ಜನ ಬಾಜೀರಾಯನ ಗುಪ್ತಹೇರರು ರೆಸಿಡೆಂಟನಲ್ಲಿಯೂ ಇರುತ್ತಿದ್ದರು! ಅದರಿಂದ ಪ್ರತಿಯೊಬ್ಬರ ಚಲನವಲನವು ಬೇರೆಯವರಿಗೆ ಸಹಜವಾಗಿ ತಿಳಿಯುತ್ತಿದ್ದಿತು; ಆದರೆ ಪೇಶ್ವೆಯ ಕಡೆಯ ಸಂಗತಿಗಳ ಉಪಯೋಗ ಮಾಡಿಕೊಳ್ಳುವ ಯಾವ ಬುದ್ಧಿವಂತಿಕೆಯೂ, ಎಷ್ಟು ನಿಸ್ವಾರ್ಥತನವೂ ಆ ರೆಸಿಡೆಂಟರಲ್ಲಿರುತ್ತಿದ್ದವೋ, ರೆಸಿಡೆಂಟರ ಕಡೆಯ ಸಂಗತಿಗಳ ಉಪಯೋಗ ಮಾಡಿಕೊಳ್ಳುವ ಜಾಣತನಾದಿಗಳು ಬಾಜೀರಾಯನಲ್ಲಿರಲಿಲ್ಲ. ಇಂಗ್ಲಿಷರ ಸಹಾಯದಿಂದ ಆತನು ತನ್ನ ಕೈಕೆಳಗಿನ ಜಹಾಗೀರದಾರರ ಮೇಲೆ ತನ್ನ ವರ್ಚಸ್ಸನ್ನು ಚೆನ್ನಾಗಿ ಸ್ಥಾಪಿಸಿದನು; ಆದರೆ ತನ್ನ ರಾಜ್ಯ ಉಳಿಯಲಿಕ್ಕೆ ಸಹಾಯಕಾರಿಗಳಾದ ಜಹಾಗೀರದಾರರನ್ನು ಮಾತ್ರ ಅವನು ಹೆಚ್ಚಾಗಿ ನೋಯಿಸಿದನು; ಇಷ್ಟೇ ಅಲ್ಲ, ತನ್ನ ಚಾಕರಿಗೆ ಸರಂಜಾಮುದಾರರಾಗಿದ್ದ ಚಾಕರರೊಬ್ಬರನ್ನೂ ಇಟ್ಟುಕೊಳ್ಳದೆ, ಅವರನ್ನೆಲ್ಲ ತೆಗೆದು ಹಾಕಿ, ಮಾಸಿಕ ಸಂಬಳದ ಸ್ವತಂತ್ರ ದಂಡನ್ನಿಟ್ಟುಕೊಂಡು, ಅದರ ಮೇಲಧಿಕಾರಿಯ ಸ್ಥಳಕ್ಕೆ ಇಂಗ್ಲಿಷರನ್ನೇ ನಿಯಮಿಸಬೇಕೆಂದು ಆತನು ಯೋಜಿಸಿದನು. ಬಾಜೀರಾಯನ ಆ ಬೇತು ಇಂಗ್ಲಿಷರಿಗೆ ಸಹಜವೇ ಪಥ್ಯಕರವಾಗಿ ಪರಿಣಮಿಸಿತು. ಸರದಾರರ ಜಹಗೀರು ಗಳನ್ನೆತ್ತಿ ಹಾಕುವ ಕೆಲಸದಲ್ಲಿ ಅವನಿಗೆ ಪ್ರತಿಬಂಧ ಮಾಡದೆ ಅವರು ಅವನ ಮೇಲೆ ತಮ್ಮ ಉಪಕಾರದ ಬಹು ದೊಡ್ಡ ಹೊರೆಯನ್ನು ಹೊರಿಸಿದರಲ್ಲದೆ, ಬಾಜೀರಾಯನಿಗೂ ಆತನ ಸರದಾರರಿಗೂ ಇದ್ದ ನಿಕಟದ ಸಂಬಂಧವನ್ನು ಕಡಿದು, ಅವನನ್ನು ಸಂಪೂರ್ಣವಾಗಿ ತಮ್ಮ ವಶಪಡಿಸಿಕೊಳ್ಳುವ ಮುಂದಿನ ಮತ್ತೊಂದು ದುಷ್ಟ ಮೆಟ್ಟಿಲನ್ನೂ ಅವರು ಏರಿದರು. ಬಾಜೀರಾಯನ ಹೊಸ ದಂಡಿನ ಮೇಲೆ ಕ್ಯಾಪ್ಟನ್ ಜಾನ್‌ಫೋರ್ಡ ಸಾಹೇಬನು ಮುಖ್ಯಾಧಿಕಾರಿಯೆಂದು ನೇಮಿಸಲ್ಪಟ್ಟನು; ಮತ್ತು ಆ ಹೊಸ ದಂಡಿಗೆ ಭರ್ತಿಯಾದ ಜನರಲ್ಲಿ ಪರದೇಶಿಗಳೇ ಹೆಚ್ಚಾಗಿದ್ದರು;-ಮರಾಟರು ಇದ್ದಿಲ್ಲವೆಂದರೂ ಸಲ್ಲಬಹುದು. ಆ ಇಂಗ್ಲಿಷ ಸೇನಾಪತಿಯೂ ದಂಡಾಳುಗಳೂ ನೌಕರಿಗೆ ನಿಲ್ಲುವಾಗ ಬಾಜೀರಾಯರೊಡನೆ ಇಮಾನದ ವಿಷಯಕವಾಗಿ ಆಣೆ ಮಾಡಿದರು; ಆದರೆ ಆ ಪ್ರತಿಜ್ಞೆಗೆ ಪುಟ್ಟವಾದದ್ದೊಂದು ಅಪವಾದವು ಜೋಡಿಸಲ್ಪಟ್ಟಿತ್ತು. ಅದೇನೆಂದರೆ, "ನಾವು ಬಾಜೀರಾಯನೊಡನೆ ಇಮಾನದಿಂದ ನಡೆಯುವದೇನೋ ನಿಜ; ಆದರೆ ಬಾಜೀರಾಯನು ಎಲ್ಲಿಯ ವರೆಗೆ ಇಂಗ್ಲಿಷರೊಡನೆ

ಇಮಾನದಿಂದ ವರ್ತಿಸುವನೋ, ಅಲ್ಲಿಯ ವರೆಗೆ ನಾವು ಆತನೊಡನೆ ಇಮಾನದಿಂದ ವರ್ತಿಸುವೆವು' ಇಂಥ ಇಮಾನೀ ಆಣೆಯ ಮೇಲೆ ಭರವಸೆ ಇಟ್ಟು, ಪಗಾರೀ ದಂಡನ್ನಿಟ್ಟುಕೊಳ್ಳುವ ಬುದ್ಧಿವಂತ ರಾಜ್ಯಕರ್ತನ ಉದಾಹರಣೆಯು ನಮ್ಮ ಮಹಾರಾಷ್ಟ್ರದ ಹೊರತು ಜಗತ್ತಿನೊಳಗಿನ ಬೇರೆ ಯಾವ ರಾಷ್ಟ್ರದಲ್ಲಾದರೂ ದೊರಕುವದೋ ಇಲ್ಲವೋ ಎಂಬ ಬಗ್ಗೆ ಅನುಮಾನವೇ ಇರುತ್ತದೆ! ಆ ಹೊಸ ದಂಡಿನ ಬೀಡು ಪುಣೆಯ ವಾಯುವ್ಯಕ್ಕೆ ನಾಲ್ಕು ಮೈಲು ದೂರದಲ್ಲಿತ್ತು.

ರಾಜ್ಯದಾಡಳಿತದ ವಿಷಯದಲ್ಲಿ ಎರಡನೇ ಬಾಜೀರಾಯನಷ್ಟು ಸ್ವಸ್ಥತೆಯು ಬೇರೆ ಯಾವ ಪೇಶ್ವೆಗೂ ಲಭಿಸಿರಲಿಲ್ಲ; ಆದರೆ ಆ ಸ್ವಾಸ್ಥ್ಯದ ಉಪಯೋಗವನ್ನು ಆವನು ರಾಜ್ಯದ ಸುವ್ಯವಸ್ಥೆಗಾಗಿ ಯತ್ಕಿಂಚಿತ್ತೂ ಮಾಡಿಕೊಳ್ಳಲಿಲ್ಲೆಂದು ನಿರ್ವಿವಾದವಾಗಿ ಹೇಳಬಹುದು. ಕೆಲಸಗೇಡಿಗಳ ಎಲ್ಲ ದುರ್ವ್ಯವಹಾರಗಳೂ ಆಗ ಆತನಿಗೆ ಸೂಚಿಸಿದವು. ಆವನು ಸ್ವತಃ ರಾಜ್ಯಕಾರಭಾರದ ಕಡೆಗೆ ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ; ಹಾಗು ಯಾರು ಆದರ ಕಡೆಗೆ ಲಕ್ಷ್ಯಗೊಡುತ್ತಿದ್ದರೋ, ಆವರಿಗೂ ಆದನ್ನು ಮಾಡಗೊಡುತ್ತಿದ್ದಿಲ್ಲ. ಗುತ್ತಿಗೆಯ ಪದ್ಧತಿಯಿಂದ ಸುಭೇದಾರಿಕ, ಮಾಮ್ಲೇದಾರಿಕೆಗಳನ್ನು ಕೊಟ್ಟು, ಬಂದ ಪ್ರಾಪ್ತಿಯಲ್ಲಿ ಖಾಸಗಿಯ ಕಡೆಗೆ ದೊಡ್ಡ ಭಾಗವನ್ನು ವಿನಿಯೋಗಿಸುತ್ತಿದ್ದನಲ್ಲದೆ, ದರ್ಬಾರೀ ಮತ್ತು ಖಾಸಗೀ ದುಡ್ಡನ್ನು ನೈತಿಕ ಅನಾಚಾರಗಳಗೆ ಎಷ್ಟು ಖರ್ಚು ಮಾಡುತ್ತಿದ್ದನೋ, ಅಷ್ಟೇ ಹಣವನ್ನು ಧಾರ್ಮಿಕ ಅತ್ಯಾಚಾರಿಗಳಿಗಾಗಿ ವ್ಯಯಮಾಡುವದು ಆತನ ಕ್ರಮವಾಗಿತ್ತು. ಕೈ-ಕೆಳಗಿನ ಸರದಾರ-ದರಕದಾರರನ್ನು ಗೋಳಾಡಿಸುವ ಉದ್ಯೋಗದಲ್ಲಿ ಆತನ ಬುದ್ಧಿವಂತಿಕೆಯು ಹೆಚ್ಚಾಗಿ ಖರ್ಚಾಗುತ್ತಿತ್ತು; ಹಾಗು ಉಳಿದ ಆತನ ಜಾಣತನವನ್ನು ಆತನ-ಬದ್ ಸಲ್ಲಾಗಾರರಾದ-ಗೆಳೆಯರ ಗುಂಪಿನವರು ತಮ್ಮ ಸ್ವಾಧೀನ ಪಡಿಸಿಕೊಂಡು, ದರಬಾರದ ಕೆಲಸಗಳಲ್ಲಿ ಮಹಾ ಅನರ್ಥಗಳನ್ನುಂಟು ಮಾಡುತ್ತಿದ್ದರು. ಕಡೆಗೆ ಆ ದರ್ಬಾರೀ ಅನರ್ಥಗಳೇ ಆತನ ರಾಜ್ಯವಿನಾಶಕ್ಕೆ ಕಾರಣವಾಗಿ ಕುಳಿತವು!

ಬ್ರಿಟಿಶ ರೆಸಿಡೆಂಟನಾದ ಎಲ್ಫಿನಸ್ಟನ್ ಸಾಹೇಬನು ಸಂಗಮದೊಳಗಿನ ತನ್ನ ಬಂಗ್ಲೆಯಲ್ಲಿ ಕುಳಿತೇ ಪುಣೇಪಟ್ಟಣದ ಹಾಗು ಮಹಾರಾಷ್ಟ್ರದೇಶದ ಜನರು ಬಾಜೀರಾಯನ ವಿಷಯವಾಗಿ ತೀರ ವಿಮನಸ್ಕರಾಗಿರುವರೆಂಬದನ್ನು ಗೊತ್ತುಮಾಡಿಕೊಂಡಿದ್ದನು; ಆದರೆ ಆವರ ವಿಮನಸ್ಕತೆಗಾಗಿ ಬಾಜೀರಾಯನನ್ನು ಪಟ್ಟದಿಂದ ತಳ್ಳಿ, ಮಹಾರಾಷ್ಟ್ರ ದೇಶದ ಪ್ರಜೆಗಳ ಕಲ್ಯಾಣ ಮಾಡಬೇಕೆಂಬ ಸದಿಚ್ಛೆಯು ಮಾತ್ರ ಆವನಲ್ಲುಂಟಾಗುವದು ಶಕ್ಯವೇ ಆಗಿರಲಿಲ್ಲ; ಅಥವಾ ಆವನ ಮನಸ್ಸಿನಲ್ಲಿ ಹಾಗೆ ಬಂದಿದ್ದರೂ ಇಂಗ್ಲಿಷ-ಬಾಜೀರಾಯರ ಸಖ್ಯದ ಸಂಬಂಧವನ್ನು ಮನದಂದರೆ, ಬಾಜೀರಾಯನು ಜನರಿಗೆ ಅಪ್ರಿಯನಾದ ಮಾತ್ರಕ್ಕೆ ಆವರು ಬಾಜೀರಾಯನನ್ನು ಪದಚ್ಯುತಗೊಳಿಸುವದು ಶಕ್ಯವಿರಲಿಲ್ಲ. ಇಂಗ್ಲಿಷರು ಬಾಜೀರಾಯನಿಗೆ ಪೇಶ್ವೆ ಪಟ್ಟಗಟ್ಟಿದಂತೆ, ಆತನನ್ನು ಪೇಶ್ವೆಪಟ್ಟದ ಮೇಲೆ ಕಾದಿಡುವದೂ ಆವರ ಕರ್ತ

ವ್ಯವೇ ಆಗಿತ್ತು. ಇಂಗ್ಲಿಷರು ಬಾಜೀರಾಯನೊಡನೆ ಒಪ್ಪಂದ ಮಾಡಿಕೊಂಡಿದ್ದರೇ ಹೊರತು, ಅವರು ಆತನ ಪ್ರಜೆಗಳ ಕೂಡ ಒಪ್ಪಂದ ಮಾಡಿಕೊಂಡಿರಲಿಲ್ಲ. ಇಂಥ ಮನುಷ್ಯನಿಂದ ಅವನ ರಾಜ್ಯವನ್ನು ಸೆಳೆಕೊಳ್ಳಲಿಕ್ಕೆ ಇಂಗ್ಲಿಷರಿಗೆ ಒಂದೇ ಒಂದು ಮಾರ್ಗವು ತೆರವಾಗಿದ್ದಿತು; ಅದಾವುದೆಂದರೆ: "ಬಾಜೀರಾಯನು ತನ್ನ ಪ್ರಜೆಗಳ ಕೂಡ ಅತ್ಯಾಚಾರದಿಂದ ನಡೆಯುತ್ತ-ನಡೆಯುತ್ತ ಕಡೆಗೆ ಇಂಗ್ಲಿಷರೊಡನೆಯೂ ತಪ್ಪಿ ಯಾದರೂ ಅತ್ಯಾಚಾರದಿಂದ ನಡೆಯಲಿಕ್ಕೆ ಪ್ರವರ್ತಿಸುವದು." ಇಂಗ್ಲಿಷರು ಬಾಜೀ ರಾಯನಿಗೆ ಸ್ವೈರವರ್ತನವನ್ನು ವರದಾನಮಾಡಿದ್ದರು; ಆದರೆ ಅವನು ಅದನ್ನು ಬೇ ಯವರೊಡನೆ ಮಾತ್ರ ಬೇಕಾದಹಾಗೆ ಮಾಡಬಹುದೆಂದು. ತನ್ನ ಸ್ವೈರವರ್ತನದರೆ ಪ್ರಾಬಲ್ಯದಿಂದ ಒಮ್ಮೆ ಆತನು ಇಂಗ್ಲಿಷರ ತಲೆಯಮೇಲೆ ಕೈಯಾಡಿಸ ಹೋದೊಡ ನೆಯೇ ಅವರು ಅವನನ್ನು ಮುತ್ತಿಡಬ್ಬಹಾಕಿ, ಒಮ್ಮೆಲೆ ಪಾತಾಳಕ್ಕೆ ಮೆಟ್ಟಿಬಿಟ್ಟರು!

ಈ ಕೆಲಸದಲ್ಲಿ ಇಂಗ್ಲಿಷರಿಗೆ ಬಾಜೀರಾಯನ ಹಸ್ತಕನೊಬ್ಬನ ಸಹಾಯವು ಚೆನ್ನಾಗಿ ದೊರಕಿತು. ಬಾಜೀರಾಯನಿಗೆ ಎಷ್ಟೋ ಜನ ಕುಟಿಲ ಮಂತ್ರಿ ಗಳಿದ್ದರು; ಆದರೆ ಆ ಎಲ್ಲ ಜನರಲ್ಲಿ ತ್ರ್ಯಂಬಕಜೀ ಢೇಂಗಳೆ ಎಂಬವನು ಶ್ರೇಷ್ಠ ನಾಗಿದ್ದನು. ತ್ರ್ಯಂಬಕಜಿಯು ಸ್ವಭಾವತಃ ಅತ್ಯಂತ ಶೂರನೂ, ಧೈರ್ಯಶಾಲಿ ಯೂ, ಕಲ್ಪಕನೂ, ವಿಶ್ವಾಸಿಗನೂ, ಕರ್ತೃತ್ವಶಾಲಿಯೂ ಆದ ಗೃಹಸ್ಥನಾಗಿದ್ದನು. ಇಂಗ್ಲಿಷರ ವಿಷಯದ ವೈರದ ಲೇಶವು ಆತನಿಗೆ ತಟ್ಟದಿದ್ದರೆ ಇಲ್ಲವೆ ನಾನಾಫಡಣ ವೀಸನಂಥ ಮುತ್ಸದ್ದಿಯ ಕೈಕೆಳಗೆ ಕೆಲ ದಿನಗಳಾದರೂ ಆತನು ನುರಿಪಡಿ ಹೊಂದಿ ದ್ದರೆ ಅವನ ಹೆಸರು ಮಹಾರಾಷ್ಟ್ರದ ಇತಿಹಾಸದಲ್ಲಿ ಸುಪ್ರಸಿದ್ಧಿಯನ್ನು ಪಡೆಯು ತ್ತಿತ್ತು. ಪೇಶ್ವೇಪಟ್ಟವು ಇಷ್ಟು ಕೀಳುವೆಳೆಗೆ ಬಂದದ್ದನ್ನು ಅವನಿಂದ ನೋಡ ಲಿಕ್ಕಾಗುತ್ತಿರಲಿಲ್ಲ. ಪೇಶ್ವೆಯ ಅಧಃಪತನಕ್ಕೆಲ್ಲ ಮುಖ್ಯವಾಗಿ ಇಂಗ್ಲಿಷರೇ ಕಾರಣ ರೆಂದು ಆತನ ಮನವರಿಕೆಯಾಗಿ ಹೋಗಿತ್ತು. ಶಿಂದೆ-ಹೋಳಕರರು ಮರಾಟಾ ಶಾಹಿಯನ್ನು ಇಂಗ್ಲಿಷರ ಜಾಲದೊಳಗಿಂದ ಬಿಡಿಸಿ ಸ್ವತಂತ್ರಗೊಳಿಸುವ ಯಾವ ಮಹತ್ವಾಕಾಂಕ್ಷೆಯನ್ನು ಈ ಮೊದಲು ತಾಳಿದ್ದರೋ, ತ್ರ್ಯಂಬಕಜಿಯ ಮನಸ್ಸಿ ನಲ್ಲಾದರೂ ಅದೇ ಮಹತ್ವಾಕಾಂಕ್ಷೆಯಿದ್ದಿತು. ಅವನಿಗೆ ಸ್ವಂತದ ರಾಜ್ಯವಿರದ್ದ ರಿಂದ ಆತನ ಪ್ರಖ್ಯಾತಿಯಿರಲಿಲ್ಲವಿಷ್ಟೆ; ಆದರೂ ಆತನ ಮನಸ್ಸಿನ ಹವ್ಯಾಸ-ವ್ಯಾಪ ಗಳು ಶಿಂದೆ-ಹೋಳಕರರಷ್ಟೇ ಪ್ರಖ್ಯಾತವಾಗಿದ್ದವು; ಆದರೆ ಪೇಶ್ವೆಯು ಇಂಗ್ಲಿಷರ ಜಾಲದಲ್ಲಿ ಈ ಪರಿತೊಡಗಿರಲು, ಮೇಲಾಗಿ ಖುದ್ದ ಪೇಶ್ವೆಯು ತೀರ ಹೇಡಿಯೂ ಅಂಜುಬುರುಕನೂ ಆಗಿರಲು, ಮತ್ತು ಕೈಕೆಳಗಿನ ಸರದಾರರೆಲ್ಲ ವಿಮನಸ್ಕರಾಗಿರಲು, ಇಂಗ್ಲಿಷರನ್ನು ಮಹಾರಾಷ್ಟ್ರದಿಂದ ಹೊರಗಟ್ಟುವದು ನಿಜವಾಗಿಯೂ ಎಷ್ಟರ ಮಟ್ಟಿಗೆ ಶಕ್ಯವಾಗಬಹುದೆಂಬ ವಿಚಾರವನ್ನು ಆ ತ್ರ್ಯಂಬಕಜಿಯು ಚೆನ್ನಾಗಿ ಮಾಡ ಲಿಲ್ಲ. ಪ್ರಯತ್ನಪಟ್ಟರೆ ಶಿಂದೆ, ಹೋಳಕರ, ಭೋಸಲೆ ಮುಂತಾದವರು ಮತ್ತೆ ನೆರವಾಗಬಹುದೆಂಬ ಆಶೆಯು ಅವನಿಗೆ ತೋರುತ್ತಿತ್ತು; ಆದರೆ ಆತನು ವಿಚಾರ

ದಿಂದ ಒಳ್ಳೇ ಮುತ್ಸದ್ದಿಯೆನಿಸುತ್ತಿದ್ದರೂ, ಆಚಾರ-ವ್ಯವಹಾರಗಳಲ್ಲಿ ಅವನು ಕೀಳು ನೀಚ ನಾಗಿದ್ದನು! ಅವನು ಹುಟ್ಟಾ ದೊಡ್ಡ ಮನುಷ್ಯನಲ್ಲ, ಅದರಲ್ಲಿ ಆತನ ಸ್ವಭಾವವು ಸಿಟ್ಟಿನದು ಕಡುಕಿನದು; ನ್ಯಾಯಾನ್ಯಾಯಗಳ ಪರಿವೆಯಿರಲಿಲ್ಲ; ಕರ್ತವ್ಯಾಕರ್ತವ್ಯ ಗಳ ವಿವೇಕವಿದ್ದಿಲ್ಲ ದರಬಾರೀ ನೀಚತನವು ಅವನಲ್ಲಿ ಹೆಚ್ಚಾಗಿ ಪ್ರೈಯಮುಂಡಿತ್ತು. ಅದರಿಂದ ಬ್ರಾಹ್ಮಣ ಅಥವಾ ಮರಾಟಾ ಜಾತಿಯ ಸರದಾರರಲ್ಲಿ ಅವನಿಗೆ ಕೊಂಚವೂ ಮಾನ-ಸನ್ಮಾನವಿರಲಿಲ್ಲ. ತ್ರ್ಯಂಬಕಜೀ ಢೇಂಗಳೆಯ ಸ್ಥಿತಿ-ಗತಿಯು ಈ ಪ್ರಕಾರದ್ದಾ ಗಿತ್ತಾದ್ದರಿಂದ, ಆತನ ಮಹತ್ವಾಕಾಂಕ್ಷೆಗೆ ಸ್ವಲ್ಪವೂ ಬೆಲೆಯಿರಲಿಲ್ಲ! ಆದರೆ ವಿಕಟ-ವಿನೋದಿ ಅಥವಾ ಅಂತರಂಗದ ಸಲಹೆಗಾರ ಅಂದರೆ ನವರ್ಮಸಚಿವ -- ಖಾಸಬಕ್ಷಿ ಈ ನಾತೆಯಿಂದ ಬಾಜೀರಾಯನ ಮನಸ್ಸಿನ ಮೇಲೆ ಆತನು ತನ್ನ ವರ್ಚಸ್ಸನ್ನು ಬಹು ಚನ್ನಾಗಿ ಸ್ಥಾಪಿಸಿದ್ದನು; ಆದರೂ ತ್ರ್ಯಂಬಕಜಿಯು ಸಾಹಸಕ್ಕೂ ಕೂಡ ಟೊಂಕ ಹಾಕುವಂತಹ ಹೇಡಿಯು ಬಾಜೀರಾಯನಾದ್ದರಿಂದ, ಅವರೀರ್ವರ ಜೋಡಿಯಿಂದ ಪರಸ್ಪರರ ನಾಶವಾದದ್ದಲ್ಲದೆ, ಶ್ರೀಶಿವಛತ್ರಪತಿಯು ಸ್ಥಾಪಿಸಿದ್ದ ಮರಾಟಾಶಾಹಿಯೂ ನಾಶಹೊಂದಿತು!

ತ್ರ್ಯಂಬಕಜಿಯ ಸಲುವಾಗಿ ಇಂಗ್ಲಿಷರಿಗೂ ಬಾಜೀರಾಯನಿಗೂ ಎಷ್ಟೋ ದಿವಸಗಳವರೆಗೆ ಮನಸ್ತಾಪ ನಡೆದಿತ್ತು. ತ್ರ್ಯಂಬಕಜಿಯು ಇಂಗ್ಲಿಷರನ್ನು ಮನ ಮುಟ್ಟಿ ದ್ವೇಷಿಸುತ್ತಿರುವನೆಂಬದು ಇಂಗ್ಲಿಷ ರೆಸಿಡೆಂಟನಿಗೆ ಚೆನ್ನಾಗಿ ಗೊತ್ತಾಗಿತ್ತು; ಆದರೂ ಡಾಣಡಂಗುರವಾಗಿ ಆ ದೋಷಾರೋಪಣ ಮಾಡುವ ಧೈರ್ಯವು ಅವನ ಲ್ಲಿರಲಿಲ್ಲ. ಬರಿಯ ವೈರತ್ವದ ಪುರಾವೆಯಾದರೂ ಏನು ದೊರೆಯಬೇಕು? ಆದ್ದರಿಂದ ಇಂಗ್ಲಿಷರು ತ್ರ್ಯಂಬಕಜಿಯ ವಿನಾಶದ ದಾರಿಕಾಯುತ್ತ ಸುಮ್ಮನಿರಲು, ಆ ಸಂಧಿಯು ಗಾಯಕವಾಡನ ಪ್ರಕರಣದಿಂದ ಅವರಿಗೆ ಅಚಿಂತ್ಯವಾಗಿ ಪ್ರಾಪ್ತವಾಯಿತು

ಗುಜರಾಥದ ಕಪ್ಪ-ಕಾಣಿಕೆಗಳ ಬಗ್ಗೆ ಗಾಯಕವಾಡ ಮತ್ತು ಪೇಶ್ವೆ ಇವರಲ್ಲಿ ಬಹು ದಿನಗಳಿಂದ ಜಗಳ-ತಂಟೆಗಳು ನಡೆದೇ ಇದ್ದವು. ಪೇಶ್ವೆಯರು ಗಾಯಕವಾಡನ ಮೇಲೆ ಎಷ್ಟೋ ಬಾಕಿಯನ್ನು ತೆಗೆದಿದ್ದರು; ತದ್ವಿರುದ್ಧವಾಗಿ ಪೇಶ್ವೆಯಿಂದ ತನಗೇ ಕೆಲ ಕೆಲವು ರಕಮುಗಳು ಬರಬೇಕಾಗಿವೆಯೆಂದು ಗಾಯಕವಾಡನ ಅಂಬೋಣ ವಾಗಿತ್ತು ಪೇಶ್ವೆಯು ವರಾತ ಹಾಕಿದ್ದರಿಂದ, ಇಂಗ್ಲಿಷರ ಮಧ್ಯಸ್ಥಿಕೆಯ ಮೂಲಕ ಗಂಗಾಧರಶಾಸ್ತ್ರೀ ಪಟವರ್ಧನನೆಂಬೊಬ್ಬ ಪ್ರಮುಖ ಮುತ್ಸದ್ದಿಯು ಲಗಳರಲ್ಲಿ ಬಡೋದೆಯಿಂದ ಪುಣೆಗೆ ಬಂದನು. ಆ ಶಾಸ್ತ್ರಿಯು ಆಗ ಗಾಯಕವಾಡನ ದಿವಾಣ ನಾಗಿದ್ದರೂ ಅವನು ಕಾರಕೂನಿಕೆಯಿಂದ ಮೇಲಕ್ಕೇರುತ್ತ ಬಂದವನು. ಆದ್ದರಿಂದ ಇಂಥ ಮನುಷ್ಯನು ವಕೀಲನೆಂದು ಸರಿಕದಾರರಂತೆ ತನ್ನೊಡನೆ ಮಾತಾಡಲಿಕ್ಕೆ ಬಂದದ್ದು ಬಾಜೀರಾಯನಿಗೆ ಸೇರಲಿಲ್ಲ. ಸ್ವತಃ ಎಲ್ಫಿನಿಸ್ಟನ್ನ ಸಾಹೇಬನು ಆ ಗಂಗಾ ಧರಶಾಸ್ತ್ರಿಯ ಬಗ್ಗೆ ಒಂದೆಡೆಯಲ್ಲಿ ಬಹು ವಿನೋದಕರವಾಗಿ ವರ್ಣಿಸಿರುತ್ತಾನೆ: — "ಗಂಗಾಧರ ಶಾಸ್ತ್ರಿಯು ಒಳ್ಳೇ ಧೂರ್ತನೂ ಜಾಣನೂ ಆಗಿರುತ್ತಾನೆ ಆತನು

ಬಡೋದಾ ಸಂಸ್ಥಾನದ ವ್ಯವಸ್ಥೆಯನ್ನು ಚೆನ್ನಾಗಿ ಇಟ್ಟಿರುತ್ತಾನೆ. ಇಲ್ಲಿ-ಪುಣೆಯಲ್ಲಿ ಅವನು ಹೆಚ್ಚಾಗಿ ಹಣ ಖರ್ಚುಮಾಡಿ ಒಳ್ಳೇ ಠಾಕುಠೀಕಿನಿಂದ ನಡೆಯುತ್ತಾನೆ; ಹಾಗು ಆತನು ಊರಲ್ಲಿ ತಿರುಗಾಡುವಾಗ, ಜನರು ಆತನನ್ನೇ ನೋಡುತ್ತಿರುವಂತೆ ಬಹು ವಿಲಾಸಿಯಾಗಿ ತೋರುತ್ತಾನೆ. ಆತನು ಹಳೇ ಪದ್ಧತಿಯ ವಿದ್ವಾನ್ ಶಾಸ್ತ್ರಿಯಾಗಿದ್ದರೂ ಅಚ್ಚ ಇಂಗ್ಲಿಷರಂತೆ ನಡವಳಿಕೆಯನ್ನಿಡುತ್ತಾನೆ. ಆತನ ಚಟುವಟಿಕೆಯ ನಡಿಗೆ, ಆತುರದ ಮಾತು, ಬೇಕಾದವರಿಗೆ ಕೊಡುವ ಎದುರುತ್ತರ ಇವುಗಳು ಇಂಗ್ಲಿಷ ಮನುಷ್ಯನ ದಿಮಾಖದಂತಿರುತ್ತವೆ. ಆತನು ಖುದ್ದ ಪೇಶ್ವೆಗೂ ಆತನ ಕಾರಭಾರಿಗಳಿಗೂ ಮೂರ್ಖರೆಂದು ಅನ್ನುವನು. 'ಡ್ಯಾಮ್ ರಾಸ್ಕಲ್' ಎಂಬ ಈ ಇಂಗ್ಲಿಷ ಬೈಗಳ ಶಬ್ದವು ಆತನ ಬಾಯಲ್ಲಿ ಸದಾ ಇದ್ದದ್ದೇ. ಮಾತಾಡುವಾಗ ನಡುನಡುವೆ ಎಷ್ಟೋ ಇಂಗ್ಲಿಷ ಶಬ್ದಗಳನ್ನು ಆತನು ಸೇರಿಸಿ ಬಿಡುವನು.'' ಇಂಥ ಮನುಷ್ಯನು ಇಂಗ್ಲಿಷರ ಮುರುವತ್ತಿನ ಮೂಲಕ ಗಾಯಕವಾಡನ ಕಡೆಯಿಂದ ಪೇಶ್ವೆಯೊಡನೆ ನ್ಯಾಯಾಡಲಿಕ್ಕೆ ಬಂದದ್ದರಿಂದ, ಆತನು ಬಾಜೀರಾಯನ ದರ್ಬಾರದಲ್ಲಿ ಅಪ್ರಿಯನಾದದ್ದು ಸ್ವಾಭಾವಿಕವೇ ಸರಿ. ಆ ಕೆಲಸಕ್ಕಾಗಿ ಗಂಗಾಧರಶಾಸ್ತ್ರಿಯು ಪುಣೇಪಟ್ಟಣದಲ್ಲಿ ಒಂದು ವರ್ಷದವರೆಗೆ ಇದ್ದನು. ಶಾಸ್ತ್ರಿಯು ಒಳ್ಳೇ ತೀಕ್ಷ್ಣಸ್ವಭಾವದವನು; ಬಾಜೀರಾಯನು ಯಾವ ಕೆಲಸವನ್ನೂ ಕೂಡಲೆ ಮಾಡಗೊಡದವನು. ಅಂದಮೇಲೆ ಆ ಲೆಕ್ಕಾಚಾರವು ಒಮ್ಮೆಲೆ ಬಗೆಹರಿಯುವದೆಂತು? ಹೀಗೆ ಒಂದು ವರ್ಷವು ಕ್ರಮಿಸಿದ ನಂತರ ೧೮೧೫ರಲ್ಲಿ ಬಾಜೀರಾಯನು ಪಂಢರಪುರಕ್ಕೆ ಹೋದನು. ಗಂಗಾಧರಶಾಸ್ತ್ರಿಯೂ ಆತನೊಡನೆ ಪಂಢರಪುರಕ್ಕೆ ಹೋದನು ಅಲ್ಲಿ ತಾ|| ೨೦-೭-೧೮೧೫ನೇ ರಾತ್ರಿ ಶ್ರೀವಿಠ್ಠಲದೇವರ ಮಹಾದ್ವಾರದ ಬಳಿಯ ದಾರಿಯಲ್ಲಿ ಗಂಗಾಧರಶಾಸ್ತ್ರಿಯು ಕೊಲೆಯಾಯಿತು! ತಮ್ಮ ಮಧ್ಯಸ್ತಿಕೆಯಿಂದ ಬಂದ ಗಾಯಕವಾಡನ ವಕೀಲನ ಕೊಲೆಯಾದದ್ದಕ್ಕಾಗಿ ಇಂಗ್ಲಿಷರಿಗೆ ಸಹಜವಾಗಿಯೇ ಅನಿವಾರವಾದ ಕೋಪ ಬಂತು. ಅದರಿಂದ ಅವರು ತ್ರ್ಯಂಬಕಜಿಯ ಮೇಲೆ ಸಂಶಯ ತಕ್ಕೊಂಡು, ಆತನನ್ನು ಕೂಡಲೆ ತಮ್ಮ ಸ್ವಾಧೀನ ಪಡಿಸಬೇಕೆಂದು ಪುಣೆಯ ರೆಸಿಡೆಂಟನ ಮುಖಾಂತರ ಬಾಜೀರಾಯನಿಗೆ ತಗಾದೆಹಚ್ಚಿದರು.

---

## ೧ ನೆಯ ಪರಿಚ್ಛೇದ.

## ಶಿಷ್ಯಾಪರಾಧೇ ಗುರೋರ್ದಂಡಃ ।

ಯಾವ ರಾಜ್ಯದಲ್ಲಾದರೂ ಪ್ರತಿಯೊಂದು ಖೂನಿನ ಪತ್ತೆಯಾಗುತ್ತದೆಂದೂ, ಗುನ್ಹೆಗಾರರಿಗೆ ಶಿಕ್ಷೆಯಾಗದಿರುವದಿಲ್ಲೆಂದೂ ಅನ್ನುವಂತಿಲ್ಲ. ಪ್ರಸ್ತುತ ಕಾಲದಲ್ಲಿ ಬಂಗಾಲ-ಪಂಜಾಬ ಮುಂತಾದ ಪ್ರಾಂತಗಳಲ್ಲಿ ರಾಜಧಾನಿಗಳಂತಹ ಮುಖ್ಯ ಮುಖ್ಯ ಪಟ್ಟಣಗಳಲ್ಲಿ ಕೂಡ ಹಗಲು ಹಾಡಿನಲ್ಲಿ ಎಷ್ಟೋ ಕೊಲೆ ಸುಲಿಗೆಗಳು ಡಾಣಡಂಗುರ

ವಾಗಿ ನಡೆದಿರುವವೆಂಬುದು ನಮ್ಮ ವಾಚಕರಿಗೆ ಅರಿಯದ ವಿಷಯವಾಗಿಲ್ಲ. ಆ ಗಂಗಾಧರ ಶಾಸ್ತ್ರಿಯ ಕೊಲೆಯ ಸಂಗತಿ ಯಾವರೂ ಇಂಥದೇ ಆಗಿರಬಹುದು. ಆದರೂ ಆ ಶಾಸ್ತ್ರಿಯು ದರ್ಬಾರೀ ವಕೀಲನಾದುದರಿಂದ, ಆತನ ಕೊಲೆಗೆ ರಾಜಕೀಯ ಮಹತ್ವವುಂಟಾಗಿತ್ತು; ಅಲ್ಲದೆ ಖೂನಾದ ಕಾಲಕ್ಕೆ ಸ್ವತಃ ಬಾಜೀರಾಯನು ಪಂಢರಪುರದಲ್ಲೇ ಇದ್ದನು; ಮತ್ತು ಆತನ ಹಸ್ತಕನಾದ ತ್ರ್ಯಂಬಕಜಿಯ ಮುಕ್ಕಾಮೂ ಪಂಢರಪುರದಲ್ಲೇ ಇತ್ತು, ಇಷ್ಟೇ ಅಲ್ಲ, ಖೂನಿನ ಮೊದಲು ಬಾಜೀರಾಯನೇ ಆಗ್ರಹಪೂರ್ವಕವಾಗಿ ಕರೆಕಳುಹಿದ್ದರಿಂದ, ಆ ಶಾಸ್ತ್ರಿಯು ವಿಠ್ಠಲನ ಮಂದಿರಕ್ಕೆ ಹೋಗಿದ್ದನು. ತ್ರ್ಯಂಬಕಜಿಯು ಇಂಗ್ಲಿಷರನ್ನು ಮನಮುಟ್ಟಿ ದ್ವೇಷಿಸುವವನು; ಶಾಸ್ತ್ರಿಯು ಇಂಗ್ಲಿಷರ ಬೆಂಬಲದಿಂದ ಬಂದ ತಲೆಭಾರ ಮುತ್ಸದ್ದಿಯು! ಅಂದಬಳಿಕ ಆತನ ಕೊಲೆಯ ಆರೋಪವು ತ್ರ್ಯಂಬಕಜಿಯ ಮೇಲೂ, ಅವನ ಮುಖಾಂತರ ಖುದ್ದ ಬಾಜೀರಾಯನ ಮೇಲೂ ಹೊತ್ತದ್ದು ಸ್ವಾಭಾವಿಕವೇ ಆಗಿದೆ, ಆದರೆ ಬಹಿರಂಗದ ಮಾತು-ಕಥೆಗಳಲ್ಲಂತೂ ಇಂಗ್ಲಿಷರು ಬಾಜೀರಾಯನ ಮೇಲೆ ಆ ಖೂನಿನ ಜವಾಬುದಾರಿಯನ್ನು ಹೇರದೆ, ತ್ರ್ಯಂಬಕಜಿಯನ್ನೇ ನಿಜವಾದ ಆರೋಪಿಯೆಂದು ತಿಳಕೊಂಡರು; ಹಾಗು ಬಾಜೀರಾಯನು ಕೂಡಲೆ ತ್ರ್ಯಂಬಕಜಿಯನ್ನು ಅವರ ಸ್ವಾಧೀನ ಪಡಿಸಿದ್ದರೆ, ಈ ಖೂನಿನ ಪ್ರಕರಣದಲ್ಲಿ ಬಾಜೀರಾಯನ ಮಟ್ಟಿಗಾದರೂ ಇಂಗ್ಲಿಷರ ಮನಸ್ಸಿನಲ್ಲಿ ಕಲ್ಮಷವುಂಟಾಗುತ್ತಿರಲಿಲ್ಲ. ಇರಲಿ

ಗಂಗಾಧರ ಶಾಸ್ತ್ರಿಯ ಕೊಲೆಯ ಪ್ರಕರಣಕ್ಕೆ ಮತ್ತೊಂದು ಬಗೆಯ ಪುರಾವೆಯೂ ಇರುವದು. ಶಾಸ್ತ್ರಿಯು ಪೇಶ್ವೆ ಮತ್ತು ಗಾಯಕವಾಡರ ವಾದದಲ್ಲಿ ಗಾಯಕವಾಡನ ಕಡೆಯಿಂದ ಇಂಗ್ಲಿಷರ ಉತ್ತೇಜನದ ಮೂಲಕ ಪುಣೆಗೆ ಬಂದಿದ್ದನು. ಆದರೂ ಆತನಿಗೆ ಸ್ವಂತದ ವೈರಿಗಳಿದ್ದಿಲ್ಲನೆಂತಲ್ಲ. ಆ ಶಾಸ್ತ್ರಿಯು ಒಳ್ಳೇ ಗರ್ವಿಷ್ಠನೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಬರೇ ಗಾಯಕವಾಡನ ಪಕ್ಷವನ್ನು ಸಮರ್ಥಿಸಿ ವಿಜಯ ಸಂಪಾದಿಸುವದರಿಂದ ಅವನ ಸಮಾಧಾನವಾಗುವಂತಿರಲಿಲ್ಲ; ಆದರೆ ತಾನು ತನ್ನ ಕಾರ್ಯಕೌಶಲ್ಯದ ಮೂಲಕ ಪುಣೇ ಪಟ್ಟಣದಲ್ಲಿ ಪೇಶ್ವೇ ದರಬಾರದ ಕಾರಭಾರಿಯಾಗಬೇಕೆಂಬ ಇಚ್ಛೆಯೂ ಅವನಿಗುಂಟಾಗಿದ್ದಿತು. ಪೇಶ್ವೇ ಬಖರಕಾರನು ಬರೆದಿರುವದೇನಂದರೆ: - "ಮುಂದೆ ಬಡೋದೆಯಿಂದ ಗಂಗಾಧರಶಾಸ್ತ್ರಿಯು ಇಲ್ಲಿಗೆ ಬಂದ ಮೂಲಕ ಕಲಹಕ್ಕೆ ಪ್ರಾರಂಭವಾಯಿತು. ಮೂರು-ನಾಲ್ಕು ತಿಂಗಳಲ್ಲೇ ಇಲ್ಲಿಯ ಪೇಶ್ವೆಯ ಕಾರಭಾರಿಯಾಗಿದ್ದ ಸದಾಶಿವ ಮಾಣಕೇಶ್ವರ ಮತ್ತು ಜಲಚರ= ಇಂಗ್ಲಿಷರ ಕಡೆಯ ಮೋಘೀ ಶೇಟ ಈ ಉಭಯತರನ್ನು ತೆಗೆದು ಹಾಕಿ, ತಾನೇ ಕಾರಭಾರ ನಡೆಸಬೇಕೆಂದು ಆ ಶಾಸ್ತ್ರಿಯ ಮನಸ್ಸಿನಲ್ಲಿ ಬಂತು. ಆಗ ಮೋಘೀ ಶೇಟನು ಆತ್ಮಹತ್ಯೆ ಮಾಡಿಕೊಂಡನು ಅದರಿಂದ ಬಾಜೀರಾಯ ಪೇಶ್ವೆಗೆ ಬಹು ಗಡಚಣಿಸಿತು." ಮತ್ತೇನೆಂದರೆ, ಶಾಸ್ತ್ರಿಯು ತನ್ನ ಸ್ವಂತದ ನ್ಯಾಯವೊಂದನ್ನು ಪುಣೆಗೆ ತಕ್ಕೊಂಡು ಬಂದಿದ್ದನು; ಅದಕ್ಕಾಗಿ ಬಡೋದೆಯ ಆತನ ಪ್ರತಿಪಕ್ಷಿಗಳು ಪಂಢರಪುರದಲ್ಲಿ ಆತ

ನನ್ನು ಕೊಲೆಗೆಯ್ಯುವ ಸಂಧಿ ಸಾಧಿಸಿದರೆಂದು ತಿಳಿಯಲಿಕ್ಕೆ ಖುದ್ದ ಬಡೋದೆಯೊಳಗಿನ ಪಟವರ್ಧನ ದಪ್ತರದೊಳಗಿನ ಎಷ್ಟೋ ಕಾಗದ ಪತ್ರಗಳಿಂದ ಸಾಕಷ್ಟು ಪುರಾವೆ ಸಿಗುವದೆಂದು ಹೇಳುತ್ತಾರೆ. ಕೆಲ ವರ್ಷಗಳ ಮುಂಚೆ ಪುಣೆಯ ಕೇಸರೀ ಪತ್ರದ ಒಂದು ಅಂಕಿನಲ್ಲಿ ಈ ವಿಷಯದ ಒಂದು ಪತ್ರವು ಪ್ರಸಿದ್ಧವಾಗಿತ್ತು. ಎಲ್ಫಿನಿಷ್ಟನ್ನ ಸಾಹೇಬನ ಪತ್ರದಿಂದಲೂ ಆ ಕೊಲೆಯ ಪೂರ್ವದಲ್ಲಿ ಗಂಗಾಧರ ಶಾಸ್ತ್ರಿಗೂ ತ್ರ್ಯಂಬಕಜಿಗೂ ಒಳ್ಳೇ ಮೈತ್ರಿಯುಂಟಾಗಿತ್ತೆಂದೂ ಅಥವಾ ಆವನು ಶಾಸ್ತ್ರಿಯನ್ನು ಖಾಸಗೀ ರೀತಿಯಿಂದ ವಶಪಡಿಸಿಕೊಂಡು ಹಾಗು ಆತನಿಗೆ ದಿವಾಣಗಿರಿ ಕೊಡಿಸುವ ಆಮಿಷವನ್ನು ತೋರಿಸಿ, ಲೆಕ್ಕಾಚಾರದ ವಿಷಯದಲ್ಲಿ ಶಾಸ್ತ್ರಿಯು ಗಾಯಕವಾಡನೊಡನೆ ಬೇಇಮಾನನಾಗುವಂತೆ ಮಾಡಿ, ಪೇಶ್ವೆಗೆ ಲಾಭಮಾಡಿಕೊಡುವ ಪ್ರಯತ್ನವು ನಡೆದಿತ್ತೆಂದೂ ಗೊತ್ತಾಗುತ್ತದೆ. ಬಾಜೀರಾಯನ ಹೆಂಡತಿಯ ತಂಗಿಯನ್ನು ಗಂಗಾಧರಶಾಸ್ತ್ರಿಗೆ ಕೊಟ್ಟು, ಆ ಲಗ್ನ ಸಮಾರಂಭವನ್ನು ಬೇಗನೆ ನಾಶಿಕದಲ್ಲಿ ನೆರವೇರಿಸುವದೆಂಬದೂ ಗೊತ್ತಾಗಿತ್ತು. ಶಾಸ್ತ್ರಿಯ ಆ ಎಲ್ಲ ಬೇತುಗಳು ಸ್ವತಃ ಎಲ್ಫಿನಿಷ್ಟನ್ನ ಸಾಹೇಬನ ಮನಸ್ಸಿಗೆ ಬರಲಿಲ್ಲ; ಆದರಿಂದ ಆತನು: "ನೀನು ಗಾಯಕವಾಡನ ವಕೀಲನೆಂದು ಇಲ್ಲಿಗೆ ಬಂದು, ಪೇಶ್ವೆಯ ಕಾರಭಾರಿಯಾಗುವದು ತೀರ ಅಪ್ರಶಸ್ತವೆ"ಂದು ಆ ಶಾಸ್ತ್ರಿಗೆ ಖಂಡತುಂಡಾಗಿ ತಿಳಿಸಬೇಕಾಯಿತು.

ಶಾಸ್ತ್ರಿಯು ಕಡೆಗೆ ಆ ಲಗ್ನ ಮಾಡಿಕೊಳ್ಳುವದನ್ನು ನಿರಾಕರಿಸಿದನು. ಆ ಲಗ್ನ ನಿರಾಕರಣದ ಹೊರತು ತ್ರ್ಯಯಂಬಕಜಿಗೂ, ಗಂಗಾಧರ ಶಾಸ್ತ್ರಿಗೂ ವೈರವುಂಟಾಗುವ ಬೇರೆ ಯಾವ ಸಮರ್ಪಕ ಕಾರಣವೂ ತೋರಿಸಲ್ಪಟ್ಟಿರುವದಿಲ್ಲ ತದ್ವಿರುದ್ಧವಾಗಿ ಗೋವಿಂದರಾವ ಖಂಡೋಜಿ ಮುಂತಾದ ಶಾಸ್ತ್ರಿಯ ವೈರಿಗಳು ಬಡೋದೆಯಿಂದ ಪುಣೆಗೆ ಬಂದರೆಂಬದೂ, ಪುಣೆಯಿಂದ ಪಂಢರಪುರಕ್ಕೆ ಹೋದರೆಂಬದೂ, ಶಾಸ್ತ್ರಿಯ ಖೂನಾಗುವದೆಂಬ ಕಟ್ಟಿನ ಹುಲುಬು ಮೊದಲಿನಿಂದಲೂ ಹುಲುಬಿದ್ದರಿಂದ, ಆತನ ಆತ್ಮಸಂರಕ್ಷಣಾಕ್ಕೆಂದು ಪೇಶ್ವೆಯವರು ಪಹರೆಯವರೇ ಮೊದಲಾದ ಸಹಾಯಕರನ್ನು ಆತನಿಗೆ ಹೆಚ್ಚಾಗಿ ಪೂರೈಸಿದ್ದರೆಂಬ ಸಂಗತಿಗಳೂ ಜಗಜ್ಜಾಹೀರಾಗಿವೆ. ಎಲ್ಫಿನಿಷ್ಟನ್ ಸಾಹೇಬನ ಮತದಂತೆ ಶಾಸ್ತ್ರಿಯ ಖೂನಿನ ಕಟ್ಟಿನ ಆ ಹುಲುಬನ್ನು ತ್ರ್ಯಂಬಕಜಿಯೇ ಮೊದಲು ಹುಲುಬಿದ್ದನಲ್ಲದೆ, ಆ ಸಂಗತಿಯ ಬಗ್ಗೆ ಪೇಶ್ವೆಗೆ ವಿಶ್ವಾಸವಿರದಿದ್ದರೂ ಬಹಿರಂಗದಲ್ಲಿ ಅವನು ಅದನ್ನು ನಿಜವೆಂದು ತಿಳಿದಂತೆ ತೋರಿಸುತ್ತಿದ್ದನು; ಆದರೆ ಆ ಸಾಹೇಬ ಬಹಾದ್ದೂರನ ಈ ಅಂಬೋಣಕ್ಕೆ ಸಾಕಷ್ಟು ಆಧಾರಗಳಿರುವದಿಲ್ಲ.

ಶಾಸ್ತ್ರಿಯ ಪಕ್ಷದವನೂ ಅಂಗರಕ್ಷನೂ ಆಗಿದ್ದ ಬಾಪೂ ಮೈರಾಳ ಎಂಬುವನು ಶಾಸ್ತ್ರಿಯ ಕೊಲೆಯಾದ ಕೂಡಲೆ ಎಲ್ಫಿನಿಷ್ಟನ್ನ ಸಾಹೇಬನಿಗೆ ಯಾವ ಪತ್ರವನ್ನು ಬರೆದು ಕಳಿಸಿದ್ದನೋ, ಅದರಲ್ಲಿಯ ಸಂಗತಿಗಳೇನಂದರೆ: "ಕೊಲೆಯ ಮರುದಿನ ಶಾಸ್ತ್ರಿಯ ಕಾರಕೂನರು ತ್ರ್ಯಂಬಕಜಿಯ ಕಡೆಗೆ ಹೋಗಿ 'ನೀವು ಶಾಸ್ತ್ರಿಗಳ ಸ್ನೇಹಿ

ತರೂ ಪೇಶ್ವೆಯರ ಕಾರಭಾರಿಗಳೂ ಆಗಿರುತ್ತೀರಿ. ಆದ್ದರಿಂದ ನೀವು ಈ ಖೂನಿನ ಪತ್ತೆ ಹಚ್ಚುವ ಪ್ರಯತ್ನ ಮಾಡಬೇಕು' ಎಂದು ಹೇಳಲು, ಅದಕ್ಕೆ ತ್ರ್ಯಂಬಕಜಿಯು 'ಅದನ್ನು ನಾನು ಮಾಡುತ್ತಲೇ ಇದ್ದೇನೆ, ಆದರೆ ಆರೋಪಿಯು ಯಾರೆಂದು ಅನುಮಾನಿಸಬೇಕು? ಎಷ್ಟು ಶೋಧಿಸಿದರೂ ಪತ್ತೆ ಹತ್ತಲೊಲ್ಲದು' ಎಂದನು. ಆಗ ಆ ಕಾರಕೂನನು ಮತ್ತೆ ತ್ರ್ಯಂಬಕಜಿಯನ್ನು ಕುರಿತು, 'ಶಾಸ್ತ್ರಿಗಳ ವೈರಿಗಳಾರೆಂಬದು ತಮಗೆ ಗೊತ್ತೇ ಇದೆ. ಅವರು ಬಹುಶಃ ಕರ್ನಾಟಕಸ್ಥರಾಗಿರಬಹುದಾಗಿದೆ.' ಎಂದು ಅಂದನು 'ಆಗತಕ್ಕದ್ದು ಎಂದೂ ತಡೆದು ನಿಲುವದಿಲ್ಲ. ಆ ಪರಭೂ ಸೀತಾರಾಮನೊಬ್ಬನಿರುವನು. ಗಾಯಕವಾಡರಲ್ಲಿಯ ಕನ್ಹೋಜಿ ಗಾಯಕವಾಡನನ್ನು ನೀವೇ ಕರ್ನಾಟಕದಲ್ಲಿರಿಸಿರುತ್ತೀರಿ, ಆದರೆ ಇಂಥವನೇ ಕೊಂದನೆಂಬ ಬಗ್ಗೆ ಪತ್ತೆ ಹಚ್ಚುವ ಬಗೆ ಹೇಗೆ? ಆದರೂ ನಾನು ಸಾಧ್ಯವಾದಷ್ಟು ಪ್ರಯತ್ನಪಡುತ್ತೇನೆ' ಎಂದು ತ್ರ್ಯಂಬಕಜಿಯು ಉತ್ತರವಿತ್ತನು. ಬಾಪೂ ಮೈರಾಳನು ಈ ಸಂಗತಿಯನ್ನು ಖಾಸಗೀ ರೀತಿಯಿಂದ ಪುಣೆಯ ರೆಸಿಡೆಂಟ ಎಲ್ಫಿನಿಸ್ಟನ್ನನಿಗೆ ತಿಳಿಸಿದ್ದರೂ ಅದರಲ್ಲಿ ಈ ಶಾಸ್ತ್ರಿಯ ಕೊಲೆಯನ್ನು ತ್ರ್ಯಂಬಕಜಿಯೇ ಮಾಡಿಸಿರುವನೆಂದು ಎಲ್ಲಿಯೂ ಉಲ್ಲೇಖಿಸಿರುವದಿಲ್ಲ. ಬಡೋದೆ ಕಡೆಯ ಖಂಡೋಜಿ ಮತ್ತು ಭಗವಂತರಾವ ಇವರ ಮೇಲೆಯೇ ಶಾಸ್ತ್ರೀಪಕ್ಷದವರ ಅಪವಾದವಿದ್ದು, ಅವರನ್ನು ಯಾರೂ ಸೆರೆಹಿಡಿಯಲಿಲ್ಲ. ಅಲ್ಲದೆ, ರೆಸಿಡೆಂಟ ಸಾಹೇಬನ ಅಭಿಪ್ರಾಯದಂತೆ ಆ ಖೂನಿನ ವಿಚಾರಣೆಯು ಪಂಢರಪುರದಲ್ಲೇ ಆಗಬೇಕಾದ್ದು, ಅಲ್ಲಿ ಅದು ಆಗಲೇ ಇಲ್ಲ. ಅದರಿಂದ ಆ ಕೊಲೆಯಲ್ಲಿ ತ್ರ್ಯಂಬಕಜಿಯ ಅಂಗವೇ ಇರಬೇಕೆಂದು ಆತನಿಗನಿಸಿತು; ಮತ್ತು ಮುಂದಿನ ಎಲ್ಲ ಕಾರಭಾರವೂ ಆ ತಳಹದಿಯ ಮೇಲೆಯೇ ಕಟ್ಟಲ್ಪಟ್ಟಿತು! ಈ ಬಗ್ಗೆ ಬಖರಕಾರನು ಅನ್ನುವದೇನಂದರೆ:—ಜಲಚರರು (ಇಂಗ್ಲಿಷರು) ಬಾಜೀರಾಯನ ಮೇಲೆ ಅಪವಾದ ಹೊರಿಸಿದ್ದೇನಂದರೆ, "ಶಾಸ್ತ್ರಿಗಳ ಕೊಲೆಯನ್ನು ನಿಮ್ಮ ಕಡೆಯ ಜನರೇ ಮಾಡಿರುತ್ತಾರೆ. ಆದ್ದರಿಂದ ನೀವು ಅವರನ್ನು ನಮ್ಮ ಸ್ವಾಧೀನಪಡಿಸಬೇಕು. ಆಗ ಬಾಜೀರಾಯ ಪೇಶ್ವೆಯವರಿಗೆ ಬಹಳ ಸಂಕಟವಾಯಿತು; ಆದರೂ ಅವರು ಕಡೆಗೆ ಢೇಂಗಳೆ ತ್ರ್ಯಂಬಕಜಿಯನ್ನು ಅವರಿಗೊಪ್ಪಿಸಿದರು."

ಗಂಗಾಧರ ಶಾಸ್ತ್ರಿಯ ಕೊಲೆಯ ವಿಷಯಕವಾದ ೨ನೇ ಕಡೆಯ ಪುರಾವೆಯೆಂದು ನಾವು ಮೇಲೆ ವರ್ಣಿಸಿರುವ ಸಂಗತಿಯೇ ನಿಜವೆಂದು ತಿಳಿದರೆ, ಬಾಜೀರಾಯನು ತ್ರ್ಯಂಬಕಜೀ ಢೇಂಗಳೆಯನ್ನು ಇಂಗ್ಲಿಷರಿಗೊಪ್ಪಿಸುವಾಗ ಪಟ್ಟ ಸಂಕಟದ ಕಾರಣವು ಸಹಜವಾಗಿಯೇ ಅವಗತವಾಗುತ್ತದೆ. ತ್ರ್ಯಂಬಕಜಿಯು ಇಂಗ್ಲಿಷರನ್ನು ದ್ವೇಷಿಸುತ್ತಾನೆಂಬ ಸಂಗತಿಯು ಎಲ್ಫಿನಿಸ್ಟನ್ನ ಸಾಹೇಬನ ಮನಸ್ಸಿನಲ್ಲಿ ಕುದಿಯುತ್ತಿತ್ತು; ಆದರೆ ಅಷ್ಟಕ್ಕಾಗಿಯೇ ಆತನನ್ನು ತಮ್ಮ ಸ್ವಾಧೀನ ಪಡಿಸಿರೆಂದು ಬಾಜೀರಾಯನನ್ನು ಕೇಳಲಿಕ್ಕೆ ಶಕ್ಯವಿರಲಿಲ್ಲ; ಒಂದು ವೇಳೆ ಅವನು ಹಾಗೆ ಕೇಳಿದ್ದರೂ ಬಾಜೀರಾಯನಾದರೂ ಅವನನ್ನು ಆ ಸಾಹೇಬನ ವಶಪಡಿಸಲಿಕ್ಕೆ ಅಷು

ಸುಲಭವಾಗಿ ಒಪ್ಪುತ್ತಿರಲಿಲ್ಲ; ಆದರೆ ಖೂನಿನ ಆರೋಪವು ರಾಜಕೀಯ ಪಕ್ಷದ ಮೇಲೆ ಬೆಂಕಿ ಕಾರಲಿಕ್ಕೆ ಯಾವಾಗಲೂ ಉತ್ತಮ ಸಾಧನವಾಗಿರುತ್ತದೆ; ಮತ್ತು ಕರ್ಮ-ಧರ್ಮಸಂಯೋಗದಿಂದ ಸಹಜವಾಗಿ ಯಾವದೊಂದು ಕೊಲೆಯಾಯಿತೆಂದರೆ, ಪ್ರತಿಪಕ್ಷದ ವಿರುದ್ಧವಾಗಿ ಆ ಬಗ್ಗೆ ಲಾಭ ಮಾಡಿಕೊಳ್ಳಲಿಕ್ಕೆ ಧೂರ್ತ ಮುತ್ಸದ್ದಿಗಳು ಎಂದೂ ತಪ್ಪುವದಿಲ್ಲವೆಂಬುದು ಎಲ್ಲ ದೇಶಗಳೊಳಗಿನ ಹಾಗು ಎಲ್ಲ ಕಾಲದೊಳಗಿನ ಸುಪ್ರಸಿದ್ಧವಾದ ಅನುಭವದ ಸಂಗತಿಯಾಗಿರುತ್ತದೆ. ಅದರಂತೆಯೇ ತ್ರ್ಯಂಬಕಜಿಯ ವಿಷಯದಲ್ಲಾದರೂ ಪ್ರಸಂಗವುಂಟಾಗಿರಬೇಕೆಂದೆನಿಸುತ್ತದೆ. ಶಾಸ್ತ್ರಿಯ ಬಳಿಯ ಯಾವ ಜನರೂ ತ್ರ್ಯಂಬಕಜಿಯ ಬಗ್ಗೆ ಅಪವಾದ ಹಾಕಿಕೊಂಡ ಪುರಾವೆ ದೊರೆಯುವದಿಲ್ಲ; ಆ ಅಪವಾದವು ಎಲ್ಫಿನಿಷ್ಟನ್ನನದೇ ಆಗಿರುತ್ತದೆ; ಮತ್ತು ಅದಕ್ಕನುಸರಿಸಿಯೇ ಇಂಗ್ಲಿಷರು ಬಾಜೀರಾಯನನ್ನು ಪೇಚಿನಲ್ಲಿ ಹಿಡಿದಿರುತ್ತಾರೆ.

ಪುಣೆಯ ಜನರ ಅಭಿಪ್ರಾಯದಂತೆ ಬಾಜೀರಾಯನ ಭರವಸೆಯು ತ್ರ್ಯಂಬಕಜಿಯಲ್ಲೇ ಹೆಚ್ಚಾಗಿತ್ತು; ಆದ್ದರಿಂದ ತ್ರ್ಯಂಬಕಜಿಯನ್ನು ಆತನು ಒಳ್ಳೇ ಕಷ್ಟದಿಂದ ಇಂಗ್ಲಿಷರ ವಶಪಡಿಸಿದನು. ಮುಂದೆ ತ್ರ್ಯಂಬಕಜಿಯು ಇಂಗ್ಲಿಷರ ಸೆರೆಯೊಳಗಿಂದ ಓಡಿ ಹೋಗುವ ಯಾವ ದೊಡ್ಡ ಸಾಹಸವನ್ನು ಮಾಡಿದನೋ, ಆಗಂತೂ ಆ ಮಹಾ ಪರಾಕ್ರಮಿ ಪುರುಷನಾದ ತ್ರ್ಯಂಬಕಜಿಯು ತನ್ನನ್ನು ಇಂಗ್ಲಿಷರ ಈ ಬಲೆಯೊಳಗಿಂದ ನಿಜವಾಗಿಯೇ ಉದ್ಧರಿಸುವನೆಂದು ಬಗೆದು, ಬಾಜೀರಾಯನು ಆತನಿಗೆ ಗುಪ್ತವಾಗಿ ಸಹಾಯ ಮಾಡಲಿಕ್ಕೂ ಪುರಂದರ, ಸಿಂಹಗಡ, ರಾಯಗಡ ಮುಂತಾದ ಭದ್ರವಾದ ದುರ್ಗಗಳಲ್ಲಿ ಯುದ್ಧಸಾಮುಗ್ರಿಗಳನ್ನು ಶೇಖರಿಸಲಿಕ್ಕೂ ಪ್ರಾರಂಭಿಸಿದನು. ಆತನ ಈ ಸಿದ್ಧತೆಯನ್ನು ಕಂಡು, ಮೊದಲೇ ಸಂಶಯಗ್ರಸ್ತರಾಗಿದ್ದ ಇಂಗ್ಲಿಷರು ಮತ್ತಿಷ್ಟು ಅನುಮಾನಗೊಂಡರು. ಓಡಿಹೋಗಿರುವ ತ್ರ್ಯಂಬಕಜಿಯು ಬಾಜೀರಾಯನಿಗೆ ಆಗಾಗ್ಗೆ ಘುಲಗಾಪವದಲ್ಲಿ ಗುಪ್ತವಾಗಿ ಭೆಟ್ಟಿಯಾಗುವನೆಂದೂ, ಪುಣೆಯ ಸುತ್ತುಮುತ್ತಲು ಸುಳಿದಾಡುವ ಪೆಂಢಾರೀ ಸ್ವಾರರ ಟೋಳಿಗಳು ನಿಜವಾದ ಪೆಂಡಾರಿಗಳವಾಗಿರದೆ, ತ್ರ್ಯಂಬಕಜಿಯ ಹಸ್ತಕ ಸೈನಿಕರೇ ಅವರೆಂದೂ ಇಂಗ್ಲಿಷರು ಬಹಿರಂಗವಾಗಿ ಮಾತಾಡಹತ್ತಿದರು 'ಪೆಂಡಾರಿಗಳ ವಿಷಯದಲ್ಲಿ ಶ್ರೀಮಂತ ಪೇಶ್ವೆಯರಿಗೆ ತಿರಸ್ಕಾರ ಭಾವವಿಲ್ಲ" ಎಂದು ಇಂಗ್ಲಿಷರ ಆರೋಪವೂ, ಬೇರೆ ಜನರ ವಿಶ್ವಾಸವೂ ಇದ್ದಿತು. ಬಾಜೀರಾಯನ ಆಶ್ರಯವಿದ್ದ ಮೂಲಕ ತ್ರಂಬಕಜಿಯು ಆಗಾಗ್ಗೆ ಬಂದು ಹೋಗುತ್ತಿದ್ದರೂ ಜನರು ವರ್ದಿಕೊಡುವದಿಲ್ಲ; ಆತನ ಚಲನವಲನವನ್ನು ಮುಚ್ಚುಮರೆ ಮಾಡುತ್ತಿದ್ದಾರೆ; ಆದರಿಂದ ಬಾಜೀರಾಯನ ಮೇಲೆ ಶಸ್ತ್ರನೆತ್ತದ ಹೊರತು, ತ್ರ್ಯಂಬಕಜಿಯು ಹಸ್ತಗತವಾಗುವದು ಅಶಕ್ಯವೆಂದು ಇಂಗ್ಲಿಷರಿಗೆ ಅನಿಸಿತು. ಇ. ಸ. ೧೮೧೭ರ ಮೇ ತಿಂಗಳಲ್ಲಿ ಎಲ್ಫಿನಿಷ್ಟನ್ನನು ಜನರಲ್ ಸ್ಮಿಥ್‌ನನ್ನು ಪುಣೆಗೆ ಕರೆಸಿಕೊಂಡನು; ಮತ್ತು ಬಾಜೀರಾಯನಿಗೆ ಚೀಟಿ ಬರೆದು, "ಇಂದಿನಿಂದ ಒಂದು ತಿಂಗಳಲ್ಲಿ ತ್ರ್ಯಂಬಕಜಿಯನ್ನು ನೀವು ನಮ್ಮ ಸ್ವಾಧೀನ ಪಡಿಸಿರಿ; ಮತ್ತು

ಆತನ ಜಾಮೀನಬಗ್ಗೆ ರಾಯಗಡ, ಸಿಂಹಗಡ ಮತ್ತು ಪುರಂದರ ದುರ್ಗಗಳನ್ನು ಕೂಡಲೆ ನಿಮ್ಮ ಸ್ವಾಧೀನಪಡಿಸಿರಿ, ಹೀಗಾಗದಿದ್ದರೆ ಸೈನ್ಯಕ್ಕೆ ಅಪ್ಪಣೆಕೊಡುವೆವು" ಹೀಗೆ ತಿಳಿಸಿದನು. ಬಾಜಿ ರಾಯನು ಮೊದಲೇ ಗೊಂದಲದಲ್ಲಿ ಬಿದ್ದಿದ್ದನು. ಆದರಲ್ಲಿಯೂ ಆತನ ಹಸ್ತಕರಲ್ಲಿಯ ಕೆಲವರು ಆತನನ್ನು ಮತ್ತಿಷ್ಟು ಗೊಂದಲದಲ್ಲಿ ಕೆಡವಿದರು. ಮೋರೆತಪ್ಪಿಸಿ ದಿನಗಳೆಯುವ ಶಸ್ತ್ರದ ಮೇಲೆಯೇ ಬಾಜೀರಾಯನ ಮುಖ್ಯ ಭರವಸೆಯಿತ್ತು, ಮತ್ತು ಆತನ ಕಾರಕೂನನಾದ ಪ್ರಭಾಕರಪಂತ ಜೋಶಿಯೂ ಬಾಪೂ ಕವಡೀಕರನೂ ಎಲ್ಫಿನಿಷ್ಟನ್ನ ಸಾಹೇಬರ ಕಡೆಗೆ ಹೋಗಿ ಬಂದು 'ಸಾಹೇಬನು ವಿಚಾರಪಿಸನುಯಕ್ಕಾಗಿ ಎರಡು ದಿನಗಳ ಅವಕಾಶಕೊಟ್ಟಿರುತ್ತಾನೆ'ಂದು ಬಾಜೀರಾಯನೆದುರಿಗೆ ತಮ್ಮ ತಪ್ಪು-ತಿಳುವಳಿಕೆಯ ಮೂಲಕವೋ ಅಥವಾ ಬೇಕಂತ ಸುಳ್ಳೋ ಹೇಳಿದ್ದೇನೋ ನಿಜ ಇತ್ತ ಎಲ್ಫಿನಿಷ್ಟನ್ನನು ತಾ|| ೭-೨-೧೮೧೭ನೇ ದಿವಸ ಬೆಳಗಾಗುವ ವರೆಗೆ ಬಾಜೀರಾಯನ ಉತ್ತರದ ನಿರೀಕ್ಷಣೆ ಮಾಡಿದನು. ತಾ|| ೮ನೇ ಮೇಗೆ ಬೆಳಗಾಗುವಷ್ಟರಲ್ಲಿ ಆತನು ಪುಣೇ ಶಹರದ ಸುತ್ತಲೂ ಎರಡು ಮೈಲಿನ ಮೇಲೆ ದಂಡಿನ ಮುತ್ತಿಗೆ ಹಾಕಿ, ಎಲ್ಲ ಉಕ್ಕಡಗಳನ್ನೂ ಪ್ರತಿಬಂಧಿಸಿದನು. ಆಗ ಬಾಜೀರಾಯನ ಕಣ್ಣುಗಳು ನಿಚ್ಚಳವಾಗಿ ತೆರೆದು, ಈ ಬಗ್ಗೆ ಏನಾದರೂ ನಿಕಾಲಿ ಮಾಡಬೇಕೆಂದು ಅವನಿಗೆನಿಸಿತು; ಮತ್ತು ಆ ಕೂಡಲೆ ಅವನು ತ್ರ್ಯಂಬಕಜಿಯನ್ನು ಹಿಡಕೊಡುವ ಬಗ್ಗೆ ಜಾಹೀರನಾಮೆಯನ್ನು ಪ್ರಕಟಿಸಿ, ಆ ಮೂರೂ ದುರ್ಗಗಳನ್ನು ನಿಮ್ಮ ಸ್ವಾಧೀನ ಪಡಿಸುತ್ತೇನೆಂಬ ವಿಷಯದ ಚೀಟಿಯನ್ನು ಇಂಗ್ಲಿಷರ ಕಡೆಗೆ ಕಳಿಸಿದನು. ಆಗ ಜನರಲ್ ಸ್ಮಿತ್ಥನು ಊರ ಮುತ್ತಿಗೆಯನ್ನೆಬ್ಬಿಸಿದನು; ಹಾಗು ಎಲ್ಫಿನಿಷ್ಟನ್ನನು ಸಂಗಮದೊಳಗಿನ ತನ್ನ ಬಂಗ್ಲೆಗೆ ಹೊರಟು ಹೋದನು.

ಇಷ್ಟೆಲ್ಲ ನಾಚಿಕೆಗೇಡಾದರೂ ಬಾಜೀರಾಯನ ಮನಸ್ಸಿನಲ್ಲಿ ಉಪರತಿಯುಂಟಾಗಲಿಲ್ಲ. ತಾನು ಪುಣೆಯಿಂದ ಹೊರಹೊರಡಬೇಕೆಂದು ಅವನಿಗೆ ಆಗಾಗ್ಗೆ ಅನಿಸುತ್ತಿತ್ತು; ಮತ್ತು ಅದಕ್ಕಾಗಿ ಶನಿವಾರವಾಡೆಯ ಬಳಿಯಲ್ಲಿ ಆತನ ದಂಡು ಯಾವಾಗಲೂ ಪ್ರಯಾಣ ತತ್ಪರವಾಗಿ ಸಜ್ಜಾಗಿರುತ್ತಿತ್ತು. ಆತನ ಐದ್‌ಸಲ್ಲಾಗಾರರು ಸಿಂದೆ, ಹೋಳಕರ, ಭೋಸಲೆ, ಅಮೀರಖಾನ ಮುಂತಾದವರ ಸಹಾಯದಿಂದ ಪೇಶ್ವೆಸರಕಾರದ ಸೈನ್ಯವು ಇಂಗ್ಲಿಷರನ್ನು ತೀವ್ರವೇ ಹೊಡೆದೋಡಿಸಬಹುದೆಂದು ಹೇಳುತ್ತಿದ್ದರು; ಮತ್ತು ಅದು ಆ ಭೋಳೇ ಬಾಜೀರಾಯನಿಗೆ ನಿಜವೆನಿಸುತ್ತಿತ್ತು; ಆದರೆ ಮಳೆಗಾಲವು ಸಮೀಪಿಸಿದ್ದರಿಂದ ಪರನಾಡಿನೊಳಗಿನ ಆ ಸೈನ್ಯಗಳು ಬಂದು ತಮಗೆ ಕೂಡುವದೆಂತು? ಆದ್ದರಿಂದ ಸಧ್ಯಕ್ಕೆ ಬಹಿರಂಗವಾಗಿ ಒಪ್ಪಂದ ಮಾಡಿಕೊಳ್ಳಬೇಕು; ಮತ್ತು ಒಳಗಿಂದೊಳಗೆ ದಂಡು ಕೂಡಿಸುವ ಉದ್ಯೋಗವನ್ನು ನಡೆಸಬೇಕು, ಎಂದು ಬಾಜೀರಾಯನು ಆಲೋಚಿಸಿದನು. ಆಗ ಮೋರೋ ದೀಕ್ಷಿತನ ಮುಖಾಂತರ ಬಾಜೀರಾಯನಿಗೂ, ಇಂಗ್ಲಿಷರಿಗೂ ಒಪ್ಪಂದವುಂಟಾಯಿತು. ಆ ಒಪ್ಪಂದದಲ್ಲಿ ಮೊದಲಿನ ವಸಯಿ ಮತ್ತು [illegible]ಶೆಯಲ್ಲಾದ ಒಪ್ಪಂದಗಳು ಕಾಯಮ ಮಾಡಲ್ಪಟ್ಟವಲ್ಲದೆ, ಸರ

ದಾರ ಮತ್ತು ದೌಲತರಾವಇವರ ಕಡೆಯು ಅಕಬರನವೀಸ, ವಕೀಲ, ಕಾರಕೂನ ಮುಂತಾದವರಾರನ್ನೂ ಬಾಜೀರಾಯನು ತನ್ನ ದರಬಾರದಲ್ಲಿಟ್ಟುಕೊಳ್ಳಬಾರದು; ಸವಾಲು ಜವಾಬುಗಳಾಗತಕ್ಕವುಗಳನ್ನೆಲ್ಲ ಇಂಗ್ಲಿಷರ ವಕೀಲನ ಮುಖಾಂತರವೇ ಮಾಡತಕ್ಕದ್ದು; ಇಂಗ್ಲಿಷರೊಡನೆ ಸ್ನೇಹದಿಂದ ನಡೆಯುವ ಕರವೀರಕರ, ಸಾವಂತವಾಡಿಕರ ಮುಂತಾದವರ ಮೇಲೆ ಬಾಜೀರಾಯನು ಯಾವ ತರದ ವೈರ-ವೈಷಮ್ಯಗಳನ್ನೂ ತಾಳಬಾರದು. ಸಿಂದೆ-ಹೋಳಕರ ಮುಂತಾದ ಸರದಾರರ ಯಾವ ಪ್ರದೇಶಗಳು ನರ್ಮದಾ ಮತ್ತು ತುಂಗಭದ್ರಾ ಹೊಳೆಗಳ ಮಧ್ಯದಲ್ಲಿರುವವೋ, ಅವುಗಳ ಮೇಲೆ ಬಾಜೀರಾಯನು ತನ್ನ ಹಕ್ಕು-ಬಾಧ್ಯತೆಗಳನ್ನು ತೋರಿಸಲಾಗದು; ಬಾಜೀರಾಯನು ಇಂಗ್ಲಿಷರ ಐದು ಸಾವಿರ ಕುದುರೆಯ ಸ್ವಾರರು, ಮೂರು ಸಾವಿರ ಕಾಲಾಳುಗಳು, ತೋಫುಖಾನೆ ಮತ್ತು ಸಾಮಾನ ಇವುಗಳ ಖರ್ಚು ನಡೆಸಿ, ಅವುಗಳನ್ನೆಲ್ಲಾ ತನ್ನ ಹತ್ತರ ಇಟ್ಟುಕೊಂಡಿರಬೇಕು; ಮತ್ತು ಆ ಖರ್ಚಿಗಾಗಿ ವಿಂಗಡಿಸಿ ಕೊಟ್ಟ ೩೪ ಲಕ್ಷ ಪ್ರಾಪ್ತಿಯ ಪ್ರದೇಶದ ಮೇಲೂ ಅದರೊಳಗಿನ ದುರ್ಗಗಳ ಮೇಲೂ ಪೇಶ್ವೆ ಸರಕಾರದ ಯಾವ ಬಗೆಯ ಹಕ್ಕುಬಾಧ್ಯತೆಗಳೂ ನಡೆಯಬಾರದು; ಅಹಮ್ಮದನಗರ ಕೋಟೆಯ ಕಂದಕದ ಹೊರಗೆ ಸುತ್ತಮುತ್ತಲಿನ ನಾಲ್ಕು ಸಾವಿರ ಮೊಳ ಭೂಮಿಯನ್ನು ಪೇಶ್ವೆಯು ಇಂಗ್ಲಿಷರಿಗೆ ಕಾಯಮವಾಗಿ ಕೊಟ್ಟುಬಿಡಬೇಕು. ಇಂಗ್ಲಿಷರ ದಂಡಿನ ಛಾವಣಿಯ ಸಮೀಪದ ಹುಲ್ಲುಬನ್ನಿಯ ಅಡವಿಗಳನ್ನು ಅವರಿಗೇ ಕೊಡಬೇಕು. ತೈನಾತೀ ದಂಡಿನ ಹೊರತು, ಮಿಕ್ಕ ಬೇಕಾದಷ್ಟು ದಂಡನ್ನು ಇಂಗ್ಲಿಷರು ತಮ್ಮ ಖರ್ಚಿನಿಂದ ಪೇಶ್ವೇರಾಜ್ಯದಲ್ಲಿ ಇಡತಕ್ಕದ್ದು. ಅದಕ್ಕೆ ಪೇಶ್ವೆಯು ಯಾವ ಬಗೆಯಿಂದಲೂ ಅಡ್ಡಿ ಮಾಡಕೊಡದು. ಉತ್ತರ ಹಿಂದುಸ್ತಾನದೊಳಗಿರುವ ಪೇಶ್ವೆಯ ರ ಪ್ರದೇಶಗಳ ಹಕ್ಕು-ಬಾಧ್ಯತೆಗಳನ್ನು ಪೇಶ್ವೆಯು ಇಂಗ್ಲಿಷರ ವಶಪಡಿಸಬೇಕು; ಮತ್ತು ಈ ಒಡಂಬಡಿಕೆಯ ಭರವಸೆಗಾಗಿ ಪೇಶ್ವೆಯು ತ್ರ್ಯಂಬಕಜಿಯ ಹೆಂಡಿರು-ಮಕ್ಕಳನ್ನು ಇಂಗ್ಲಿಷರ ಸ್ವಾಧೀನ ಪಡಿಸಬೇಕು. ಹೀಗೆ ತನ್ನ ಸೇವಕ ತ್ರ್ಯಂಬಕಜೀ ಢೇಂಗಳೇಗಾಗಿ ಪೇಶ್ವೇ ಬಾಜೀರಾಯನು ಇಂಗ್ಲಿಷರೆದುರಿಗೆ ಕೈ ಕಟ್ಟಿಕೊಂಡು ನಿಲ್ಲಬೇಕಾಯಿತು.

ಮೇಲೆ ವಿವರಿಸಿದ ಒಪ್ಪಂದದಿಂದ ಬಾಜೀರಾಯನ ಕೈಕಾಲುಗಳು ಪೂರಾ ಕಟ್ಟಿದಂತಾದವು ಆದರೂ ಅವುಗಳನ್ನು ಬಿಡಿಸಿಕೊಳ್ಳುವ ಆತನ ಇಚ್ಛೆಯು ಸಂಪೂರ್ಣವಾಗಿ ನಷ್ಟವಾಗಿರಲಿಲ್ಲ. ಬಾಜೀರಾಯನು ಯಾರ ಸಹಾಯದ ಆಧಾರದ ಮೇಲೆ ಇಂಗ್ಲಿಷರೊಡನೆ ಕಾದತಕ್ಕವನಿದ್ದನೋ ಅದು ದೇವರಿಗೇ ಗೊತ್ತು! ಆದರೆ ಇಂಗ್ಲಿಷರೊಡನೆ ಕಾದುವದು ಆತನ ಉದ್ದೇಶವಿತ್ತೆಂಬದಕ್ಕೆ ಮಾತ್ರ ಅನುಮಾನವಿರಲಿಲ್ಲ. ಮೇಲಿನ ಒಪ್ಪಂದವು ಗೊತ್ತಾದ ಮೇಲೆ ಪುರಂದರ, ರಾಯಗಡ, ಸಿಂಹಗಡಗಳು ಬಾಜೀರಾಯನಿಗೆ ಮರಳಿ ಲಭಿಸಿದವು ಆಗ ಆತನು ತನ್ನ ಮುತ್ತು-ರತ್ನ, ಹರಳು-ಕಲ್ಲು, ದುಡ್ಡು-ದುಗ್ಗಾಣಿ ಹಾಗು ಎಲ್ಲ ಬೆಲೆಯುಳ್ಳ ವಸ್ತ್ರ-ಒಡವೆ ಇವುಗಳನ್ನು

ಸಿಂಹಗಡದ ಮೇಲೂ, ತನ್ನ ಹಿರೇ ಹೆಂಡತಿ ಮತ್ತು ಮನೆತನದ ದೇವರು-ದಿಂಡರುಗಳನ್ನು ರಾಯಗಡದ ಮೇಲೂ ರವಾನಿಸಿದನು; ಹಾಗು ತಾನು ಸ್ವತಃ ಮೊದಲು ಪಂಢರಪುರಕ್ಕೂ, ನಂತರ ಅಧಿಕ ಶ್ರಾವಣ ಮಾಸದ ನಿಮಿತ್ತಕ್ಕಾಗಿ ಮಾಹುಲಿಗೂ ಹೋದನು. ಅಲ್ಲಿಂದಲೇ ಮುಂದಿನ ಯುದ್ಧದ ಬೇತಿಗೂ ಸೌರಣೆಗೂ ಪ್ರಾರಂಭವಾಯಿತು.

---

## ೧೮ನೆಯ ಪರಿಚ್ಛೇದ

## ಬಾಜೀರಾಯನ ಪಲಾಯನ

ಇತ್ತ ಪೆಂಡಾರಿಗಳ ಕೊಲೆ ಸುಲಿಗೆಗಳು ಏಕೋಪ್ರಕಾರ ನಡೆದೇ ಇದ್ದವು. ಅವರ ಬಂದೋಬಸ್ತಿಗೆಂದು ಜನರಲ್ಲ ಮಾಲಕಮ್ಮನು ೧೮೧೭ನೇ ಆಗಸ್ಟದಲ್ಲಿ ಹೈದ್ರಾಬಾದದಿಂದ ಪುಣೆಗೆ ಬಂದನು ಪೇಶ್ವೆಯು ಬೇಗನೆ ಪುಣೆಗೆ ಬರುವದಿಲ್ಲೆಂಬದನ್ನು ತಿಳಿದು, ಅವನು ಸ್ವತಃ ಮಾಹುಲಿಗೆ ಹೋಗಿ ಬಾಜೀರಾಯನನ್ನು ಕಂಡು: ಪೆಂಡಾರಿಗಳ ಬಂದೋಬಸ್ತಿಗಾಗಿ ಇಂಗ್ಲಿಷರ ದಂಡು ಸಿದ್ಧವಾಗಿದೆ. ನಿಮ್ಮ ದಂಡನ್ನೂ ನೀವು ನಮ್ಮ ಸಹಾಯಕ್ಕೆ ಕೊಡಬೇಕೆಂದು ಕೇಳಿಕೊಂಡನು. ಬಾಜೀರಾಯನಿಗೆ ದಂಡುಕೂಡಿಸುವದಿದ್ದೇ ಇತ್ತು. ಅವನಿಗೆ ಅನಾಯಾಸವಾಗಿ ಈ ನೆವವು ಸಿಗಲು, ಅದನ್ನೇ ಮುಂದು ಮಾಡಿ, ಆತನು ಮುಚ್ಚು ಮರೆಯಿಲ್ಲದೆ ದಂಡು ಕೂಡಿಸಲುಪಕ್ರಮಿಸಿದನು. ಈ ಹೊಸ ರಾಜಕಾರಣದಲ್ಲಿ ಸಾತಾರೆಯ ಮಹಾರಾಜರೂ ಸಹಕಾರಿಗಳಾಗಬೇಕೆಂದು ಬಾಜೀರಾಯನ ಇಚ್ಛೆಯಿದ್ದಿತು; ಯಾಕಂದರೆ ಅವರ ಹೆಸರನ್ನು ಮುಂದು ಮಾಡಿದರೆ, ಎಲ್ಲ ಸರದಾರರೂ ತನಗೆ ಹೇಗೆ ಸಹಾಯ ಮಾಡುವರೋ, ತಾನೊಬ್ಬನೇ ಮುಂದಾದರೆ ಅವರು ಹಾಗೆ ಸಹಾಯ ಮಾಡಲಿಕ್ಕಿಲ್ಲೆಂದು ಆತನ ತಿಳುವಳಿಕೆಯಾಗಿತ್ತು. ಸಾತಾರೆಯ ದರ್ಬಾರದಲ್ಲಿ ಆ ಬಗ್ಗೆ ಎಷ್ಟೋ ದಿನಗಳವರೆಗೆ ವಿಚಾರ ವಿನಿಮಯ ನಡೆದಿತ್ತು; ಕಡೆಗೆ ಬಾಜೀರಾಯನ ಆಲೋಚನೆಯಂತೆ ಸಾತಾರೆಯ ಮಹಾರಾಜರ ರಾಣೀ ವಾಸದವರು "ವಾಸೋಟಾ" ದುರ್ಗದಲ್ಲಿರಬೇಕೆಂದೂ ಮಹಾರಾಜರು ಬಾಜೀರಾಯನ ಸಂಗಡ ಇರಬೇಕೆಂದೂ ಗೊತ್ತಾಯಿತು. ಭಾದ್ರಪದ ಮಾಸದಲ್ಲಿ ಪೇಶ್ವೆಯು ಪುಣೆಗೆ ಬಂದನು; ಮತ್ತು ಆತನು ತನ್ನ ಎರಡು ಸಾವಿರ ಜನ ಸ್ವಾರರನ್ನು ಸರದಾರ ವಿಂಚೂರಕರರೊಡನೆ ಸ್ಮಿಥ್ ಸಾಹೇಬನ ಸಹಾಯಕ್ಕೆ ಕೊಟ್ಟು, ಅವರನ್ನು ಉತ್ತರ ಹಿಂದುಸ್ತಾನದ ಕಡೆಗೆ ರವಾನಿಸಿದನು. ಪೇಶ್ವೆಯ ಬಳಿಯ ಇಷ್ಟು ಜನ ಸ್ವಾರರು ದೂರ ರವಾನೆಯಾಗುತ್ತಿದ್ದರೇನೋ ನಿಜ; ಆದರೆ ಅವರೊಡನೆ ಇಂಗ್ಲಿಷರ ವಿಪುಲ ಸೈನ್ಯವೂ ಪೇಶ್ವೆಯರ ಬಳಿಯಿಂದ ಬಹುದೂರ ತೆರಳುತ್ತಿದ್ದಿತು; ಅಲ್ಲದೆ ಈ ಮೊದಲಿನ ಒಪ್ಪಂದದ ಶರ್ತುಗಳನ್ನು ಪಾಲಿಸಲಿಕ್ಕೆ ಬಾಜೀರಾಯನು ಸಿದ್ಧನಾಗಿರುವನೆಂದೂ ವ್ಯಕ್ತವಾಗುವಂ

ತಿತ್ತು. ಮೋರ ದೀಕ್ಷಿತ ಮತ್ತು ಫೋರ್ಡ ಸಾಹೇಬಇವರ ಮುಖಾಂತರ ಇಂಗ್ಲಿಷ ರೊಡನೆ ಋಷಿಮೋಜಿನ ಮಾತುಗಳು ನಡೆಯುತ್ತಿದ್ದವು; ಆದರೆ ಅಂತರಂಗದಲ್ಲಿ ಬಾಪೂ ಗೋಖಲೆಯ ಮುಖಾಂತರ ಅಪಕೃತ್ಯಗಳ ಸಿದ್ಧತೆಯು ನಡೆದೇ ಇತ್ತು. ಎಲ್ಲ ಸರದಾರರನ್ನು ಏಕೀಕರಿಸುವ ಪ್ರಯತ್ನವೂ ನಡೆದಿತ್ತು. ಒಂದು ಕೋಟಿ ರೂಪಾಯಿ ಖರ್ಚು ಮಾಡಿ ದಂಡಿನ ಸಿದ್ಧತೆಯು ನಡೆಯಿತು. ಘೋಳಪನ ವಿದ್ಯ ಮಾನದಿಂದ ಹಡಗುಪಡೆಯ ದುರಸ್ತಿಯ ಕೆಲಸವು ಒಳ್ಳೇ ಒತ್ತರದಿಂದ ಸಾಗಿತು. ದುರ್ಗಗಳ ಮೇಲೆ ಶಿಧಾ-ಸಾಮುಗ್ರಿಗಳ ಹಾಗು ದಂಡಾಳುಗಳ ಭರತಿಯಾಗತೊಡ ಗಿತು. ಪೇಶ್ವಾಯಿಯೊಳಗಿನ ಎಷ್ಟೋ ಜನ ಮುತ್ಸದ್ದಿಗಳಿಗೆ ಇಂಗ್ಲಿಷರೊಡನೆ ಕಾಲು ಕೆದರಿ ನ್ಯಾಯ ತೆಗೆಯುವ ಬಾಜೀರಾಯನ ಆ ನಿಂದ್ಯ ಕೃತ್ಯವು ಸಮ್ಮತ ವಾಗಿರಲಿಲ್ಲ. ಸ್ವಪಕ್ಷದ ಬಲಾಬಲವು ಬಾಜೀರಾಯನಿಗಿಂತಲೂ ಅವರಿಗೆ ಚನ್ನಾಗಿ ತಿಳಿಯುತ್ತಿತ್ತು. ಹೇಗಾದರೂ ಆಗಲಿ, ಈಗ ಬಾಜೀರಾಯನಿಗೆ ದುರ್ಬುದ್ಧಿಯುಂ ಟಾಗಿದೆಯೆಂದು ಅವರೆಲ್ಲರಿಗೂ ಅನಿಸಿತು. ಬಾಜೀರಾಯನ ಖಾಸಗೀ ಅನಾಚಾರ-ಅತ್ಯಾಚಾರಗಳು ಹೆಚ್ಚತೊಡಗಿದ್ದವು. "ಮಾಹುಲಿಯೊಳಗಿನ ವಾಡೆಯಲ್ಲಿ ತನ್ನ ಒಬ್ಬ ಮೆಚ್ಚಿನ ಹೆಂಗಸನ್ನು ಪುರುಷ ವೇಷದಿಂದ ಶೃಂಗರಿಸಿ, ಪೇಶ್ವೇ ಪಟ್ಟದ ಮೇಲೆ ಕೂಡ್ರಿಸಿ, ತಾನು-ಸ್ವತಃ ಬಾಜೀರಾಯನು-ಹುಜುರೆಯ ವೇಷದಿಂದ ಆಕೆಯ ಮೇಲೆ ಚವರಿ ಬೀಸುವ ಹುಚ್ಚುಚ್ಚಾರದ ಆಟಗಳನ್ನು ಆಡಿದನು." ಎಂಬ ವದಂತಿಯು ಆಗ ಪುಣೆ ಪಟ್ಟಣದಲ್ಲಿ ನಿನಾದಗೊಳ್ಳುತ್ತಿದ್ದಿತು. "ಶ್ರೀಮಂತರ ದುರ್ದೈವವೇ ಅವರಿಂದ ಯಾರೂ ಎಂದೂ ಮಾಡದಂಥ ಅತ್ಯಾಚಾರಗಳನ್ನು ಮಾಡಿಸತೊಡ ಗಿದೆ" ಎಂದು ಊರೊಳಗಿನ ಜನರು ಏಕಮುಖದಿಂದ ಅನ್ನಹತ್ತಿದರು. ಬಾಜೀ ರಾಯನು ಇಂಗ್ಲಿಷರೊಡನೆ ನಿಕರದಿಂದ ಕಾದಿ, ತನ್ನ ರಾಜ್ಯ ಕಳಕೊಳ್ಳುವ ಪ್ರಸಂಗ ವನ್ನು ಒಬ್ಬ ಬಾಪೂ ಗೋಖಲೆಯ ಪರಾಕ್ರಮವನ್ನು ನಂಬಿ ತಂದುಕೊಂಡನು; ಆದರೆ ಇಂಥ ನಿಕರದ ಪ್ರಸಂಗಕ್ಕೆ ತಕ್ಕವಾದ ಉದ್ಯೋಗ, ಆವೇಶ ಮತ್ತು ಗಾಂ-ಭೀರ್ಯ ಇವು ಅವನಲ್ಲಿದ್ದಿಲ್ಲೆಂಬದು ಎಲ್ಲ ಜನರಿಗೂ ಒಡೆದು ಕಾಣಿಸುತ್ತಿತ್ತು.

ಇಂಗ್ಲಿಷರನ್ನು ಕೆಣಕುವ ಪ್ರಸಂಗವೊದಗಿದಾಗ, ತನಗೆ ಸಿಂಧೆಯು ನೆರವಾಗ ಬಹುದೆಂದು ಪೇಶ್ವೆಗೆ ಅನಿಸುತ್ತಿತ್ತು; ಆದರೆ ಅದು ಕೇವಲ ಭ್ರಮೆಯೇ ಆಗಿತ್ತು. ಯಾಕಂದರೆ, ಸಿಂದೆಯು ಒಪ್ಪಂದದ ಕರಾರಿನಿಂದ ಈ ಮೊದಲೇ ಇಂಗ್ಲಿಷರ ಆಧೀನವಾಗಿ ಬಿಟ್ಟಿದ್ದನು. ಇಂಗ್ಲಿಷರನ್ನು ಕೆಣಕಿದ್ದರೆ, ಮೊದಲನೇ ತುತ್ತಿಗೇ ಅವರು ಸಿಂದೆಯನ್ನು ನುಂಗಿ ನೀರು ಹಿಡಿಯುತ್ತಿದ್ದರು; ಅಲ್ಲದೆ ಹತ್ತು-ವರ್ಷಗಳ ಹಿಂದೆ ಸಿಂದೆಯು ಪುಣೆಯಲ್ಲಿ ಬಹು ದೊಡ್ಡ ಗೊಂದಲವನ್ನೆಬ್ಬಿಸಿ ಹೋದ ಬಳಿಕ, ಇದುವರೆಗೂ ಆತನು ಪೇಶ್ವೆಯೊಡನೆ ಕೂಡಿ ನಡೆಯುತ್ತಿರಲಿಲ್ಲ. ಬಾಜೀರಾಯ ಸಿಂದೆಯರಲ್ಲಿ ಪ್ರೀತಿಯು ಲವಲೇಶವೂ ಉಳಿದಿರಲಿಲ್ಲ. ಎಲ್ಲ ಮರಾಟರೂ ಕೂಡಿ ಇಂಗ್ಲಿಷರನ್ನು ಹಿಂದುಸ್ಥಾನದಿಂದ ಹೊಡೆದೋಡಿಸಬೇಕೆಂಬ ಕಲ್ಪನೆಯು ೧೮೧೫ರಲ್ಲೇ

ಬಯಲಾಗಲು. ಮುಂದೆ ಅದೆಂದೂ ಸಂಭವನೀಯವಾಗಲಿಲ್ಲ. ಬಾಜೀರಾಯನು ತಮ್ಮ ಮೇಲೆ ತಿರುಗಿ ಬೀಳುವನೆಂಬ ಧೋರಣವನ್ನರಿತ ಇಂಗ್ಲಿಷರು, ಪೆಂಡಾರಿಗಳ ಪಾರುಪತ್ಯದ ನೆವ ಮುಂದು ಮಾಡಿ ಸಿಂಧೆಯೊಡನೆ ೧೮೧೭ನೇ ನವಂಬರ ೫ಕ್ಕೆ ೧೨ ಕಲಮಿನ ಒಂದು ಹೊಸ ಒಪ್ಪಂದವನ್ನು ಮಾಡಿಕೊಂಡರು. ಹೋಳಕರ-ಭೋಸಲೆಯರನ್ನೂ ತಮ್ಮ ಜಾಲದಲ್ಲಿ ತೊಡಗಿಸಲಿಕ್ಕೆ ಅವರು ಪ್ರಯತ್ನಿಸಿದರು; ಆದರೆ ಇಂಗ್ಲಿಷರ ಪ್ರಯತ್ನಕ್ಕೆ ಆಗ ಯಶ ದೊರೆಯಲಿಲ್ಲ. ಆಗ ಇಂಗ್ಲಿಷರ ದಂಡಿನಲ್ಲಿ ಫಿತೂರಿ ಮಾಡುವ ಪ್ರಯತ್ನವೂ ನಡೆಯಿತೆಂಬಂತೆ ತೋರುತ್ತದೆ. ಆ ಬಗ್ಗೆ ಒಬ್ಬ ಬಖರಕಾರನು ಬರೆಯುವದೇನಂದರೆ:-"ಶ್ರೀ ವಿನಾಯಕ, ಕರ್ವೆ ವಾಮನ ಭಟ್ಟ ಮತ್ತು ಸ್ವಾಮಿ ಶಂಕರಾಚಾರ್ಯ ಎಂಬ ತ್ರಿವರ್ಗರು ಕೂಡಿ ಇಂಗ್ಲಿಷರ ದಂಡಿನಲ್ಲಿ ಫಿತೂರ ಮಾಡುತ್ತೇವೆಂದು ಹೇಳಿ, ಬಾಜೀರಾಯನಿಂದ ಸಾಕಷ್ಟು ಹಣವನ್ನು ತಕ್ಕೊಂಡು ಹೋದರು.'' ಆದರೆ ಆ ಕಾಲಕ್ಕೆ ಫಿತೂರಿಯ ನೆವದಿಂದ ಬಾಜೀರಾಯನ ಎಷ್ಟು ಜನರು ಎಷ್ಟು ಹಣವನ್ನು ಎತ್ತಿ ಬಡಿದರೆಂಬದನ್ನು ಆದಾರು ಹೇಳಬೇಕು? ಸೋಂಡೂರಿನ ಯಶವಂತರಾವ ಘೋರ್ಪಡೆಯು ಈ ಫಿತೂರಿಯ ಕೆಲಸಕ್ಕಾಗಿ ಪೇಶ್ವೆಯಿಂದ ೫೦ ಸಾವಿರ ರೂಪಾಯಿಗಳನ್ನು ತಕ್ಕೊಂಡು, ಆ ಕೆಲಸವನ್ನು ಗುಪ್ತವಾಗಿರಿಸುವ ಆಣೆತೊಟ್ಟನು; ಆದರೆ ಆತನೇ ಒಳಗಿಂದೊಳಗೆ ಅದೆಲ್ಲ ಸಂಗತಿಯನ್ನು ಎಲ್ಫಿನಿಸ್ಟನ್ ಸಾಹೇಬನಿಗೆ ಹೇಳುತ್ತಿದ್ದನೆಂಬದನ್ನು ಗ್ರ್ಯಾಂಡ ಡಫನೇ ಬರೆದಿಟ್ಟಿರುತ್ತಾನೆ. ತನ್ನ ಹೇತುವನ್ನೀಡೇರಿಸುವದಕ್ಕಾಗಿ ಮೇಜವಾನಿಯ ನೆವದಿಂದ ಕರೆದು ಎಲ್ಫಿನಿಸ್ಟನ್ ಸಾಹೇಬನ ಕೊಲೆಗೆಯ್ಯಬೇಕೆಂದೂ ಅಥವಾ ತ್ರ್ಯಂಬಕಜಿಯ ಹಸ್ತಕರಾದ ರಾಮೋಶಿಯರ ಕಡೆಯಿಂದ ಯಾವುದೊಂದು ರಾತ್ರಿಯಲ್ಲಿ ಆತನನ್ನು ಪರಭಾರೆ ಸಂಗಮದೊಳಗಿನ ಆ ಬಂಗ್ಲೆಯಲ್ಲೇ ಖೂನಿ ಮಾಡಿಸಬೇಕೆಂದೂ ಬಾಜೀರಾಯನ ಮಾನಸವಾಗಿದ್ದಿತು; ಆದರೆ ಬಾಪೂ ಗೋಖಲೆಯು ಆ ಆಸುರೀ ಕೃತ್ಯಕ್ಕೆ ಅಡ್ಡ ಬಂದುದರಿಂದ, ಅದು ಸಾಧ್ಯವಾಗಲಿಲ್ಲವೆಂಬ ಪ್ರವಾದವಿದೆ. ಬಾಜೀರಾಯನ ಮನಸ್ಸಿನಲ್ಲಿ ಇಂಗ್ಲಿಷರ ದಂಡಿನಲ್ಲಿ ಫಿತೂರಿ ಮಾಡಬೇಕೆಂಬದು ಇದ್ದಿತೇನೋ ನಿಜ; ಆದರೆ ತನ್ನ ಸ್ವಂತದ ದಂಡಿನಲ್ಲಿ ಎಷ್ಟು ಫಿತೂರಿ ನಡೆದಿದೆಯೆಂಬದರ ಕಡೆಗೆ ಆತನ ಲಕ್ಷ್ಯವೇ ಇರಲಿಲ್ಲ! ಪೇಶ್ವೆಯರ ವಾಡೆಯಲ್ಲಿ ರಾತ್ರಿ ತೀರ ಗುಪ್ತವೆಂದು ಮಾಡಿದ ಬೇತುಗಳೆಲ್ಲಬೆಳಗಾಗುವಷ್ಟರೊಳಗೆ ಸಂಗಮದೊಳಗಿನ ಇಂಗ್ಲಿಷ ರೆಸಿಡೆಂಟನ ಬಂಗ್ಲೆಗೆ ತಪ್ಪದೆ ತಲುಪುತ್ತಿದ್ದವು. ಬಾಳಾಜಿಪಂತ ನಾತೂನಂತಹ ಹೇಳಿ ಕೇಳಿ ಇಂಗ್ಲಿಷರ ಚಾಕರಿ ವಹಿಸಿದ್ದ ಜನರು ಬಾಜೀರಾಯನ ವಿರುದ್ಧವಾಗಿದ್ದದ್ದು ಸ್ವಾಭಾವಿಕವೇ ಸರಿ; ಆದರೆ ಬಾಜೀರಾಯನ ಸಂಬಳವನ್ನು ತಿನ್ನುತ್ತಿದ್ದ ಕೆಲ ಜನ ಆತನ ಖಾಸ ನೌಕರರೂ, ಬಾಜೀರಾಯನ ದುರ್ವ್ಯವಹಾರದ ಬಗ್ಗೆ ತಿರಸ್ಕೃತರಾದ ಕೆಲ ಜನ ಪಟ್ಟಣಿಗರೂ ಲಂಚ-ರುಸುವತ್ತುಗಳ ಆಶೆಯಿಂದ ಇಂಗ್ಲಿಷರ ಹಸ್ತಕರಾಗಿದ್ದರು. ನಗರನಿವಾಸಿಗಳು ತನ್ನ ವಿಷಯಕ್ಕೆ ಬೇಜಾರಗೊಂಡಿರುವರೆಂಬದನ್ನು ತಿಳಿದ ಬಾಜೀ

ರಾಯನು, ಅವರನ್ನು ಸಂತುಷ್ಟಗೊಳಿಸಿಕೊಳ್ಳಲಿಕ್ಕೆಂದು ಈ ಮೊದಲು ಜಪ್ತ ಮಾಡಿದ್ದ ಎಷ್ಟೋ ಇನಾಮು-ಜಹಗೀರುಗಳನ್ನು ಅವರವರಿಗೆ ತಿರುಗಿ ಕೊಟ್ಟನು; ಮತ್ತು ತನ್ನ ಅಧಿಕಾರವನ್ನೆಲ್ಲ ಬರೆಹ ಮೂಲಕ ಬಾಪೂ ಗೋಖಲೆಯ ವಶ ಪಡಿಸಿ, ತನ್ನ ವಿಷಯಕವಾಗಿ ಅವಭರವಸೆ ತಾಳಿದ್ದ ಸರದಾರರಿಗೆ ಇಮಾನದ ಅಪ್ರತ್ಯಕ್ಷ ಆಶ್ವಾಸನ ಕೊಟ್ಟನು; ಆದರೆ ಪಟವರ್ಧನಾದಿ ಲೋಕಪ್ರಿಯ ಸರದಾರರ ರೋಷವನ್ನು ಮಾತ್ರ ಬಾಜೀರಾಯನಿಂದ ಎಂದೂ ಲಘುವಾಗಿ ಮಾಡಿಕೊಳ್ಳ ಲಿಕ್ಕಾಗಲಿಲ್ಲ. ತದ್ವಿರುದ್ಧವಾಗಿ ಪಟವರ್ಧನಾದಿ ಸರದಾರರ ಜಹಗೀರುಗಳನ್ನು ಬಾಜೀರಾಯನಿಂದ ಆಗ್ರಹ ಪೂರ್ವಕವಾಗಿ ತಿರುಗಿ ಕೊಡಿಸುವ ಪ್ರಯತ್ನ ಮಾಡಿ, ಎಲ್ಫಿನ್‌ಸ್ಟನ್ ಸಾಹೇಬನು ಮಾತ್ರ ಅವರೆಲ್ಲರನ್ನು ಈ ಮೊದಲೇ ತಮ್ಮ ಸ್ನೇಹಾಂ-ಕಿತರಾಗಿಯೂ ಋಣಾನುಬಂಧುಗಳಾಗಿಯೂ ಮಾಡಿಕೊಂಡಿದ್ದನು.

ಬಾಜೀರಾಯನಿಗೂ ಎಲ್ಫಿನಿಸ್ಟನ್ನ ಸಾಹೇಬನಿಗೂ ಆಗಾಗ್ಗೆ ಭೇಟಿ-ಪ್ರತಿ ಭೇಟಿಗಳಾಗುತ್ತಿದ್ದವು; ಮತ್ತು ಅವರಿಬ್ಬರೂ ಸವಿಮಾತುಗಳನ್ನಾಡುವವರಾದ್ದರಿಂದ, ಅವರೀರ್ವರಲ್ಲಿ ನೋರೆಯ ಮುಂದೆ ಎಂಥೆಂಥ ಭರವಸದ ಮಾತುಗಳಾಗುತ್ತಿದ್ದವೆಂಬದನ್ನು ಜಾಣಾಕ್ಷರಾದ ವಾಚಕರಿಗೆ ಬರೆದು ತಿಳಿಸುವ ಕಾರಣವಿಲ್ಲ. ಅವರಿಬ್ಬರ ಕಟ್ಟಕಡೆಯ ಭೆಟ್ಟಿಯು ತಾ||೧೪-೧೦-೧೮೧೭ಕ್ಕೆ ಆಯಿತು; ಮತ್ತು ವಿಜಯಾದಶಮಿಯಾಗುತ್ತಲೆ ಪೆಂಡಾರಿಗಳ ಕಾಳಗಕ್ಕಾಗಿ ತನ್ನ ಸೈನ್ಯವನ್ನು ಇಂಗ್ಲಿಷರ ಸಹಾಯಕ್ಕೆ ಕಳಿಸುತ್ತೇನೆಂದು ಬಾಜೀರಾಯನು ಒಪ್ಪಿಕೊಂಡನು. ವಿಜಯಾದಶಮಿಯ ದಿವಸ ದರ್ಬಾರದ ರಿವಾಜಿನಂತೆ ಬಾಜೀರಾಯನೂ ಎಲ್ಫಿನಿಸ್ಟನ್ನ ಸಾಹೇಬನೂ ಬನ್ನಿ ಮುಡಿಯಲಿಕ್ಕೆ ಹೋಗಿ, ದಂಡಿನವರ ಮುಜುರೆಗಳನ್ನು ಸ್ವೀಕರಿಸುವದಕ್ಕೆಂದು ಒತ್ತಟ್ಟಿಗೆ ಕಲೆತರು! ಆದರೆ ನಾರೋಪಂತ ಆಪಟೆ ಎಂಬವನ ಸವಾರರು ರಿವಾಜಿನಂತೆ ನಡೆಯದ್ದರಿಂದ, ಕಡೆಗೆ ಉಭಯ ಮುಖ್ಯಸ್ಥರಲ್ಲಿ ಪದ್ಧತಿಯಂತೆ ಮಾನ-ಸನ್ಮಾನವಾಗದೆ, ಬಾಜೀರಾಯನು ಪರಭಾರೆ ಪಟ್ಟಣಕ್ಕೆ ಬಂದನೆಂದು ಅನ್ನುತ್ತಾರೆ. ಅಂದಿನಿಂದಲೇ ಉಭಯತರಲ್ಲಿಯ ವೈಮನಸ್ಸು ಶ್ರೀಢಿಯ ಪ್ರಮಾಣದಿಂದ ಬೆಳೆಯಲಾರಂಭಿಸಿತು. ತಾ||೨೫ನೇ ಅಕ್ಟೋಬರದಿಂದ ಹೊರಗಡೆಯ ಸವಾರ-ಸಿಪಾಯಿಗಳೆಲ್ಲ ಪುಣೇಪಟ್ಟಣದಲ್ಲಿ ಒಟ್ಟುಗೂಡಹತ್ತಿದರು. ಇಂಗ್ಲಿಷರ ಛಾವಣಿಯ ನೆರೆ-ಹೊರೆಯಲ್ಲಿ ಪೇಶ್ವೇ ಸೈನ್ಯದ ತಂಡಗಳು ಗುಂಪುಗೂಡಿ ಬೀಡುಬೀಡಲಾರಂಭಿಸಿದವು. ಆಗ ಸಂಗಮದೊಳಗಿನ ಇಂಗ್ಲಿಷರು ತಮ್ಮ ಹೆಂಡಿರು-ಮಕ್ಕಳನ್ನೆಲ್ಲ ದಾಪೋಲಿಗೆ ರವಾನಿಸಿದರು; ಮತ್ತು ಸೋಲ್ಜರರನ್ನು ಕಳಿಸುವದಕ್ಕಾಗಿ ಮುಂಬೈಯವರಿಗೆ ಅವಸರ ಪಡಿಸಿದರು. ಆ ಪ್ರಕಾರ ಆ ಕೆಂಪು ಜನರ ಸೈನ್ಯವು ಬರಲು, ಅದನ್ನು ತಮ್ಮ ಗಾರಪೀರ ಛಾವಣಿಗೆ ಬರಗೊಡದೆ, ದೂರ ಖಡಕಿಯಲ್ಲಿರಿಸಿದರು. ಆಶ್ವಿಜ ಬ||೫ಗೆ ವಿಶ್ರಾಮಸಿಂಗ ನಾಯಿಕನು ಗಣೇಶಖಿಂಡಿಯ ಬಳಿಯಲ್ಲಿ ಲೆಫ್ಟನೆಂಟ ಶಾ ಎಂಬ ಹೆಸರಿನ ದಂಡಿನ ಅಮಲ್ದಾರನನ್ನು ಭಲ್ಲೆಯಿಂದ ಇರಿದನು. ಇಂಗ್ಲಿಷರು ಸಂಗಮದ

ಬಳಿಯ ಛಾವಣಿಯನ್ನು ಬಿಟ್ಟು ಖಡಕಿಯ ಕಡೆಗೆ ಹೋಗಲು, ಮರಾಟಾ ಸೈನಿಕರು ಅವರ ಛಾವಣಿಯನ್ನೆಲ್ಲ ಲೂಟಿ ಮಾಡಿದರು. ಮೊಟ್ಟಮೊದಲ ತಪ್ಪು ವಿರುದ್ಧ ಪಕ್ಷದವರಿಂದಲೇ ಆಯಿತೆಂಬದನ್ನು ಸಿದ್ಧಗೊಳಿಸಲಿಕ್ಕೆ ಉಭಯ ಪಕ್ಷದವರೂ ಹೆಚ್ಚಾಗಿ ಪ್ರಯತ್ನಿಸಿದರು; ಆದರೆ ಕೊನೆಗೆ ೫ನೇ ತಾರೀಖಿನ ದಿವಸ ಉಭಯತರಲ್ಲೂ ಕಾಳಗಕ್ಕೆ ಪ್ರಾರಂಭವಾಯಿತು. ಬಾಜೀರಾಯನು ಪುಣೆಯಿಂದ ಪರ್ವತಿಗೆ ಹೊರಟು ಹೋದನು; ಎಲ್ಫಿನಿಸ್ಟನ್ನನೂ ಇನ್ನು ತಮ್ಮ ಸಂಗಮದೊಳಗಿನ ವಕಾಲತಿಯ ಇಮಾರತುಗಳ ಸಂರಕ್ಷಣವಾಗುವದು ಅಶಕ್ಯವೆಂದು ತಿಳಿದು, ತನ್ನ ಎಲ್ಲ ಸರಂಜಾಮುದೊಡನೆ ಖಡಕಿಗೇ ಸಾಗಿದನು. ಪಟ್ಟಣದಲ್ಲೆಲ್ಲ ದಂಡಿನವರ ಸುಳಿದಾಟಕ್ಕೆ ಪ್ರಾರಂಭವಾಯಿತು. ಚತುಃಶ್ರಂಗಿಯ ಗುಡ್ಡದಿಂದ ಭಾಂಬುರ್ಡೆಯವರೆಗಿನ ಪ್ರದೇಶದಲ್ಲಿ ಕುದುರೆಯ ಹೆಜ್ಜೆಗಳ ಟಪ್ ಟಪ್ ಎಂಬ ಸಪ್ಪಳ ಹಾಗು ತೋಫಿನ ಬಂಡಿಗಳ ಕಿರ್ ಕಿರ್ ಎಂಬ ಧ್ವನಿ ಇವುಗಳ ಹೊರತು ಮತ್ತೆ ಏನೂ ಕೇಳಿಸದಾಯಿತು. ಮೊದಲನೇ ದಿನದ ಕಾಳಗದಲ್ಲಿ ಪೇಶ್ವೆಯರ ಸ್ವಾರರು ವಿಜಯಶಾಲಿಗಳಾದರು; ಆದರೆ ಕಾಲಾಳುಗಳ ನೆರವು ಅವರಿಗೆ ತಕ್ಕ ವೇಳೆಗೆ ದೊರೆಯದ್ದರಿಂದ, ಕಡೆಗೆ ಅವರು ಸೋಲಬೇಕಾಯಿತು. ಬಳಿಕ ಸ್ವತಃ ಬಾಪೂ ಗೋಖಲೆಯೇ ಇಂಗ್ಲಿಷರ ಮೇಲೆ ಮತ್ತೆ ಏರಿ ಹೋದನು; ಆದರೆ ಅವನೂ ಹಿಂಪೆಗೆಯಬೇಕಾಯಿತು. ಎರಡನೇ ದಿನ ಮರಾಟರ ದಂಡಿನ ಕಟ್ಟು ಸಡಿಲಾದ್ದರಿಂದ ಅವರಿಗೆ ಬಹಳ ಹಾನಿಯಾಗಿ, ಆ ಖಡಕಿಯ ಕಾಳಗದಲ್ಲಿ ಇಂಗ್ಲಿಷರು ಗೆದ್ದರು. ನಾರೋಪಂತ ಆಪಟೆ, ಮಾಧವರಾವ ರಾಸ್ತೆ, ಆಬಾ ಪುರಂದರೆ ಮತ್ತು ಪಟವರ್ಧನರ ಕಡೆಯ ಕೆಲ ಜನ ಸರದಾರರು ಇವರೆಲ್ಲರೂ ಬಾಪೂ ಗೋಖಲೆಯ ಸಹಾಯಕ್ಕಿದ್ದರು; ಆದರೆ ಇಂಗ್ಲಿಷರ ತೋಫಿನ ಭಯಂಕರ ಹೊಡೆತಕ್ಕೆ ಮರಾಟರ ದಂಡು ಉಪಾಯಗಾಣದೆ ಹಿಂಜರಿಯಬೇಕಾಯಿತು. ಪೇಶ್ವೆಯ ಕಡೆಯ ಮೋರ ದೀಕ್ಷಿತ ಮೊದಲಾದ ಕೆಲ ಜನ ಪ್ರಮುಖರು ಯುದ್ಧದಲ್ಲಿ ಪತನಹೊಂದಿದರು. ಪೇಶ್ವೆಯ ದಂಡಿನವರು ಸಂಗಮದೊಳಗಿನ ರೆಸಿಡೆಂಟನ ಬಂಗ್ಲೆಯನ್ನು ಸುಲಿದು, ಸುಟ್ಟುಬಿಟ್ಟರು! ಆದರೆ ಪ್ರತ್ಯಕ್ಷ ರಣಭೂಮಿಯಲ್ಲಿ ಮರಾಟರೇ ಸೋತು, ಅವರ ಕುದುರೆ ಮೊದಲಾದವುಗಳು ಸತ್ತು ಹೆಚ್ಚು ಹಾನಿಯು ಅವರದೇ ಆಯಿತು. ಬಾಜೀರಾಯನು ೨೦೦೦ ಜನ ಸವಾರರೊಡನೆ ಪರ್ವತಿಗೆ ಹೊರಟು ಹೋಗಿದ್ದನು. ಅಲ್ಲಿಯ ದೇವಾಲಯದ ಮೇಲಿನ ಬೈಲು ಮಾಳಿಗೆಯ ಮೇಲೆ ನಿಂತು, ಆತನು ಖಡಕಿಯ ಕಾಳಗವನ್ನು ನೋಡುತ್ತಿದ್ದನು; ಆದರೆ ಕಾಳಗದ ಪರಿಣಾಮವು ಅನುಕೂಲವಾಗುವದಿಲ್ಲೆಂದು ತೋರಲು, ಆತನು ಆ ಸ್ವಾರರೊಡನೆ ಸಾಸವಡದ ಕಡೆಗೆ ಗಚ್ಛ ಹೇಳಿಸಿದನು! ಖಡಕಿಯ ಯುದ್ಧಕ್ಕೆ ಪ್ರಾರಂಭವಾಗುವ ಮೊದಲು, ಆತನು ತನ್ನ ಶುಕ್ರವಾರವಾಡೆಯಿಂದ ಪರ್ವತಿಯ ಕಡೆಗೆ ಹೊರಟಾಗಲೇ ಆತನ 'ಜರೀ ಪತಾಕೆ'ಯ ಕೋಲು ಮುರಿದು ಹೋಗಿತ್ತು! ಕಡೆಗೆ ಆ ದುಶ್ಶಕುನವು ಬಾಜೀರಾಯನಿಗೆ ತನ್ನ ಪ್ರಭಾವವನ್ನು

ತೋರದಿರಲಿಲ್ಲ. ಬಾಜೀರಾಯನು ಅಂದು ಆ ಶುಕ್ರವಾರವಾಡೆಯಿಂದ ಯಾವ ದುರ್ಮುಹೂರ್ತದಲ್ಲಿ ಹೊರಬಿದ್ದನೋ ಹೊರಬಿದ್ದನು; ಅವನು ತಿರುಗಿ ಆ ವಾಡೆಯನ್ನು ಪ್ರವೇಶಿಸಲೇ ಇಲ್ಲ! ದೈವಲೀಲೆಯು ವಿಚಿತ್ರವು!!

ಖಡಕಿಯ ಕಾಳಗದಲ್ಲಿ ಇಂಗ್ಲಿಷರ ದಂಡು ಗೆದ್ದಿದ್ದರೂ ಅದು ಉಬ್ಬುಬ್ಬಿ ಬರದೆ, ಖಡಕಿಯಲ್ಲೇ ಹುದುಗಿಕೊಂಡಿತ್ತು. ಎಲ್ಫಿನಿಸ್ಟನ್ನನು ಜನರಲ್ಲ ಸ್ಮಿತ್ಥಸಾಹೇಬನ ದಾರಿ ನೋಡುತ್ತಿದ್ದನು. ಪೇಶ್ವೆಯೊಡನೆ ವೈಮನಸ್ಸಿಗೆ ಪ್ರಾರಂಭವಾದಾಗಲೇ ಆ ಉಭಯ ಧೂರ್ತ ಸಾಹೇಬರು ಪರಸ್ಪರರಲ್ಲಿ ಸಂಕೇತ ಮಾಡಿಕೊಂಡದ್ದೇನಂದರೆ, ಯಾವ ದಿವಸ ಪುಣೆಯಿಂದ ಪ್ರತಿನಿತ್ಯ ನಿಯಮಿತವಾಗಿ ಬರುವ ಟಪಾಲು ಸ್ಮಿತ್ಥನ್ನಿಗೆ ತಲುಪಲಿಕ್ಕಿಲ್ಲವೋ, ಅಂದು ಪುಣೆಯಲ್ಲಿ ಯುದ್ಧಕ್ಕೆ ಪ್ರಾರಂಭವಾಗಿದೆಯೆಂದು ತಿಳಿದು, ಕೂಡಲೆ ಘೋಡನದಿಯೊಳಗಿನ ತನ್ನ ದಂಡಿನೊಡನೆ ಸ್ಮಿತ್ಥನು ಪುಣೆಗೆ ಹೊರಟು ಬರಬೇಕು. ತಾ|| ೫ನೇ ನವಂಬರದ ಟಪಾಲು ತಪ್ಪಿದ್ದರಿಂದ, ಗೊತ್ತಾದ ಮೇರೆಗೆ ಸ್ಮಿತ್ಥನು ಸಸೈನ್ಯವಾಗಿ ಪುಣೆಯ ಕಡೆಗೆ ಹೊರಟನು. ಮರಾಟಾ ಸ್ವಾರರ ತಂಡಗಳು ದಾರಿಯಲ್ಲಿ ಆತನಿಗೆ ಬಹು ತೊಂದರೆ ಕೊಟ್ಟವು; ಆದರೂ ಆತನು ತಾ|| ೧೩ನೇ ನವಂಬರಕ್ಕೆ ಪುಣೆಗೆ ಬಂದೇ ಬಿಟ್ಟನು. ತಾ|| ೧೫ ಮತ್ತು ೧೬ಕ್ಕೆ ಇಂಗ್ಲಿಷರ ದಂಡಿಗೂ ಪೇಶ್ವೆಯ ದಂಡಿಗೂ ಘೋರ್ಪಡಿಯ ಹತ್ತರ ಕಾಳಗಗಳಾದವು. ೧೬ನೇ ತಾರೀಖಿನ ರಾತ್ರಿ ಪೇಶ್ವೆಯ ಬಾಕಿ ಉಳಿದ ದಂಡು ಹಿಂಜರಿಯಿತು; ಮತ್ತು ಬಾಪೂ ಗೋಖಲೆ ಮುಂತಾದ ಸರದಾರರೊಡನೆ ಅದು ಸಾಸವಡದ ಮಾರ್ಗವನ್ನು ಹಿಡಿಯಿತು. ತಾ||೧೭ನೇ ದಿವಸ ಎಲ್ಫಿನಿಸ್ಟನ್ನನೂ ಸ್ಮಿತ್ಥನೂ ಕೂಡಿ, ಬಾಳಾಜಿಪಂತ ನಾತೂ ಮುಂತಾದವರೊಡನೆ ಪುಣೇಪಟ್ಟಣವನ್ನು ಪ್ರವೇಶಿಸಿದರು; ಮತ್ತು ಅಂದೇ ಅಂದರೆ, ಕಾರ್ತಿಕ ಶುದ್ಧ ನವಮಿಯ ದಿವಸ ಅಪರಾಹ್ಣ ಕಾಲಕ್ಕೆ ಶನಿವಾರವಾಡೆಯ ಮೇಲೆ ಇಂಗ್ಲಿಷರ ನಿಶಾನೆಯು ಹಾರಾಡಹತ್ತಿ, ಇಂದಿಗೆ ಮರಾಟಾಶಾಹಿಯ ಇತಿಶ್ರೀಯಾಯಿತೆಂಬದನ್ನು ಜಾಹೀರಪಡಿಸುವಂತೆ ಮೆರೆಯಲಾರಂಭಿಸಿತು!

ಬಾಜೀರಾಯನ ಪಲಾಯನದ ನಂತರ ಪುಣೆಯು ಹಾಳು ಸುರಿಯಹತ್ತಿತು. ರಾಜ್ಯದ ಮುಖ್ಯಸ್ಥನೂ, ಆತನ ಅನುಯಾಯಿಗಳೂ ಹೊರಟು ಹೋದ ಮೇಲೆ, ಆ ಪುಣ್ಯನಗರಿಯ ರಕ್ಷಣವನ್ನು ಅದಾರು ಮಾಡಬೇಕು? ಬಾಜೀರಾಯನು ಪುಣೆಯ ಪಟ್ಟಣಿಗರಿಗೆ ಪ್ರಿಯಕರನಾಗಿದ್ದರೆ, ನಗರ ನಿವಾಸಿಗಳು ಅವನಿಗಾಗಿ ಇಂಗ್ಲಿಷರೊಡನೆ ಕಾದಲಿಕ್ಕೆ ಸಾಧ್ಯವಾದ ಮಟ್ಟಿಗಾದರೂ ಪ್ರಯತ್ನಿಸುತ್ತಿದ್ದರು; ಆದರೆ ಬಾಜೀರಾಯನು ಸ್ವಂತದ ಬಲಾಬಲದ ಬಗ್ಗೆ ಎಂದಾದರೂ ಆಲೋಚಿಸಿದ್ದನೆ? ಯಾವ ನಾಗರಿಕನನ್ನಾದರೂ ಪ್ರಸನ್ನೀಕರಿಸಿಕೊಂಡಿದ್ದನೇ? ಆತನ ಕೈಕೆಳಗೆ ದಂಡೂ, ಬಾಜಾರಬುಣಗೂ ಬೇಕಾದಷ್ಟಿದ್ದಿತು; ಅಲ್ಲದೆ ಬಾಪೂ ಗೋಖಲೆಯಂಥ ಅಪ್ರತಿಮ ಶೂರನೂ ಆತನ ಸಹಾಯಕನಾಗಿದ್ದನು; ಆದರೆ ಆತನ ಆ ಎಲ್ಲ ದಂಡೂ ಅಶಿ

ಕ್ಷಿತವಾದದ್ದು. ಶಿಸ್ತು ಎಂಬದು ಕನಸು ಮನಸಿನಲ್ಲಿಯೂ ಆದಕ್ಕೆ ಗೊತ್ತಿರಲಿಲ್ಲ. ದಂಡಿನಲ್ಲಿ ದಂಡಿಗುಪಯುಕ್ತವಾದ ಶಸ್ತ್ರಾಸ್ತ್ರ, ಸಾಮಾನ ಮುಂತಾದವುಗಳಾವವೂ ಆತನಲ್ಲಿರಲಿಲ್ಲ. ದಂಡಿನಲ್ಲಿ ಅಧಿಕಾರ ಬಜಾವಣೆಯು ಚೆನ್ನಾಗಿ ನಡೆಯುತ್ತಿರಲಿಲ್ಲ. ಘೋರಣವೂ ಜನಸಹಾಯವೂ ಇರಲಿಲ್ಲ. ಆತನಲ್ಲಿ ಬರೇ ಠಕ್ಕತನ, ಜಗಳಗಂಟತನಗಳು ಮಾತ್ರ ಮಿತಿಮೀರಿದ್ದವು. ಇರಲಿ.

ಖಡಕಿಯ ಕಾಳಗ ಮುಗಿಯುವ ಮೊದಲೇ ಬಾಜೀರಾಯನು ಪಲಾಯನ ಸೂಕ್ತವನ್ನು ಪಠಿಸಲಾರಂಭಿಸಿದ್ದನು. ಆ ಕಾಳಗವು ಮುಗಿದ ಕೂಡಲೆ ಪುರಂದರೆ, ಗೋಖಲೆ ಮೊದಲಾದ ಆತನ ಹಸ್ತಕರೂ ಆತನಿಗೆ ಹೋಗಿ ಕೂಡಿದರು. ಆತನ ಕೇವಲ ವಿಶ್ವಾಸದ ಆ ಸರದಾರರಿಗೆ ಕೂಡ ಮೊದ ಮೊದಲು ಆತನ ಪತ್ತೆ ಹತ್ತದಷ್ಟು ಆವನು ಪಲಾಯನ ನಿಪುಣನಾಗಿದ್ದನು. ಬಾಪೂ ಗೋಖಲೆ ಮೊದಲಾದವರು ಆತನನ್ನು ಹುಡುಕಿ ಹುಡುಕಿ ಬೇಸತ್ತು, ಕಡೆಗೆ ಸಾಸವಡದಲ್ಲಿ ಅವನಿಗೆ ಭೆಟ್ಟಿಯಾದರು. ಅಲ್ಲಿ ಅವರೆಲ್ಲರೂ ಒಟ್ಟಾಗಿ, ಬಳಿಕ ಅವರು ಜೇಜೂರಿಗೂ ನಂತರ ಮಾಹುಲಿಗೂ ಹೊರಟು ಹೋದರು ಬಳಿಕ ಆರು ತಿಂಗಳುಗಳ ವರೆಗೆ ಬಾಜೀರಾಯನು ಮುಂದುಮುಂದೆ ಓಡುತ್ತಿದ್ದನು; ಇಂಗ್ಲಿಷರ ಸೈನ್ಯವು ಆತನನ್ನು ಒಂದೇಸವನೆ ಬೆನ್ನಟ್ಟಿ ನಡೆದಿತ್ತು.

---

## ೧೯ನೆಯ ಪರಿಚ್ಛೇದ.

## ಪೇಶ್ವಾಯಿಯ ಇತಿಶ್ರೀ



ಬಾಜೀರಾಯನು ಅತ್ತ ಹಾಗೆ ಒಂದೇಸವನೆ ಕಾಲಿಗೆ ಬುದ್ಧಿ ಹೇಳುತ್ತಿರಲು, ಇತ್ತ ಪುಣೆಯಲ್ಲಿ ಏನು ನಡೆದಿಸೆಯೆಂಬದರ ಗಂಧವಾರ್ತೆಯು ಕೂಡ ಕೆಲದಿನಗಳವರೆಗೆ ಆತನಿಗೆ ಹತ್ತಲಿಲ್ಲ. ಅದನ್ನು ಆಗಿನ ಕಾಲದ ಬಖರಕಾರನು ಹೀಗೆ ವರ್ಣಿಸಿರುತ್ತಾನೆ:—

ಶಾಲಿವಾಹನ ಶಕೆ ೧೭೩೯ನೇ ಆಶ್ವೀಜ ಬಹುಳ ಏಕಾದಶಿಯಿಂದ ಪುಷ್ಯ ಮಾಸದ ಕೊನೆಯ ವರೆಗೆ ಪುಣೆಯಲ್ಲಿ ಏಕೋಪ್ರಕಾರವಾಗಿ ಗೊಂದಲ ನಡೆದೇ ಇತ್ತು. ಬಾಜೀರಾಯನು ಓಡಿ ಹೋದ ಬಳಿಕ, ಪಟ್ಟಣವು ವೈರಿಗಳಿಂದ ಸುತ್ತುಗಟ್ಟಲ್ಪಟ್ಟಿತು. ಹಾಗೆ ಸುತ್ತುಗಟ್ಟುವದರಿಂದ ನಾಗರಿಕರ ಸಂರಕ್ಷಣವು ಖಂಡಿತವಾಗಿ ಆಗುವದೆಂದು ಹೇಳಲಿಕ್ಕಾಗುವದಿಲ್ಲ. ಪೇಶ್ವೆಯರ ಎಷ್ಟೋ ವಾಡೆಗಳಲ್ಲಿ ದ್ವಾರರಕ್ಷಕರ ಹೊರತು ಅನ್ಯರಾರೂ ಉಳಿದಿರಲಿಲ್ಲ. ನಾತೂ ಬಾಳಾಜಿಪಂತನು ಆ ದ್ವಾರಪಾಲಕರನ್ನು ಕೂಡ ಬಿಡಿಸಿ, ಅವರಿಗೆ ಹೇಳಿದನೇನಂದರೆ:—"ನಿಮ್ಮ ಧಣಿಯು ಪುಣೆಗೆ ಮರಳಿ ಬಂದ ಮೇಲೆಯೇ ನೀವು ತಿರುಗಿ ನಿಮ್ಮ ಕೆಲಸಕ್ಕೆ ಬರ್ರಿ. ಆದುವರೆಗೆ

ಇಲ್ಲಿ ನಿಮ್ಮ ಕೆಲಸವಿಲ್ಲ.'' ಆಗ ಆ ದ್ವಾರರಕ್ಷಕರು ತಮ್ಮ ಸಾಮಾನುಗಳನ್ನೂ ಶಸ್ತ್ರಾಸ್ತ್ರಗಳನ್ನೂ ತಕ್ಕೊಂಡು ತಮ್ಮ ತಮ್ಮ ಬಿಡಾರುಗಳಿಗೆ ಹೋದರು. ಆಗಲೂ ಯಾವ ಕೆಲ ಜನ ಧೈರ್ಯಸ್ಥರು ಸ್ಥಳ ಹಿಡಕೊಂಡು ಉಳಿದರೋ, ಅವರಿಗೆ ಆಯಾ ವಾಡೆಗಳ ಬಂದೋಬಸ್ತಿನ ಕೆಲಸವೇ ಹೇಳಲ್ಪಟ್ಟಿತು. ಪುಣೆಯಲ್ಲಿ ಪ್ರತಿದಿನ ರಾತ್ರಿಯಲ್ಲಿ ತೋಫು ಹಾರಿಸಿಸಿ, ಬಳಿಕ ಊರೊಳಗಿನ ರಹದಾರಿಯನ್ನು ಕಟ್ಟು ಮಾಡುವ ವಹಿವಾಟೆಯಿತ್ತು. ಮೊದಲನೇ ದಿವಸ ಪದ್ಧತಿಯಂತೆ ತೋಫು ಹಾರಿಸುವ ಹುಕುಮು ಆಯಿತು; ಆದರೆ ಗೋಲಂದಾಜನ ಬಳಿಯಲ್ಲಿ ಮದ್ದೇ ಇರ ಲಿಲ್ಲ! ಅಲ್ಲದೆ ಅದನ್ನು ಜಡಿಯುವ ಹಾರಿಯು ಕೂಡ ಇರಲಿಲ್ಲವೆಂಬುದು ಕಂಡು ಬಂದಿತು! ಮರುದಿನದಿಂದ ಮದ್ದಿನ ಪೂರೈಕೆಯಾಗಿ ರಿವಾಜಿನಂತೆ ತೋಫು ಹಾರ ಹತ್ತಿತು; ಆದರೆ ಮೋಹರಮ್ಮಿನ ಕತ್ತಲ ರಾತ್ರಿಯ ದಿವಸ ಮಾತ್ರ ಆ ತೋಫನ್ನು ಹಾರಿಸದೆ, ಅಂದು ಮೋಹರಮ್ಮದ ವೇಷಧಾರಿಗಳಿಗ ರಾತ್ರಿ ಬೆಳತನಕ ಬೇಕಾದಲ್ಲಿ ಬೇಕಾದ ಹಾಗೆ ಅಡ್ಡಾಡುವ ಪರವಾನಿಗೆ ಕೊಡಲ್ಪಡುತ್ತಿತ್ತು. ಈ ಮೊದಲು ಸಂಗಮದಲ್ಲಿಯ ರೆಸಿಡೆಂಟನ ಬಂಗ್ಲೆಯೊಳಗಿನ ಸಾಮಾನುಗಳೆಲ್ಲ ಲೂಟಿ ಮಾಡ ಲ್ಪಟ್ಟಿದ್ದವು. ಅವು ಯಾರಲ್ಲಾದರೂ ಇದ್ದರೆ, ಅವುಗಳನ್ನು ಕೂಡಲೆ ತಂದು ಮುಟ್ಟಿಸಬೇಕೆಂದು ಡಂಗುರದಿಂದ ಸಾರಿದರು. ಆಗ ಜಕಾತೆ ಎಂಬವರ ಮನೆಯ ಹತ್ತರ ಆ ಲೂಟಿಯ ಸಾಮಾನುಗಳು ರಾಶಿ ರಾಶಿಯಾಗಿ ಮರಳಿ ಬಂದು ಬಿದ್ದಿ ದ್ದವು. ರಾಜ್ಯಕ್ರಾಂತಿಯ ಕಾಲವು ಉಳಿದವರಿಗಿಂತ ಕಳವು-ದರವಡೆಖೋರರಿಗೇ ಹೆಚ್ಚು ಅನುಕೂಲವಾಗಿರುತ್ತದೆಂಬದು ಸುಳ್ಳಲ್ಲ. ಅಲ್ಪಾವಧಿಯಲ್ಲೇ ಪುಣೆಯ ಆಗಿನ ರೆಸಿಡೆಂಟನು:—"ಜನರು ಇನ್ನು ಮೇಲೆ ಯಾವ ಕೊಲೆ-ಸುಲಿಗೆಗಳಿಗೂ ಪ್ರವೃತ್ತರಾಗದೆ, ತಮ್ಮ ತಮ್ಮ ವ್ಯಾಪಾರೋದ್ಯೋಗಗಳಿಗೆ ಸ್ವಸ್ಥ ಮನಸ್ಸಿನಿಂದ ತೊಡಗಬೇಕು. ಯಾವ ಬಗೆಯ ಹೊಸ ಕರ ಅಥವಾ ತೆರಿಗೆಗಳನ್ನೂ ಹೇರುವ ದಿಲ್ಲ'' ಎಂಬರ್ಥದ ಜಾಹೀರನಾಮೆಯನ್ನು ಪಟ್ಟಣದ ಚಾವಡಿಗೆ ಹಚ್ಚಿದನು; ಆದರೆ ಆಗಿನ ಕಾಲಕ್ಕೆ ವ್ಯಾಪಾರೋದ್ದಿಮೆಗಳು ಯಾರಿಗೆ ರುಚಿಸಬೇಕು? ತಮ್ಮಲ್ಲಿ ಇದ್ದಬಿದ್ದದ್ದನ್ನು ಹೇಗೆ ಸಂರಕ್ಷಿಸಿಕೊಳ್ಳಬೇಕೆಂಬುದೇ ಆಗ ಪ್ರತಿಯೊಬ್ಬರಿಗೂ ಚಿಂತೆಯ ವಿಷಯವಾಗಿ ಕುಳಿತಿತ್ತು! ಆಗ ಪುಣೆಯ ಪಟ್ಟಣದಲ್ಲಿ ಅಲ್ಲಲ್ಲಿ ದರವಡೆ ಗಳು ಆಗಹತ್ತಿದವು. ತಮ್ಮ ವಾಡೆಯಿಂದ ಹೊರಬಿದ್ದವನನ್ನು ಬೇಕಾದವರು ಸಹಜವಾಗಿ ಸುಲಿದು, ಸೂರೆಗೊಳ್ಳುತ್ತಿದ್ದರು. ಬದ್‌ಮಾಷ್ ಜನರಿಗೆ ಚೆನ್ನಾಗಿ ಅಂಜಿಕೆ ತೋರಬೇಕೆಂದು ಮುದ್ದೇಮಾಲು ಸಹಿತ ಸಿಕ್ಕ ಕೆಲ ಜನ ಕಳ್ಳರಿಗೆ ಗಲ್ಲಿನ ಶಿಕ್ಷೆಯನ್ನು ಸಹ ವಿಧಿಸಿದರು; ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಆಗ ನಾಗರಿಕರು ಎಲ್ಫಿನಿಸ್ಟನ್ ಸಾಹೇಬನಿಗೆ ಸಕ್ಕರಿ-ಬದಾಮು ಮುಂತಾದ ಜಿನಸುಗಳ ನ್ನು ನಜರಾಣೆಯೆಂದು ಕೊಂಡೊಯ್ದು ಭೆಟ್ಟಿಯಾದರು. ಆಗ ಆ ಸಾಹೇಬನ ಭೆಟ್ಟಿಗೆ ಹೋದವರಲ್ಲಿ ಹರೇಶ್ವರ ಭಾಯಿ ಎಂಬವನು ಪ್ರಮುಖನಾಗಿದ್ದನು. ಆಗ ಆ

ಸಾಹೇಬನು ಅವರೆಲ್ಲರಿಗೆ ಹೇಳಿದನೇನಂದರೆ—"ನೀವೆಲ್ಲರೂ ಸ್ವಸ್ಥವಾಗಿರ್ರಿ. ನಿಮ್ಮ ಯಜಮಾನನು ಬೇಗನೆ ಮರಳಿ ಬರುವನು. ನಾವು ಆತನನ್ನು ಕರೆತರಲಿಕ್ಕೆ ಹೋಗುತ್ತೇವೆ." ಹರೇಶ್ವರಭಾಋಿಗೂ ನಾತು ಬಾಳಾಜಿಪಂತನಿಗೂ ಬೇರೆ ಹೊಸ ಚಾಕರರನ್ನು ನೇಮಿಸಬೇಕೆಂದೂ, ಪಟ್ಟಣದ ಬಂದೋಬಸ್ತನ್ನಿಡಬೇಕೆಂದೂ ಅಪ್ಪಣೆ ಯಾಯಿತು. ಆಗಿನ ಪುಣೆಯೊಳಗಿನ ಕಳ್ಳರ-ಕಾಕರ ಬಗ್ಗೆ ಎಲ್ಫಿನಿಸ್ಟನ್ ಸಾಹೇಬನು ತೀರ ಬೇಜಾರುಗೊಂಡಿದ್ದನು. "ನೀವು ಅವರನ್ನು ಹಿಡಕೊಂಡು ಬರ್ರಿ; ಅಂದರೆ ನಾವು ಅವರೆಲ್ಲರನ್ನೂ ಗಲ್ಲಿಗೇರಿಸುತ್ತೇವೆ"ಂದು ಆ ಸಾಹೇಬನು ನಾಗರಿಕರಿಗೆ ಆಗಾಗ್ಗೆ ಹೇಳಿ, ಕಳ್ಳರ ಬಂದೋಬಸ್ತಿನ ಬಗ್ಗೆ ಆಶ್ವಾಸನ ಕೊಡುತ್ತಿದ್ದನು. ಪುಣೆಯ ಪ್ರಜೆಗಳು ಆ ಕಳ್ಳರನ್ನು ಹಿಡಕೊಂಡು ಬಂದ ಮೇಲೆ, ಆ ಸಾಹೇಬನು ಅವರನ್ನು ಗಲ್ಲಿಗೇರಿಸ ತಕ್ಕವನು! ಸಾಹೇಬನ ಆ ಮಾತಿಗೆ ಪುಣೆಯ ವ್ಯಾಪಾರಿಗಳು ಕೇಳಿದರೇನಂದರೆ: -- "ಸಾಹೇಬ, ಅವರು ನಮಗೆ ಸಿಗುವ ಬಗೆ ಹೇಗೆ?" "ಹಾಗಾದರೆ ನಾವಾದರೂ ಮಾಡುವದೇನು? ನಿಮ್ಮೂರ ಕಳ್ಳರನ್ನು ಹಿಡತರುವ ಕೆಲಸವು ನಿಮ್ಮದು; ನಮ್ಮದಲ್ಲ. ನೀವು ಹಿಡಿದು ತಂದ ಕಳ್ಳರನ್ನು ಚನ್ನಾಗಿ ಶಿಕ್ಷಿಸುವ ಕೆಲಸವಷ್ಟೇ ನಮ್ಮದು" ಎಂಬ ಆ ಸಾಹೇಬನ ಉತ್ತರವನ್ನು ಕೇಳಿ, ವ್ಯಾಪಾರಿಗಳು ಹಣೆ ಹಣೆ ಬಡಕೊಳ್ಳುತ್ತ ಮನೆಗೆ ಹೋಗಿ ಖಾಸಗಿ ನೌಕರರನ್ನಿಟ್ಟುಕೊಂಡು ತಮ್ಮ ತಮ್ಮ ವಸ್ತ-ಒಡವೆಗಳ ಬಂದೋ ಬಸ್ತಿಗೆ ತೊಡಗಿದರು.

ಎಲ್ಫಿನಿಸ್ಟನ್ ಸಾಹೇಬನು ಸಂಗಮವನ್ನು ಬಿಟ್ಟು, ಗಾರಪೀರದಲ್ಲಿ ತಮ್ಮ ಛಾವಣಿಯನ್ನಿಟ್ಟುಕೊಂಡು, ಅಲ್ಲಿಂದಲೇ ತನ್ನ ಕಾರಭಾರವನ್ನು ನಡೆಸಹತ್ತಿದ್ದನು. ಆತನ ಛಾವಣಿಯ ಮೇಲೂ ನಡುನಡುವೆ ದರವಡೆಖೋರರ ಕಲ್ಲುಗಳ ಮಳೆಯು ಸುರಿಯುತ್ತಿತ್ತು; ಹಾಗು ಸಂಧಿ ಸಾಧಿಸಿ ಆ ಎದೆಗಾರ ಕಳ್ಳರು ಆ ಸಾಹೇಬನ ಛಾವಣಿ ಯೊಳಗಿನ ಹಲಕೆಲವು ಸಾಮಾನುಗಳನ್ನು ದಿನಾಲು ಎತ್ತಿ ಹಾಕಿಯೇ ಹಾಕುತ್ತಿ ದ್ದರು. ಆದಕಾರಣ ಆ ಛಾವಣಿಯೊಳಗೆ ಕೂಡ ಇಡಿ ರಾತ್ರಿ ಗಸ್ತಿಯನ್ನಿಡಬೇಕಾಗು ತ್ತಿತ್ತು. ಕಡೆಗೆ ಅರ್ಜುನಾ ನಾಯಕ ರಾಮೋಸಿ ಎಂಬ ಪ್ರಸಿದ್ಧ ದರವಡೆಖೋರನು ಇನ್ನು ಮೇಲೆ ಪಟ್ಟಣದಲ್ಲಿ ದರವಡೆಗಳಾಗದಂತೆ ನೋಡಿಕೊಳ್ಳುವೆನೆಂದು ಭರವಸೆ ಕೊಡಲು, ಕೂಡಲೆ ಆತನಿಗೆ ನಾಗರಿಕರ ವತಿಯಿಂದ ಮುಂಡಾಸದ ಕಾಣಿಕೆಯು ಸಮರ್ಪಿಸಲ್ಪಟ್ಟಿತು!

ಕಾರ್ತಿಕ ಶುದ್ಧ ತೃತೀಯೆಯಿಂದ ಪ್ರತಿನಿತ್ಯ ಪುಣೆಯಲ್ಲಿ ಬಾಜೀರಾಯನ ವಿಷ ಯದ ಹತ್ತೆಂಟು ಬಗೆಯ ಸುದ್ದಿಗಳು ಹರಡಲಾರಂಭಿಸಿದವು. ಆ ಸುದ್ದಿಗಳಿಗೆ ಕೊನೆ-ಮೊದಲುಗಳೇ ಇರಲಿಲ್ಲ; ಹಾಗು ಅವು ಪರಸ್ಪರ ವಿರುದ್ಧ ಸುದ್ದಿಗಳಾದುದರಿಂದ, ಅವು ಗಳಲ್ಲಿ ಸಟೆ-ದಿಟಗಳಾವುವೆಂಬದನ್ನು ತಿಳಿಯುವದು ತೀರ ದುಸ್ತರವಾಗಿತ್ತು. ಸುದ್ದಿ ಗಳನ್ನು ಹರಡುವವರೂ, ಅವುಗಳನ್ನು ಕೇಳುವವರೂ ವಿಚಿತ್ರ ಜನರೇ ಆಗಿದ್ದರು. ಅದರಿಂದ ಅವರಿಗೆ ಏನೆನಬೇಕೆಂಬದು ತಿಳಿಯುವಂತಿರಲಿಲ್ಲ. ಬಾಜೀರಾಯನು ಗೆದೆ

ಯಲಿ ಅಥವಾ ಸೋಲಲಿ, ಅವನು ಪುಣೆಗೆ ಮರಳಿ ಬಂದೇ ಬರುವನೆಂಬ ಬಗ್ಗೆ ಮಾತ್ರ ಪುಣೆಯ ಜನರಲ್ಲಿ ಖಾತ್ರಿಯಿತ್ತು. ಅವನು ಉತ್ತರ ಹಿಂದುಸ್ತಾನದ ಕಡೆಗೆ ಹೋದರೆ, ಸಿಂದೆ-ಹೋಳಕರ ಮೊದಲಾದವರು ಅವನಿಗೆ ಅವಶ್ಯವಾಗಿ ನೆರವಾಗುವ ರೆಂಬ ಬಗ್ಗೆ ಪುಣೆಯ ನಾಗರಿಕರಿಗೆ ಅವಿಶ್ವಾಸವೆನಿಸುತ್ತಿರಲಿಲ್ಲ. ಕಟ್ಟಕಡೆಗೆ ಫಿರಂಗಿ ಗಳೇ ಸೋತು, ತಮ್ಮ ಶ್ರೀಮಂತರು ಗೆಲ್ಲುವರೆಂದು ಅವರೆಲ್ಲರ ಮನೋವಾಂಛಿತ ವಾಗಿತ್ತು; ಆದರೆ ಕೊನೆಗೆ ಅವರ ಆ ಬಯಕೆಯು ವ್ಯರ್ಥವಾಯಿತು. ಹಗಲೆಲ್ಲ ಒಬ್ಬರ ಕಿವಿಯನ್ನು ಮತ್ತೊಬ್ಬರು ಕಚ್ಚುತ್ತ, ಅಂಜುತ್ತಂಜುತ್ತ ನಾನಾ ಬಗೆಯ ಸುದ್ದಿಗಳನ್ನು ಪರಸ್ಪರರಿಗೆ ಹೇಳುತ್ತ-ಕೇಳುತ್ತ ಪುಣೆಯ ಜನರು ದಿನಗಳೆದು, ಕಡೆಗೆ ರಾತ್ರಿಯು ರಹದಾರಿ ಕಟ್ಟಿನ ತೋಫು ಹಾರಲು, ಅವರೆಲ್ಲರೂ ನಿರಾಶರಾಗಿ ಮಲಗಿಕೊಳ್ಳುತ್ತಿದ್ದರು. ಈ ಕ್ರಮವು ಪುಣೆಯಲ್ಲಿ ಎಷ್ಟೋ ದಿನಗಳ ವರೆಗೆ ಸಾಗಿತ್ತು. ಸಿಂದೆ, ಹೋಳಕರ, ಭೋಸಲೆ ಮುಂತಾದವರಿಂದ ಪುಣೆಗೆ ಬರುವ ಟಪಾಲಿನ ಮೇಲೆ ಇಂಗ್ಲಿಷರು ತಮ್ಮ ತೀಕ್ಷ್ಣ ದೃಷ್ಟಿಯನ್ನಿರಿಸಿದ್ದರಲ್ಲದೆ, ಅದನ್ನು ಅವರು ಒಡೆದು ನೋಡಿಯೇ ಮುಂದಕ್ಕೆ ಬಿಡುವ ವ್ಯವಸ್ಥೆಯನ್ನಿಟ್ಟಿದ್ದರು ಇಂದು ಬಾಜೀರಾಯನು ಬಂದನು; ನಾಳೆ ಖಂಡಿತವಾಗಿ ಬರುವನು, ಎಂಬ ಹೂಲಿಗಳು ಆಗಾಗ್ಗೆ ಅಲ್ಲಿ ಹರಡಿ, ಜನರಲ್ಲಿ ಗೊಂದಲವೇಳುತ್ತಿದ್ದಿತು. ಅದರಿಂದ ಇಂಗ್ಲಿಷರು ಮೇಲಿಂದ ಮೇಲೆ ನಗರದ ಉಕ್ಕುಡಗಳನ್ನೆಲ್ಲ ಪ್ರತಿಬಂಧಿಸಿ, ಶನಿವಾರವಾಡೆಯ ಮೇಲೆ ಹೊಸ ಹೊಸ ತೋಫು ಗಳನ್ನು ಹೂಡಿ ಸಜ್ಜಾಗಿರಿಸಬೇಕಾಗುತ್ತಿತ್ತು. ನಗರದಲ್ಲಿ ಬಾಕಿಯುಳಿದಿದ್ದ ಪೇಶ್ವೇ ದರ್ಬಾರದ ಭಗವಾ ಝೇಂಡಾ-ನಿಶಾನಗಳನ್ನು ಕಿತ್ತಿ ಹಾಕಿ, ಈಗಿನಂತೆ ಅವುಗಳ ಕಂಬ-ಕೋಲುಗಳನ್ನು ಕೂಡ ನಾನಾಬಗೆಯಿಂದ ವಿಧ್ವಂಸಗೊಳಿಸಿದರು. ಇಷ್ಟೇ ಅಲ್ಲ, ಮೊದಲಿದ್ದ ಪೇಶ್ವೆ ದರ್ಬಾರದ ಝೇಂಡಾ ನಿಶಾನೆಗಳ ಸ್ಥಳದಲ್ಲಿ ಇಂಗ್ಲಿಷರು ತಮ್ಮ ಭವ್ಯವಾದ ರಾಜಪತಾಕೆಗಳನ್ನು ಹಚ್ಚಿ ಮೆರೆಸಹತ್ತಿದರು. ಅದುವರೆಗೆ ಅವರು ಪೇಶ್ವೆಯ ಭಗವಾ ಝೇಂಡೆಯನ್ನು ಅಲ್ಲಲ್ಲಿ ಬೇಕಂತಲೇ ಉಳಿಯಗೊಟ್ಟಿದ್ದರ ಕಾರಣವೇನಂದರೆ, ಬಾಜೀರಾಯನು ಸಮಾಧಾನದಿಂದ ಕೂಡಲೆ ತಾನಾಗಿ ತಿರುಗಿ ಬಂದು ತಮ್ಮ ಸ್ವಾಧೀನವಾದರೆ, ಅವನನ್ನು ಪುಣೆಗೆ ಮರಳಿ ಕರೆತಂದು, ಹೆಚ್ಚು ಕಟ್ಟನಲ್ಲಿಯೇ ಏಕಾಗಲೊಲ್ಲದು, ಮತ್ತೆ ಪುಣೆಯ ಪೇಶ್ವೇ ಪಟ್ಟಕ್ಕೆ ಕುಳ್ಳಿರಿಸಬೇಕೆಂದು ಎಲ್ಫಿನಿಸ್ಟನ್ ಸಾಹೇಬನು ಆಲೋಚಿಸಿದ್ದನು.

೨೨ನೇ ನವಂಬರಕ್ಕೆ ಜನರಲ್ ಸ್ಮಿತ್ಥನು ಬಾಜೀರಾಯನನ್ನು ಬೆನ್ನಟ್ಟಲಿಕ್ಕೆ ಉಪಕ್ರಮಿಸಿದನು. ಪುಣೆಯಲ್ಲಿ ಸರ್ವಸಾಧಾರಣವಾದ ಶಾಂತತೆಯು ನೆಲಿಸಿದ ಬಳಿಕ ಎಲ್ಫಿನಿಸ್ಟನ್ ಸಾಹೇಬನು ಮಹಾರಾಷ್ಟ್ರದೊಳಗಿನ ಎಲ್ಲ ಸರದಾರ-ಜಹಗೀರದಾರ ರನ್ನುದ್ದೇಶಿಸಿ ತಾ|| ೧೧ನೇ ಫೆಬ್ರುವಾರಿ ೧೮೧೮ಕ್ಕೆ ಒಂದು ಜಾಹೀರನಾಮೆಯನ್ನು ತೆಗೆದು ಫರ್ಮಾಯಿಸಿದನೇನಂದರೆ---"ಯಾವದೇ ಕಾರಣವಾಗಲಿ, ತಕರಾರಾಗಲಿ ಇಲ್ಲದೆ ಪೇಶ್ವೆಯು ಇಂಗ್ಲಿಷರನ್ನು ಕೆಣಕಿರುತ್ತಾನೆ; ಆದರೆ ಪೇಶ್ವೆಯ ಈ ಅಪರಾಧ

ಕ್ಕಾಗಿ ಇಂಗ್ಲಿಷರು ಬೇರೆಯವರ ಹಾನಿ ಮಾಡಲಿಚ್ಛಿಸುವದಿಲ್ಲ. ಎಲ್ಲ ಸರದಾರ-ಜಹಗೀರದಾರರೂ, ವ್ಯಾಪಾರೋದ್ಯೋಗಸ್ಥರೂ, ಪ್ರಜೆಗಳೂ ತಮ್ಮ ತಮ್ಮ ಕರ್ತವ್ಯಗಳಲ್ಲಿ ತತ್ಪರರಾಗಬೇಕು; ಅಂದರೆ ಪ್ರಸ್ತುತ ಕಾಳಗದ ಮೊದಲು ಹೇಗೆ ಇದ್ದಿತೋ ಹಾಗೆ ಅವರೆಲ್ಲರಿಗೂ ಅನುಕೂಲತೆಯನ್ನೊದಗಿಸಿ ಕೊಡುತ್ತೇವೆ" ಈ ಜಾಹೀರನಾಮೆಯು ಹೊರಟ ಬಳಿಕ ಬಾಜೀರಾಯನಿಗೆ ಎಲ್ಲಿಯೂ ಆಶ್ರಯ ಸಿಗದಾಯಿತು. ಸಿಂಹಗಡ-ರಾಯಗಡಗಳಲ್ಲಿ ಯುದ್ಧಗಳಾದವು; ಸಾಸವಡದಲ್ಲಿಯೂ ಉಭಯತರಲ್ಲಿ ಚಕಮಕಿಗಳಾದವು. ಇಂಗ್ಲಿಷರು ಎಲ್ಲ ಸಣ್ಣ-ದೊಡ್ಡ ದುರ್ಗಗಳನ್ನು ಯುದ್ಧ ಮಾಡಿಯೇ ಕೈವಶ ಮಾಡಿಕೊಳ್ಳಬೇಕಾಯಿತು; ಆದರೆ ಬಾಜೀರಾಯನ ಸಲುವಾಗಿ ಇಲ್ಲವೆ ಪೇಶ್ವೆಯಿಯ ಸಲುವಾಗಿ ಯಾವ ಸರದಾರ ಜಹಗೀರದಾರನೂ ತನ್ನ ಸಹಾಯವನ್ನು ಆತನಿಗೆ ಒದಗಿಸಿಕೊಡಲಿಕ್ಕೆ ಪ್ರವೃತ್ತನಾಗಲಿಲ್ಲ.

ಸಾಸವಡದಿಂದ ಹೊರಟ ಬಾಜೀರಾಯನು ನೆಟ್ಟಗೆ ಮಾಹುಲಿಗೆ ಹೋದನು; ಹಾಗು ವಾಸೋಟೆಯಿಂದ ಅಂತಃಪುರದವರೊಡನೆ ಸಾತಾರೆಯ ಮಹಾರಾಜನನ್ನು ಕರೆತಂದು ತನ್ನ ದಂಡಿನಲ್ಲಿ ಸೇರಿಸಿಕೊಳ್ಳುವ ವ್ಯವಸ್ಥೆ ಮಾಡಿ, ಅವರು ಮಾಹುಲಿಗೆ ಬರುವ ಹಾದೀ ಕೂಡ ನೋಡದೆ ತಾನು ಮುಂದಕ್ಕೆ ಪಲಾಯನ ಹೇಳಿಸಿದನು! ಅವನು ಮಾಹುಲಿಯಿಂದ ಪಂಢರಪುರಕ್ಕೂ, ಅಲ್ಲಿಂದ ಜುನ್ನರಕ್ಕೂ, ಜುನ್ನರದಿಂದ ಬ್ರಾಹ್ಮಣವಾಡಿಗೂ ಬಂದ ಮೇಲೆ ಅಲ್ಲಿ ಕೆಲ ದಿನ ತಳವೂರಿ ನಿಲ್ಲಲಿಕ್ಕೆ ಆತನಿಗೆ ಅನುವು ದೊರೆಯಿತು. ಬ್ರಾಹ್ಮಣವಾಡಿಯಲ್ಲಿಯೇ ತ್ರ್ಯಂಬಕಜಿ ಢೇಂಗಳೆಯು ಬಾಜೀರಾಯನಿಗೆ ಡಾಣಡಂಗುರವಾಗಿ ಬಂದು ಕೂಡಿದನು. ತ್ರ್ಯಂಬಕಜಿಯ ಹಸ್ತಕರಾದ ರಾಮೋಸಿಗಳೆಂಬ ದರವಡೆಖೋರರು ಸುತ್ತುಮುತ್ತಲಿನ ದರಿ-ಕಂದರಗಳೊಳಗಿನ ದಾರಿಗಳನ್ನು ಕಟ್ಟು ಮಾಡಿಬಿಟ್ಟಿದ್ದರು. ಬಾಜೀರಾಯನು ಪಂಢರಪುರದಿಂದ ಹೊರಟ ಬಳಿಕ ಸಾತಾರೆಯ ಮಹಾರಾಜರು ಆತನಿಗೆ ಬಂದು ಕೂಡಿದರು. ಇಷ್ಟರಲ್ಲಿ ಜನರಲ್ಲ ಸ್ಮಿತ್ಥನು ಸಂಗಮನೇರದ ಬಳಿಗೆ ಬಂದೇ ಬಿಟ್ಟಿದ್ದನು. ಬಾಜೀರಾಯನು ದಕ್ಷಿಣದ ಮಾರ್ಗವನ್ನು ಅವಲಂಬಿಸಿದನು. ಆದರಿಂದ ಬಾಜೀರಾಯನು ಪುಣೆಯ ಮೇಲೆ ಸಾಗಿಬರುವನೆಂದು ಆಗ ಹೂಲಿ ಎದ್ದಿತು. ಅದನ್ನು ಕೇಳುತ್ತಲೆ ಪುಣೆಯ ಕಡೆಗಿದ್ದ ಕರ್ನಲ್ಲ ಬರನೆಂಬ ಇಂಗ್ಲಿಷ ಸರದಾರನು ಘೋಡನದಿಯಿಂದ ತಮ್ಮ ದಂಡು ತರಿಸಿದನು ಆತನ ದಂಡಿಗೂ ಮರಾಟರ ದಂಡಿಗೂ ಕೋರೇಗಾಂವ ಎಂಬಲ್ಲಿ ೧ನೇ ಜನವರಿ ೧೮೧೮ಕ್ಕೆ ಬಹು ದೊಡ್ಡ ಕಾಳಗವಾಯಿತು. ಆ ಯುದ್ಧದಲ್ಲಿ ಇಂಗ್ಲಿಷರಿಗೆ ಹೆಚ್ಚಾಗಿ ಹಾನಿಯಾಯಿತು; ಅಲ್ಲದೆ ಅವರ ದಂಡಿನ ನಾಶವಾಗಿ ಅದು ಘೋಡನದಿಯ ಕಡೆಗೆ ಹಿಂದಿರುಗಬೇಕಾಯಿತು ಕೋರೇಗಾಂವದ ಕಾಳಗದಲ್ಲಿ ಬಾಪೂ ಗೋಖಲೆ ಹಾಗು ತ್ರ್ಯಂಬಕಜೀಯವರು ಹೆಚ್ಚು ಶೌರ್ಯದಿಂದ ಕಾದಿದರು; ಆದರೆ ಮರಾಟರ ದಂಡಿಗೆ ಇದಕ್ಕೂ ಹೆಚ್ಚಿನದೇನೂ ಮಾಡಲಿಕ್ಕೆ ಶಕ್ಯವಿರಲಿಲ್ಲ; ಯಾಕಂದರೆ ಜನರಲ್ಲ ಸ್ಮಿತ್ಥನು ಅವರ ಬೆನ್ನಮೇಲೆಯೇ ಇದ್ದನು.

ಆಗ ಬಾಜೀರಾಯನು ಭೀಮಾನದಿಯ ಆಚೆಗೆ ೨ ಮೈಲು ದೂರದಲ್ಲಿದ್ದ ದಿನ್ನೆಯ ಮೇಲೆ ನಿಂತು ಆ ಕಾಳಗವನ್ನು ನೋಡುತ್ತಿದ್ದನು. ಸಾತಾರೆಯ ರಾಜರು ಆತನ ಸಂಗಡವೇ ಇದ್ದರು ಆಗ ಅವರು ತಮ್ಮ ಮಾನ ಮರ್ಯಾದೆಗಳಿಗೆಲ್ಲ ವಿರಾಮ ಕೊಟ್ಟು, ಬಾಜೀರಾಯನೊಡನೆ ಬಿಸಿಲಹಣ್ಣುಗಳನ್ನು ತಿನ್ನುತ್ತ ತಿರುಗಬೇಕಾಗಿತ್ತು. ಅವರು ಆಗ ತಮ್ಮ ವಂಶಪರಂಪರಾಗತವಾದ ಅಬ್ದಾಗಿರಿಯನ್ನು (ಛತ್ರಪತಿಯ ಛತ್ರವನ್ನು) ಕೂಡ ತಮ್ಮ ಮೇಲೆ ಹಿಡಿಸಿಕೊಳ್ಳುವಂತಿರಲಿಲ್ಲ; ಯಾಕಂದರೆ ಇಂಗ್ಲಿಷ ಗೋಲಂದಾಜನು ಆ ಛತ್ರದ ಮೇಲೆ ಗುರಿಯಿಟ್ಟು ತಮ್ಮ ತೋಫಿನ ಗುಂಡನ್ನು ಹಾರಿಸುವ ಸಂಭವವಿದೆಯೆಂದು ಅವರಿಗೆ ಅನಿಸುತ್ತಿತ್ತು.

ಕೋರೆಗಾಂವದಿಂದ ಹೊರಟ ಬಾಜೀರಾಯನು ಸಾಲಪಾವ ಘಟ್ಟವನ್ನು ಹತ್ತಿ ಕರ್ನಾಟಕವನ್ನು ಸೇರಿ ನೆಟ್ಟಗೆ ಘಟಪ್ರಭಾ ನದಿಯ ತೀರಕ್ಕೆ ಬಂದನು; ಆದರೆ ಮದ್ರಾಸದ ಕಡೆಯಿಂದ ಜನರಲ್ಲ ಮನ್ರೋ ಎಂಬವನು ತನ್ನ ಕಡೆಗೆ ಬರುತ್ತಿರುವನೆಂಬದು ಆತನಿಗೆ ತಿಳಿಯಲು, ಕೂಡಲೆ ಆವನು ತನ್ನ ಮೊಗವನ್ನು ತಿರುವಿ, ಕೃಷ್ಣಾ ನದಿಯನ್ನು ದಾಟಿ, ಸಾಲ್ಪಾದ ಘಟ್ಟದಿಂದ ಸೊಲ್ಲಾಪುರದ ಕಡೆಗೆ ಸಾಗಿದನು. ಇತ್ತ ಜನರಲ್ಲ ಸ್ಮಿತ್ಥನು ತಾ॥ ೧೦-೨-೧೮೧೮ಕ್ಕೆ ಸಾತಾರೆಯ ಕೋಟೆಯನ್ನು ಹಸ್ತಗತ ಮಾಡಿಕೊಂಡನು. ಆ ದುರ್ಗದ ಮೇಲೆ ಮೊದಲು ಇಂಗ್ಲಿಷರ, ನಂತರ ಮಹಾರಾಜರ ನಿಶಾನೆಗಳು ಏರಿಸಲ್ಪಟ್ಟವು. ಯಾಕಂದರೆ, ಸಾತಾರೆಯ ಛತ್ರಪತಿ ಮಹಾರಾಜರು ಕೆಲ ದಿನಗಳಿಂದ ಪೇಶ್ವೆಯೊಡನೆ ನಡೆದಿದ್ದರೂ, ಅವರು ಇಂಗ್ಲಿಷರ ವೈರಿಗಳೆಂದು ಇನ್ನೂ ಗಣಿಸಲ್ಪಟ್ಟಿರಲಿಲ್ಲ. ಈ ಮಧ್ಯದಲ್ಲಿ ಬಾಜೀರಾಯನ ಸಂಬಂಧದ ಎಲ್ಲ ವ್ಯವಸ್ಥೆಯನ್ನು ನಿಮ್ಮ ಮನಸ್ಸಿಗೆ ಸರಿದೋರಿದಂತೆ ಮಾಡಬಹುದೆಂಬ ಸರ್ವಾಧಿಕಾರವು ಕಲಕತ್ತೆಯ ವರಿಷ್ಠ ಸರಕಾರದವರಿಂದ ಎಲ್ಫಿನಿಷ್ಟನ್ನ ಸಾಹೇಬನಿಗೆ ದೊರೆಯಲು, ಆಗ ಆತನು ಮತ್ತೊಂದು ಜಾಹೀರನಾಮೆಯನ್ನು ಪ್ರಕಟಿಸಿ, ಸರ್ವ ಜನರಿಗೂ ತಿಳಿಸಿದುದೇನಂದರೆ:—"ಬಾಜೀರಾಯನನ್ನು ಇನ್ನು ನಾವು ಪೇಶ್ವೇ ಪಟ್ಟಕ್ಕೆ ಕೂಡ್ರಿಸುವದಿಲ್ಲ. ಆತನ ರಾಜ್ಯವನ್ನೆಲ್ಲ ಖಾಲಸಾತ ಮಾಡ (ಇಂಗ್ಲಿಷರ ವಶಪಡಿಸ) ಲಾಗುವದು; ಸಾತಾರೆಯ ಮಹಾರಾಜರಿಗೆ ಮಾತ್ರ ಚಿಕ್ಕ ರಾಜ್ಯವು ಸ್ವತಂತ್ರವಾಗಿ ಕೊಡಲ್ಪಟ್ಟು, ಅವರ ಮಾನ-ಮರ್ಯಾದೆಗಳು ಕಾಯಮವಾಗಿರಿಸಲಾಗುವವು."

ಬಾಜೀರಾಯನು ಸೊಲ್ಲಾಪುರದಿಂದ ಪಂಢರಪುರಕ್ಕೆ ನಡೆದಿರಲು, ದಾರಿಯಲ್ಲಿ ಅಷ್ಟೆಯ ಮುಕ್ಕಾಮಿನಲ್ಲಿ ಜನರಲ್ ಸ್ಮಿತ್ಥನು ಆಕಸ್ಮಿಕವಾಗಿ ಪೇಶ್ವೆಯನ್ನು ಮುತ್ತಿದನು. ಆದದ್ದಾಗಲೆಂಬ ನಿಶ್ಚಯದಿಂದ ಬಾಪೂ ಗೋಖಲೆಯು ಅಲ್ಲಿ ಆತನಿಗೆ ಎದುರಾದನು. ಉಭಯತರಲ್ಲೂ ತಾ॥೨೦-೨-೧೮೧೮ಕ್ಕೆ ಬಹು ದೊಡ್ಡ ಕಾಳಗವಾಯಿತು. ಆ ಯುದ್ಧದಲ್ಲಿ ಬಾಪೂ ಗೋಖಲೆಯು ತನ್ನ ಅತುಲ ಪರಾಕ್ರಮದ ಕಳಸವನ್ನು ಹಚ್ಚಿ ಧಾರಾತೀರ್ಥದಲ್ಲಿ ಪತನ ಹೊಂದಿದನು! ಗೋವಿಂದರಾವ ಘೋರ್ಪಡೆ ಮುಂತಾದ ಸರದಾರರೂ ಆ ಕಾಳಗದಲ್ಲಿ ಮಡಿದರು ಪೇಶ್ವೆ ಮತ್ತು ಸಾತಾರೆಯ

ಮಹಾರಾಜರು ಈ ಜೋಡಿಯು ಅಷ್ಟೆಯಿಂದಲೇ ವಿಂಗಡಿತವಾಯಿತು ಸಾತಾರೆಯ ಮುತ್ಸದ್ದಿಗಳಿಗೆ ಬಾಜೀರಾಯನ ನಡವಳಿಕೆಯು ಸಮ್ಮತವಿರಲಿಲ್ಲ. ಯುದ್ಧ ಪ್ರಾರಂಭವಾಗುವ ಮೊದಲು ೨-೩ ವರ್ಷಗಳಿಂದ ಇಂಗ್ಲಿಷರೊಡನೆ ಅವರ ಗುಪ್ತ ಆಲೋಚನೆಗಳು ನಡೆದೇ ಇದ್ದವು. ಅಷ್ಟೆಯ ಕಾಳಗದ ಕಾಲಕ್ಕೆ ಅವರ ಆ ಆಲೋಚನೆಗಳು ಫಲದ್ರೂಪಗೊಂಡವು. ಸಾತಾರೆಯ ಮಹಾರಾಜರು ಇದುವರೆಗೆ ಬಾಜೀರಾಯನ ಬೆನ್ನು ಹತ್ತಿ ಓಡಿ ಓಡಿ ಬೇಸತ್ತಿದ್ದರು; ಇಂಗ್ಲಿಷರ ಹಾಗು ಸಾತಾರೆಯ ಮುತ್ಸದ್ದಿಗಳ ಅಂಬೋಣವು ಆಗ ಅವರಿಗೆ ಸಮ್ಮತವಾಯಿತು. ಅದರಿಂದ ಅಷ್ಟೆಯ ಕಾಳಗದಲ್ಲಿ ಅಪಜಯವಾದ ಕೂಡಲೆ, ಅವರು ತಮ್ಮ ತಾಯಿ ಮತ್ತು ತಮ್ಮನೊಡನೆ ಅಲ್ಲಿಯೇ ಇಂಗ್ಲಿಷರ ಸ್ವಾಧೀನವಾದರು. ಸ್ಮಿತ್ಥ ಸಾಹೇಬನು ಅವರನ್ನು ಎಲ್ಫಿನಿಸ್ಟನ್ನನ ಸ್ವಾಧೀಪಡಿಸಿ, ತಾನು ಮತ್ತೆ ಬಾಜೀರಾಯನನ್ನು ಬೆನ್ನಟ್ಟಿ ನಡೆದನು. ಅಷ್ಟೆಯ ಕಾಳಗದಲ್ಲಿ ಬಾಜೀರಾಯನಿಗೆ ಬಹಳ ಹಾನಿಯಾಯಿತು. ಅದರಿಂದ ಅವನು ಇನ್ನು ಪಲ್ಲಕ್ಕಿ-ಮೇಣೆಗಳಲ್ಲಿ ಸಂಚರಿಸುವದು ಅಶಕ್ಯವಾಗಲು, ಕುದುರೆಯನ್ನೇರಿಯೇ ಓಡತೊಡಗಿದನು! ಅಷ್ಟೆಯ ಕಾಳಗದ ಭವಿತವ್ಯವು ತಿಳಿಯುವ ಮೊದಲೇ ಬಾಜೀರಾಯನು ಬಾಪೂ ಗೋಖಲೆ ಮುಂತಾದವರನ್ನು ಅಲ್ಲಿ ಬಿಟ್ಟು ಓಡತೊಡಗಿದವನು, ಗೋದಾತೀರದ ಕೋಪರಗಾವಿಗೆ ಮುಟ್ಟಿದ ಮೇಲೆಯೇ ತುಸ ತಡೆದನು. ಹೋಳಕರನ ಕಡೆಯ ರಾಮದೀನನೆಂಬ ಹೆಸರಿನ ಸರದಾರನೋರ್ವನು ಪೇಶ್ವೆಯ ನೆರವಿಗೆ ಹೊರಟಿರುವನೆಂಬ ಸುದ್ದಿಯು ಕಡೆಗೆ ನಿಜವಾಗಿ, ಅವನು ಆ ಕೋಪರಗಾವದಲ್ಲಿ ಬಾಜೀರಾಯನಿಗೆ ಬಂದು ಕೂಡಿದನು. ಇನ್ನು ಮುಂದೆ ಬಾಜೀರಾಯನೊಡನೆ ಹೋಗಬಾರದೆಂದು ನಿಶ್ಚಯಿಸಿ, ಪಟವರ್ಧನಾದಿ ಸರದಾರರು ಅಲ್ಲಿಂದಲೇ ಹಿಂದಿರುಗಿದರು; ಮತ್ತು ಬಾಜೀರಾಯನಾದರೂ ಕೆಲವು ದಕ್ಷಿಣೀ ಹಾಗು ಕೆಲವು ಪರದೇಶೀ (ಉತ್ತರ ಹಿಂದುಸ್ಥಾನದ) ಸೈನಿಕರೊಡನೆ ಉತ್ತರ ಹಿಂದುಸ್ಥಾನದ ದಾರೀ ಹಿಡಿದನು ನಾಗಪುರದ ಭೋಸಲೆಯು ತನಗೆ ನೆರವಾಗಬಹುದೆಂದು ಅವನಿಗೆ ಮೊದಮೊದಲು ಅನಿಸುತ್ತಿತ್ತು; ಆದರೆ ಡಿಸೆಂಬರ ತಿಂಗಳಲ್ಲಿ ಅಪ್ಪಾಸಾಹೇಬ ಭೋಸಲೆಯ ಪರಾಜಯವಾಗಲು, ಇಂಗ್ಲಿಷರು ಆತನ ಸಿತಾಬರ್ಡಿಯ ದುರ್ಗವನ್ನು ಕೈವಶ ಮಾಡಿಕೊಂಡಿದ್ದರು. ಅದ್ದರಿಂದ ಬಾಜೀರಾಯನು ಇನ್ನು ನಾಗಪುರದ ಕಡೆಗೆ ಹೋಗುವದರಿಂದ ಪ್ರಯೋಜನವೇನೂ ಇರಲಿಲ್ಲ. ಆದರೂ ಗಣಪತರಾವ ಭೋಸಲೆಯ ಸಹಾಯದಿಂದ ಚಾಂದಾ (ಚಂದ್ರಪುರ) ದ ಕಡೆಗೆ ಹೋಗುವ ಉದ್ದೇಶದಿಂದ ಅವನು ವರ್ಧಾತೀರದವರೆಗೆ ಹೋಗಿದ್ದನು; ಆವರೆ ಇಂಗ್ಲಿಷರ ಸೈನ್ಯವು ಅಲ್ಲಿಯೂ ಅವನಿಗೆ ಎದುರಾಗಲು, ಅವನು ವರ್ಧಾನದಿಯ ಪಶ್ಚಿಮಕ್ಕಿರುವ ಪಾಂಢರಕವಡೆಗೂ ಮತ್ತು ಅಲ್ಲಿಂದ ಶೇವಣೆಗೂ ಹೋದನು. ಆತನ ತಮ್ಮನಾದ ಚಿಮಾಜಿ ಅಪ್ಪಾ, ನಿಪ್ಪಾಣಿಯ ದೇಸಾಯಿ, ನಾರೋಪಂತ ಆಪಟೆ ಮುಂತಾದ ಸರದಾರರು ಅಲ್ಲಿಂದಲೇ ದಕ್ಷಿಣಕ್ಕೆ ಹಿಂದಿರುಗಿದರು; ಹಾಗು ಬೇಗನೆ ಜನರಲ್ಲ ಸ್ಮಿತ್ಥನ ಸ್ವಾಧೀನವಾದರು. ಶೇವಣೆಯಿಂದ

ಬಾಜೀರಾಯನು ಉತ್ತರಕ್ಕೆ ತಿರುಗಿ, ೫ನೇ ಮೇಗೆ ತಾಪೀನದಿಯನ್ನು ದಾಟಿದನು. ಅಲ್ಲಿಂದ ಮುಂದೆ ನರ್ಮದೆಯನ್ನು ದಾಟಿ, ಸಿಂದೆಯ ನಾಡನ್ನು ಸೇರಿ, ಸಿಂದೆಯ ಸಹಾಯವನ್ನು ಹೊಂದುವ ಬೇತು ಬಾಜೀರಾಯನದಾಗಿತ್ತು; ಆದರೆ ಅತ್ತ ಕಡೆ ಯಿಂದ ಜನರಲ್ಲ ಮಾಲಕಮ್ಮನ ದಂಡು ಬರುತ್ತಿರುವದೆಂಬದು ಆತನಿಗೆ ತಿಳಿಯಲು, ಅವನು ಒಮ್ಮೆಲೆ ಹತಾಶನಾದನು.

ಬಾಜೀರಾಯನು ಅಲ್ಲಿಂದ ಮುಂದೆ ಯಾವ ಕಡೆಗೆ ಹೋಗುವದೂ ನಿರ್ಥಾಸ್ತ ವಿಲ್ಲೆಂದು ತಿಳಿದು, ಅಸೀರಗಡದ ಬಳಿಯಲ್ಲಿಯ 'ಧೋಲಕೋಟ' ಎಂಬಲ್ಲಿ ತಳವೂರಿ ನಿಂತನು. ಅಲ್ಲಿಂದ ತಾ॥ ೧೬ನೇ ಮೇಗೆ ಆತನು ತನ್ನ ವಕೀಲನನ್ನು ಮಹೂ ಛಾವಣಿಯೊಳಗಿನ ಜನರಲ್ಲ ಮಾಲಕಮ್ಮನ ಕಡೆಗೆ ರಾಜಿಯ ಮಾತಿಗಾಗಿ ಕಳಿಸಿ ಕೊಟ್ಟನು. ಆಗ ಬಾಜೀರಾಯನು ತೀರ ಹಣ್ಣಾಗಿದ್ದನು. ಆತನ ಬಹುತರ ಆಶ್ರಿತ ಜನರೆಲ್ಲ ಅವನನ್ನು ತ್ಯಜಿಸಿ ಹೋಗಿದ್ದರು. ಮಿಕ್ಕ ಯಾರೊಬ್ಬರಿಂದಲೂ ಆತನಿಗೆ ಯಾವ ಬಗೆಯ ನೆರವೂ ಸಿಗುವ ಆಶೆಯು ಉಳಿದಿರಲಿಲ್ಲ. ಆತನ ಸೈನ್ಯದಲ್ಲಿ ಅರಬರು, ಪುರಭಯ್ಯಾಗಳು ಇವರಂತಹ ಕೇವಲ ಅಡಮುಟ್ಟ ಶಿಪಾಯಿಗಳಷ್ಟೇ ಬಾಕಿಯುಳಿ ದಿದ್ದರು. ದಂಡಾಳುಗಳ ಸಂಬಳವು ಬಹು ದಿನಗಳಿಂದ ತಲುಪಿರಲಿಲ್ಲ. ಅದಕ್ಕಾಗಿ ಅವರು ದಂಡಿನಲ್ಲಿ ಬಂಡನ್ನೆಬ್ಬಿಸುವ ಬೇತು ನಡೆಸಿದ್ದರು. ಕಡೆಕಡೆಗಂತೂ ಆ ದಂಡಾಳುಗಳು ಬಾಜೀರಾಯನನ್ನು ತಮ್ಮ ಸೆರೆಯಲ್ಲಿರಿಸಿದಂತೆಯೇ ಇಟ್ಟಿದ್ದರು. ಆದ್ದರಿಂದ ಬಾಜೀರಾಯನು ಇನ್ನು ಮೇಲೆ ತಾನು ಇಂಗ್ಲಿಷರಿಗೆ ಶರಣಾಗತನಾಗದ ಹೊರತು ಗತ್ಯಂತರವಿಲ್ಲೆಂದು ತಿಳಿದನು. ಜನರಲ್ಲ ಮಾಲಕಮ್ಮನು ತನ್ನ ಸ್ವಂತದ ಜಬಾಬುದಾರಿಯಿಂದ ಬಾಜೀರಾಯನಿಗೆ ವರ್ಷಕ್ಕೆ ೮ ಲಕ್ಷ ಆದಾಯವಾಗುವ ಜಹ ಗೀರು ಕೊಡಲಿಕ್ಕೂ ಹಾಗು ಆತನ ವಶಿಯ ಸರದಾರರಿಗೆ ತಮ್ಮಿಂದ ಯಾವ ತರದ ಉಪಟಳವಾಗದಂತೆ ನೋಡಿಕೊಳ್ಳಲಿಕ್ಕೂ ಒಪ್ಪಿಕೊಂಡನು. ಅದಕ್ಕೆ ಸಮ್ಮತಿಸಿ ಬಾಜೀರಾಯನು ಅವನ ಛಾವಣಿಗೆ ಹೋಗಿ ಸೇರಿಕೊಂಡನು. ಈ ಶರ್ತುಗಳು ಬಹಳೇ ಉದಾರವಾದವುಗಳೆಂದು ಲಾರ್ಡ ಹೆಸ್ಟಿಂಗ್ಸನಿಗೆ ಮೊದಮೊದಲು ಅನಿಸಿತು; ಆದರೆ ಕಡೆಗೆ ಅವನು ಅವುಗಳನ್ನು ಮಂಜೂರ ಮಾಡಿದನು. "ನಾನು ದಕ್ಷಿಣಕ್ಕೆ ಎಂದೂ ತಿರುಗಿ ಹೋಗಲಿಕ್ಕಿಲ್ಲ. ಹಾಗು ನಾನು ಸ್ವತಃ ಇಲ್ಲವೆ ನನ್ನ ವಂಶಜರಾರೂ ಪೇಶ್ವಾಯಿ ಪಟ್ಟಕ್ಕೆ ಇಲ್ಲವೆ ನಾಡಿಗೆ ಎಂದೂ ಹಕ್ಕು-ಬಾಧ್ಯತೆಗಳನ್ನು ಹೇಳಲಿಕ್ಕಿಲ್ಲ." ಎಂದು ಬಾಜೀರಾಯನು ಕರಾರಬದ್ಧನಾಗಿದ್ದನು. ಆದ್ದರಿಂದ ಅವನಿಗೆ ಗಂಗಾ ತೀರದಲ್ಲಿ ವಾಸವಾಗಿರಲಿಕ್ಕೆ ಪರವಾನಿಗೆಯು ಕೊಡಲ್ಪಟ್ಟಿತು; ಮತ್ತು ಪೂರ್ಣ ವಿಚಾರಾಂತ್ಯದಲ್ಲಿ ಕಾನಪುರದ ಬಳಿಯ ಬಿಠೂರ ಉರ್ಫ ಬ್ರಹ್ಮಾವರ್ತವೆಂಬ ಕ್ಷೇತ್ರ ವನ್ನು ಬಾಜೀರಾಯನು ತನ್ನ ವಾಸಸ್ಥಳಕ್ಕೆ ಯೋಗ್ಯವೆಂದು ನಿರ್ಣಯಿಸಿಕೊಂಡದ್ದ ರಿಂದ, ಅವನನ್ನು ಅಲ್ಲಿಗೇ ಕಳಿಸಿಕೊಡಲಾಯಿತು.

ಬ್ರಹ್ಮಾವರ್ತದಲ್ಲಿ ಬಾಜೀರಾಯನಿಗೆ ಎಂಟು ಲಕ್ಷದ ನಕ್ತನೇಮಣೂಕ ವಿದ್ದು, ಅಲ್ಲಿಯದೊಂದು ಚಿಕ್ಕ ಪ್ರದೇಶವು ಅವನ ವಿಸ್ತೃತವಾದ ರಾಜ್ಯದ ಬದಲು ಆತನಿಗೆ ಕೊಡಲ್ಪಟ್ಟಿತ್ತು. ಆತನ ಆ ರಾಜ್ಯವು ಸರಾಸರಿ ಆರು ಚೌರಸ ಮೈಲಿನ ದಿತ್ತು! ಆತನ ಬಳಿಯಲ್ಲೊಬ್ಬ ಸ್ವತಂತ್ರ ರೆಸಿಡೆಂಟನು ಇರಿಸಲ್ಪಟ್ಟಿದ್ದನು. ಬಾಜೀರಾಯನ ಆ ರಾಜ್ಯದಲ್ಲಿ ೧೨-೧೫ ಸಾವಿರ ಜನರು ಮಾತ್ರ ವಾಸಿಸುತ್ತಿದ್ದರು. ಅವರೇ ಆತನ ಪ್ರಜೆಗಳು! ಬಾಜೀರಾಯನಿಗೆ ಮರಾಠೀ ಪದವಿಯು "ಮಹಾರಾಜ" ಅಥವಾ "ಶ್ರೀಮಂತ" ಎಂಬದಿದ್ದು, ಇಂಗ್ಲಿಷರು ಆತನನ್ನು "ಹಿಜ ಹಾಯನೆಸ್" ಎಂಬ ಅಭಿಧಾನದಿಂದ ಉಲ್ಲೇಖಿಸುತ್ತಿದ್ದರು. ಬ್ರಹ್ಮಾವರ್ತದಲ್ಲಿ ಬಾಜೀರಾಯನಿಗೂ ಇಂಗ್ಲಿಷರಿಗೂ ಸ್ನೇಹಸಂಬಂಧವಿದ್ದಿತು.

ಒಂದಾನೊಂದು ಪ್ರಸಂಗದಲ್ಲಿ ಬಾಜೀರಾಯನು ಇಂಗ್ಲಿಷರಿಗೆ ೬ ಲಕ್ಷದ ದೇಣಿಗೆಯನ್ನೂ, ಮತ್ತೊಮ್ಮೆ ಒಂದು ಸಾವಿರ ಸ್ವಾರರನ್ನೂ ಕಾಲಾಳುಗಳನ್ನೂ ಇಂಗ್ಲಿಷರ ಸಹಾಯಕ್ಕೆ ಕೊಟ್ಟಿದ್ದನು. ಬಾಜೀರಾಯನಿಗೆ ಬ್ರಹ್ಮಾವರ್ತದಲ್ಲಿ ತನ್ನ ಧರ್ಮ ಕೃತ್ಯಗಳನ್ನು ಮನಸೋಕ್ತವಾಗಿ ಮಾಡಲಿಕ್ಕೆ ಬೇಕಾದಷ್ಟು ಅವಕಾಶವು ಲಭಿಸಿತು. ಅದರಂತೆ ಪುಣೆಯ ವಾಡೆಯೊಳಗಿನ ಆತನ ಉಳಿದ ಹುಚ್ಚುಚ್ಚಾರಗಳೂ ಅಲ್ಲಿ ನಡೆಯುತ್ತಿದ್ದವು. ಬ್ರಹ್ಮಾವರ್ತಕ್ಕೆ ತಲುಪಿದ ಬಳಿಕ ಬಾಜೀರಾಯನು ಮತ್ತೆ ಐದು ವಿವಾಹಗಳನ್ನು ಮಾಡಿಕೊಂಡನು. ಅಲ್ಲಿ ಆತನಿಗೆ ಇಬ್ಬರು ಹುಡುಗೆಯರು ಹುಟ್ಟಿದರು. ಅವರಲ್ಲೊಬ್ಬಳು ೧೯೧೭ರಲ್ಲಿ ತೀರಿಕೊಂಡಳು. ಅವಳ ಹೆಸರು ಬಯಾಬಾಯಿಸಾಹೇಬ ಆಪಟೆ. ಅವಳು ಬಾಜೀರಾಯನ ೭೨ ವರ್ಷಕ್ಕೆ, ಅಂದರೆ ಸರಾಸರಿ ಕ್ರಿ. ಶ. ೧೮೪೭ರಲ್ಲಿ ಜನಿಸಿದಳು. ಬಾಜೀರಾಯನು ೧೮೫೧ರಲ್ಲಿ ಮಡಿದನು. ಆಗ ಆತನಿಗೆ ೭೬ ವಯಸ್ಸಿದ್ದಿತು. ಬಾಜೀರಾಯನು ಹೇಗೆ ಹಲವು ಲಗ್ನಗಳನ್ನು ಮಾಡಿಕೊಂಡಿದ್ದನೋ, ಹಾಗೆಯೇ ಆತನು ಎಷ್ಟೋ ಜನ ದತ್ತಪುತ್ರರನ್ನೂ ತಕ್ಕೊಂಡಿದ್ದನು! ಆತನ ಹಿರಿಯ ದತ್ತಕ ಪುತ್ರನಾದ ಧೊಂಡೋಪಂತ ಉರ್ಫ ನಾನಾಸಾಹೇಬ ಎಂಬವನು ಇಂಗ್ಲಿಷರೊಡನೆ ಒಳ್ಳೇ ಸ್ನೇಹಭಾವದಿಂದ ನಡೆಕೊಳ್ಳುತ್ತಿದ್ದನು. ಬಾಜೀರಾಯನ ಮರಣದ ನಂತರ ಆತನ ಎಂಟು ಲಕ್ಷಗಳ ಜಹಗೀರನ್ನು ಇಂಗ್ಲಿಷರು ಖಾಲಸಾತ್ ಮಾಡಿದರು, ಹಾಗು ನಾನಾಸಾಹೇಬನಿಗೆ ಜೀವನಾಂಶ ಮಾತ್ರ ಕೊಡಹತ್ತಿದ್ದರು. ಆದರೂ ೧೮೫೭ರ ವರೆಗೆ ನಾನಾಸಾಹೇಬನು ಇಂಗ್ಲಿಷರೊಡನೆ ನಡೆಯುವ ತನ್ನ ಧೋರಣವನ್ನು ವಿಶೇಷ ಹೆಚ್ಚು ಕಡಿಮೆ ಮಾಡಲಿಲ್ಲ.

ಕಾನಪುರವು ಬ್ರಹ್ಮಾವರ್ತದ ಬಳಿಯಲ್ಲಿದ್ದದರಿಂದ, ನಾನಾಸಾಹೇಬನು ಕಾನಪುರದಲ್ಲಿಯೇ ಹೆಚ್ಚಾಗಿರುತ್ತಿದ್ದನು. ಅಲ್ಲಿಯ ಮುಲಕೀ ಹಾಗು ಮಿಲಿಟರಿ ಖಾತೆಯ ಇಂಗ್ಲಿಷ ಜನರೊಡನೆ ಆತನ ಸ್ನೇಹವು ಘನವಾಗಿ, ಆತನು ಅವರಿಗೆ ಆಗಾಗ್ಗೆ ಭೆಟಿಯನ್ನೂ ಮೇಜವಾನಿ (ಔತಣ)ಗಳನ್ನೂ ಕೊಟ್ಟು, ಅವರ ವಿನೋದಕ್ಕಾಗಿ ನಾಚು-ರಂಗು ಮುಂತಾದವುಗಳನ್ನು ಮಾಡಿಸುತ್ತಿದ್ದನು. ೧೮೫೭ರಲ್ಲಿ ಕೂಡ ಆತನ ತಮ್ಮ

ಹಾಗು ತಮ್ಮನ ಮಗ ಇವರ ಭಿಡೆ-ಮುರವತ್ತಿಗಾಗಿ ಇಷ್ಟೇ ಅಲ್ಲ, "ನೀವು ನಮ್ಮ ಮುಂದಾಳಾಗಿರಿ; ಇಲ್ಲದಿದ್ದರೆ ನಾವು ನಿಮ್ಮನ್ನು ಕೊಳೆಗೆಯ್ಯುತ್ತೇವೆ"ಂದು ಬಂಡುಗಾರರು ಆತನಿಗೆ ಧಮಕಿಯು ಕೊಟ್ಟ ಮೂಲಕವೇ ಆತನು ಸ್ವಂತದ ಮನಸ್ಸಿನ ವಿರುದ್ಧವಾಗಿ ಆ ಬಂಡಿನಲ್ಲಿ ಭಾಗ ತಕ್ಕೊಳ್ಳಬೇಕಾಯಿತು. ಬಂಡುಗಾರರು ಅವನನ್ನು ೧೮೫೭ರ ಆ ಪ್ರಚಂಡ ಬಂಡಿನಲ್ಲಿ ಸೇರಿಸಿಕೊಂಡು, ಆತನ ಹೆಸರಿನ ಮೇಲೆ ಕಾನಪುರದಲ್ಲಿಯ "ಕತ್ತಲ್" ಮೊದಲಾದ ಅನೇಕ ಅನನ್ವಿತ ಕೃತ್ಯಗಳನ್ನು ಆತನ ಹುಕುಮಿನ ವಿರುದ್ಧ ನಡೆಸಿದರು. ಬ್ರಹ್ಮಾವರ್ತದ ಲೋಕಮತದಿಂದ ಆಲೋಚಿಸಿದರೆ, ಶೌರ್ಯ ಇಲ್ಲವೆ ಸಾಹಸದ ಆರೋಪಗಳು ನಾನಾಸಾಹೇಬನ ಮೇಲೆ ವಸ್ತುಸ್ಥಿತಿಯ ವಿರುದ್ಧವಾಗಿ ಹೊರಿಸಲ್ಪಟ್ಟಿದ್ದವೆಂದು ತಿಳಿದು ಬರುತ್ತದೆ. ಕಡೆಗೆ ನಾನಾಸಾಹೇಬನ ಅಂತವು ಹೇಗಾಯಿತೆಂಬದು ನಿಶ್ಚಯವಾಗಿ ಯಾರಿಗೂ ಹೇಳಲಿಕ್ಕೆ ಬರುವಂತಿಲ್ಲ!

---

ಪುಣೆಯ ಪೇಶ್ವಾಯಿಯು ನಾಮಶೇಷಗೊಂಡರೂ, ಹಿಂದುಸ್ತಾನದಲ್ಲಿ ಮರಾಟರ ಸಣ್ಣಪುಟ್ಟ ರಾಜ್ಯಗಳು ವಿಪುಲವಾಗಿದ್ದವು. ಅವರೆಲ್ಲರೂ ಸಮ್ಮಿಲಿತರಾಗಿ ಪ್ರಯತ್ನಿಸಿದ್ದರೆ, ಹಿಂದುಸ್ತಾನದೊಳಗಿನ ಮರಾಟರ ರಾಜ್ಯವು ಇಷ್ಟು ಬೇಗನೆ ನಾಶವಾಗುತ್ತಿರಲಿಲ್ಲ; ಆದರೆ "ವಿನಾಶಕಾಲೇ ವಿಪರೀತ ಬುದ್ಧಿಃ" ಎಂಬಂತೆ, ಆಗ ನಮ್ಮಲ್ಲಿಯ ರಾಷ್ಟ್ರೀಯತ್ವವು ಹ್ರಾಸಗೊಂಡಿತ್ತು. ಆ ಮೂಲಕ ಆಗ ಯಾರಿಗೂ ಆ ತರದ ಸದ್ಭಾವನೆಯು ಉಂಟಾಗಲಿಲ್ಲ. ಎಲ್ಲರೂ "ಸವತಿ ರಂಡೆಯಾಗಲಿ" ಎಂಬ ಅಭದ್ರವಿಧಾನವನ್ನೇ ಕೈಕೊಂಡು, ಸ್ವಾರ್ಥ ಸಾಧಿಸಲಿಕ್ಕೆ ತತ್ಪರರಾದರು! ಇಲ್ಲಿಯವರ ಕಟ್ಟು ಒಡೆದಿದೆಯೆಂಬದರ ಗುಟ್ಟನ್ನು ತಿಳಿದ ಧೂರ್ತ ಇಂಗ್ಲಿಷರು, ಆ ಸುಸಂಧಿಯನ್ನು ವ್ಯರ್ಥ ಕಳಕೊಳ್ಳುವರೇ? ಅವರು ನಾನಾ ಬಗೆಯ ಕೌಶಲ್ಯದಿಂದ ಹಿಂದುಸ್ತಾನವನ್ನೆಲ್ಲ ಆಕ್ರಮಿಸಿ, ಇಲ್ಲಿಯ ಸಾರ್ವಭೌಮ ರಾಜರಾಗಿ ಕುಳಿತರು!




ಇದನ್ನು ಭಿ. ಪ. ಕಾಳೆ ಇವರು, ಆನಂದವನ-ಅಗಡಿಯೊಳಗಿನ
ತಮ್ಮ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಛಾಪಿಸಿದರು.

# ಮರಾಠರೂ ಇಂಗ್ಲಿಷರೂ

(ಸಾಧಾರ-ಐತಿಹಾಸಿಕ ಪುಸ್ತಕ)

೩ನೆಯ ಭಾಗ

ಅನುವಾದಕ:

ಭಿ. ಪ. ಕಾಳೆ.

ಪ್ರಕಾಶಕ:

ಯ. ಗು. ಕುಲಕರ್ಣಿ

ಸಂಪಾದಕ ಸ. ಚ.

ಆನಂದವನ-ಆಗಡಿ

೧೯೪೧

೧ ರೂ.

# ಮುನ್ನುಡಿ

ನೂರು-ನೂರಾಇಪ್ಪತ್ತು ವರ್ಷಗಳ ಹಿಂದೆ ಪುಣೆಯೊಳಗಿನ ಮರಾಟಾ ಶಾಹಿಯು ನಾಶಗೊಂಡಿತು. ಮರಾಟಾಶಾಹಿಯು ನಿಜವಾದ ಅಂತವು ಯಾವ ದಿವಸ ವಾಯಿತೆಂಬ ಬಗ್ಗೆ ಮತಭೇದವಿದೆ. ಕೆಲವರು ತಾ॥ ೧೨ನೇ ಫೆಬ್ರುವಾರಿ ೧೭೯೪ಕ್ಕೆ, ಕೆಲವರು ತಾ॥ ೧೩-೩-೧೮೦೦ಕ್ಕೆ, ಕೆಲವರು ತಾ॥ ೩೧-೧೨-೧೮೦೨ಕ್ಕೆ, ಕೆಲವರು ತಾ॥೨೩-೯-೧೮೦೩ಕ್ಕೆ, ಕೆಲವರು ತಾ॥ ೧೭-೧೧-೧೮೧೭ಕ್ಕೆ, ಕೆಲವರು ಬಾಜೀ ರಾಯನು ಜನರಲ್ಲ ಮಾಲಕಮ್ಮನ ಸ್ವಾಧೀನವಾದ ತಾ॥ ೩-೬-೧೮೧೮ಕ್ಕೆ ಬೇರೆ ಕೆಲ ವರು ಮರಾಟರ ಮೂಲ ಪಟ್ಟವಾದ ಸಾತಾರೆಯು ಖಾಲಸಾತ್ ಆದ ದಿನ ಅಂದರೆ ತಾ॥೧೬-೫-೧೮೪೯ಕ್ಕೆ ಮರಾಟಾಶಾಹಿಯು ಅಂತವೆಂದು ಗಣಿಸುತ್ತಾರೆ.

ಆ ದಿನವು ಯಾವದೇ ಇದ್ದರೂ ಮರಾಟರಿಗೂ ಇಂಗ್ಲಿಷರಿಗೂ ಎಂದಿನಿಂದ ಸಂಬಂಧವುಂಟಾಯಿತೋ, ಅಂದಿನಿಂದ ಮರಾಟಾಶಾಹಿಯು ಅಂತದ ವರೆಗಿನ ಅವ ರಿವರ ಸಂಬಂಧದ ಸಂಕ್ಷಿಪ್ತ ಇತಿಹಾಸವು ಈ ಚಿಕ್ಕ ಪುಸ್ತಕದಲ್ಲಿ ವರ್ಣಿಸಲ್ಪಟ್ಟಿದೆ. ಈ ಪುಸ್ತಕ ವಾಚನದಿಂದ ಮುಖ್ಯವಾಗಿ ತಿಳಿದುಬರುವದೇನಂದರೆ, ಮರಾಟರಿಗೂ ಇಂಗ್ಲಿಷರಿಗೂ ಅರ್ಥಾತ್ ಹಿಂದುಸ್ತಾನದ ನಿವಾಸಿಗಳಿಗೂ ಇಂಗ್ಲಿಷರಿಗೂ ಸಂಬಂಧ ವುಂಟಾದಾಗ ಐಶ್ವರ್ಯ-ವೈಭವ-ಶೌರ್ಯ-ಸಾಹಸ-ಶಿಸ್ತು-ಧೋರಣ-ಬುದ್ಧಿಮತ್ತೆ ಮುಂತಾದ ಪ್ರತಿಯೊಂದು ರಾಷ್ಟ್ರೀಯತ್ವದ ಹಾಗು ರಾಷ್ಟ್ರಪೋಷಕ ಗುಣಗಳಲ್ಲಿ ಮರಾಟರು ಇಂಗ್ಲಿಷರಿಗಿಂತ ಕಡಿಮೆ ಯೋಗ್ಯತೆಯವರಾಗಿದ್ದಿಲ್ಲ; ಪ್ರತಿಯೊಂದು ಬಾಬಿನಲ್ಲಿ ಇವರನ್ನು ನುಂಗಿ ನೀರು ಕುಡಿಯುವ ಹಾಗಿದ್ದರು. ಪೇಶ್ವೇ ಮಾಧವ ರಾಯನ ಕಾಲದ ವರೆಗೂ ಮನಸ್ಸಿನಲ್ಲಿ ಹೇಗೆಯೇ ಇರಲೊಲ್ಲದೇಕೆ, ಇಂಗ್ಲಿಷರು ಪ್ರತಿಯೊಂದು ಬಾಬಿನಲ್ಲೂ ಮರಾಟರಿಗೆ ತಲೆಬಾಗಿಯೇ ನಡೆಕೊಳ್ಳುತ್ತಿದ್ದರು; ಆದರೆ ಬರಬರುತ್ತ ನಮ್ಮವರ ಅಂತರಂಗ-ಬಹಿರಂಗಗಳಲ್ಲಿ ಕೊಂಚವೂ ಸುಧಾರಣೆಯಾಗಲಿಲ್ಲ. ಇವರು ದಿನದಿನಕ್ಕೆ ವ್ಯಕ್ತಿಗತ ಸ್ವಾರ್ಥಲೋಲುಪರಾಗಿ, ರಾಷ್ಟ್ರೀಯತ್ವವೆಂದರೇನು? ಅದನ್ನು ಹೇಗೆ ಸಂಪಾದಿಸಬೇಕು? ಮತ್ತು ಹೇಗೆ ಸಂವರ್ಧಿಸಬೇಕು? ಮುಂತಾದ್ದ ನ್ನು ದುರ್ಲಕ್ಷಿಸಿದರು; ಅಲ್ಲದೆ, ಪರಕೀಯರು ರಾಷ್ಟ್ರೀಯತ್ವಕ್ಕಾಗಿ ವ್ಯಕ್ತಿಗತ ಸ್ವಾರ್ಥ ವನ್ನು ಎಷ್ಟು ತುಚ್ಛೀಕರಿಸುವರೆಂಬದರ ಕಡೆಗೆ ಕಣ್ಣೆತ್ತಿ ಕೂಡ ನೋಡದಾದರು. ಆ ದುರ್ಗುಣ ಜಾಡ್ಯದಿಂದಲೇ ನಮ್ಮ ಮರಾಟಶಾಹಿಯು ಲಯಹೊಂದಿತೆಂಬದು ನಿರ್ವಿ ವಾದವು.

ಇಂಥ ಅತ್ಯುತ್ತಮ ಪುಸ್ತಕವನ್ನು ಕನ್ನಡಿಸಲಿಕ್ಕೆ ಅನುಜ್ಞೆಯನ್ನಿತ್ತ ಬಗ್ಗೆ ಶ್ರೀಮಾನ್ ನ. ಚಿ. ಕೇಳಕರರಿಗೆ ಅತ್ಯಂತ ಋಣಿಯಾಗಿರುವೆನು.

ತಾ॥ ೭—೧—೧೯೪೧ —ಅನುವಾದಕ.

# ಮರಾಟರೂ ಇಂಗ್ಲಿಷರೂ

( ೩ನೆಯ ಭಾಗ ) †

---

## ೧ ಮರಾಟ ರಾಜಮಂಡಲವೂ ಬ್ರಿಟಿಷರೂ

### ಸಾತಾರೆಯ ಭೋಸಲೆಯವರೂ ಬ್ರಿಟಿಷರೂ

ಛತ್ರಪತಿ ಶಿವಾಜಿಮಹಾರಾಜ, ಸಂಭಾಜಿ, ರಾಜಾರಾಮ, ಶಾಹೂ ಹಾಗು ಬಾಳಾಜಿ ವಿಶ್ವನಾಥರಿಂದ ಎರಡನೆಯ ಬಾಜೀರಾಯನ ವರೆಗೆ ಆಗಿಹೋದ ಪೇಶವೆಯವರು ಇವರೊಡನೆ ಇಂಗ್ಲಿಷರ ಸಂಬಂಧವು ಹೇಗೆ ಹೇಗೆ ಉಂಟಾಯಿತೆಂಬದರ ಬಗ್ಗೆ ಹಿಂದೆ ವಿವರಿಸಲಾಗಿದೆ. ಇಲ್ಲಿಗೆ ಕಥಾಸೂತ್ರವು ಮುಗಿಯುತ್ತಿದ್ದರೂ, ಪೇಶವೆಯವರಂತೆ ಇತರರೊಡನೆ ಬ್ರಿಟಿಷರ ಸಂಬಂಧವು ಹೇಗಾಯಿತೆಂಬದರ ಗೊತ್ತುವಳಿಯನ್ನು ಕೊಡುವದು ಅವಶ್ಯಕವಿದೆ. ಆದ್ದರಿಂದ ಸಾತಾರೆ, ಕೊಲ್ಹಾಪುರ, ನಾಗಪುರ, ಸಾವಂತವಾಡಿಗಳ ಭೋಸಲೆ(ಛತ್ರಪತಿಗಳು ಹಾಗು ಸರದಾರರು) ಯವರ, ಅದರಂತೆಯೇ ಶಿಂದೆ, ಹೋಳಕರ ಮೊದಲಾದ ಮರಾಟಶಾಹಿಯೊಳಗಿನ ಸರದಾರರ ಸಂಬಂಧವು ಸ್ವತಂತ್ರವಾಗಿ ಇಲ್ಲವೆ ಪೇಶವೆಯವರ ದ್ವಾರಾ ಹೇಗೆ ಉಂಟಾಯಿತೆಂಬದನ್ನು ಸಂಕ್ಷಿಪ್ತವಾಗಿ ಕೆಳಗೆ ವರ್ಣಿಸಿದೆ. ಮರಾಟಶಾಹಿಯ ಇತಿಹಾಸವು ಕೇವಲ ಪೇಶವೆಯವರಿಂದಲೇ ನಿರ್ಮಾಣವಾಗಿರದೆ, ಮೇಲೆ ಉಲ್ಲೇಖಿಸಿದ ಎಲ್ಲ ಜನರಿಂದ ನಿರ್ಮಿಸಲ್ಪಟ್ಟಿರುವದೆಂಬದನ್ನು ಲಕ್ಷ್ಯದಲ್ಲಿಡುವದು ಅವಶ್ಯವು.

ಮರಾಟ ರಾಜ್ಯವೈಭವದಲ್ಲಿ ಸಾತಾರೆಯ ಭೋಸಲೆ ಮನೆತನಕ್ಕೆ ಹೆಚ್ಚಿನ ಮಾನವಿತ್ತು. ಈ ಮನೆತನದಲ್ಲಿಯ ಶಿವಾಜಿ, ಸಂಭಾಜಿ, ರಾಜಾರಾಮ ಮೊದಲಾದವರ ಇತಿಹಾಸವು ಪ್ರಸಿದ್ಧವೇ ಇರುವದು. ಇವರ ಆಳಿಕೆಯಲ್ಲಿ ಇವರ ಹಾಗು ಬ್ರಿಟಿಷರ ಸಂಬಂಧವು ಹೇಗೆ ಉಂಟಾಯಿತೆಂಬದರ ಬಗ್ಗೆ ಮೊದಲೇ ವಿವೇಚಿಸಿದೆ. ಶಾಹೂ ಮಹಾರಾಜನ ಹಾಗು ಇಂಗ್ಲಿಷರ ಸಂಬಂಧವುಂಟಾದಾಗ ಇಂಗ್ಲಿಷರು ಅರ್ಜದಾರ

---

☞ † "ಮರಾಟರೂ ಇಂಗ್ಲಿಷರೂ" ಈ ಪ್ರಸ್ತುತ ಐತಿಹಾಸಿಕ ಪುಸ್ತಕದ ಪ್ರಥಮ-ದ್ವಿತೀಯ ಖಂಡಗಳು ಈ ಮೊದಲು ಸದ್ಬೋಧ ಚಂದ್ರಿಕೆಯಲ್ಲಿ ಪ್ರಕಟವಾಗಿದ್ದು, ಅವುಗಳು ಈಗ ಸ್ವತಂತ್ರ ಪುಸ್ತಕವಾಗಿ ದೊರೆಯುವವು. ಬೆಲೆ ಎರಡೂ ಖಂಡಗಳಿಗೆ ಸೇರಿ ೧-೪-೦ ರೂ.

ಸಿಗುವ ಸ್ಥಳ:— ಭಿ. ಪ. ಕಾಳೆ, ಪೋ. ಆನಂದವನ (ಹಾವೇರಿ)

ರಿದ್ದರು. ಅವರಿಗೆ ಶಾಹುಮಹಾರಾಜನಿಂದ ವ್ಯಾಪಾರದ ಒಪ್ಪಿಗೆಯೂ ಸೌಕರ್ಯವೂ ಬೇಕಾಗಿದ್ದವು. ಅವರು ಶಾಹುವಿನ ಕಡೆಗೆ ಕಾಣಿಕೆಯನ್ನೂ ವಕೀಲರನ್ನೂ ಕಳುಹಿಸಿ, ಅವುಗಳನ್ನು ದೊರಕಿಸುವ ಪ್ರಯತ್ನ ಮಾಡಿದರು; ಆದರೆ ಶಾಹುವಿನ ಕಡೆಗೆ ರಾಜಕಾರಣದ ಅಧಿಕಾರವು ಬಹಳವಾಗಿರದೆ, ಅದರ ಭಾರವೆಲ್ಲ ಪೇಶವೆಯವರ ಕಡೆಗೇ ಇತ್ತು. ಈ ಸಂಗತಿಯನ್ನು ಇಂಗ್ಲಿಷರು ಯಾವಾಗಲೋ ಕಂಡುಹಿಡಿದರು; ಹಾಗು ಅವರು ಪೇಶವೆಯವರೊಡನೆ ರಾಜಕಾರಣದ ಸಂಬಂಧವನ್ನಿರಿಸಿದರು. ಶಾಹುವಿನ ಆಳಿಕೆಯಲ್ಲಿ ಬಾಳಾಜಿ ವಿಶ್ವನಾಥ ಮತ್ತು ಪೇಶವೆ ಬಾಜೀರಾಯ ಇವರಿಬ್ಬರ ಆಳಿಕೆಯು ಮುಗಿದು ಹೋಗಿದ್ದು, ನಾನಾಸಾಹೇಬ ಪೇಶವೆಯ ಆಳಿಕೆಯು ಅರ್ಧಗಳೆಯುತ್ತ ಬಂದಿತ್ತು. ಶಾಹುವಿನ ಮರಣಾನಂತರದಲ್ಲಿ ಸಾತಾರೆಯ ಮಹಾರಾಜರು ಕೇವಲ ನಿರ್ಮಾಲ್ಯವಾದಂತಾದರು. ಅರ್ಥಾತ್ ಮುಂದೆ ಅವರೊಡನೆ ಇಂಗ್ಲಿಷರ ಕರ್ತವ್ಯವೇನೂ ಉಳಿಯಲಿಲ್ಲ. ಇಂಗ್ಲಿಷರ ಹಾಗು ಅವರ ಸಂಬಂಧವು ಮುಂದೆ ಬಾಜೀರಾಯನ ಆಳಿಕೆಯ ಕೊನೆಯ ಭಾಗದಲ್ಲಿ ಉಂಟಾಯಿತು. ಇದಕ್ಕೆ ಕಾರಣವೇನಂದರೆ, ಮಹಾರಾಜರ ಕಾರಾಗೃಹವಾಸವು ಅವರಿಗೂ ಅವರ ಹಿತಚಿಂತಕರಿಗೂ ದುಸ್ಸಹವಾಗಿ, ಅದರೊಳಗಿಂದ ಮುಕ್ತವಾಗುವದಕ್ಕಾಗಿ ಇಂಗ್ಲಿಷರ ನೆರವು ಹೊಂದಬೇಕೆಂದು ಪ್ರಯತ್ನ ನಡೆಯಿಸಿದರು.

ಸಾತಾರೆಯ ಮಹಾರಾಜರು ಎಷ್ಟೇ ನಿರ್ಮಾಲ್ಯವಾಗಿದ್ದರೂ ಬಾಹಿರಂಗಿಕವಾಗಿ ಅವರ ಮರ್ಯಾದೆಯು ಸಿಂಹಾಸನದ ಒಡೆಯರಂತೆಯೆ ಇರುತ್ತಿತ್ತು. ಸಾತಾರೆಯ ಸಣ್ಣರಾಜ್ಯದ ಸೀಮೆಯಲ್ಲಿ ಎಲ್ಲ ಅಧಿಕಾರಗಳೂ ಬಾಧ್ಯತೆಗಳೂ ಮಹಾರಾಜರವೇ ಆಗಿರುತ್ತಿದ್ದವು. ಪೇಶವೆಯ ತಲೆ ಬೇರೆಯಾದ ಮೇಲೆ ಮತ್ತೊಬ್ಬ ಪೇಶವೆಗೆ ಅಧಿಕಾರದ ವಸ್ತ್ರಗಳು ಅವರಿಂದಲೇ ದೊರೆಯುತ್ತಿದ್ದವು. ಹೀಗೆ ವಸ್ತ್ರಗಳನ್ನು ತೆಗೆದುಕೊಂಡ ಹೊರತು ಪೇಶವೆಯ ಅಧಿಕಾರಕ್ಕೆ ತಾತ್ವಿಕ ದೃಷ್ಟಿಯಿಂದ ಔಚಿತ್ಯವು ದೊರೆಯುತ್ತಿರಲಿಲ್ಲ. ಎರಡನೆಯ ಬಾಜೀರಾಯನನ್ನು ಇಂಗ್ಲಿಷರು ಸಿಂಹಾಸನದ ಮೇಲೆ ಕುಳ್ಳಿರಿಸಿದರೂ ಅವನು ಅಧಿಕಾರವಸ್ತ್ರಗಳನ್ನು ಸಾತಾರೆಯ ಮಹಾರಾಜನಿಂದಲೇ ತೆಗೆದುಕೊಳ್ಳಬೇಕಾಯಿತು. ಪೇಶವೆಯವರು ಪುಣೆಯಲ್ಲಿ ರಾಜರಿದ್ದರೂ ಸಾತಾರೆಯ ಸೀಮೆಯಲ್ಲಿ ಹೋದರೆ ಅಲ್ಲಿ ಸೇವಕರೆಂದು ನಿರ್ಧರಿಸಲ್ಪಡುತ್ತಿದ್ದರು; ಹಾಗು ಅವರು ತಮ್ಮ ಸೇವಕವೃತ್ತಿಯನ್ನು ಲಕ್ಷಿಸಿ ಮರ್ಯಾದೆಯಿಂದ ನಡೆದುಕೊಳ್ಳುತ್ತಿದ್ದರು. ಸೈನ್ಯಸಮೇತನಾಗಿ ಪೇಶವೆಯು ಬಂದರೂ ಸಾತಾರೆಯ ಸೀಮೆಯಲ್ಲಿ ನೌಬತ್ತು ಬಾರಿಸುವದನ್ನು ನಿಲ್ಲಿಸಿ, ಆನೆಯಿಂದ ಇಲ್ಲವೆ ಪಲ್ಲಕ್ಕಿಯಿಂದ ಇಳಿದು ಕಾಲು ನಡಿಗೆಯಿಂದ ನಡೆಯುತ್ತ ಕರವಸ್ತ್ರದಿಂದ ಕೈಕಟ್ಟಿಕೊಂಡು ಮಹಾರಾಜನ ದರ್ಶನಕ್ಕೆ ಹೋಗುತ್ತಿದ್ದನು; ಮತ್ತು ಛತ್ರಪತಿಯ ಎದುರಿಗೆ ಸಾಧಾರಣ ತರದ ಆಸನದ ಮೇಲೆ ಕುಳಿತುಕೊಳ್ಳುತ್ತಿದ್ದನು. ದರ್ಶನದ ವೇಳೆಯಲ್ಲಿ ಅವನು ರೀತಿಗನುಸಾರವಾಗಿ ಕಾಣಿಕೆ ಕೊಟ್ಟು, ಕಾಲ ಮೇಲೆ ಮಸ್ತಕವಿರಿಸಿ ಪ್ರಣಾಮ ಮಾಡುತ್ತಿದ್ದನು. ಕೈಯಲ್ಲಿ

ಚವರೀ ತೆಗೆದುಕೊಂಡು ಬೀಸುತ್ತಿದ್ದನು; ಹಾಗು ಮಹಾರಾಜನ ಹಿಂದೆ ಖವಾಸ ಖಾನೆಯಲ್ಲಿಯೂ ಕುಳಿತುಕೊಳ್ಳುತ್ತಿದ್ದನು.

೧೮೧೮ನೆಯ ಇಸವಿಯ ಸುಮಾರಕ್ಕೆ ಪೇಶವೆಯ ಕೈಯಿಂದ ಛತ್ರಪತಿಯ ಬಿಡುಗಡೆ ಮಾಡುವ ಕಾರಸ್ಥಾನವು ಆರಂಭವಾಯಿತು. ವಾವಿಯ ಚತುರಸಿಂಗನು ಈ ಕಾರಸ್ಥಾನದ ಮುಂದಾಳುವಾಗಿ ಸಾತಾರೆಯ ಛತ್ರಪತಿಯ ಬಿಡುಗಡೆಗಾಗಿ ಬಂಡಾಯ ಮಾಡಿದನು. ಆಗ ಬಾಜೀರಾಯನು ಅವನನ್ನು ಹೆಂಡಿರು-ಮಕ್ಕಳು ಸಹಿತವಾಗಿ ಪುಣೆಯಲ್ಲಿ ಸೆರೆಯಲ್ಲಿರಿಸಿದನು. ಅಲ್ಲಿಂದ ಅವನು ಮೊದಲು ಮಾಲೇಗಾವಕ್ಕೆ, ಅನಂತರದಲ್ಲಿ ಕಾಂಗೋರಿಯ ದುರ್ಗದಲ್ಲಿ ಕಳುಹಿಸಲ್ಪಟ್ಟನು. ಅವನ ನಿರೀಕ್ಷಣೆಯ ಕೆಲಸಕ್ಕೆ ತ್ರ್ಯಂಬಕಜಿ ಢೇಂಗಳೆಯು ನಿಯಮಿಸಲ್ಪಟ್ಟಿದ್ದನು. ಚತುರಸಿಂಗನು ಕಾಂಗೋರಿಯ ಕೋಟೆಯಲ್ಲಿ ೧೮೧೭ ಕ್ರಿ. ಶ. ದಲ್ಲಿ ಮರಣ ಹೊಂದಿದನು. ಬಾಜೀರಾಯನು ಚತುರಸಿಂಗನ ಜೊತೆಗೆ ಛತ್ರಪತಿಯ ಕೆಲವು ಹಿತಚಿಂತಕರನ್ನು ಸೆರೆಯಲ್ಲಿರಿಸಿದ್ದನು. ಚತುರಸಿಂಹನ ಬಂಡಾಯದಿಂದ ಸಾತಾರೆಯ ಛತ್ರಪತಿಯ ಸೆರೆಯು ಮತ್ತಿಷ್ಟು ಬಿಕ್ಕಟ್ಟಾಯಿತು. ಪ್ರತಾಪಸಿಂಹ ಮಹಾರಾಜನು ಸ್ಥಿಮಿತನೂ ಶಾಂತಸ್ವಭಾವದವನೂ ಇದ್ದನು; ಆದರೆ ಅವನ ತಾಯಿಯು ಮಾತ್ರ ಚತುರಳೂ ಮಹತ್ವಾಕಾಂಕ್ಷಿಯೂ ಆಗಿದ್ದಳು. ಅವಳು ಇಂಗ್ಲಿಷರ ಕಡೆಗೆ ಪ್ರತಿನಿಧಿಯನ್ನು ಕಳುಹಿಸಿ, ಮಗನ ಬಿಡುಗಡೆಯ ಬಗ್ಗೆ ಗುಪ್ತರೀತಿಯಿಂದ ಪ್ರಯತ್ನ ನಡೆಸಿದ್ದಳು. ಬಾಜೀರಾಯನ ವಿರುದ್ಧವಾಗಿ ಈ ನಿಮಿತ್ತವು ಇಂಗ್ಲಿಷರಿಗೆ ಚನ್ನಾಗಿ ದೊರೆತದ್ದರಿಂದ, ಪ್ರತಿನಿಧಿಯು ಹೇಳಿದ ಸುದ್ದಿಯನ್ನು ಕೇಳಿಕೊಳ್ಳುವದು, ಅವಳ ಕಡೆಗೆ ಸಹಾನುಭೂತಿ ಪೂರ್ಣವಾದ ನಿರೋಪ ಕಳಿಸುವದು, ಧೈರ್ಯದಿಂದಿರಲಿಕ್ಕೆ ಸೂಚಿಸುವದು ಮೊದಲಾದ ಪರಿಪಾಠವನ್ನು ಅವರು ಇಟ್ಟಿದ್ದರು; ಆದರೆ ಬಾಜೀರಾಯನ ಈ ಕಾರ್ಯಭಾರದಲ್ಲಿ ಪ್ರತ್ಯಕ್ಷವಾಗಿ ಕೈಹಾಕುವ ಅಧಿಕಾರವು ತಮಗೆ ಇರುವದಿಲ್ಲವೆಂಬ ಸಂಗತಿಯು ಗೊತ್ತಿದ್ದುದರಿಂದ, ಈ ಕೆಲಸದಲ್ಲಿ ಅವರು ಬಾಜೀರಾಯನಿಗೆ ಪ್ರಕಟವಾಗಿ ಏನೂ ಆಡುತ್ತಿರಲಿಲ್ಲ; ಆದರೆ ಬಾಜೀರಾಯನೊಡನೆ ಯುದ್ಧವು ಖಂಡಿತವಾಗಿ ಆಗುವದೆಂಬ ಅನುಮಾನವು ಎಲ್ಫಿನಸ್ಟನ್ ಸಾಹೇಬನಿಗಿದ್ದುದರಿಂದ, ಭಾವೀ ಯುದ್ಧದ ಪ್ರಸಂಗದಲ್ಲಿ ಮಹಾರಾಜನು ಇಂಗ್ಲಿಷರನ್ನು ಕೂಡಬೇಕೆಂಬ ಸಂಕೇತವನ್ನು ಅವನು ಮಹಾರಾಜನ ಪ್ರತಿನಿಧಿಗೆ ಹೇಳಿಟ್ಟಿದ್ದನು. ಈ ಸಂಗತಿಯು ಬಾಜೀರಾಯನಿಗೆ ತಿಳಿದ ಕೂಡಲೆ ಆತನು ಪ್ರತಾಪಸಿಂಹ ಮಹಾರಾಜನನ್ನು ಮತ್ತಿಷ್ಟು ಬಿಗಿಯಾದ ಕಾವಲಿನಲ್ಲಿರಿಸಿದನು.

೧೮೧೭ನೆಯ ಇಸವಿಯ ಯುದ್ಧವು ಪ್ರಾರಂಭವಾಗುವದಕ್ಕಿಂತ ಮೊದಲು ಮಹಾರಾಜನು ತನ್ನ ಕೈಯೊಳಗಿಂದ ಹೋಗಬಾರದೆಂಬ ಉದ್ದೇಶದಿಂದ 'ನಾನು ನಿಮ್ಮ ಸೇವಕನಿರುವೆನು; ರಾಜ್ಯಸಂಪತ್ತಿಯಲ್ಲ ನಿಮ್ಮದಿರುವದು. ಅದೆಲ್ಲ ನಿಮ್ಮ ಸ್ವಾಧೀನದಲ್ಲಿ ದೊರೆಯುವದು.' ಎಂದು ಆಶ್ವಾಸನ ಪೂರ್ವಕವಾದ ನಿರೋಪವನ್ನು

ಅವನಿಗೆ ಕಳುಹಿಸಿದನು. ಅನಂತರದಲ್ಲಿ ಪ್ರತಾಪಸಿಂಹ ಮಹಾರಾಜನು ಪರಿವಾರ ಸಹಿತನಾಗಿ ಸಾತಾರೆಯಿಂದ ವಾಸೋಟಿಯ ದುರ್ಗಕ್ಕೆ ಒಯ್ಯಲ್ಪಟ್ಟನು. ತರುವಾಯ ಬಾಜೀರಾಯನು ಅವನನ್ನು ತನ್ನ ಪಾಳ್ಯದಲ್ಲಿ ಒಯ್ದನು. ಅಷ್ಟೆಯ ಸಂಗ್ರಾಮದ ವರೆಗೆ ಅವನು ಮಹಾರಾಜನನ್ನು ತನ್ನ ಜೊತೆಯಲ್ಲಿಯೇ ಇರಿಸಿಕೊಂಡಿದ್ದನು. ಅಷ್ಟೆಯ ಕದನದಲ್ಲಿ ಮೊದಲು ಇಂಗ್ಲಿಷರೊಡನೆ ನಿರ್ಧಾರವಾದ ಸಂಕೇತವು ಪ್ರಕಾರದಲ್ಲಿ ತರುವದಕ್ಕೆ ಸಂಧಿಯು ದೊರೆಯಿತು. ರಾಜನು ಬ್ರಿಟಿಶರ ಕೈಯಲ್ಲಿ ಬಂದನು. ರಾಜ್ಯದ ಧನಿಯು ಕೈಸೇರಿದ್ದರಿಂದ ಬ್ರಿಟಿಶರಿಗೆ ಬಹು ದೊಡ್ಡ ಲಾಭವಾಯಿತು. 'ಪುಂಡ ಬಂಡುಗಾರರಾದ ಪೇಶವೆಯವರು ಹೋದರು; ನಿಜವಾದ ರಾಜ್ಯವು ಉಳಿದಿದೆ. ಆದ್ದರಿಂದ ಎಲ್ಲ ಮಹಾರಾಷ್ಟ್ರ ಸರದಾರರು ನಮಗೆ ಶರಣು ಬಂದು ತಮ್ಮ ತಮ್ಮ ಮನೆಗೆ ಹೋಗಬೇಕು. ನಾವು ಮಹಾರಾಷ್ಟ್ರರಾಜ್ಯವನ್ನು ಮೊದಲಿನಂತೆ ನಡೆಯಿಸತಕ್ಕವರಿರುವೆವು. ಹೋದ ರಾಜ್ಯವು ಪೇಶವೆಯವರದು. ಮಹಾರಾಜರ ರಾಜ್ಯವು ಅಬಾಧಿತವಾಗಿರುವದು' ಎಂಬ ಜಾಹೀರನಾಮೆಯನ್ನು ಇಂಗ್ಲಿಷರು ತೆಗೆದರು. ತರುವಾಯ ಸಾತಾರೆಯ ಸಿಂಹಾಸನದ ಮೇಲೆ ಪ್ರತಾಪಸಿಂಹ ಮಹಾರಾಜನನ್ನು ಕುಳ್ಳಿರಿಸಿ. ಒಂದು ಸಣ್ಣ ಜನಪದವನ್ನು ಸ್ವತಂತ್ರ ರಾಜ್ಯವೆಂದು ಅವನಿಗೆ ವಿಭಾಗಿಸಿ ಕೊಟ್ಟರು. ಗ್ರ್ಯಾಂಟ ಡಫನು ರೆಸಿಡೆಂಟನಾಗಿ ನಿಯಮಿಸಲ್ಪಟ್ಟನು. ಸಾತಾರೆಯ ಮಹಾರಾಜನ ಈ ಹೊಸ ರಾಜ್ಯವು ಕೇವಲ ಮೂವತ್ತು ವರ್ಷ ಮಾತ್ರ ಬಾಳಿತು. ೧೮೩೯ನೆಯ ಇಸವಿಯಲ್ಲಿ ಇಂಗ್ಲಿಷರ ವಿರುದ್ಧವಾಗಿ ಬಂಡಾಯ ಮಾಡಿದ ಆರೋಪದಿಂದ ಪ್ರತಾಪಸಿಂಹ ಮಹಾರಾಜನು ಶ್ರೀಕ್ಷೇತ್ರ ಕಾಶಿಗೆ ಕಳುಹಿಸಲ್ಪಟ್ಟನು. ದಕ್ಷಿಣದೊಳಗಿನ ರಾಜಮಹಾರಾಜರಿಗೆ ಇಂಗ್ಲಿಷರ ಉಪದೇಶದಿಂದ ಉತ್ತರ ಹಿಂದುಸ್ಥಾನದೊಳಗಿನ ಕ್ಷೇತ್ರವಾಸವು ಚನ್ನಾಗಿ ಒಪ್ಪಿತವಾಗಿರಬಹುದು! ಬಾಜೀರಾಯನ ವಸತಿಯು ಬ್ರಹ್ಮಾವರ್ತದಲ್ಲಿದ್ದರೆ, ಧನಿಯು ಕಾಶಿಯಲ್ಲಿ ವಸತಿ ಮಾಡಿದನು. ಪ್ರತಾಪಸಿಂಹ ಮಹಾರಾಜನ ಬಂಡಾಯದ ಬಗ್ಗೆ ಸಾತಾರೆಯ ಬಖರಕಾರನು ಬರೆದಿಟ್ಟಿರುವದೇನಂದರೆ—"ಶಕೆ ೧೭೬೧ ನೆಯ ವರ್ಷ ಇಂಗ್ಲಿಷ ಸರಕಾರದ ಹಾಗು ಪ್ರತಾಪಸಿಂಹ ಮಹಾರಾಜ ಛತ್ರಪತಿ ಸರಕಾರದ ನಡುವೆ ವೈಮನಸ್ಯಂಟಾಗಲು, ಪುಣೆಯಿಂದ ಇಂಗ್ಲಿಷರ ಪಡೆಯು ಸಾಗಿ ಬಂತು. ಅಂದು ರಾತ್ರಿ ಸೈನ್ಯದ ಮುಖ್ಯಾಧಿಕಾರಿಯಾದ ಬಲವಂತರಾವ ರಾಜೆ ಭೋಸಲೆ ಸೇನಾಪತಿಯು ಛತ್ರಪತಿಯ ಸನ್ನಿಧಾನದಲ್ಲಿಯೇ ಇದ್ದನು. ಶತ್ರುಸೈನ್ಯದೊಡನೆ ಯುದ್ಧಮಾಡಿ ಯುದ್ಧಕರ್ಮದ ಪರಾಕಾಷ್ಠೆಯನ್ನು ತೋರಿಸಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಹುಟ್ಟಿತು. ಆಗ ಛತ್ರಪತಿ ಮಹಾರಾಜರು ಅವನ ಕೈಹಿಡಿದು ಕುಳ್ಳಿರಿಸಿದರು. ಆ ಬೆಳಗಾಗುವವರೆಗೆ ಅವನನ್ನು ಹೊರಗೆ ಹೋಗಗೊಡಲಿಲ್ಲ." ಇದೇ ಬಖರಕಾರನು "ಬಾಳಾಜಿ ನಾರಾಯಣ ನಾತೂ ಇವನು ಇಂಗ್ಲಿಷ ಸರಕಾರದಲ್ಲಿ ರೂಪಾಯಿಗೆ ಹದಿನಾರು ಸಾಕ್ಷಿಗಳನ್ನು ಕೊಟ್ಟು, ರಾಜ್ಯದಿಂದ ಶ್ರೀಕಾಶಿ

ಯನ್ನು ತೋರಿಸಿದನು." ಎಂದು ಮತ ಪ್ರದರ್ಶಿತಗೊಳಿಸಿರುವನು. ಪ್ರತಾಪಸಿಂಹ ಮಹಾರಾಜನು ಶ್ರೀಕ್ಷೇತ್ರ ಕಾಶಿಯಲ್ಲಿ ಶಕೆ ೧೭೬೯ರಲ್ಲಿ ಮರಣ ಹೊಂದಿದನು. ಪ್ರತಾಪಸಿಂಹನು ಕಾಶಿಗೆ ಹೋದಮೇಲೆ ದತ್ತಪುತ್ರನಾದ ಶಹಾಜಿರಾಜನು ಸಿಂಹಾಸನದ ಮೇಲೆ ಕುಳ್ಳಿರಿಸಲ್ಪಟ್ಟನು; ಆದರೆ ಅವನಿಗೆ ಔರಸ ಸಂತತಿಯು ಇರದ್ದರಿಂದ, ವೆಂಕೋಜಿಯನ್ನು ದತ್ತಪುತ್ರನನ್ನಾಗಿ ತೆಗೆದುಕೊಂಡನು. ರೆಸಿಡೆಂಟನು ಆ ದತ್ತಪುತ್ರನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದನು; ಆದರೆ ಹಿಂದಿನಿಂದ ದತ್ತವಿಧಾನಕ್ಕೆ ಒಪ್ಪಿಗೆಯಿಲ್ಲವೆಂಬ ನಿಮಿತ್ತದಿಂದ ೧೮೪೮ನೆಯ ಇಸವಿಯಲ್ಲಿ ಸಾತಾರೆಯ ರಾಜ್ಯವು ಇಂಗ್ಲಿಷ ಸರಕಾರದ ರಾಜ್ಯದಲ್ಲಿ ಸಮಾವೇಶವಾಯಿತು.

---

## ಕೊಲ್ಹಾಪುರದ ಭೋಸಲೆಯರೂ ಇಂಗ್ಲಿಷರೂ

ಮರಾಟಶಾಹಿಯ ಸಿಂಹಾಸನವು ಶಿವಾಜಿ-ಸಂಭಾಜಿ ಮಹಾರಾಜನ ಆಳಿಕೆಯಲ್ಲಿ ರಾಯಗಡದಲ್ಲಿತ್ತು. ಆಗ ಕೊಲ್ಹಾಪುರದ ಬಳಿಯ ಪನ್ಹಾಳಗಡವೂ ಸಾತಾರೆಯ ಸಮೀಪದ ಅಜಮತಾರೆಯೂ ಆಯಕಟ್ಟಿನ ದುರ್ಗಗಳಾಗಿದ್ದವು. ಸಂಭಾಜಿಯ ವಧಾನಂತರದಲ್ಲಿ ಸ್ವಾತಂತ್ರ್ಯಾರ್ಥವಾಗಿ ಎಂಟು ವರ್ಷಗಳವರೆಗೆ ಯುದ್ಧವಾಗಿ, ರಾಜಾರಾಮನು ಜಿಂಜಿಯಿಂದ ತಿರುಗಿ ಬಂದ ಮೇಲೆ ಕ್ರಿ. ವ. ೧೬೯೮ರಲ್ಲಿ ಮರಾಟಶಾಹಿಯ ಸ್ಥಾಪನೆಯು ಸಾತಾರೆಯಲ್ಲಿ ಆಯಿತು. ರಾಜಧಾನಿಯನ್ನು ಬದಲಿಸಬೇಕೆಂದು ಪ್ರತಿಯೊಬ್ಬ ಸರದಾರನ ಮತವಿತ್ತು. ಸಾತಾರೆಯು ಮಹಾರಾಷ್ಟ್ರ ರಾಜ್ಯದ ಕೇಂದ್ರವಾಗಿದ್ದು, ಅಲ್ಲಿಂದ ಎಲ್ಲ ರಾಜ್ಯದ ನಿರೀಕ್ಷಣೆ ಮಾಡಲಿಕ್ಕೆ ಅನುಕೂಲವಿತ್ತು.

ರಾಜಾರಾಮನ ಮರಣದ ತರುವಾಯ ಏಳು ವರ್ಷಗಳ ನಂತರ ಶಾಹೂರಾಜನು ದಿಲ್ಲಿಯಿಂದ ಬಂದನು. ಆ ಮೇಲೆ ಸಾತಾರೆಯ ಸಿಂಹಾಸನದ ಸಲುವಾಗಿ ತಾರಾಬಾಯಿ, ಶಾಹು ಇವರ ನಡುವೆ ವ್ಯಾಜ್ಯವು ಪ್ರಾರಂಭವಾಯಿತು. ಕ್ರಿ. ವ. ೧೭೦೭ರಲ್ಲಿ ಖೇಡ ಎಂಬಲ್ಲಿ ಯುದ್ಧವಾಯಿತು. ತರುವಾಯ ಮಾರನೆ ವರ್ಷ ಶಾಹೂರಾಜನು ಸಾತಾರೆಯ ಸಿಂಹಾಸನವನ್ನೇರಿದನು. ಇದೇ ಸಮಯದಲ್ಲಿ ತಾರಾಬಾಯಿಯು ಕೊಲ್ಹಾಪುರದಲ್ಲಿ ಸ್ವತಂತ್ರ ಸಿಂಹಾಸನ ಸ್ಥಾಪಿಸುವದನ್ನು ನಿರ್ಧರಿಸಿದಳು; ಹೊಸ ಅಷ್ಟಪ್ರಧಾನರನ್ನೂ ನಿರ್ಮಾಣಮಾಡಿದಳು. ಕೊಲ್ಹಾಪುರದ ಭೋಸಲೆ ಮತ್ತು ಸಾತಾರೆಯ ಭೋಸಲೆಯವರ ಪತಿಯಿಂದ ಪೇಶವೆಯವರು ಇವರ ನಡುವೆ ಮನಸ್ತಾಪವುಂಟಾಗಿ ಅದು ಈ ಸಮಯದಿಂದ ಸಾತಾರೆಯ ಸಿಂಹಾಸನದ ಕೊನೆಯವರೆಗೆ ಸ್ಥಿರವಾಯಿತು. ಇಂದಿನ ಮಿತಿಗಾದರೂ ತಂಜಾವರದ ಉತ್ಪನ್ನದ ಬಾಧ್ಯತೆಯ ಸಲುವಾಗಿ ಕೊಲ್ಹಾಪುರದ ಮಹಾರಾಜರೂ ಸಾತಾರೆಯ ಮಹಾರಾಜರೂ ವಾದಿ-ಪ್ರತಿವಾದಿಗಳಾಗಿಯೆ ಇದ್ದಾರೆ! ನಾನಾಸಾಹೇಬ ಪೇಶವೆಯ ಕಾಲದಲ್ಲಿ ಶಾಹೂಮಹಾರಾಜನ ಮರಣದ ಸಮಯಕ್ಕೆ ಕೊಲ್ಹಾಪುರ ಸಾತಾರೆಗಳಲ್ಲಿ

ಸ್ನೇಹವು ನಿರ್ಮಾಣವಾಗಬೇಕೆಂದು ಪ್ರಯತ್ನವು ಮಾಡಲ್ಪಟ್ಟಿತು; ಆದರೆ ಅದು ವ್ಯರ್ಥವಾಯಿತು. ಪಾಣಿಪತದ ಸಂಗ್ರಾಮದಲ್ಲಿ ಪೇಶವೆಯವರ ನಾಶವಾದದ್ದನ್ನು ಕೇಳಿ ಸಮಾಧಾನ ಹೊಂದಿದ ಮೇಲೆಯೇ ತಾರಾಬಾಯಿಯು ಮರಣ ಹೊಂದಿದಳು! ಪೇಶವೆಯವರ ಶತ್ರುಗಳು ಕರವೀರದವರ ಮಿತ್ರರು, ಕರವೀರದವರ ಶತ್ರುಗಳು ಪೇಶವೆಯವರ ಮಿತ್ರರು ಈ ಮೇರೆಗೆ ಪರಿಪಾಠವಿತ್ತು. ನಿಜಾಮನು ಪೇಶವೆಯವರ ವೈರಿಯಾಗಿದ್ದರೆ, ಕರವೀರದವರ ಮಿತ್ರನು. ಈ ಸಿಟ್ಟಿನಿಂದಲೆ ದೊಡ್ಡ ಮಾಧವರಾಯನು ಕರವೀರದವರ ಕೆಲವು ಪ್ರಾಂತಗಳನ್ನು ವಶಮಾಡಿಕೊಂಡು ಪಟವರ್ಧನರಿಗೆ ಕೊಟ್ಟನು. ಇದರಿಂದ ಪಟವರ್ಧನರು ಕರವೀರದವರ ಮೇಲೆ ಕಾವಲಾಗಿ ಕುಳಿತರು. ಮುಂದೆ ರಘುನಾಥರಾಯನ ಕದನದಲ್ಲಿ ಕರವೀರದವರು ಅವನ ಪಕ್ಷಪಾತಿಗಳಾಗಿ ಕಳೆದುಕೊಂಡ ಪ್ರಾಂತವನ್ನು ಮತ್ತೆ ದೊರಕಿಸಿಕೊಂಡರು; ಆದರೆ ಮಹದಾಜಿ ಸಿಂದೆಯ ಸೈನ್ಯವು ಅವುಗಳನ್ನು ತಿರುಗಿ ವಶಮಾಡಿಕೊಂಡಿತು. ಸವಾಯಿ ಮಾಧವರಾಯನ ಕಾಲದಲ್ಲಿ ಉಂಟಾದ ಬಂಡಾಯದಲ್ಲಿ ಕರವೀರದವರ ಬೆಂಬಲವು ಅದಕ್ಕೆ ಇತ್ತು. ಮುಂದೆ ಬಾಜೀರಾಯನ ಆಳಿಕೆಯ ಆರಂಭದಲ್ಲಿ ನಾನಾಫಡಣವೀಸನ ಸೂಚನೆಯ ಮೇರೆಗೆ ಕರವೀರದವರು .ಪರಶುರಾಮಭಾವೂ ಪಟವರ್ಧನನ ಜಹಾಗೀರಿಯ ಮೇಲೆ ದಾಳಿ ಮಾಡಿದರು; ಹಾಗು ಸಾತಾರೆಯಲ್ಲಿ ಚತುರಸಿಂಗನ ಬಂಡಾಯವಾಯಿತು. ಅದಕ್ಕೆ ಪೇಶವೆಯವರ ವಿರುದ್ಧವಾಗಿ ಕೊಲ್ಲಾಪುರದವರ ಸಹಾಯವು ದೊರೆಯಿತು. ಪಟ್ಟಣಕುಡಿಯ ಯುದ್ಧದಲ್ಲಿ ಚತುರಸಿಂಗನ ಹಾಗು ಕರವೀರದವರ ಸೈನ್ಯಗಳು ಪರಶುರಾಮಭಾವೂನನ್ನು ಪರಾಭವಗೊಳಿಸಿ ಕೊಂದುಹಾಕಿದವು. ಆಗ ನಾನಾಫಡಣವೀಸನು ವಿಂಚೂರಕರ ಪ್ರತಿನಿಧಿ ಮತ್ತು ಮೇಜರ ಬ್ರಾವುನರಿಂಗ ಇವರ ಕೈಕೆಳಗೆ ಸಿಂದೆಯ ಸೈನ್ಯವನ್ನು ಕೊಲ್ಹಾಪುರಕ್ಕೆ ಕಳಿಸಿದನು. ರಾಜಧಾನಿಗೆ ಮುತ್ತಿಗೆ ಬಿತ್ತು. ಈ ಮುತ್ತಿಗೆಯು ಬಹಳ ದಿನವಿತ್ತು. ಅನಂತರದಲ್ಲಿ ಪೇಶವೆಯ ಸೈನ್ಯವು ಮುತ್ತಿಗೆಯನ್ನು ಕಿತ್ತುಕೊಂಡು ಹೊರಟು ಹೋಯಿತು. ಇಂಗ್ಲಿಷರ ಹಾಗು ಕರವೀರದವರ ಸಂಬಂಧವು ೧೭೬೫ರಲ್ಲಿ ಉಂಟಾಯಿತು. ಮಾಲವಣ ದುರ್ಗವು ಕರವೀರರಾಜ್ಯದಲ್ಲಿತ್ತು. ಅಲ್ಲಿಯ ಸಮುದ್ರತೀರದ ಜನರು ಇಂಗ್ಲಿಷರ ಹಡಗಗಳಿಗೆ ಬಹಳೇ ತೊಂದರೆ ಕೊಡುತ್ತಿದ್ದರು. ೧೭೬೫ರಲ್ಲಿ ಮುಂಬಯಿಯ ಹಡಗುಪಡೆಯೊಳಗಿನ ಮೇಜರ ಗಾರ್ಡನ, ಕ್ಯಾಪ್ಟನ ವಾಸಟನರ ಕೈಕೆಳಗಿನ ಸೈನ್ಯವು ಮಾಲವಣ ಕೋಟೆಯನ್ನು ವಶಮಾಡಿಕೊಂಡಿತು. ಅದನ್ನು ತಮ್ಮ ವಶದಲ್ಲಿರಿಸಿಕೊಳ್ಳುವ ಮನಸ್ಸಿನಿಂದ ಇಂಗ್ಲಿಷರು ಅದಕ್ಕೆ 'ಫೋರ್ಟ ಅಗಸ್ಟಸ' ಎಂಬ ಹೆಸರನ್ನೂ ಇಟ್ಟರು; ಆದರೆ ಮುಂದೆ ಆ ಕೋಟೆಯು ತಮಗೆ ಉಪಯೋಗವಿಲ್ಲೆಂದು ತಿಳಿದು ಅದರ ಗೋಡೆಗಳನ್ನು ಕೆಡಹುವ ಯೋಚನೆ ಮಾಡಿದರು. ಕೊನೆಗೆ ಈ ಯೋಚನೆಯನ್ನು ಬಿಟ್ಟುಕೊಟ್ಟು, ಕರವೀರದವರಿಂದ ಮೂರೂ ಕಾಲು ಲಕ್ಷ ರೂಪಾಯಿ ತೆಗೆದುಕೊಂಡು, ಈ ಕೋಟೆಯನ್ನು ಅವರಿಗೆ ಕೊಟ್ಟರು. ೧೮೧೧ರಲ್ಲಿ

ಕರವೀರದವರು ಇಂಗ್ಲಿಷರೊಡನೆ ಒಪ್ಪಂದದ ಮಾತು-ಕತೆಗಳನ್ನು ನಡೆಯಿಸಿದರು. ಈ ಸ್ವತಂತ್ರ ಒಪ್ಪಂದಕ್ಕೆ ಪೇಶವೆ ಬಾಜೀರಾಯನು ಅಡ್ಡಿಮಾಡಿದನು; ಆದರೆ ಈ ಪ್ರತಿಬಂಧವನ್ನು ಲಕ್ಷಿಸದೆ ಎಲಫಿನಸ್ಟನ್ನನು ಆ ಒಪ್ಪಂದವನ್ನು ಪೂರೈಸಿದನು. ಈ ಒಡಂಬಡಿಕೆಯಿಂದ ಪೇಶವೆಗೆ ಚಿಕ್ಕೋಡಿ ಮನೊಳ್ಳಿ ಪ್ರಾಂತಗಳು ತಿರುಗಿಕೊಡಲ್ಪಟ್ಟವು. ಕರವೀರದವರು ಇಂಗ್ಲಿಷರಿಗೆ ಮಾಲವಣ ಕೋಟೆಯನ್ನೂ ಅದರ ಕೆಳಗಿನ ಪ್ರದೇಶವನ್ನೂ ಕೊಟ್ಟರು. ಸುಲಿಗೆಗಾರ ಜನರಿಗೆ ಬಂದರದಲ್ಲಿ ಆಶ್ರಯ ಕೊಡಬಾರದು; ಕರವೀರದವರು ಯುದ್ಧದ ಹಡಗಗಳನ್ನಿಡಬಾರದು; ಅವು ದೊರೆತರೆ ಇಂಗ್ಲಿಷರು ಅವುಗಳನ್ನು ಸ್ವಾಧೀನಪಡಿಸಿಕೊಳ್ಳಬೇಕು; ಇಂಗ್ಲಿಷರ ಹಡಗಗಳು ಒಡೆದು ದಂಡೆಗೆ ಬಂದರೆ, ಅವುಗಳನ್ನು ತಿರುಗಿ ಕೊಡತಕ್ಕದ್ದು; ಇಂಗ್ಲಿಷ ಸರಕಾರದ ಒಪ್ಪಿಗೆಯಿಲ್ಲವೆ ಕರವೀರದವರು ಯಾರೊಡನೆಯೂ ಯುದ್ಧಮಾಡಬಾರದು, ಮೊದಲಾದ ಕಟ್ಟಳೆಗಳಿಗಾದರೂ ಕರವೀರದವರು ಒಪ್ಪಿದರು; ಇಷ್ಟಲ್ಲದೆ ಕರವೀರದವರ ಮೇಲಿನ ಹಳೆಯ ವಿವಾದಗಳನ್ನು ಇಂಗ್ಲಿಷರು ಪೂರ್ಣ ಮಾಡಿದರು; ಹಾಗು ಅವರ ಮೇಲಿನ ಸಂರಕ್ಷಣದ ಗುತ್ತಿಗೆಯನ್ನು ತಮ್ಮ ಕಡೆಗೆ ತೆಗೆದುಕೊಂಡರು.

ಶಾಹೂರಾಜನೊಡನೆ ವಾದವು ಉಪಸ್ಥಿತವಾದ ಮೇಲೆ ತಾರಾಬಾಯಿಯ ಕಡೆಗೆ ಅತ್ಯಲ್ಪ ಪ್ರದೇಶವು ಉಳಿಯಿತು. ಕರವೀರದ ಮಹಾರಾಜರಾಗಲಿ ಇಲ್ಲವೆ ಅವರ ಪ್ರಧಾನರಾಗಲಿ ಮುಂದೆ ಬೇರೆ ಪ್ರಾಂತವನ್ನು ಅದಕ್ಕೆ ಜೋಡಿಸಲಿಲ್ಲ. ಅವರ ದಾಳಿಗಳೂ ಚಲನವಲನವೂ ಹತ್ತರ ಇದ್ದ ಪಟವರ್ಧನರ ಪ್ರಾಂತಗಳ ಮೇಲೆ ಆಗುತ್ತಿತ್ತು. ಅವರ ಬಳಿಯಲ್ಲಿ ಸೈನ್ಯವಾದರೂ ಸ್ವಲ್ಪವೇ ಇತ್ತು. ಪೇಶವೆಯವರ ೭೫ ವರ್ಷಗಳ ಆಳಿಕೆಯಲ್ಲಿ ಕರವೀರರಾಜ್ಯವು ಯಾವಾಗಲಾದರೂ ಮುಳುಗತಕ್ಕದ್ದೇ; ಆದರೆ ಸುದೈವದಿಂದ ಉಳಿಯಿತು. ಬಾಜೀರಾಯನ ಆಳಿಕೆಯು ಪ್ರಾರಂಭವಾದಂದಿನಿಂದ ಇಂಗ್ಲಿಷರ ಹೊರತು ಅದಕ್ಕೆ ಬೇರೆಯವರ ಅಂಜಿಕೆಯು ಉಳಿಯಲಿಲ್ಲ. ಇಂಗ್ಲಿಷರೊಡನೆ ಕಾದುವ ಪ್ರಸಂಗವು ಕರವೀರ ರಾಜ್ಯಕ್ಕೆ ಬಹುಮಟ್ಟಿಗೆ ಒದಗಲಿಲ್ಲ. ಸ್ವಂತದ ಶಕ್ತಿಹೀನತೆಯ ಮೂಲಕ ಅವರು ಮೊದಲೇ ಅವರೊಡನೆ ಸಂಧಿ ಮಾಡಿಕೊಂಡರು. ೧೮೧೭-೧೮ನೆಯ ಕ್ರಿ. ಶ. ದಲ್ಲಿ ಆದ ಸಂಗ್ರಾಮದಲ್ಲಿ ಕರವೀರದವರು ಪೇಶವೆಯವರ ವಿರುದ್ಧವಾಗಿ ಆಂಗ್ಲರನ್ನು ಕೂಡಿದ್ದರು. ಈ ಯುದ್ಧವಾದ ಮೇಲೆ ಕರವೀರದವರಿಗೆ ಇಂಗ್ಲಿಷರು ಚಿಕ್ಕೋಡಿ ಮನೊಳ್ಳಿ ಪ್ರಾಂತಗಳನ್ನು ತಿರುಗಿ ಕೊಡಿಸಿದರು. ೧೮೨೫ರಲ್ಲಿ ಎಲ್‌ಫಿನಸ್ಟನ ಸಾಹೇಬನು ಕೊಲ್ಹಾಪುರಕ್ಕೆ ಹೋಗಿದ್ದನು. ೧೮೨೬ರಲ್ಲಿ ಕರವೀರ ಮಹಾರಾಜನು ಜಹಾಗೀರದಾರರೊಡನೆ ವೈರ ಮಾಡಿ, ಕಾಗಲವನ್ನು ತೆಗೆದುಕೊಂಡು ಸುಲಿದನು. ಆಗ ವೇಬರ ಸಾಹೇಬನು ಧಾರವಾಡದಿಂದ ಆರುಸಾವಿರ ಸೈನ್ಯತೆಗೆದುಕೊಂಡು ಕೊಲ್ಹಾಪುರಕ್ಕೆ ಬಂದನು. ಮಹಾರಾಜನು ಯುದ್ಧಕ್ಕಾಗಿ ಸಿದ್ಧಪಡಿಸಿದ ತೋಫಿನಿಂದ ವೇಬರ ಸಾಹೇಬನಿಗೆ ಸಲಾಮು ಕೊಟ್ಟು ಹೊಸ ಒಡಂಬಡಿಕೆ ಮಾಡಿ

ಕೊಂಡನು. ಇಂಗ್ಲಿಷರ ಅಪ್ಪಣೆಯಿಲ್ಲದೆ ಸೈನ್ಯವನ್ನಿಡಬಾರದು. ಅವರ ಸಲಹೆಯಂತೆ ರಾಜ್ಯಕಾರ್ಯವನ್ನು ಸಾಗಿಸತಕ್ಕದ್ದು. ಜಹಾಗೀರದಾರರಿಗಾದ ಹಾನಿಯನ್ನು ತುಂಬಿಕೊಡಬೇಕು, ಮೊದಲಾದ ಕಟ್ಟಳೆಗಳಾದವು. ಇದಕ್ಕಾಗಿ ಚಿಕ್ಕೋಡಿ ಮನೊಳ್ಳಿ ಪ್ರಾಂತಗಳು ಇಂಗ್ಲಿಷರಿಗೆ ಕೊಡಲ್ಪಟ್ಟವು. ತರುವಾಯ ಮಹಾರಾಜನು ಮಾಲವಣ ಕೋಟೆಯೊಳಗಿನ ತೋಫುಗಳನ್ನು ಕೊಲ್ಹಾಪುರಕ್ಕೆ ತರಿಸಿಕೊಂಡನು. ಅವನು ಪ್ರಜೆಗಳಿಗೆ ತೊಂದರೆ ಕೊಡತೊಡಗಿದನು. ಕರವೀರದವರ ಈ ಕೃತ್ಯಗಳನ್ನು ನೋಡಿ ಇಂಗ್ಲಿಷರು ಬೆಳಗಾವಿಯಿಂದ ಸೈನ್ಯ ಕಳುಹಿಸಿದರು. ಆಗ ಮತ್ತೆ ಒಡಂಬಡಿಕೆಯಾಯಿತು. ಪಾಗೆ, ಸರಂಜಾಮು, ಕಾಲಾಳು ಮೊದಲಾದ ೧೨೦೦ಕ್ಕಿಂತ ಹೆಚ್ಚು ಸೈನ್ಯವನ್ನು ಕೊಲ್ಹಾಪುರದವರು ತಮ್ಮ ಬಳಿಯಲ್ಲಿಟ್ಟುಕೊಳ್ಳಬಾರದು; ತೋಫುಗಳನ್ನು ಎಲ್ಲಿಯೂ ಒಯ್ಯಬಾರದು; ಚಿಕ್ಕೋಡಿ ಮನೊಳ್ಳಿ ಪ್ರಾಂತಗಳನ್ನು ಸ್ಥಿರವಾಗಿ ಇಂಗ್ಲಿಷರಿಗೇ ಕೊಡತಕ್ಕದ್ದು ಮೊದಲಾದ ಕಟ್ಟಳೆಗಳು ಮಾಡಲ್ಪಟ್ಟವು. ಪನ್ಹಾಳಗಡದ ಮೇಲೆ ಇಂಗ್ಲಿಷರು ಸೈನ್ಯವನ್ನಿಡತಕ್ಕದ್ದು; ಅದರ ವೆಚ್ಚವನ್ನು ಕೊಲ್ಹಾಪುರದವರೇ ಕೊಡಬೇಕು. ಇಂಗ್ಲಿಷರ ಒಪ್ಪಿಗೆಯಿಲ್ಲದೆ ಕಾರಭಾರಿ ದಿವಾಣರನ್ನು ನಿಯಮಿಸಬಾರದು, ಮೊದಲಾದ ಕಟ್ಟಳೆಗಳೂ ಅದರಲ್ಲಿ ಹಾಕಲ್ಪಟ್ಟವು.

---

## ನಾಗಪುರದ ಭೋಸಲೆಯವರೂ ಇಂಗ್ಲಿಷರೂ

ನಾಗಪುರದ ಭೋಸಲೆಯ ಮೂಲಪುರುಷನಾದ ಪರಸೋಜಿಯು ಸಂತಾಜಿ ಘೋರಪಡೆಯ ಕೈಕೆಳಗೆ ಸಣ್ಣಸರದಾರನಿದ್ದನು. ಅವನು ಸಾತಾರೆಯ ಬಳಿಯಲ್ಲಿಯ ದೇವೂರು ಎಂಬಲ್ಲಿ ಹುಟ್ಟಿದನು. ಆ ಊರಲ್ಲಿ ಅವನ ಇನಾಮು ಭೂಮಿಯು ಇತ್ತು. ಪುಣೆಯ ಹತ್ತರದ ಹಿಂಗಣಗಾಂವ ಎಂಬ ಊರು ನಾಗಪುರದ ಭೋಸಲೆಯವರ ಮೂಲಗ್ರಾಮವೆಂದು ಕೆಲವರು ಅನ್ನುವರು. ಸಂತಾಜಿಯಲ್ಲಿ ಸರದಾರಿಕೆ ಮಾಡುವದಕ್ಕಿಂತ ಮೊದಲು ಪರಸೋಜಿಯು ಶಿವಾಜಿಯಲ್ಲಿ ಸೈನಿಕನಾಗಿದ್ದನು. ಈ ಭೋಸಲೆಯು ಶಿವಾಜಿಯ ಮನೆತನದವನೇ ಆಗಿದ್ದು, ಮಹತ್ವಾಕಾಂಕ್ಷೆಯುಳ್ಳವನಾಗಿದ್ದನು. ಪೇಶವೆಪದವು ಬಾಜೀರಾಯನಿಗೆ ದೊರೆಯಬಾರದೆಂಬ ಬಗ್ಗೆ ದಾಭಾಡೆಯ ಮತವಿದ್ದಂತೆ, ಇವನದಾದರೂ ಇತ್ತು. ಪರಸೋಜಿಯ ಮಗನಾದ ಕಾನ್ಹೋಜಿಗೆ 'ಸೇನಾಸಾಹೇಬ ಸುಭೆ' ಎಂಬ ಪದವಿಯು ಶಾಹೂವಿನಿಂದ ದೊರೆತಿತ್ತು. ಮುಂದೆ ರಾಜಾಜ್ಞೆಯ ಉಲ್ಲಂಘನೆಯ ಆರೋಪಣಯಿಂದ ಕಾನ್ಹೋಜಿಯು ಸಾತಾರೆಯ ಸೆರೆಮನೆಯಲ್ಲಿ ಹಾಕಲ್ಪಟ್ಟನು. ಅನಂತರದಲ್ಲಿ ಈ ಪದವಿಯು ಅವನ ಅಣ್ಣನ ಮಗನಾದ ರಘೂಜಿಗೆ ಕೊಡಲ್ಪಟ್ಟಿತು. ಮೊದಲು ರಘೂಜಿಯು ಕಾನ್ಹೋಜಿಯ ಬಳಿಯಲ್ಲಿ ಸೈನಿಕನಾಗಿದ್ದನು; ಹಾಗು ಗೊಂಡವಣ ಪ್ರಾಂತದೊಳಗಿನ ಕುಲಗೆಟ್ಟ ಮುಸಲ್ಮಾನನಾದ ಒಬ್ಬ ಸಂಸ್ಥಾನಿಕನಲ್ಲಿಯೂ ಕೆಲಸ ಮಾಡಿದ್ದನು. ರಘೂಜಿಯು ಸಾಧಾರಣತರದ ಸೈನಿಕನಾಗಿದ್ದರೂ ತೀಕ್ಷ್ಣಬುದ್ಧಿಯವನೂ ಎದೆಗಾರನೂ ಆಗಿದ್ದನು.

ಇವನು ಪ್ರಿಯನಾಗಿಯೂ ಆಪ್ತನಾಗಿಯೂ ಇದ್ದನು. ಶಾಹೂರಾಜನ ಒಲವು ಬೇಟೆಯಲ್ಲಿ ವಿಶೇಷವಾಗಿದ್ದುದರಿಂದ ಅವನು ಈ ರಘೂಜಿಯ ಮೇಲೆ ಮಮತೆಯನ್ನಿರಿಸಿದನು. ಈ ಸಂಗತಿಯ ಲಾಭವು ರಘೂಜಿಗೆ ಚನ್ನಾಗಿ ಆಯಿತು. ಇವನು ಭೋಸಲೆ ಮನೆತನದವನಿದ್ದುದರಿಂದ ಇವನ ಮಾನ್ಯತೆಯು ಬೆಳೆಯಬೇಕೆಂದು ಶಾಹೂರಾಜನು ಶಿರಕೆ ಮನೆತನದೊಳಗಿನ ಒಂದು ಕನ್ಯೆಯೊಡನೆ ಅಂದರೆ, ಪ್ರತ್ಯಕ್ಷ ತನ್ನ ಮೊಮ್ಮಗಳೊಡನೆ ಅವನ ಲಗ್ನ ಮಾಡಿದನು. ಮುಂದೆ ಶಾಹೂರಾಜನು ಅವನಿಗೆ ವಱ್ಹಾಡಪ್ರಾಂತದ ಸನದನ್ನು ಬರೆದುಕೊಟ್ಟನು. ಅದಕ್ಕೆ ಪ್ರತಿಫಲವಾಗಿ 'ಐದು ಸಾವಿರ ಸೈನಿಕರನ್ನಿರಿಸಿಕೊಂಡು ಸಾತಾರೆಯ ಸಿಂಹಾಸನದ ಸೇವೆ ಮಾಡುವೆನು; ಪ್ರತಿವರ್ಷ ಒಂಬತ್ತು ಲಕ್ಷ ರೂಪಾಯಿಗಳ ತೆರಿಗೆಯನ್ನು ಕೊಡುವೆನು' ಎಂದು ರಘೂಜಿಯು ಕಟ್ಟಳೆ ಮಾಡಿಕೊಂಡಿದ್ದನು. ಪ್ರಸಂಗ ವಿಶೇಷದಲ್ಲಿ ಹತ್ತುಸಾವಿರದವರೆಗೆ ಸೈನ್ಯವನ್ನು ಬೆಳೆಯಿಸಿ, ಆವಶ್ಯಕತೆಯುಂಟಾದಾಗ ಪೇಶವೆಯ ಸಹಾಯಕ್ಕೆ ಹೋಗಬೇಕೆಂಬ ಕಟ್ಟಳೆಯಾದರೂ ಆಗಿತ್ತು.

ಕಾನ್ಹೋಜಿ ಭೋಸಲೆಯ ಕಾಲದಿಂದ ಗೊಂಡವಣದ ಬಹು ಭಾಗವನ್ನು ವಶಮಾಡಿಕೊಂಡು, ಕಟಕ ಪ್ರಾಂತದ ಮೇಲೆ ದಾಳಿಮಾಡುವ ಪರಿಪಾಠವನ್ನು ಭೋಸಲೆಯವರು ಇಟ್ಟಿದ್ದರು. ಇದೇ ಕ್ರಮವನ್ನು ರಘೂಜಿಯೂ ಮುಂದುವರಿಸಿದನು. ೧೭೩೮ರಲ್ಲಿ ರಘೂಜಿಯು ಕಟಕವನ್ನು ಸುಲಿದು ಉತ್ತರಕ್ಕೆ ಅಲ್ಹಾಬಾದದವರೆಗೆ ದಾಳೀ ಮಾಡಿದನು; ಹಾಗು ಅಲ್ಲಿಯ ಸುಭೇದಾರನಾದ ಸುಜಾಖಾನನನ್ನು ಪರಾಭವಗೊಳಿಸಿ, ಕೊಂದು, ಹೇರಳವಾದ ಸಂಪತ್ತನ್ನು ತೆಗೆದುಕೊಂಡು ತಿರುಗಿ ಬಂದನು. ಈ ದಾಳಿಗೆ ಪೇಶವೆಯ ಇಲ್ಲವೆ ಶಾಹೂರಾಜನ ಸಮ್ಮತಿಯಿದ್ದಿಲ್ಲ. ವರಿಷ್ಠರ ಆಜ್ಞೆಯನ್ನು ಉಲ್ಲಂಘಿಸುವ ಈ ಪ್ರವೃತ್ತಿಯನ್ನು ನೋಡಿ ಬಾಜೀರಾಯನು ಸಿಟ್ಟಾಗಿ, ಅವನ ಮೇಲೆ ಆವಜಿ ಕವಡೆ ಎಂಬ ಸರದಾರನನ್ನು ಕಳುಹಿದನು. ರಘೂಜಿಯು ಅವನನ್ನು ಪರಾಭವಗೊಳಿಸಿದನು. ಈ ಸಂಗತಿಯನ್ನು ಕೇಳಿ ಬಾಜೀರಾಯನು ಅವನ ಮೇಲೆ ದಂಡೆತ್ತಿ ಹೋಗಬೇಕೆಂಬ ಯೋಚನೆಯಲ್ಲಿದ್ದನು. ಅಷ್ಟರಲ್ಲಿ ನಾದಿರಶಹನ ದಾಳಿಯು ಬಂದ ಮೂಲಕ ಈ ಕಾರ್ಯವನ್ನು ಅವನು ನಿಲ್ಲಿಸಬೇಕಾಯಿತು. ನರ್ಮದೆಯ ಉತ್ತರಕ್ಕೆ ದಾಳೀಮಾಡಿ ಕಪ್ಪ-ಕಾಣಿಕೆ ತೆಗೆದುಕೊಳ್ಳುವದೂ, ಪೇಶವೆಯವರ ಇಲ್ಲವೆ ಶಾಹೂರಾಜನ ಆಜ್ಞೆಯ ಹೊರತು ಪರಪ್ರಾಂತಗಳ ಮೇಲೆ ದಾಳೀಮಾಡುವದೂ ರಘೂಜಿಯ ಅಧಿಕಾರದೊಳಗಿನದಲ್ಲವೆಂದು ಬಾಜೀರಾಯನು ಅನ್ನುತ್ತಿದ್ದನು. ಇದಕ್ಕೆ ವಿರುದ್ಧವಾಗಿ ರಘೂಜಿಯ ಅಭಿಪ್ರಾಯವಿತ್ತು. ಪೇಶವೆ ಪದವು ಬ್ರಾಹ್ಮಣರಿಗೆ ಸಲ್ಲತಕ್ಕದ್ದಲ್ಲ; ಭೋಸಲೆ ಮನೆತನದೊಳಗಿನವನಾದ ತನಗೇ ಆ ಪೇಶವೆ ಪದವು ದೊರೆಯತಕ್ಕದ್ದು, ಮೊದಲಾದ ಅಭಿಪ್ರಾಯವು ಅವನದಾಗಿತ್ತು. ಇಷ್ಟಲ್ಲದೆ, ಶಾಹೂರಾಜನ ನಿಃಪುತ್ರಿಕನಿದ್ದುದರಿಂದ ಅವನ ತರುವಾಯ ತಾನೇ ಸಾತಾರೆಯ ಸಿಂಹಾಸನವನ್ನೇರಬೇಕೆಂಬ ವಿಚಾರವು ಅವನಲ್ಲಿತ್ತೆಂದು ಅನ್ನುತ್ತಾರೆ.

ಈ ಜಗಳವು ವಿಕೋಪಕ್ಕೆ ಹೋಗಿ ಪೇಶವೆ-ಭೋಸಲೆಯವರಲ್ಲಿ ಯುದ್ಧವು ಆಗತಕ್ಕದ್ದೇ; ಆದರೆ ದಿಲ್ಲಿಯ ದೊಡ್ಡ ರಾಜಕಾರಣದ ಸಲುವಾಗಿ ಬಾಜೀರಾಯನು ಈ ಒಳಜಗಳವನ್ನು ಶಾಂತಪಡಿಸಿದನು. ಸಮಕ್ಷ ಭೆಟ್ಟಿಯಲ್ಲಿ ಉಭಯತರೊಳಗೆ ಒಪ್ಪಂದವಾಯಿತು. ರಘೂಜಿ ಭೋಸಲೆಯ ಘನತರವಾದ ಮಹತ್ವಾಕಾಂಕ್ಷೆಯನ್ನು ಕಂಡು ಹಿಡಿದು ಬಾಜೀರಾಯನು ಅವನಿಗೆ ಬಂಗಾಲದಿಂದ ಕರ್ನಾಟಕದ ವರೆಗೆ ಪೂರ್ವಕರಾವಳಿಯ ಮೇಲೆ ಅಧಿಕಾರ ನಡೆಯಿಸುವದಕ್ಕಾಗಿ ಒಪ್ಪಿಗೆಯಿತ್ತು, ತನ್ನ ಪ್ರತಿಸ್ಪರ್ಧಿಯನ್ನು ಕಡಿಮೆ ಮಾಡಿಕೊಂಡನೆಂದು ಕೆಲವರ ಮತವಿದೆ. ಭೋಸಲೆಯ ದಾಳಿಗಳಾದರೂ ಮುಂದೆ ಇದೇ ಭಾಗದಲ್ಲಿಯೇ ಆದವು. ೧೭೪೦ರಲ್ಲಿ ಕರ್ನಾಟಕದ ಮೇಲೆ ಮರಾಟರ ದಾಳಿಯಾಯಿತು. ಆಗ ಅದರ ಆಧಿಪತ್ಯವು ರಘೂಜಿ ಭೋಸಲೆಯ ಕಡೆಗೇ ಇತ್ತು. ಈ ಸೈನ್ಯವು ಸುಮಾರು ಐವತ್ತು ಸಾವಿರ ಇರಬಹುದು. ಈ ದಾಳಿಯಲ್ಲಿ ಕರ್ನಾಟಕದ ನವಾಬನಾದ ದೋಸ್ತ ಆಲಿಯು ಸೋತು ಕೊಲ್ಲಲ್ಪಟ್ಟನು. ದಿವಾಣ ಮೀರ ಅಸದ ಇವನು ಸೆರೆಸಿಕ್ಕನ. ಈ ವಿಜಯದಿಂದ ಫ್ರೇಂಚರಿಗೂ ದಕ್ಷಿಣ ಹಿಂದುಸ್ಥಾನದ ಜನರಿಗೂ ಮರಾಟರ ವಿಷಯವಾಗಿ ಅಂಜಿಕೆಯು ಉತ್ಪನ್ನವಾಯಿತು ಇದೇ ದಿವಾಣನು ಮುಂದೆ ನವಾಬ ಸಫದರ ಆಲಿಗೂ ಮರಾಟರಿಗೂ ಒಪ್ಪಂದ ಮಾಡಿಸಿದನು. ನವಾಬನು ಮರಾಟರಿಗೆ ಒಂದು ಕೋಟಿ ರೂಪಾಯಿಗಳನ್ನು ಕಂತದಿಂದ ಕೊಡತಕ್ಕದ್ದು. ಸಫದರ ಆಲಿಯ ಪ್ರತಿಸ್ಪರ್ಧಿಯಾದ ಚಂದಾಸಾಹೇಬನನ್ನು ದಬ್ಬುವದಕ್ಕಾಗಿ ಸಫದರ ಆಲಿಯು ಮರಾಟರ ಸೈನ್ಯದ ಸಹಾಯವನ್ನು ಪಡೆಯಬೇಕು, ಪೂರ್ವದಂಡೆಯ ಮೇಲಿನ ಹಿಂದು ರಾಜರ ಪ್ರಾಂತಗಳನ್ನು ೧೭೩೬ರ ತರುವಾಯ ಫ್ರೇಂಚರೇ ಮೊದಲಾದವರು ತೆಗೆದುಕೊಂಡಿದ್ದರೆ ಅವುಗಳನ್ನು ಅವರಿಗೆ ಕೊಡಬೇಕು. ಈ ಮೇರೆಗೆ ಆಲಿಗೂ ಮರಾಟರಿಗೂ ಒಪ್ಪಂದವಾಯಿತು. ತರುವಾಯ ರಘೂಜಿಯು ಫ್ರೇಂಚರ ಬೆನ್ನು ಹತ್ತಿದನು. ತ್ರಿಚಿನಾಪಲ್ಲಿಯನ್ನು ತೆಗೆದುಕೊಳ್ಳಬೇಕೆಂದು ಅವನ ಸಾಹಸವಿತ್ತು.

ತರುವಾಯ ರಘೂಜಿಯು ಪಾಂಡಿಚರಿಯ ಫ್ರೇಂಚ ಗವ್ಹರ್ನರನಿಗೆ ಒಂದು ಪತ್ರ ಬರೆದನು:-“ನಮ್ಮ ಮಹಾರಾಜರು ನಿಮಗೆ ಪಾಂಡಿಚರಿಯಲ್ಲಿರಲಿಕ್ಕೆ ಒಪ್ಪಿಗೆ ಕೊಟ್ಟು ಸುಮಾರು ನಾಲ್ವತ್ತು ವರ್ಷಗಳಾದವು. ನೀವು ನಮ್ಮ ಸ್ನೇಹಕ್ಕೆ ಪಾತ್ರರಿದ್ದು ನಮ್ಮ ಕಟ್ಟಳೆಗಳನ್ನು ನಡೆಯಿಸುವಿರೆಂದು ನಮ್ಮ ನಂಬಿಗೆಯಿತ್ತು. ಅಂತೆಯೆ ಅವರು ಆ ಪ್ರಾಂತದಲ್ಲಿರಲಿಕ್ಕೆ ನಿಮಗೆ ಆಜ್ಞೆ ಕೊಟ್ಟರೆಂಬದು ಸ್ಪಷ್ಟವಿದೆ. ಇದರ ಸಲುವಾಗಿ ನೀವು ಪ್ರತಿವರ್ಷ ಕಪ್ಪಕೊಡಲೊಪ್ಪಿದ್ದು, ಇದುವರೆಗೆ ನಿಮ್ಮಿಂದ ಎಷ್ಟೂ ಹಣ ಬರಲಿಲ್ಲ. ಈಗ ಜಿಂಜಿ-ತ್ರಿಚಿನಾಪಲ್ಲಿ ಕೋಟೆಗಳನ್ನು ತೆಗೆದುಕೊಂಡು ಅವುಗಳನ್ನು ಭದ್ರಪಡಿಸಲಿಕ್ಕೆ ನಮಗೆ ಮಹಾರಾಜರ ಆಜ್ಞಾಪತ್ರ ಬಂದಿದೆ; ಹಾಗು ಪೂರ್ವ ಕರಾವಳಿಯ ಮೇಲಿದ್ದ ಯುರೋಪಿಯನ್‌ರಿಂದ ಕಪ್ಪ ತೆಗೆದುಕೊಳ್ಳುವದಕ್ಕಾಗಿ ಆಜ್ಞೆ

ಯಾಗಿದೆ. ನಾವು ನಿಮ್ಮ ಮೇಲೆ ದೊಡ್ಡಸ್ತಿಕೆ ತೋರಿಸುತ್ತ ಬಂದಿದ್ದೇವೆ; ನೀವು ಮಾತ್ರ ನಮ್ಮ ವಿರುದ್ಧವಾಗಿ ವರ್ತಿಸುವಿರಿ. ಈಗ ಕಪ್ಪನ್ನೂ, ಪರಿವಾರ ಸಹಿತವಾಗಿ ಚಂದಾಸಾಹೇಬನನ್ನೂ ಕೈವಶಪಡಿಸಿಕೊಳ್ಳುವದಕ್ಕಾಗಿ ಸೈನ್ಯ ಕಳಿಸಿದೆ. ವಸಯಿಯ ಸ್ಥಿತಿಯು ಏನಾಯಿತೆಂಬದು ನಿಮಗೆ ಗೊತ್ತೇ ಇದೆ. ಸ್ವಲ್ಪ ದಿವಸಗಳಲ್ಲಿ ನಮ್ಮ ಹಡಗುಪಡೆಯಾದರೂ ಅಲ್ಲಿಗೆ ಬಂದು ತಲುಪುವದು. ಆದ್ದರಿಂದ ಈ ಮಾತಿನ ಪರಿಷ್ಕಾರವು ಬೇಗನೆ ಆಗಬೇಕು.'' ಎಂದು ರಘೂಜಿಯು ಪತ್ರದಲ್ಲಿ ಬರೆದಿದ್ದನು. ಆಗ ಪಾಂಡಿಚರಿಯ ಫ್ರೇಂಚ ಗವ್ಹರ್ನರನಾಗಿದ್ದ ಡ್ಯೂಮಾನು ಕೆಳಗಿನಂತೆ ಪತ್ರ ಬರೆದು ರಘೂಜಿಯ ಕಡೆಗೆ ಕಳುಹಿಸಿದನು. ''ಫ್ರೇಂಚ ರಾಷ್ಟ್ರದಿಂದ ಇದುವರೆಗೆ ಯಾರೂ ಕಪ್ಪ-ಕಾಣಿಕೆ ತೆಗೆದುಕೊಂಡಿಲ್ಲ. ಈಗ ನಾನು ಈ ಮಾತಿಗೊಪ್ಪಿದರೆ ನನ್ನ ಒಡೆಯರಾದ ಫ್ರೇಂಚ ರಾಜರು ನನ್ನ ತಲೆ ಹೊಡಿಸಿಯಾರು! ಇಲ್ಲಿಯ ರಾಜರು ಸಮುದ್ರ ತೀರದ ಉಸುಬಿನ ಮೇಲೆ ಕೋಟಿ-ಪಟ್ಟಣಗಳನ್ನು ಕಟ್ಟಲಿಕ್ಕೆ ನಮಗೆ ಒಪ್ಪಿಗೆ ಕೊಟ್ಟಿರುವರು. ಇಲ್ಲಿಯ ಜನರ ಧರ್ಮ ಹಾಗು ದೇವಾಲಯ ಇವುಗಳ ಮೇಲೆ ಯಾವ ತರದ ಪೀಡೆ ಕೊಡುವದಿಲ್ಲವೆಂಬ ಮಾತಿಗೆ ಆಗ ನಾವು ಒಪ್ಪಿದ್ದೇವೆ. ಅದರಂತೆ ಮನೋಭಾವದಿಂದ ಈ ಕಟ್ಟಳೆಯನ್ನು ಪಾಲಿಸಿದ್ದೇವೆ. ಆದುದರಿಂದ ತಮ್ಮ ಸೈನ್ಯವು ಇಲ್ಲಿಗೆ ಬರುವ ಕಾರಣವೇ ಉಳಿಯಲಿಲ್ಲ. ನಿಮ್ಮ ಬೇಡಿಕೆಯಂತೆ ಒಪ್ಪದಿದ್ದರೆ ನೀವು ಸೈನ್ಯವನ್ನು ತೆಗೆದುಕೊಂಡು ಇತ್ತ ಬರುವೆವೆಂದು ಬರೆದಿರುತ್ತೀರಿ, ಆದರೂ ನೀವು ಬಂದರೆ ಇಲ್ಲಿ ನಿಮ್ಮ ಸತ್ಕಾರ ಮಾಡುವದಕ್ಕೆ ಸಂಪೂರ್ಣ ಸಿದ್ಧತೆಯಿದೆ. ವಸಯಿಯ ವಿಷಯವು ನಮಗೆ ತಿಳಿದಿದೆ; ಆದರೆ ವಸಯಿಯ ರಕ್ಷಣೆಯನ್ನು ಫ್ರೇಂಚ ಜನರು ಮಾಡುತ್ತಿದ್ದಿಲ್ಲವೆಂಬದನ್ನು ತಾವು ಲಕ್ಷ್ಯದಲ್ಲಿಡಬೇಕು.'' ಕೊನೆಗೆ ಮರಾಟರ ಸೈನ್ಯವು ಪಾಂಡಿಚರಿಯ ಮೇಲೆ ದಾಳಿ ಮಾಡದೆ ತಿರುಗಿ ಹೋಯಿತು.

ಸನ್ ೧೭೪೦ರಲ್ಲಿ ಬಾಜೀರಾಯನು ಮರಣಹೊಂದಿದ ಮೇಲೆ ಪೇಶವೆ ವಸ್ತ್ರಗಳು ನಾನಾಸಾಹೇಬನಿಗೆ ದೊರೆತವು. ಅವು ಅವನಿಗೆ ದೊರೆಯಬಾರದೆಂದು ರಘೂಜಿಯು ಬಹಳೇ ಪ್ರಯತ್ನ ಮಾಡಿದನು. ಅವನು ಕರ್ನಾಟಕದಿಂದ ತಿರುಗಿ ಬೇಗನೆ ಬರುವದಕ್ಕಾದರೂ ಅದೇ ಕಾರಣವಿತ್ತು. ಬಾಜೀರಾಯನು ತೆಗೆದುಕೊಂಡ ಸಾಲದ ಬಗ್ಗೆ ಬಾಬುರಾವ ನಾಯಕ, ಬಾರಾಮತಿಕರ ಹಾಗು ಬಾಜೀರಾಯ ಇವರಲ್ಲಿ ವೈಮನಸ್ಸುಂಟಾಗಿತ್ತು. ಆಗ ರಘೂಜಿಯು ಬಾಬುರಾಯನನ್ನು ಮುಂದೆ ಮಾಡಿ ಶಾಹೂ ರಾಜನಿಗೆ ಲಂಚಕೊಡುವ ಪ್ರಯತ್ನ ಮಾಡಿ ತನಗೆ ಪೇಶವಾಯಿ ವಸ್ತ್ರಗಳು ದೊರೆಯಬೇಕೆಂದು ಯತ್ನಿಸಿದನು; ಆದರೆ ಈ ಕಾರ್ಯದಲ್ಲಿ ಅವನು ಮೋಸ ಹೋದನು. ಆಗ ರಘೂಜಿಯು ನಾಯಕನೊಡನೆ ತಿರುಗಿ ಕರ್ನಾಟಕಕ್ಕೆ ಹೋದನು. ತಂಜಾವರದ ಮರಾಟರಿಂದ ರಘೂಜಿಗೆ ನೆರವು ದೊರೆತದ್ದರಿಂದ ಅವನು ತ್ರಿಚಿನಾಪಲ್ಲಿಯನ್ನು ತೆಗೆದುಕೊಂಡನು. ಅಲ್ಲಿಯ ಕೋಟೆಯ ಮೇಲೆ ಮುರಾರರಾವ ಘೋರಪಡೆಯನ್ನು

ಕಿಲ್ಲೇದಾರನನ್ನಾಗಿ ನಿಯಮಿಸಿದನು. ತರುವಾಯ ಚಂದಾಸಾಹೇಬನನ್ನು ಹಿಡಿದು ತಂದು ಸಾತಾರೆಯಲ್ಲಿ ಸೆರೆಯಲ್ಲಿಟ್ಟನು.

ರಘೂಜಿಯು ಕರ್ನಾಟಕದಲ್ಲಿದ್ದಾಗ ಇತ್ತ ಕಡೆಗೆ ಮುರ್ಶಿದ ಕುಲೀಖಾನನ ದಿವಾಣನಾದ ಮೀರ ಹಬೀಬನು ರಘೂಜಿಯ ದಿವಾಣನಾದ ಭಾಸ್ಕರಪಂತನಿಗೆ ಕಟಕ ಪ್ರಾಂತದ ಮೇಲೆ ದಾಳಿಮಾಡಲಿಕ್ಕೆ ನಿಮಂತ್ರಣ ಕಳುಹಿಸಿದನು ಭಾಸ್ಕರಪಂತನು ಈ ಮಾತಿಗೆ ಮಾನ್ಯತೆ ಕೊಟ್ಟನು. ಈ ಸಮಯದಲ್ಲಿ ನಾನಾಸಾಹೇಬ ಪೇಶ್ವೆಯು ಉತ್ತರ ಹಿಂದುಸ್ಥಾನದ ಮೇಲೆ ದಾಳೀ ಮಾಡಲಿಕ್ಕೆ ಹೊರಟು ನರ್ಮದಾತೀರದಲ್ಲಿಯ ಕೋಟೆ-ಕೊತ್ತಳಗಳನ್ನು ತೆಗೆದುಕೊಂಡನು. ತರುವಾಯ ಅಲ್ಲಾಬಾದದ ಮೇಲೆ ದಾಳೀಮಾಡಬೇಕೆಂಬ ವಿಚಾರವು ಅವನಲ್ಲಿ ಹುಟ್ಟಿತು; ಆದರೆ ರಘೂಜಿಯು ಬುದ್ಧಿ ಪೂರ್ವಕವಾಗಿ ಮಾಳವ ಪ್ರಾಂತದಲ್ಲಿ ಹಾವಳಿಯೆಬ್ಬಿಸಿದ್ದರಿಂದ ಅವನು ಪೂರ್ವ ದಿಕ್ಕಿನ ಯುದ್ಧವನ್ನು ನಿಲ್ಲಿಸಿ ಪಶ್ಚಿಮಕ್ಕೆ ತಿರುಗಬೇಕಾಯಿತು. ಮಾಳವದಲ್ಲಿ ಬಿಗಿಯಾದ ಮೇಲೆ ಅವನು ಅಲ್ಲಾಬಾದದ ಮೇಲಿಂದ ಮುರ್ಶಿದಾಬಾದದವರೆಗೆ ಹೋದನು. ಇತ್ತ ಕಡೆಗೆ ರಘೂಜಿಯು ಕಟವಾ-ಬರದ್ವಾನಗಳವರೆಗೆ ಹೋದನು. ಇದಕ್ಕಿಂತ ಮೊದಲೇ ನಾನಾಸಾಹೇಬನು ನವಾಬ ಅಲೀವರ್ದೀಖಾನನಿಂದ ಕಪ್ಪ ತೆಗೆದುಕೊಂಡು ಲೆಕ್ಕವನ್ನು ಪೂರ್ಣಮಾಡಿದ್ದನು. ಆದ್ದರಿಂದ ರಘೂಜಿಯು ತಿರುಗಿದನು. ಮಾಳವದಲ್ಲಿ ಅವನು ಮಾಡಿದ ಕೃತ್ಯದಿಂದ ಪೇಶವೆಯು ರುಷ್ಟನಾಗಿ ಅವನ ಮೇಲೆ ದಾಳೀಮಾಡಿ ಪರಾಭವಗೊಳಿದನು. ತರುವಾಯ ಪೇಶವೆಯೊಡನೆ ಒಡಂಬಡಿಕೆ ಮಾಡಿಕೊಂಡು ರಘೂಜಿಯು ಸಾತಾರೆಗೆ ಹೊರಟನು. ರಘೂಜಿ ಭೊಸಲೆಗೆ ದಮಾಜಿ ಗಾಯಕವಾಡನೂ ಯಮಾಜಿ ಶಿವದೇವನೂ ಕೂಡುವವರಿದ್ದುದರಿಂದ ನಾನಾಸಾಹೇಬನು ಸ್ವಲ್ಪ ಹಿಂದೆಗೆದು, ಬಂಗಾಲದ ಕಪ್ಪನ್ನು ತೆಗೆದುಕೊಳ್ಳುವ ಅಧಿಕಾರವನ್ನು ರಘೂಜಿಗೆ ಕೊಟ್ಟನು. ಈ ಮೇರೆಗೆ ಇಬ್ಬರೂ ಸ್ನೇಹ ಮಾಡಿಕೊಂಡು ಉತ್ತರಹಿಂದುಸ್ಥಾನದ ಕಪ್ಪನ್ನು ತೆಗೆದುಕೊಳ್ಳುವದಕ್ಕಾಗಿ ಎರಡು ಭಾಗಮಾಡಿ ಪ್ರತಿಯೊಬ್ಬರು ಒಂದೊಂದು ಭಾಗವನ್ನು ತೆಗೆದುಕೊಂಡರು. ಈ ಒಪ್ಪಂದದಿಂದ ರಘೂಜಿಗೆ ಲಖನೌ, ಪಾಟಣಾ, ಬಿಹಾರ, ದಕ್ಷಿಣ ಬಂಗಾಲ, ವರ್ಹಾಡದಿಂದ ಕರ್ನಾಟಕದವರೆಗಿನ ಸೀಮೆ ಇವುಗಳ ಮೇಲಿನ ವರ್ಚಸ್ವವು ಪ್ರಾಪ್ತವಾಯಿತು. ಅನಂತರದಲ್ಲಿ ರಘೂಜಿಯು ದಿವಾಣನಾದ ಭಾಸ್ಕರಪಂತನು ಬಂಗಾಲದ ಮೇಲೆ ದಾಳೀಮಾಡಿದನು. ಆಗ ಅಲೀವರ್ದೀಖಾನನು ಒಪ್ಪಂದದ ನಿಮಿತ್ತವನ್ನು ಮುಂದೆ ಮಾಡಿ ಭಾಸ್ಕರಪಂತನನ್ನು ಕರೆಯಿಸಿಕೊಂಡು, ಅವನನ್ನೂ ಅವನ ಸಂಗಡ ಇದ್ದ ಇಪ್ಪತ್ತು ಜನರನ್ನೂ ವಿಶ್ವಾಸಘಾತದಿಂದ ಕೊಂದನು. ಮುಂದೆ ರಘೂಜಿಯು ಓರಿಸಾಪ್ರಾಂತದ ಮೇಲೆ ದಾಳೀಮಾಡಿದನು; ಆದರೆ ಗೊಂಡವಣ ಪ್ರಾಂತದಲ್ಲಿ ವಲೀ ಶಹಾ ಹಾಗು ನೀಲಕಂಠ ಶಹಾ ಇವರು ಬಂಡಾಯ ಮಾಡಲು ಅವನು ತಿರುಗಬೇಕಾದ್ದರಿಂದ ದೇವಗಡ-ಚಾಂದಾ ಪ್ರಾಂತಗಳನ್ನು ತೆಗೆದುಕೊಂಡು ತನ್ನ ರಾಜ್ಯಕ್ಕೆ ಜೋಡಿಸಿದನು.

ಸನ್ ೧೭೪೯ರಲ್ಲಿ ಹೈದರಾಬಾದದ ಸುಭೇದಾರನಾದ ನಾಸಿರಜಂಗನು ರಘೂಜಿ ಭೋಸಲೆಗೆ ತನ್ನ ಸಹಾಯಕ್ಕೆ ದಂಡು ತೆಗೆದುಕೊಂಡು ಬರಬೇಕೆಂದು ತಿಳಿಸಿದನು. ಈ ಕೆಲಸಕ್ಕಾಗಿ ಕೆಲವು ಸೀಮೆಯನ್ನು ಕೊಡಲಿಕ್ಕೆ ಒಪ್ಪಿದನು. ರಘೂಜಿಯು ಈ ಕಾರ್ಯವನ್ನು ತನ್ನ ಮಗನಾದ ಜಾನೋಜಿಯ ಮೇಲೆ ಹೊರಿಸಿ, ಅವನಿಗೆ ಹತ್ತು ಸಾವಿರ ಸೈನ್ಯವನ್ನು ಕೊಟ್ಟು, ಕರ್ನಾಟಕದೊಳಗಿನ ನಾಸಿರಜಂಗನ ಸಹಾಯಕ್ಕಾಗಿ ಕಳುಹಿಸಿದನು. ಇಷ್ಟರಲ್ಲಿ ಶಾಹುರಾಜನು ಮರಣೋನ್ಮುಖ ಅವಸ್ಥೆಗೀಡಾದುದರಿಂದ ಅವನು ಪೇಶವೆ, ಯಶವಂತರಾವ ದಾಭಾಡೆ, ರಘೂಜಿ ಭೋಸಲೆ ಮೊದಲಾದ ಎಲ್ಲ ಪಕ್ಷಗಳ ಸರದಾರರನ್ನು ಕರೆಯಿಸಿಕೊಂಡನು. ಭಟ ವಂಶಕ್ಕೆ ನಡೆದು ಬಂದಿದ್ದ ಪೇಶವಾಯಿಯು ತನಗೆ ದೊರೆಯುವದಕ್ಕೆ ಇದೊಂದು ಒಳ್ಳೇ ಸಂಧಿಯಿರುವದೆಂದು ಅವನು ತಿಳಿದನು; ಆದರೆ ಅವನ ಕಡೆಗೆ ಸೈನ್ಯವು ಸ್ವಲ್ಪವಿದ್ದುದರಿಂದಲೂ, ನಾನಾಸಾಹೇಬ ಪೇಶವೆಯು ಧೂರ್ತತನದಿಂದ ಅವನಿಗೆ ಸಖ್ಯತೆ ತೋರಿಸಿದ್ದರಿಂದಲೂ ಆ ಪ್ರಸಂಗವು ತಪ್ಪಿ ಹೋಯಿತು. ಶಾಹೂರಾಜನು ನಾನಾಸಾಹೇಬ ಪೇಶವೆಗೆ ಪೇಶವಾಯಿಯ ನಿರಂತರ ಸನದು ಬರೆಕೊಟ್ಟನು, ಆದರೆ ರಘೂಜಿಯು ಈ ಕೆಲಸಕ್ಕೆ ಅಡ್ಡಿ ಮಾಡಲಿಲ್ಲ. ರಾಮರಾಜನು ಗೋಂದಲಿಗನ ಮಗನಾಗಿದ್ದು, ಸುಳ್ಳು ಔರಸತನದಿಂದ ಅವನು ಸಾತಾರೆಯ ಸಿಂಹಾಸನದ ಮೇಲೆ ಕುಳಿತುಕೊಳ್ಳತಕ್ಕವನಿರುವನೆಂಬ ಗುಪ್ತ ವಾರ್ತೆಯು ಆ ವೇಳೆಯಲ್ಲಿ ಪಸರಿಸಿದ್ದರಿಂದ ರಘೂಜಿಯ ಮನಸ್ಸು ಬೇರೆಯಾಯಿತು; ಆದರೆ ತಾರಾಬಾಯಿಯು ತನ್ನ ಜ್ಞಾತಿಬಂಧುಗಳೆದುರಿಗೆ ರಾಮರಾಜನನ್ನು ತನ್ನ ತಾಟಿನಲ್ಲಿ ಊಟಕ್ಕೆ ಕುಳ್ಳಿರಿಸಿಕೊಂಡು, 'ಆನ್ನದ ಆಣೆಯಾಗಿ ರಾಮರಾಜನು ನನ್ನ ಮೊಮ್ಮಗನಿರುವನು' ಎಂದು ಹೇಳಿದ್ದರಿಂದ, ಅವನ ಮನಸ್ಸು ಸಮಾಧಾನಗೊಂಡಿತು. ತರುವಾಯ ರಘೂಜಿಯು ಇತರ ಸರದಾರರೊಡನೆ ಪೇಶವೆಯ ಹಿಂದಿನಿಂದ ಪುಣೆಗೆ ಹೋದನು. ಪೇಶವೆಯು ಎಲ್ಲ ಸರದಾರರ ಸಮ್ಮತಿಯಿಂದ ಪುಣೆಯನ್ನು ಮರಾಟ ರಾಜ್ಯದ ರಾಜಧಾನಿಯನ್ನಾಗಿ ಮಾಡಿದನು. ರಘೂಜಿಯು ಗೊಂಡವನ, ವಱ್ಹಾಡ, ಬಂಗಾಲ ಪ್ರಾಂತಗಳ ಹೊಸ ಸನದನ್ನು ಶಾಹೂರಾಜನಿಂದ ಮಾಡಿಸಿಕೊಂಡಿದ್ದನು. ಅದರ ಬಲದಿಂದ ಆ ಪ್ರಾಂತಗಳ ಮೇಲೆ ಅವನು ತನ್ನ ವರ್ಚಸ್ಸನ್ನು ಪ್ರಸ್ಥಾಪಿಸಿದ್ದಲ್ಲದೆ, ನಿಜಾಮನಿಗಾದರೂ ಚನ್ನಾಗಿ ಉಪದ್ರವಕೊಡತೊಡಗಿದನು. ಜಾನೋಜಿಯು ನಾಸಿರಜಂಗನ ಕಡೆಯಿಂದ ತಿರುಗಿ ಬಂದ ಮೇಲೆ ರಘೂಜಿಯು ಅವನನ್ನು ಕಟಕ ಪ್ರಾಂತಕ್ಕೆ ಕಳುಹಿಸಿದನು. ಜಾನೋಜಿಯು ಅಲೀವರ್ದೀಖಾನನಿಗೆ ಗಂಟು ಬಿದ್ದು ತನ್ನ ಹಸ್ತಕನಾದ ಮೀರ ಹಬೀಬನ ಹೆಸರಿನಿಂದ ಬಾಲಾಸೋರದ ವರೆಗಿನ ಎಲ್ಲ ಪ್ರದೇಶದ ಜಹಾಗೀರಿಯ ಸನದನ್ನು ಕೊಡಿಸಿದನು. ಬಂಗಾಲ-ಬಿಹಾರ ಪ್ರಾಂತಗಳ ಚೌಥದ ಸಲುವಾಗಿ ತನಗೆ ಹನ್ನೆರಡು ಲಕ್ಷ ರೂಪಾಯಿಗಳ ಕಪ್ಪಕೊಡಬೇಕೆಂದು ಕಟ್ಟಳೆ ಮಾಡಿಕೊಂಡನು. ಮುಂದೆ ಬೇಗನೆ ಪೇಶವೆ-ನಿಜಾಮರಲ್ಲಿ ಯುದ್ಧವು ಪ್ರಾರಂಭವಾದದ್ದರಿಂದ ಭೋಸಲೆಯು ಗಾವಿಲಗಡ, ನರನಾಳಾ, ಮಾಣಿಕದುರ್ಗ

ಮೊದಲಾದ ಠಾಣ್ಯಗಳನ್ನೂ ಇತರ ಕೆಲ ಪ್ರದೇಶಗಳನ್ನೂ ಕೈವಶ ಪಡಿಸಿಕೊಂಡನು. ನಿಜಾಮನು ಪುಣೆಯ ಮೇಲೆ ಸಾಗಿ ಹೋದ ಕೂಡಲೆ, ಭೋಸಲೆಯು ಗೋದಾವರಿ-ಪೈನಗಂಗೆಗಳ ನಡುವಿನ ಪ್ರದೇಶವನ್ನು ಉಧ್ವಸ್ತಗೊಳಿಸಿ ಮೊಗಲರ ಠಾಣ್ಯಗಳನ್ನು ವಶಪಡಿಸಿಕ್ಕೊಂಡು ಅಲ್ಲಿ ತನ್ನ ವರ್ಚಸ್ಸವನ್ನು ನೆಲೆಗೊಳಿಸಿದನು.

೧೭೫೫ರಲ್ಲಿ ರಘೂಜಿಯು ಮರಣಹೊಂದಿದನು. ಅವನಿಗೆ ನಾಲ್ಕುಮಂದಿ ಮಕ್ಕಳಿದ್ದರು. ಹಿರಿಯರಾದ ಜಾನೋಜಿ, ಸಾಬಾಜಿ ಇವರು ಚಿಕ್ಕಹೆಂಡತಿಯ ಮಕ್ಕಳಾಗಿದ್ದರು; ಚಿಕ್ಕವರಾದ ಮುಧಾಜಿ, ನಿಂಬಾಜಿ ಇವರು ಹಿರಿಯ ಹೆಂಡತಿಯ ಮಕ್ಕಳು. ತನ್ನ ಹಿಂದೆ ಜಾನೋಜಿಯು ಭೋಸಲೆಯ ಸಿಂಹಾಸನವನ್ನೇರಬೇಕೆಂದು ರಘೂಜಿಯ ಇಚ್ಛೆಯಿತ್ತು. ಅವನು ಮರಣಹೊಂದಿದ ಬಳಿಕ ಸಿಂಹಾಸನದ ವಿಷಯವಾಗಿ ಜಾನೋಜಿ-ಮುಧೋಜಿಯರಲ್ಲಿ ಕಲಹವು ಪ್ರಾರಂಭವಾಯಿತು. ಜಾನೋಜಿಯು ಪುಣೆಗೆ ಹೋಗಿ ತನ್ನ ತಂದೆಯಂತೆ ಕಟ್ಟಳೆ ಬರೆದುಕೊಟ್ಟು 'ಸೇನಾಸಾಹೇಬ ಸುಭೆ' ಎಂಬ ಪದವಿಯನ್ನು ದೊರಕಿಸಿದನು; ಆದರೆ ವರ್ಹಾಡಕ್ಕೆ ತಿರುಗಿ ಹೋಗುವಾಗ ಅವನು ಮೊಗಲರ ಸೀಮೆಯೊಡನೆ ಪೇಶವೆಯವರ ಸೀಮೆಯನ್ನಾದರೂ ಸುಲಿದನು! ಅರ್ಥಾತ್ ಜಾನೋಜಿ-ಪೇಶವೆಯವರಲ್ಲಿ ವೈಮನಸ್ಸು ಹುಟ್ಟಿತು. ಮುಂದೆ ಜಾನೋಜಿಯು ನಿಜಾಮಶಾಹಿಯೊಡನೆ ಕಾಳಗ ಹೂಡಿ ಪರಾಭವಹೊಂದಿದನು. ಪಾಣೀಪತ್ತದ ಯುದ್ಧದಲ್ಲಿ ಜಾನೋಜಿಯು ಇದ್ದಿಲ್ಲ. ಪಾಣಿಪತ್ತದ ತೊಂದರೆಯ ಪ್ರಸಂಗದ ವರ್ತಮಾನವು ದಕ್ಷಿಣಕ್ಕೆ ಬಂದ ಮೇಲೆ ನಾನಾಸಾಹೇಬ ಪೇಶವೆಯು ದಂಡು ತೆಗೆದುಕೊಂಡು ಉತ್ತರ ಹಿಂದುಸ್ಥಾನದ ಕಡೆಗೆ ಹೊರಟನು. ಆಗ ಜಾನೋಜಿಯು ಹತ್ತುಸಾವಿರ ಸೈನ್ಯತೆಗೆದುಕೊಂಡು ಪೇಶವೆಯನ್ನು ಕೂಡಿದನು; ಆದರೆ ನರ್ಮದೆಯ ತೀರಕ್ಕೆ ಮುಟ್ಟಿದೊಡನೆಯೆ ಪಾಣಿಪತ್ತದ ಎಲ್ಲ ಸಂಗತಿಯು ತಿಳಿದದ್ದರಿಂದ, ಪೇಶವೆಯು ತಿರುಗಿ ಪುಣೆಗೆ ಬಂದನು. ದೊಡ್ಡ ಮಾಧವರಾಯನ ಆಳಿಕೆಯಲ್ಲಿ ಜಾನೋಜಿಯು ರಘುನಾಥರಾಯನ ಪಕ್ಷವನ್ನು ಸ್ವೀಕರಿಸಿ ಪುಣೆಯ ಮೇಲೆ ದಂಡೆತ್ತಿ ಬರತೊಡಗಿದನು ಆಗ ಮಾಧವರಾಯನು ತನ್ನ ಕಕ್ಕನಿಗೆ ಅಧೀನನಾಗಿ ಆ ವೇಳೆಯ ಮಟ್ಟಿಗೆ ಜಗಳವನ್ನು ಶಾಂತಪಡಿಸಿದನು ೧೭೬೬ರಲ್ಲಿ ಪೇಶವೆ, ನಾಗಪುರದ ಭೋಸಲೆ ಇವರಲ್ಲಿ ಬಹಳೇ ವಿತುಷ್ಟತೆಯು ಬೆಳೆಯಿತು. ಆಗ ಮಾಧವರಾಯನು ಜಾನೋಜಿಯ ವಿರುದ್ಧವಾಗಿ ನಿಜಾಮನೊಡನೆ ಒಡಂಬಡಿಕೆ ಮಾಡಿಕೊಂಡನು. ತರುವಾಯ ಪೇಶವೆಯ ಹಾಗು ನಿಜಾಮ ಅಲ್ಲಿಯ ಸಂಯುಕ್ತ ಸೈನ್ಯಗಳು ವರ್ಹಾಡದ ಮೇಲೆ ಸಾಗಿದವು. ಆಗ ಭೋಸಲೆ ಜಾನೋಜಿಯು ನಿರುಪಾಯನಾಗಿ ಅವರೊಡನೆ ಒಡಂಬಡಿಕೆ ಮಾಡಿಕೊಂಡನು. ಈ ಒಪ್ಪಂದದಿಂದ ಜಾನೋಜಿಯ ಕೆಲವು ಪ್ರಾಂತಗಳು ಕೈಬಿಟ್ಟು ಹೋದವು. ಭೋಸಲೆಯಿಂದ ತೆಗೆದುಕೊಂಡ ಪ್ರದೇಶದಲ್ಲಿ ೧೫ ಲಕ್ಷದ ಪ್ರದೇಶವನ್ನು ಪೇಶವೆಯು ನಿಜಾಮನಿಗೆ ಕೊಟ್ಟನು. ಈ ದಾಳಿಯಲ್ಲಿ ಭೋಸಲೆಯ ೨೫ ಲಕ್ಷ ರೂಪಾಯಿ ಉತ್ಪನ್ನದ ಸೀಮೆಯು ಒಮ್ಮೆಲೆ ಕಡಿಮೆಯಾಯಿತು.

ಜಾನೋಜಿ ಮಾಧವರಾಯರ ವೈರವು ಅಮರಣವಾಗಿ ಸ್ಥಿರವಾಯಿತು. ೧೭೬೮ರಲ್ಲಿ ರಾಘೋಬನು ಮತ್ತೆ ತಲೆಯೆತ್ತಿದನು. ಜಾನೋಜಿಯು ಪ್ರಕಟವಾಗಿ ರಾಘೋಬನ ಪಕ್ಷವನ್ನು ಸ್ವೀಕರಿಸಿದನು. ಈ ಕೃತ್ಯದಿಂದ ಮಾಧವರಾಯನು ತನ್ನ ಮೇಲೆ ಸಾಗಿ ಬಂದಾನೆಂಬ ಭಯದಿಂದ ಜಾನೋಜಿಯು ಕಲಕತ್ತೆಯಲ್ಲಿದ್ದ ಇಂಗ್ಲಿಷರ ಸಹಾಯವನ್ನು ದೊರಕಿಸುವ ಪ್ರಯತ್ನ ನಡೆಯಿಸಿದನು. ತರುವಾಯ ಪೇಶವೆ-ನಿಜಾಮರಿಬ್ಬರೂ ನಾಗಪುರದ ಮೇಲೆ ದಾಳೀ ಮಾಡಿದರು. ಅವರು ವರ್ಹಾಡವನ್ನು ಸೇರಿದ ಕೂಡಲೆ ಜಾನೋಜಿ-ಮುಧೋಜಿಯರು ತಮ್ಮ ಪರಿವಾರವನ್ನು ಗಾವಿಲಗಡದಲ್ಲಿಟ್ಟು ಕ್ಷೇತ್ರಯುದ್ಧದಿಂದ ಪೇಶವೆ-ನಿಜಾಮರೊಡನೆ ಯುದ್ಧ ಮಾಡುವ ಯೋಚನೆ ಮಾಡಿದರು. ಮಾಧವರಾಯನು ನಾಗಪುರವನ್ನು ತೆಗೆದುಕೊಂಡು ಸುಲಿದು, ಚಂದ್ರಪುರಕ್ಕೆ ಮುತ್ತಿಗೆ ಹಾಕಿದನು. ಆಗ ಜಾನೋಜಿಯು ಪೇಶವೆಯ ರಾಜ್ಯದಲ್ಲಿ ದಾಳೀ ಮಾಡಬೇಕೆಂದು ನಿಶ್ಚಯಿಸಿದನು. ಅವನು ಅಹಮ್ಮದನಗರದ ಮೇಲಿಂದ ಪುಣೆಗೆ ಸಾಗಿದನು. ಭೋಸಲೆಯು ರಾಜಧಾನಿಗೆ ಬರುವನೆಂಬ ಸುದ್ದಿಯು ಗೊತ್ತಾದ ಕೂಡಲೆ ಪುಣೆಯ ನಾಗರಿಕರು ತಮ್ಮ ಆಸ್ತಿ-ಪಾಸ್ತಿಗಳನ್ನು ತೆಗೆದುಕೊಂಡು ಗ್ರಾಮತ್ಯಾಗ ಮಾಡಿದರು. ಜಾನೋಜಿಯು ಪುಣೆಯ ಆಸಮಂತಾತ್ ಪ್ರದೇಶದಲ್ಲಿ ಒಳಿತಾಗಿ ಸುಲಿಗೆ ಮಾಡಿದನು ಈ ಸಂಗತಿಯು ಪೇಶವೆಗೆ ಗೊತ್ತಾದ ಕೂಡಲೆ ಅವನು ಚಂದ್ರಪುರದ ಮುತ್ತಿಗೆಯನ್ನೆಬ್ಬಿಸಿ ಪುಣೆಯ ಕಡೆಗೆ ಹೊರಟನು. ಈ ರೀತಿಯಾಗಿ ಭೋಸಲೆ-ಪೇಶವೆಯರು ಪರಸ್ಪರರ ರಾಜಧಾನಿಯನ್ನು ಮುತ್ತಿ ಸುಲಿದು ಬಹಳೇ ಹಾಳು ಮಾಡಿದರು; ಆದರೆ ಪರಸ್ಪರರು ಕೈಗೊಟ್ಟು ಯುದ್ಧಮಾಡಲಿಲ್ಲವಾದ್ದರಿಂದ, ವಿಜಯವು ಯಾರಿಗೂ ದೊರೆಯಲಿಲ್ಲ. ಕಡೆಗೆ ಇಬ್ಬರೂ ಬೇಸತ್ತು ಒಪ್ಪಂದಕ್ಕೆ ಸಿದ್ಧರಾದರು. ೧೭೬೯ರಲ್ಲಿ ಭೀಮಾತೀರದ ಕನಕಾಪುರದಲ್ಲಿ ಪೇಶವೆಗೆ ಅನುಕೂಲವಾದಂಥ ಒಪ್ಪಂದವಾಯಿತು. ಪೇಶವೆಯವರ ಪ್ರಾಂತದಲ್ಲಿ ಭೋಸಲೆಯು ಕಾಳು-ಕಡಿಗಳನ್ನೆತ್ತಬಾರದು, ನಿಜಾಮನ ಪ್ರಾಂತದಲ್ಲಿಯ ಕಾಳು-ಕಡಿಯ ಎತ್ತುವಿಕೆಯ ಬಗ್ಗೆ ನಿಯಮಿತ ಹಣವನ್ನು ಗೊತ್ತುಮಾಡಿಕೊಳ್ಳತಕ್ಕದ್ದು. ಪೇಶವೆಯ ಆಜ್ಞೆಯಿಲ್ಲದೆ ಭೋಸಲೆಯು ತನ್ನ ಸೈನ್ಯವನ್ನು ಬೆಳೆಯಿಸಬಾರದು; ಕಡಿಮೆ ಮಾಡಬಾರದು. ನಿಶ್ಚಿತ ಸೈನ್ಯದೊಡನೆ ಪೇಶವೆಯು ಹೇಳಿದಾಗ ಭೋಸಲೆಯು ಬರತಕ್ಕದು ದಿಲ್ಲಿಯ ಬಾದಶಹ, ನಿಜಾಮ, ಇಂಗ್ಲಿಷರು, ರೋಹಿಲರು, ಅಯೋಧ್ಯೆಯನವಾಬ ಇವರಲ್ಲಿ ಯಾರೊಡನೆಯೂ ರಾಜಕೀಯ ಪತ್ರವ್ಯವಹಾರ ಮಾಡಬಾರದು. ಪೇಶವೆಗೆ ಐದು ಕಂತದಿಂದ ಐದು ಲಕ್ಷ ರೂಪಾಯಿಗಳನ್ನು ಕೊಡಬೇಕು, ಪೇಶವೆಯ ಪಡೆಯು ಉತ್ತರ ಹಿಂದುಸ್ತಾನದ ಮೇಲೆ ದಾಳಿ ಮಾಡುವಾಗ ಭೋಸಲೆಯ ಪ್ರಾಂತದಲ್ಲಿ ಉಪದ್ರವ ಮಾಡಬಾರದು, ದರಬಾರದ ಕೆಲಸವಿಲ್ಲದಾಗ ಭೋಸಲೆಯ ಸೈನ್ಯವು ಬಂಗಾಲದಲ್ಲಿಯ ಇಂಗ್ಲಿಷರ ಮೇಲೆ ದಾಳಿ ಮಾಡಲಿಕ್ಕೆ ಒಪ್ಪಿಗೆಯಿರಬೇಕು. ಈ ರೀತಿಯಾಗಿ ಪೇಶವೆಯು ಅರ್ಧ ಧನಿಯೆಂಬ, ಅರ್ಧ ಸ್ನೇಹಿತನೆಂಬ ಪ್ರಕಾರವನ್ನನು

ಲಕ್ಷಿಸಿ ಒಪ್ಪಂದವನ್ನು ಪೂರೈಸಿದನು.

ಮಾಧವರಾಯನ ಮರಣಾನಂತರದಲ್ಲಿ ಪುಣೆಯಂತೆ ನಾಗಪುರದಲ್ಲಿಯೂ ಗೃಹಕಲಹವು ಪ್ರಾರಂಭವಾಯಿತು. ಮಾಧವರಾಯನ ಮರಣದ ಪೂರ್ವದಲ್ಲಿ ಜಾನೋಜಿಯು ಪೇಶವೆಯ ಒಪ್ಪಿಗೆಯಿಂದ ತನ್ನ ತಮ್ಮ ಮುಧಾಜಿಯ ಮಗನಾದ ರಘೂಜಿಯನ್ನು ದತ್ತಕ ತೆಗೆದುಕೊಂಡು ಮುಧಾಜಿಯನ್ನು ಅವನ ಪಾಲನಕರ್ತನನ್ನಾಗಿ ನಿಯಮಿಸಿದ್ದನು ೧೭೭೩ರಲ್ಲಿ ಜಾನೋಜಿಯು ಮರಣಹೊಂದಿದ ಮೇಲೆ ಹುಡುಗನ ಸಂರಕ್ಷಣೆಯನ್ನು ಯಾರು ಮಾಡಬೇಕು, ರೀಜನ್ಸಿಯ ಅಧಿಕಾರವನ್ನು ಯಾರು ನಡೆಯಿಸಬೇಕು? ಮೊದಲಾದ ವಿಷಯವಾಗಿ ಜಗಳವು ಪ್ರಾರಂಭವಾಯಿತು. ಈ ವ್ಯಾಜ್ಯವನ್ನು ಬಗೆಹರಿಸಿಕೊಳ್ಳುವದಕ್ಕಾಗಿ ಅವರು ಪುಣೆಗೆ ಬಂದರು. ಅವರಲ್ಲಿ ಮುಧಾಜಿಯು ರಘುನಾಥರಾಯನ ಪಕ್ಷದವನಾಗಿದ್ದು, ಸಾಬಾಜಿಯು ನಾರಾಯಣ ರಾಯನ ಪಕ್ಷವನ್ನು ವಹಿಸಿದ್ದನು, ಆದರೆ ಪುಣೆಯಲ್ಲಿ ಯಾರ ಮನಸ್ಸಿನಂತೆಯೂ ಕಾರ್ಯವಾಗಲಿಲ್ಲ. ಆಗ ಭೋಸಲೆಯವರಲ್ಲಿ ಯುದ್ಧವು ಪ್ರಾರಂಭವಾಯಿತು. ಈ ಯುದ್ಧದಲ್ಲಿ ಪೇಶವೆ, ನಿಜಾಮ, ಎಲಿಚಪುರದ ನವಾಬ ಮೊದಲಾದವರು ಕೂಡಿದ್ದರು. ಮುಂದ ಬೇಗನೆ ನಾರಾಯಣರಾಯನ ಕೊಲೆಯಾಯಿತು. ಈ ಪ್ರಕರಣದಲ್ಲಿ ಭೋಸಲೆಯ ಸಂಬಂಧವು ಅಂತಸ್ಥವಾಗಿ ಇತ್ತೆಂದು ಹೇಳುತ್ತಾರೆ! ರಾಘೋಬನ ಜಗಳದಲ್ಲಿ ಸಾಬಾಜಿಯು ದಂಡು ತೆಗೆದುಕೊಂಡು ನಾನಾಫಡಣವೀಸನ ಪಕ್ಷಕ್ಕೆ ಸಹಾಯ ಮಾಡಿದನು. ಸವಾಯಿಮಾಧವರಾಯನಿಗೆ ಸಾತಾರೆಯಿಂದ ಪೇಶವೆ ವಸ್ತ್ರಗಳು ಬಂದ ಕೂಡಲೆ ನಾನಾಫಡಣವೀಸನು ಸಣ್ಣ ರಘೂಜಿಯ 'ಸೇನಾಸಾಹೇಬ ಸುಭ' ಈ ಪದವಿಯನ್ನು ಕಿತ್ತುಕೊಂಡು ಸಾಬಾಜಿಗೆ ಕೊಟ್ಟನು. ಮುಂದೆ ಮುಧಾಜಿಯು ಸಾಬಾಜಿಯೊಡನೆ ಯುದ್ಧವನ್ನು ಆರಂಭಿಸಿ ಅವನಿಗೆ ತನ್ನ ಕೈಯಿಂದ ಗುಂಡು ಹಾಕಿ ಕೊಂದನು. ಅನಂತರದಲ್ಲಿ ಸಣ್ಣ ರಘೂಜಿಯು ಪಾಲನಕರ್ತನೆಂಬ ಅಧಿಕಾರವನ್ನು ಪಡೆದನು; ಆದರೆ ಮುಧಾಜಿಯನ್ನು ನಿಜಾಮನು ಸ್ವಸ್ಥವಾಗಿ ಕೂಡ್ರಗೊಡಲಿಲ್ಲ. ಅವನು ಇಬ್ರಾಹಿಮಬೇಗನನ್ನು ಮುಧಾಜಿಯ ಮೇಲೆ ಕಳುಹಿಸಿದನು. ಆಗ ಮುಧಾಜಿಯು ಶರಣು ಹೋಗಿ ಅನೇಕ ಕೋಟೆ-ಕೊತ್ತಳಗಳನ್ನು ಕೊಟ್ಟು, ಗೋಂಡವಣದ ಬಿಗಿಕಾಯುವದಕ್ಕೆ ಒಪ್ಪಿ, ನಿಜಾಮನೊಡನೆ ಒಡಂಬಡಿಕೆ ಮಾಡಿಕೊಂಡನು. ತರುವಾಯ ಪುಣೆಯ ದರಬಾರದವರಿಗೆ ಹತ್ತು ಲಕ್ಷರೂಪಾಯಿಗಳ ಕಾಗದ ಬರೆದು ಕೊಟ್ಟು ತನ್ನ ಅಧಿಕಾರವನ್ನು ಸ್ಥಿರಪಡಿಸಿಕೊಂಡನು. ಕಲಕತ್ತೆಯ ಇಂಗ್ಲಿಷರ ದರಬಾರದಲ್ಲಾದರೂ ಪ್ರತಿನಿಧಿಯನ್ನಿರಿಸಿದನು.

ಮುಂದೆ ಮರಾಟರ ಹಾಗು ಇಂಗ್ಲಿಷರ ನಡುವೆ ಯುದ್ಧವು ಪ್ರಾರಂಭವಾಯಿತು. ಆಗ ಇಂಗ್ಲಿಷರು ಮುಧಾಜಿಯನ್ನು ತಮ್ಮ ಕಡೆಗೆ ತಿರುಗಿಸಿಕೊಳ್ಳುವ ಪ್ರಯತ್ನ ನಡೆಯಿಸಿದರು. ಮೊದಲು ನಿಜಾಮನ ದಿವಾಣನಾದ ವಿಠ್ಠಲಸುಂದರನು ಮುಧಾಜಿಗೆ ಮರಾಟಶಾಹಿಯ ರಾಜನನ್ನು ಮಾಡುವ ಆಶೆಹಚ್ಚಿ ತನ್ನ ಪಕ್ಷದ ಕಡೆಗೆ ತೆಗೆದು

ಕೊಳ್ಳಲಿಕ್ಕೆ ಯಾವ ವಿಧವಾಗಿ ಪ್ರಯತ್ನಿಸಿದನೋ, ಹಾಗೆಯೇ ಹೇಸ್ಟಿಂಗ್ಸನಾದರೂ ಈಗ ಮಾಡಿದನು. ವಾಸ್ತವವಾಗಿ ನಾಗಪುರದ ಭೋಸಲೆಯ ಅಧಿಕಾರವು ಸಾತಾರೆಯ ಸಿಂಹಾಸನದ ಮೇಲೆ ಯಾವ ಪ್ರಕಾರವಾಗಿಯೂ ಇಲ್ಲವೆಂದು ಮೊದಲೇ ನಿಶ್ಚಿತವಾಗಿತ್ತು; ಆದರೆ ಹೇಸ್ಟಿಂಗ್ಸನಿಗೆ ಪುಣೆಯ ದರಬಾರದ ವಿರುದ್ಧವಾಗಿ ಒಂದು ಗೊಂಬೆಯು ದೊರೆತಿರಲು, ಅದನ್ನು ಅವನು ಏಕೆ ಬಿಡುವನು? ಮುಧಾಜಿಗೆ ನಿಜವಾದ ಇಂಗಿತವು ಗೊತ್ತಿದ್ದುದರಿಂದ ಸಾತಾರೆಯ ಸಿಂಹಾಸನದ ಮೇಲೆ ಕುಳ್ಳಿರಿಸುವೆವೆಂಬ ವರವನ್ನು ಇಂಗ್ಲಿಷರಿಂದ ಪಡಕೊಳ್ಳದೆ, ಸಾತಾರೆಯಲ್ಲಿ ಸೆರೆಯಲ್ಲಿದ್ದ ಮಹಾರಾಜನ ಪ್ರತಿನಿಧಿತ್ವವನ್ನು ದೊರಕಿಸಿದ್ದೇ ಸಾಕೆಂದು ಅವರೊಡನೆ ಒಪ್ಪಂದ ಮಾಡಿಕೊಳ್ಳುವದಕ್ಕೆ ಕಾಲಾವಧಿ ಮಾಡತೊಡಗಿದನು ಪುರಂದರದ ಒಡಂಬಡಿಕೆಯಾದ ಮೇಲೆ ಇಂಗ್ಲಿಷರು ಮತ್ತೆ ಮರಾಟರ ಕಾಲುಕೆದರಿದರು. ಆಗ ಎಲ್ಲ ಮರಾಟರು ಅವರ ವಿರುದ್ಧವಾದರು. ಅವರೊಡನೆ ಮುಧೋಜಿಯೂ ಇಂಗ್ಲಿಷರಿಗೆ ವಿರುದ್ಧವಾಗಿ ನಿಲ್ಲಬೇಕಾಯಿತು. ಅವನು ಕಟಕ ಪ್ರಾಂತದಲ್ಲಿ ಇಂಗ್ಲಿಷರಿಗೆ ವಿರುದ್ಧವಾಗಿ ಸೈನ್ಯ ಕಳಿಸುವ ಸೋಗು ಮಾಡಬೇಕಾಯಿತು. ಆವನ ಮನಸ್ಸು ಮಾತ್ರ ಇಂಗ್ಲಿಷರ ಕಡೆಗೇ ಇತ್ತು. ಇಂಗ್ಲಿಷರು ಅವನಿಗೆ ಒಳಗಿಂದೊಳಗೆ ಹದಿನಾರು ಲಕ್ಷ ರೂಪಾಯಿಗಳನ್ನು ಕೊಟ್ಟರು ಮುಧಾಜಿಯು ಐವತ್ತು ಲಕ್ಷ ರೂಪಾಯಿಗಳನ್ನು ಬೇಡಿದನು. ಸ್ವಲ್ಪ ಹಣದ ಮೇಲೆ ಈ ಬೇಡಿಕೆಯನ್ನು ಬಗೆಹರಿಸಿ ಹೇಸ್ಟಿಂಗ್ಸನು ಅವನನ್ನು ತನ್ನ ಕಡೆಗೆ ಒಡೆಯಿಸಿಕೊಂಡನು. ಈ ವೇಳೆಯಲ್ಲಿ ಮುಧಾಜಿಯ ಕಡೆಗೆ ಮೂವತ್ತು ಸಾವಿರ ಸೈನ್ಯವಿದ್ದು, ಪುಣೆಯ ದರಬಾರದ ಧೋರಣದಿಂದ ಅವನಿಗೆ ಕಲಕತ್ತೆಯವರೆಗೆ ದಾಳೀಮಾಡಲಿಕ್ಕೆ ಬರುವಂತಿತ್ತು ನಾನಾಫಡಣವೀಸನಿಗೆ ಮುಧಾಜಿಯ ಈ ರಾಷ್ಟ್ರದ್ರೋಹವು ಗೊತ್ತಾದ ಕೂಡಲೆ ಅವನ ಮೇಲಿನ ಸೇಡನ್ನು ತೀರಿಸಿಕೊಳ್ಳಬೇಕೆಂಬ ನಿಶ್ಚಯವನ್ನು ಪ್ರಕಟಗೊಳಿಸಿದನು. ಮುಧಾಜಿಯು ಈ ಸುದ್ದಿಯನ್ನು ಕೇಳಿದ ಕೂಡಲೆ ತನ್ನ ಧೋರಣವನ್ನು ಬದಲು ಮಾಡಿ:-"ಹೈದರನ ವಿರುದ್ಧವಾಗಿ ಸಹಾಯ ಮಾಡಲಿಕ್ಕೆ ನಾನು ನಿಮ್ಮೊಡನೆ ಕಟ್ಟಳೆ ಮಾಡಿಕೊಂಡಿರುವೆನಲ್ಲದೆ ಮರಾಟರ ವಿರುದ್ಧವಲ್ಲ; ನಿಮ್ಮ ಹಾಗು ಮರಾಟರ ನಡುವೆ ಒಡಂಬಡಿಕೆಯಾದರೆ ನಾನು ಮಧ್ಯಸ್ಥಿಕೆಯನ್ನು ಮಾಡುವೆನು." ಎಂದು ಇಂಗ್ಲಿಷರೊಡನೆ ಮಾತು ನಡೆಯಿಸಿದನು; ಆದರೆ ಕೊನೆಗೆ ಸಾಲಬಾಯಿಯ ಒಪ್ಪಂದವು ಭೋಸಲೆಯ ಮಧ್ಯಸ್ಥಿಕೆಯಿಲ್ಲದೆ ಆಗಿಹೋಯಿತು. ತರುವಾಯ ನಾನಾನ ವರ್ಚಸ್ಸು ಹೆಚ್ಚಾಗತೊಡಗಿ, ಇಂಗ್ಲಿಷರಾದರೂ ಅವನ ನೆರವನ್ನು ಬಯಸತೊಡಗಿದರು. ಈ ಸ್ಥಿತಿಯನ್ನು ನೋಡಿ ಮುಧಾಜಿಯು ಪುಣೆಯ ದರಬಾರದೊಡನೆ ಸ್ನೇಹವನ್ನು ಬೆಳೆಯಿಸುವ ಹವ್ಯಾಸಕ್ಕೆ ಬಿದ್ದನು. ಟೀಪುವಿನ ಮೇಲಿನ ಯುದ್ಧದಲ್ಲಿ ಅವನು ದಂಡು ತೆಗೆದುಕೊಂಡು ಹರಿಪಂತ ಫಡಕೆಯ ಸಹಾಯಕ್ಕೆ ಹೋಗಿದ್ದನು; ಆದರೆ ಮರಾಟರು ಬಾದಾಮಿಯನ್ನು ತೆಗೆದುಕೊಂಡ ಮೇಲೆ ತನ್ನ ಮಗನ ಕೈಯಲ್ಲಿ ದಂಡು

ಕೊಟ್ಟು ಅವನು ನಾಗಪುರಕ್ಕೆ ಹೋದನು.

ಮುಧೋಜಿಯು ೧೭೮೮ರಲ್ಲಿ ಮರಣ ಹೊಂದಿದನು. ಮುಧೋಜಿಗೆ ರಘೂಜಿಯು ಹೊರತು ಖಂಡೋಜಿ ಹಾಗು ವೆಂಕೋಜಿ ಉರ್ಫ ಮನ್ಯಾಬಾಪು ಎಂಬ ಇಬ್ಬರು ಮಕ್ಕಳಿದ್ದರು. ಖಂಡೋಜಿಯು ಕಡೆಗೆ ಭೋಸಲೆಯ ಜಹಾಗೀರಿಯ ಉತ್ತರಭಾಗವೂ ವೆಂಕೋಜಿಯು ಕಡೆಗೆ ದಕ್ಷಿಣಭಾಗವೂ ಇದ್ದವು. ಟೀಪುವಿನ ಮೇಲೆ ದಂಡೆತ್ತಿ ಹೋಗುವಾಗ ಪೇಶವೆಯು ವೆಂಕಾಜಿಯನ್ನು ಸಹಾಯಕ್ಕಾಗಿ ಕರೆಯಿಸಿದನು. ಪೇಶವೆಯು ಸ್ವಂತ ಯುದ್ಧಕ್ಕೆ ಹೊರಬಾಗ ಅವನ ಕೈಕೆಳಗೆ ಸರದಾರನೆಂದು ಕೆಲಸ ಮಾಡುವೆನು; ಇತರರ ಕೈಯಲ್ಲಿ ಮಾಡುವವನಲ್ಲನೆಂದು ರಘೂಜಿಯು ಹೇಳಿದನು. ಕಡೆಗೆ ದಂಡಿನ ವೆಚ್ಚಕ್ಕಾಗಿ ಹತ್ತು ಲಕ್ಷ ರೂಪಾಯಿಗಳನ್ನು ಕೊಡಲೊಪ್ಪಿದ ಮೇಲೆ ಪೇಶವೆಯು ರಘೂಜಿಯನ್ನು ಸೇವಾನಿವೃತ್ತನನ್ನಾಗಿ ಮಾಡಿದನು. ಮುಂದೆ ಬೇಗನೆ ಖಂಡೋಜಿಯು ಮಡಿದನು. ಆಗ ರಘೂಜಿಯು ವೆಂಕಾಜಿಗೆ ಚಾಂದಾ, ಛತ್ತೀಸಗಡ ಪ್ರಾಂತಗಳನ್ನು ಜಹಾಗೀರಿಯಾಗಿ ಕೊಟ್ಟನು. ಮುಂದೆ ಎಂಟು ಹತ್ತು ವರ್ಷ ಪೇಶವೆ ಭೋಸಲೆಯವರ ಸಂಬಂಧವುಂಟಾಗಲಿಲ್ಲ. ಬಾಜೀರಾಯನನ್ನು ಪಟ್ಟಕ್ಕೆ ಕುಳ್ಳರಿಸುವ ಕಾರಸ್ಥಾನವು ನಡೆದಾಗ ಮತ್ತೆ ಸಂಬಂಧವುಂಟಾಯಿತು. ಈ ವೇಳೆಯಲ್ಲಿ ನಾನಾಫಡಣವಿಸನು ದೊಡ್ಡ ಕಾರಸ್ಥಾನವನ್ನು ರಚಿಸಿದನು. ಅವನು ರಘೂಜಿಗೆ ಹದಿನೈದು ಲಕ್ಷ ರೂಪಾಯಿಗಳನ್ನೂ, ಮಂಡಲೆ ಪ್ರಾಂತವನ್ನೂ, ಚೌರಿಯಾ ಗಡ ಕೋಟೆಯನ್ನೂ ಕೊಡಲೊಪ್ಪಿ ಅವನನ್ನು ತನ್ನ ಪಕ್ಷಕ್ಕೆ ತೆಗೆದುಕೊಂಡನು. ಇವೇ ವೇಳೆಯಲ್ಲಿ ರಘೂಜಿಯು ಸಂಧಿ ಸಾಧಿಸಿ ಪೇಶವೆಯವರ ಸೇವೆ ಮಾಡುವ ವಿಷಯದಲ್ಲಿ ಮತ್ತಿಷ್ಟು ಸೌಕರ್ಯವನ್ನುಂಟು ಮಾಡಿಕೊಂಡನು. ೧೮೦೧-೦೨ರಲ್ಲಿ ಶಿಂದೆ-ಹೋಳಕರರ ನಡುವೆ ವ್ಯಾಜ್ಯವುಂಟಾದಾಗ ರಘೂಜಿಯು ಶಿಂದೆಯ ಪಕ್ಷವನ್ನು ಸ್ವೀಕರಿಸಿ ಒಳ್ಳೇ ಸೂಕ್ಷ್ಮ ಪ್ರಸಂಗದಲ್ಲಿ ಅವನ ದಂಡನ್ನು ನರ್ಮದಾ ಪಾರುಮಾಡುವ ಕಾರ್ಯದಲ್ಲಿ ಬಹಳೇ ನಂಬಾದನು. ಮುಂದೆ ವಸಯಿಯ ಒಪ್ಪಂದವಾದ ಮೇಲೆ ಅದನ್ನು ಬೇಗನೆ ಮುರಿಯಬೇಕೆಂದು ಬಾಜೀರಾಯನು ಯೋಚನೆ ಮಾಡಿದನು. ಈ ಒಡಂಬಡಿಕೆಯ ಸುದ್ದಿಯನ್ನು ಅವನು ಶಿಂದೆ-ಭೋಸಲೆಯರಿಗೆ ತಿಳಿಸಿದ್ದಿಲ್ಲ. ಆದ್ದರಿಂದ ಈ ಸಂಗತಿಯನ್ನು ತಿಳಿಸುವದಕ್ಕಾಗಿ ನಾರಾಯಣರಾವ ವೈದ್ಯ ಎಂಬ ಗೃಹಸ್ಥನನ್ನು ಅವನು ರಘೂಜಿಯ ಕಡೆಗೆ ಕಳುಹಿಸಿದನು. ಪುಣೆಗೆ ದಂಡು ತೆಗೆದುಕೊಂಡು ಬಂದು ಹೋಳಕರನ ಪಾರಿಪತ್ಯ ಮಾಡುವ ವಿಷಯದಲ್ಲಿ ಬಾಜೀರಾಯನು ಅವನಿಗೆ ವಿನಂತಿ ಮಾಡಿಕೊಂಡನು. ದೌಲತರಾವ ಶಿಂದೆಯಂತೆ ರಘೂಜಿ ಭೋಸಲೆಗೂ ದಿಂದ ವಸಯಿಯ ಒಪ್ಪಂದವು ಅಮಾನ್ಯವಾಗಿತ್ತು. ಮುಂದೆ ಬೇಗನೆ ಶಿಂದೆಯ ಕಾರಭಾರಿಯಾದ ಯಾದವರಾವ ಭಾಸ್ಕರನು ಭೋಸಲೆಯ ಕಡೆಗೆ ಹೋದನು. ಅವರಿಬ್ಬರೂ ಕೂಡಿ ಒಪ್ಪಂದವನ್ನು ಮುರಿಯುವ ನಿಶ್ಚಯ ಮಾಡಿದರು. ಅಸಯಿಯ ಸಂಗ್ರಾಮದಲ್ಲಿ ಸ್ವಂತ ರಘೂ

ಜಿಯು ಸೈನ್ಯವನ್ನು ತೆಗೆದುಕೊಂಡು ಶಿಂದೆಯನ್ನು ಕೂಡಿದ್ದನು; ಆದರೆ ಯುದ್ಧವು ಪ್ರಾರಂಭವಾಗುತ್ತಲೆ ಅವನು ಹೊರಟು ಹೋದನು. ತಾ|| ೩ನೇ ಅಕ್ಟೋಬರ ೧೮೦೩ರಲ್ಲಿ ರಘೂಜಿಯು ಇಂಗ್ಲಿಷರ ಮೇಲೆ ತನ್ನ ಐದು ಸಾವಿರ ಕುದುರೆಯ ಸ್ವಾರರಿಂದ ದಾಳಿ ಮಾಡಿಸಿದನು; ಆದರೆ ಆ ದಾಳಿಯು ನಿಷ್ಫಲವಾಯಿತು. ರಘೂಜಿಯು ಯುದ್ಧದಲ್ಲಿ ಕೂಡಿದ್ದರಿಂದ ಇಂಗ್ಲಿಷರು ಬಂಗಾಲದಿಂದ ಕಟಕ ಪ್ರಾಂತದ ಮೇಲೆ ದಾಳಿ ಮಾಡಿದರು. ಆಗ ರಘೂಜಿಯು ತನ್ನ ದೇಶಕ್ಕೆ ಹೊರಟನು. ಡಿಸೆಂಬರದಲ್ಲಿ ಒಪ್ಪಂದದ ಮಾತುಗಳು ನಡೆದವು. ರಘೂಜಿಯು ಇಂಗ್ಲಿಷರಿಗೆ ಕಟಕ-ಬಾಲಾಸೋರ ಪರಗಣೆಗಳನ್ನೂ, ವರ್ಧಾ ನದಿಯ ಪಶ್ಚಿಮದ ಹಾಗು ನರನಾಳಾ ಗಾವಿಲಗಡಗಳ ದಕ್ಷಿಣ ಸೀಮೆಯನ್ನೂ ಕೊಡಬೇಕು; ಈ ಎರಡು ಕೋಟೆಗಳು ಹಾಗು ಅವುಗಳ ಬಳಿಯ ನಾಲ್ಕು ಲಕ್ಷ ರೂಪಾಯಿಗಳ ಸೀಮೆಯು ಅವನ ಕಡೆಗೆ ಇರಬೇಕು; ನಿಜಾಮನ ಮೇಲಿನ ಎಲ್ಲ ಪ್ರಕರಣಗಳನ್ನು ತಿರುಗಿ ತಕ್ಕೊಳ್ಳಬೇಕು; ನಿಜಾಮ ಪೇಶವೆಯವರೊಡನೆ ಇದ್ದ ಭೋಸಲೆಯ ವಿವಾದದಲ್ಲಿ ಇಂಗ್ಲಿಷರ ಮಧ್ಯಸ್ಥಿಕೆಯನ್ನು ಮಾನ್ಯ ಮಾಡಬೇಕು; ಪರಸ್ಪರರ ದರಬಾರದಲ್ಲಿ ವಕೀಲರನ್ನು ಇಡಬೇಕು; ಮೊದಲಾದ ಕಟ್ಟಳೆಗಳಾಗಿ ಒಪ್ಪಂದದ ಕೆಲಸವು ಪೂರೈಸಿತು. ಈ ಒಪ್ಪಂದಕ್ಕೆ ದೇವಗಾಂವದ ಒಪ್ಪಂದವೆನ್ನುವರು. ಕೊನೆಯ ಕಟ್ಟಳೆಯಂತೆ ಮೌಂಟ ಸ್ಟೂಅರ್ಟ ಎಲ್‌ಫಿನ್‌ಸ್ಟನ್ನನು ನಾಗಪುರದ ರೆಸಿಡೆಂಟನಾಗಿ ನಿಯಮಿಸಲ್ಪಟ್ಟನು. ಈ ಒಪ್ಪಂದಕ್ಕೆ ರಘೂಜಿಯ ಮನಃಪೂರ್ವಕವಾದ ಒಪ್ಪಿಗೆಯಿದ್ದಿಲ್ಲ; ಆದರೆ ಎಲ್ಲ ಕಡೆಯಿಂದ ಅವನು ನಿರ್ಬಲನಾದ ಮೂಲಕ ಏನೂ ನಡೆಯುವಂತಿದ್ದಿಲ್ಲ. ಭೋಸಲೆಯ ದಂಡು ಪ್ರತಿಯೊಂದು ವಿಷಯದಲ್ಲಿ ಶಿಂದೆ-ಹೋಳಕರರ ಸೈನ್ಯಕ್ಕಿಂತ ಕಡಿಮೆ ಪ್ರತಿಯದಿತ್ತು. ಆದ್ದರಿಂದ ೧೮೦೯ರಲ್ಲಿ ಅಮೀರಖಾನ ಪೆಂಡಾರಿಯ ಪುಂಡಾಟಿಕೆ ನಡೆದಾಗ ಅವನು ಇಂಗ್ಲಿಷರ ಸಹಾಯಬೇಡಬೇಕಾಯಿತು. ೧೮೧೪ರಲ್ಲಿ ಇಂಗ್ಲಿಷರು ರಘೂಜಿಯೊಡನೆ ಮತ್ತೊಂದು ಒಪ್ಪಂದ ಮಾಡಿಕೊಳ್ಳುವ ಮಾತು ನಡೆಯಿಸಿದರು. ತಮ್ಮ ಮೇಲೆ ಯಾರಾದರೂ ಬಂದರೆ ಭೋಸಲೆಯ ಸಹಾಯ ದೊರೆಯಬೇಕೆಂಬದೇ ಈ ಒಪ್ಪಂದದ ಮುಖ್ಯ ಉದ್ದೇಶವಾಗಿತ್ತು. ಆದರೆ ರಘೂಜಿಯು ಈ ಸೂಚನೆಯನ್ನು ಮನ್ನಿಸಲಿಲ್ಲ.

೧೮೧೬ನೆಯ ಇಸ್ವಿಯ ಮಾರ್ಚ ತಿಂಗಳಲ್ಲಿ ರಘೂಜಿಯು ಮರಣಹೊಂದಿದನು. ಇವನ ಮಗನಾದ ಪರಸೋಜಿಯು 'ಸೇನಾಸಾಹೇಬ ಸುಭೆ' ಆದನು; ಆದರೆ ಮುಧಾಜಿ ಉರ್ಫ ಅಪ್ಪಾಸಾಹೇಬ (ವೆಂಕಾಜಿಯ ಮಗ)ನು ರಾಜ್ಯಕಾರ್ಯವನ್ನು ಸಾಗಿಸತೊಡಗಿದನು. ಅಪ್ಪಾಸಾಹೇಬನು ೧೮೦೩ರಲ್ಲಿ ಆದ ಯುದ್ಧದಲ್ಲಿ ಸೇರಿದ್ದು ಅರಗಾಂವದ ಯುದ್ಧದಲ್ಲಿ ಮರಾಟರ ಸೈನ್ಯದ ಅಧಿಪತಿಯಾಗಿದ್ದನು. ಇವನು ಇಂಗ್ಲಿಷರ ಸ್ನೇಹಸಂಪಾದನೆ ಮಾಡಿಕೊಂಡು ತನ್ನ ಅಧಿಕಾರವನ್ನು ಸ್ಥಿರಗೊಳಿಸಿಕೊಳ್ಳಬೇಕೆಂಬ ಉದ್ದೇಶದಿಂದ ಅವರೊಡನೆ ಒಪ್ಪಂದದ ಪ್ರಸ್ತಾಪ ನಡೆಯಿಸಿ,

ಮೊದಲು ರಘೂಜಿಯು ಅಮಾನ್ಯಮಾಡಿದ ಕಟ್ಟಳೆಗಳನ್ನು ಮಾನ್ಯಮಾಡಿದನು. ಒಂದು ಸಾವಿರ ಕುದುರೆಯ ಸೈನ್ಯ, ಆರು ಸಾವಿರ ಕಾಲಾಳು ಇವುಗಳ ವೆಚ್ಚಕ್ಕಾಗಿ ಭೋಸಲೆಯು ಪ್ರತಿವರ್ಷ ಇಂಗ್ಲಿಷರಿಗೆ ೭॥ಲಕ್ಷ ರೂ. ಕೊಡತಕ್ಕದ್ದು. ಇಷ್ಟಲ್ಲದೆ ಅವರ ಮೂರುಸಾವಿರ ಕುದುರೆಯ ಸೈನಿಕರನ್ನೂ ಎರಡುಸಾವಿರ ಕಾಲಾಳುಗಳನ್ನೂ ಅವನು ತನ್ನ ಬಳಿಯಲ್ಲಿರಿಸಿಕೊಳ್ಳತಕ್ಕದ್ದು ಮೊದಲಾದ ಕಟ್ಟಳೆಗಳಾದವು. ಇಷ್ಟಾದರೂ ಪೇಶವೆಯ ನೆರವಿನಿಂದ ಇಂಗ್ಲಿಷರ ಕೋಡು ಮುರಿಯಬೇಕೆಂಬ ಆತುರತೆಯು ಭೋಸಲೆಯಲ್ಲಿ ಇದ್ದೇ ಇತ್ತು. ೧೮೧೭ರಲ್ಲಿ ಪರಸೋಜಿಯ ಕೊಲೆಯಾಯಿತು. ಈ ಕೊಲೆಯು ಅಪ್ಪಾಸಾಹೇಬನಿಂದಲೇ ಆಯಿತೆಂದು ಅಪವಾದವಿದೆ. ಮುಂದೆ ಇವನ ಹಾಗು ಬಾಜೀರಾಯನ ನಡುವೆ ಗುಪ್ತಪತ್ರವ್ಯವಹಾರವು ಬಹಳ ದಿನ ನಡೆದಿತ್ತು. ಬಾಜೀರಾಯನ ಹಾಗು ಇಂಗ್ಲಿಷರ ವೈಮನಸ್ಸು ಪ್ರಕಟವಾಗುವದಕ್ಕಿಂತ ಮೊದಲು ಅಪ್ಪಾಸಾಹೇಬನು ತನ್ನ ಸೈನ್ಯವನ್ನು ಬೆಳೆಯಿಸುವ ಪ್ರಯತ್ನ ಮಾಡಿದನು. ತಾ॥೨೪ ನವಂಬರ ೧೮೧೭ರಲ್ಲಿ ಬಾಜೀರಾಯನು ಕಳುಹಿಸಿದ ಜರೀಪಟಕಾ ಮತ್ತು ಸೇನಾಪತಿ ಪದಗಳನ್ನು ಅವನು ಬಹಿರಂಗವಾಗಿ ಸ್ವೀಕಾರಮಾಡಿದನು. ಮುಂದೆ ಬೇಗನೆ ಭೋಸಲೆ ಇಂಗ್ಲಿಷರಲ್ಲಿ ಸೀತಾಬರ್ಡೀ ಎಂಬಲ್ಲಿ ಯುದ್ಧವು ನಡೆಯಿತು. ಡಿಸೆಂಬರ ೧೬ನೆಯ ತಾರೀಖಿನ ದಿವಸ ಅಪ್ಪಾಸಾಹೇಬನು ಇಂಗ್ಲಿಷರಿಗೆ ಶರಣು ಹೋದನು. ಆಗ ಇಂಗ್ಲಿಷರು ಅವನನ್ನು ತಿರುಗಿ ಪಟ್ಟಕ್ಕೆ ಕುಳ್ಳಿರಿಸಿದರು; ಆದರೂ ಅವನ ೨೪ ಲಕ್ಷದ ಸೀಮೆಯನ್ನು ತೆಗೆದುಕೊಂಡು ಅವನ ಎಲ್ಲ ಪಡೆಯನ್ನು ತಮ್ಮ ಬಳಿಯಲ್ಲಿರಿಸಿಕೊಂಡರು. ದುರ್ದೈವದಿಂದ ಅಪ್ಪಾಸಾಹೇಬನ ಒಡಕಿನ ಗಂಧವು ಮತ್ತೆ ತಗಲಿದ್ದರಿಂದ ರೆಸಿಡೆಂಟ ಜೆಂಕಿನ್ಸಸಾಹೇಬನು ಅವನನ್ನು ಸೆರೆಯಲ್ಲಿರಿಸಿದನು. ಬಾಜೀರಾಯನು ಕಾಲ್ತೆಗೆದು ಚಾಂದಾದ ಕಡೆಗೆ ಹೋಗುತ್ತಿರುವಾಗ ಅವನಿಗೆ ಸಹಾಯ ಮಾಡುವ ಹಾಗು ಗೊಂಡಜನರಿಂದ ಬಂಡಾಯ ಮಾಡಿಸುವ ಪ್ರಯತ್ನವನ್ನು ಅಪ್ಪಾಸಾಹೇಬನು ಮಾಡಿದನೆಂಬ ಆರೋಪವಿದ್ದಿತು. ಅದಕ್ಕಾಗಿ ಇವನನ್ನು ಇಂಗ್ಲಿಷರು ಅಲ್ಲಾಬಾದದ ಕೋಟೆಯಲ್ಲಿ ಸೆರೆಯಲ್ಲಿಟ್ಟಿದರು. ಆಗ ಅವನು ಮೇ ತಿಂಗಳಲ್ಲಿ ಕಾವಲುಗಾರರನ್ನು ವಶಪಡಿಸಿಕೊಂಡು, ಅವರ ಉಡುಪು ಧರಿಸಿ ಸೆರೆಯಿಂದ ಪಾರಾಗಿ ಮಹಾದೇವನ ಗುಡ್ಡವನ್ನು ಆಶ್ರಯಿಸಿದನು. ಈ ಸ್ಥಳದಲ್ಲಿ ಪೆಂಡಾರಿಗಳ ಒಬ್ಬ ಸರದಾರನು ಇವನನ್ನು ಕೂಡಿದನು. ಅವರಿಬ್ಬರು ಸುತ್ತಲಿನ ಸೀಮೆಯಲ್ಲಿ ಉಪಟಳವನ್ನೆಬ್ಬಿಸಿದರು. ಅಪ್ಪಾಸಾಹೇಬನ ತರುವಾಯ ರಘೂಜಿಯ ವಿಧವಾ ಪತ್ನಿಯು ದತ್ತಕ ತೆಗೆದುಕೊಂಡಳು. ಆ ದತ್ತಪುತ್ರನ ಹೆಸರಿನಿಂದ ರೀಜನ್ಸಿಯ ಕಾರಭಾರವು ನಡೆಯಿತು. ಇಂಗ್ಲಿಷರು ಅಪ್ಪಾಸಾಹೇಬನ ಮೇಲೆ ದಂಡು ಕಳುಹಿಸಿದರು; ಆದರೆ ಅವನು ತಪ್ಪಿಸಿಕೊಂಡು ಅಸೀರ ಗಡದ ಮೇಲೆ ಹೋದನು. ಈ ದುರ್ಗಕ್ಕೆ ಜನರಲ್ ಡವ್ಹಟನ್ ಮತ್ತು ಮಾಲಕಮಸಾಹೇಬ ಇವರ ಮುತ್ತಿಗೆಯು ಬಿದ್ದಿತು. ಅಪ್ಪಾಸಾಹೇಬನು ಇಪ್ಪತ್ತು ದಿನಗಳವರೆಗೆ ಯುದ್ಧಮಾಡಿದನು.

ಕೊನೆಗೆ ತಾ॥ ೯ ಎಪ್ರೀಲ ೧೮೧೯ರಲ್ಲಿ ಇಂಗ್ಲಿಷರು ದುರ್ಗವನ್ನು ಕೈವಶಮಾಡಿಕೊಂಡರು. ಕೊನೆಗೆ ಅಪ್ಪಾಸಾಹೇಬನು ಅಲ್ಲಿಂದ ಜಾರಿ ಶೀಕರಾಜರ ಆಶ್ರಯಕ್ಕೆ ಹೋದನು. ೧೮೫೭ನೆಯ ಇಸವಿಯ ಬಂಡಾಯಕ್ಕಿಂತ ಮೊದಲು ಲಾರ್ಡ ಡಲಹೌಸಿಯು ಆಳಿಕೆಯಲ್ಲಿ ಏತದ್ದೇಶೀಯ ಸಂಸ್ಥಾನಗಳು ಆಂಗ್ಲರಾಜ್ಯಲೋಭದ ಪ್ರವಾಹದಲ್ಲಿ ಹರಿದು ಹೋಗುತ್ತಿರುವಾಗ ನಾಗಪುರದ ರಾಜ್ಯವಾದರೂ ೧೮೫೩ರಲ್ಲಿ ನಷ್ಟವಾಯಿತು.

---

## ಸಾವಂತವಾಡಿಯ ಭೋಸಲೆಯರೂ ಇಂಗ್ಲಿಷರು.

ಸಾವಂತವಾಡಿಯ ಸಾವಂತರು ಪ್ರಸಿದ್ಧ ಭೋಸಲೆ ಮನೆತನದವರು. ಇವರಿಗೆ ಸಾವಂತರೆಂಬ ಹೆಸರಿದ್ದುದರಿಂದ ಸಾವಂತವಾಡಿಯೆಂಬ ಹೆಸರು ಬಿದ್ದಿದೆ. ಈ ಸಾವಂತರ ಮೂಲ ಪುರುಷನು ವಿಜಯನಗರ ರಾಜ್ಯದ ವೇಳೆಯಲ್ಲಿ ಪ್ರಸಿದ್ಧಿಗೆ ಬಂದನು. ಹದಿನಾರನೆಯ ಶತಕದ ಸುಮಾರಕ್ಕೆ ಗೋವೆ-ಸಾವಂತವಾಡಿ ಪ್ರಾಂತವು ವಿಜಾಪುರದ ಪಾತಶಾಹಿಯ ಅಧಿಕಾರಕ್ಕೊಳಪಟ್ಟಿತು. ಆಗ ಸಾವಂತರು ವಿಜಾಪುರದವರ ಆಶ್ರಯದಲ್ಲಿರತೊಡಗಿದರು. ಶಿವಾಜಿಯು ಕೊಂಕಣ ಪ್ರಾಂತವನ್ನು ಗೆದ್ದಾಗ ಲಖಮ ಸಾವಂತನು ಆ ಪ್ರಾಂತವನ್ನು ಶಿವಾಜಿಯ ಕೈಯಿಂದ ಬಿಡಿಸಲಿಕ್ಕೆ ವಿಜಾಪುರ ಬಾದಶಹನ ಒಪ್ಪಿಗೆಯನ್ನು ಪಡೆದನು ಶಿವಾಜಿಯು ಅವನನ್ನು ಪರಾಭವ ಗೊಳಿಸಿ, ಕುಡಾಳ ಪ್ರಾಂತವನ್ನು ಹೊಕ್ಕು ಠಾಣ್ಯಗಳನ್ನೂ ಕೋಟೆಗಳನ್ನೂ ವಶಮಾಡಿಕೊಂಡನು. ಆಗ ಲಖಮ ಸಾವಂತನು ಒಳ್ಳೇ ತೊಂದರೆಯಲ್ಲಿ ಸಿಲುಕಿದನು. ತೂಡಲೆ ಅವನು ಪೋರ್ತುಗೀಜರ ಆಶ್ರಯವನ್ನು ಹೊಂದಿದನು. ಮುಂದೆ ಶಿವಾಜಿಯು ಪೋರ್ತುಗೀಜರ ಮೇಲೆ ದಾಳೀ ಮಾಡಿ ಫೋಂಡಾ ಕೋಟೆಯನ್ನು ತೆಗೆದುಕೊಂಡನು. ಆಗ ಪೋರ್ತುಗೀಜರು ಶರಣು ಬಂದು ಶಿವಾಜಿಗೆ ತೋಫಿನ ಸಲಾಮಿಯನ್ನು ಕಳುಹಿದರು. ಲಖಮ ಸಾವಂತನು ನಿರಾಶ್ರಿತನಾಗಿ ಶಿವಾಜಿಯೊಡನೆ ೧೬೬೯ರಲ್ಲಿ ಒಪ್ಪಂದ ಮಾಡಿಕೊಂಡನು. "ಕುಡಾಳ ಪ್ರಾಂತದ ಉತ್ಪನ್ನದೊಳಗಿಂದ ಆರು ಸಾವಿರ ಹೊನ್ನುಗಳನ್ನು ತೆಗೆದುಕೊಂಡು, ಬಳಿಯಲ್ಲಿ ಸೈನ್ಯವನ್ನಿರಿಸಿ ಪ್ರಸಂಗ ಬಿದ್ದಾಗ ನೌಕರಿಯನ್ನು ಮಾಡುವೆನು" ಎಂದು ಸಾವಂತನು ಶಿವಾಜಿಗೆ ಒಪ್ಪಿಗೆ ಕೊಟ್ಟನು. ಶಿವಾಜಿಯು ಲಖಮ ಸಾವಂತನಿಗೆ ಆ ಪ್ರಾಂತದ ದೇಸಗತಿಯನ್ನು ಕೊಟ್ಟು ಸಾವಂತ ಬಹಾದ್ದುರ ಎಂಬ ಪದವಿಯನ್ನಿತ್ತನು. ಸಾವಂತನು ತಿರುಗಿ ವಿಜಾಪುರದ ಬಾದಶಹನನ್ನು ಕೂಡಿದನು. ಅವನು ೧೬೬೮ರಲ್ಲಿ ಶಿವಾಜಿಯ ಠಾಣ್ಯಗಳನ್ನು ಬಾದಶಹನಿಗೆ ಕೊಟ್ಟು ಮಾಲವಣ ಗ್ರಾಮವನ್ನು ಇನಾಮು ಪಡೆದನು; ಇಷ್ಟಲ್ಲದೆ ಇನ್ನೂ ಕೆಲವು ಅಧಿಕಾರಗಳನ್ನು ಪಡೆದನು. ವಿಜಾಪುರದ ಬಾದಶಹನು ರಾಂಗಣ ಕೋಟೆಯ ಮೇಲೆ ದಾಳಿ ಮಾಡಿದಾಗ ಸಾವಂತನು ಅವನ ಪಕ್ಷಕ್ಕೆ ಕೂಡಿದನು. ಮುಂದೆ ಕುಡಾಳದಲ್ಲಿ ಶಿವಾಜಿಯ ಹಾಗು ವಿಜಾಪುರದವರ

ನಡುವೆ ಯುದ್ಧವಾಯಿತು. ಆಗ ಲಖಮ ಸಾವಂತನು ಒಳ್ಳೇ ಪರಾಕ್ರಮವನ್ನು ತೋರಿಸಿದನು.

ಸಾವಂತನ ಹಾಗು ಇಂಗ್ಲಿಷರ ಸಂಬಂಧವು ೧೬೬೪ರಲ್ಲಿ ಉಂಟಾಯಿತು. ಸಾವಂತನು ಸಮುದ್ರದ ದಂಡೆಯಲ್ಲಿ ಹಡಗಗಳನ್ನು ಸುಲಿಯುತ್ತಿದ್ದನು. ಈ ವರ್ಷದಲ್ಲಿ ಅವನು ಒಂದು ಹಡಗವನ್ನು ಸುಲಿಯುತ್ತಿರಲು, ಇಂಗ್ಲಿಷರ ಒಂದು ಹಡಗದೊಡನೆ ಇವನು ಯುದ್ಧ ನಡೆಯಿಸಿದನು. ಈ ಯುದ್ಧದ ಸಂಬಂಧವಾಗಿ ಫಾಯರನೆಂಬ ಇಂಗ್ಲಿಷ ಮನುಷ್ಯನು ಬರೆದಿರುವದೇನಂದರೆ:—'ಹಡಗುಗಳ, ಜನರು ನಮ್ಮ ಮೇಲೆ ಮದ್ದು-ಗುಂಡುಗಳನ್ನು ಬಹಳವಾಗಿ ಹೊಡೆದರು. ಕವಣೆಗಳಿಂದ ಕಲ್ಲುಗಳನ್ನು ಒಗೆದರು; ಬರ್ಚಿಗಳನ್ನಾದರೂ ಎಸೆದರು. ಶತ್ರುಗಳ ಹಡಗವು ನಮ್ಮ ಹಡಗಕ್ಕಿಂತ ಹತ್ತುಪಟ್ಟು ದೊಡ್ಡದಿತ್ತು. ಅವರ ಸಿದ್ಧತೆಯಾದರೂ ಬಹಳೇ ಚನ್ನಾಗಿತ್ತು. ಹುಟ್ಟುಹಾಕುವವರ ಹೊರತಾಗಿ ಸುಮಾರು ೬೦ ಜನ ಯೋಧರು ಆ ಹಡಗದಲ್ಲಿದ್ದರು." ಲಖಮ ಸಾವಂತನು ೧೬೬೫ರಲ್ಲಿ ಮಡಿದನು. ಅವನು ತನ್ನ ಹೆಸರಿನ ನಾಣ್ಯಗಳನ್ನು ಅಚ್ಚುಹಾಕಿಸಿದ್ದನು. ಶಿವಾಜಿಯ ಮರಣೋತ್ತರದಲ್ಲಿ ಮೊಗಲರು ಕೊಂಕಣದ ಮೇಲೆ ದಾಳಿ ಮಾಡಿದರು. ಸಾವಂತನಿಗೆ ವಿಜಾಪುರದವರ ಆಶ್ರಯವು ತಪ್ಪಿ, ಕುಡಾಳದ ಮೂಲ ಯಜಮಾನನಾದ ಪ್ರಭುವು ಅವನ ಮೇಲೆ ಎದ್ದನು. ಆಗ ಖೇಮ ಸಾವಂತನು ೧೬೮೯ರಲ್ಲಿ ಔರಂಗಜೇಬ ಬಾದಶಹನಿಂದ ದೇಶಮುಖಿಯನ್ನೂ ಮನಸಬದಾರಿಯನ್ನೂ ಪಡೆದನು. ಆ ಮೇಲೆ ಆಂಗ್ರೆಯು ಪ್ರಬಲನಾದನು. ಅವನ ಹಾಗು ಸಾವಂತನ ನಡುವೆ ಅನೇಕ ಯುದ್ಧಗಳಾದವು. ೧೬೬೭ರಲ್ಲಿ ಪ್ರಭು ಮನೆತನದ ಕೊನೆಯಾಗಿ, ಕುಡಾಳ ಪ್ರಾಂತವು ಸಾವಂತನ ಹಸ್ತಗತವಾಯಿತು. ಆಂಗ್ರೆಯಂತೆ ಪೋರ್ತುಗೀಜರೊಡನೆಯಾದರೂ ಸಾವಂತರು ಅನೇಕ ಯುದ್ಧಗಳನ್ನು ಮಾಡಿದರು. ೧೭೦೭ರಲ್ಲಿ ಔರಂಗಜೇಬನು ಮರಣ ಹೊಂದಿದ ಮೇಲೆ ಅವನ ಮಗನಾದ ಮೋಅಜ್ಜೀಮನು ದಿಲ್ಲಿಯ ಪಟ್ಟದ ವಿಷಯವಾಗಿ ನಡೆದ ಜಗಳದಲ್ಲಿ ಸಾವಂತನ ಸಹಾಯ ತೆಗೆದುಕೊಂಡಿದ್ದನು; ಆದರೆ ಮೊಗಲರ ಅಧಿಕಾರವು ದಕ್ಷಿಣದಲ್ಲಿ ಬೇಗನೆ ಇಲ್ಲದಂತಾದ್ದರಿಂದ ಸಾವಂತರು ಮರಾಟರ ಬೆನ್ನು ಹತ್ತಿದರು. ಖೇಮಸಾವಂತನು ಶಾಹುವಿನ ವಿರುದ್ಧವಾಗಿ ತಾರಾಬಾಯಿಯನ್ನು ಕೂಡಿ ೧೭೦೮ರಲ್ಲಿ ಕುಡಾಳ ಪರಗಣೆಯನ್ನು ದೊರಕಿಸಿದನು. ಮುಂದೆ ಶಾಹುವು ವಿಜಯಹೊಂದಿದ ಮೇಲೆ ಅವನ ಪಕ್ಷವಹಿಸಿ ಅರ್ಧ ಸಾಳಸಿ ಮಹಾಲನ್ನು ಇನಾಮು ಪಡೆದನು. ಈ ಕಾರಣದಿಂದ ಸಾವಂತರ ಹಾಗು ಕೊಲ್ಹಾಪುರದವರ ನಡುವೆ ಯುದ್ಧಗಳು ಪ್ರಾರಂಭವಾದವು. ೧೭೩೦ರಲ್ಲಿ ಸಾವಂತನು ಆಂಗ್ರೆಯ ವಿರುದ್ಧವಾಗಿ ಇಂಗ್ಲಿಷರೊಡನೆ ಒಪ್ಪಂದ ಮಾಡಿಕೊಂಡನು. ಸನ್ ೧೭೩೦ರಲ್ಲಾದ ಎರಡನೆಯ ಒಡಂಬಡಿಕೆಯಲ್ಲಿ "ಇಂಗ್ಲಿಷರು ಸಾವಂತನಿಗೆ ತೋಫುಗಳನ್ನು ಪೂರೈಯಿಸಬೇಕು. ಸಾಮೂಹಿಕ ಸೈನ್ಯಗಳು ವಶಪಡಿಸಿಕೊಂಡ ಕೋಟೆ-ಕೊತ್ತಳಗಳು ಸಾವಂ

ತನಿಗೆ ದೊರೆಯಬೇಕು” ಮೊದಲಾದ ಕಟ್ಟಳೆಗಳಾದವು. ಏತದ್ದೇಶೀಯ ಸಂಸ್ಥಾನಿಕರೊಡನೆ ಇಂಗ್ಲಿಷರು ಮಾಡಿಕೊಂಡ ಒಪ್ಪಂದಗಳಲ್ಲಿ ಇದೇ ಮೊದಲನೆಯ ಒಪ್ಪಂದವೆಂದು ಹೇಳುತ್ತಾರೆ.

ಫೋಂಡಸಾವಂತನು ಅನೇಕ ಹೊಸ ದುರ್ಗ-ಕೋಟೆಗಳನ್ನು ಕಟ್ಟಿಸಿದನು. ಅವನ ಮಕ್ಕಳಾದ ರಾಮಚಂದ್ರ ಮತ್ತು ಜಯರಾಮ ಸಾವಂತ ಇವರು ಬಹಳೇ ಪ್ರಸಿದ್ಧಿಗೆ ಬಂದರು. ೧೭೩೮ರಲ್ಲಿ ಸಾವಂತರು ಪೋರ್ತುಗೀಜರನ್ನು ಪರಾಭವಗೊಳಿಸಿ ಅನೇಕ ತೋಫುಗಳನ್ನೂ ಪತಾಕೆಗಳನ್ನೂ ಸ್ವಾಧೀನಪಡಿಸಿಕೊಂಡರು. ೧೭೩೯ರಲ್ಲಿ ಪೇಶವೆಯವರು ವಶಿಯನ್ನು ತೆಗೆದುಕೊಂಡರು. ಇದರಲ್ಲಿ ಸಾವಂತರಾದರೂ ತಕ್ಕಮಟ್ಟಿಗೆ ಸಹಾಯ ಮಾಡಿದರು. ಮುಂದೆ ೧೭೪೦ರಲ್ಲಿ ಅವರ ಹಾಗು ಪೋರ್ತುಗೀಜರ ನಡುವೆ ಒಪ್ಪಂದವಾಯಿತು. ಅದರಲ್ಲಿ ಸಾವಂತನಿಗೆ ಪೋರ್ತುಗೀಜರಿಂದ ೨೫ಸಾವಿರದ ಕಪ್ಪ ದೊರೆಯಿತು. ೧೭೪೯ರಲ್ಲಿ ಸಾವಂತನೂ ಮರಾಟರ ಸರದಾರನಾದ ಭಗವಂತರಾವ ಪಂಡಿತನೂ ಆಂಗ್ರೆಯ ಮೇಲೆ ದಾಳೀಮಾಡಿ ಅವನ ಎಷ್ಟೋ ಪ್ರದೇಶವನ್ನು ಆಕ್ರಮಿಸಿದರು. ಮೂರನೆಯ ವರ್ಷ ಇವರ ಹಾಗು ಆಂಗ್ರೆಯ ನಡುವೆ ಅನೇಕ ಯುದ್ಧಗಳಾದವು. ಅದರಲ್ಲಿ ಸಾವಂತನ ಕೀರ್ತಿಯು ಬೆಳೆಯಿತು. ೧೭೫೨ರಲ್ಲಿ ಸಾವಂತಮನೆತನದಲ್ಲಿ ಗೃಹಕಲಹವು ಪ್ರಾರಂಭವಾಯಿತು. ಆಗ ಪೇಶವೆಯ ಮಧ್ಯಸ್ತಿಕೆಯಿಂದ ಅದು ಶಾಂತವಾಯಿತು. ಈ ಗೃಹಕಲಹದಲ್ಲಿ ಒಬ್ಬ ಸಾವಂತನು ಪೋರ್ತುಗೀಜರ ಆಶ್ರಯಹೊಂದಿದನು. ಆದ್ದರಿಂದ ಜಗಳದ ಮೂಲವು ಉಳಿದಂತಾಯಿತು. ೧೭೬೫ರಲ್ಲಿ ಪ್ರಭುಮನೆತನದೊಳಗಿನವನೊಬ್ಬನು ಕುಡಾಳ ಪ್ರಾಂತವನ್ನು ತಿರುಗಿ ದೊರಕಿಸುವದಕ್ಕಾಗಿ ಪೇಶವೆಯವರ ಸಹಾಯವನ್ನು ತೆಗೆದುಕೊಂಡನು. ೧೭೬೨ರಲ್ಲಿ ಜಿನಬಾ ದಾದಾ ಬಕ್ಷಿ ಕೇರಕರ (ಇವನು ಮೊದಲು ಸಾವಂತವಾಡಿಯವನಾಗಿದ್ದನು) ಇವನು ಶಿಂದೆಯ ಒಲಗದಲ್ಲಿ ದೊಡ್ಡ ಸರದಾರನಾಗಿದ್ದನು. ಇವನ ಮಧ್ಯಸ್ತಿಕೆಯಿಂದ ಜಯಪ್ಪಶಿಂದೆಯ ಮಗಳ ವಿವಾಹವು ಖೇಮ ಸಾವಂತನೊಡನೆ ನೆರವೇರಿತು. ಈ ರೀತಿಯಿಂದ ಜಿನಬಾ ದಾದಾನು ತನ್ನ ಮೂಲ ಧನಿಯ ಉಪಕಾರವನ್ನು ತೀರಿಸಿದನು. ಶಿಂದೆ-ಸಾವಂತರಲ್ಲಿ ಬೀಗತನ ಉಂಟಾಯಿತು. ಮುಂದೆ ಸಾವಂತವಾಡಿಯವರ ಹಡಗುಗಳ್ಳತನದಿಂದ ಇವರ ಹಾಗು ಇಂಗ್ಲಿಷರ ನಡುವೆ ವೈರವುಂಟಾಯಿತು. ೧೭೬೫ರಲ್ಲಿ ಇಂಗ್ಲಿಷರ ಹಾಗು ಸಾವಂತರ ಕಾಳಗವಾದ ಮೇಲೆ ಒಪ್ಪಂದವಾಯಿತು. ಸಿಂಧುದುರ್ಗದ ಪ್ರಾಪ್ತಿಯನ್ನು ಸಾವಂತವಾಡಿಯವರು ತೆಗದುಕೊಳ್ಳತಕ್ಕದ್ದು; ಯುದ್ಧದ ವೆಚ್ಚಕ್ಕಾಗಿ ೧ ಲಕ್ಷ ರೂಪಾಯಿಗಳನ್ನೂ, ಕೆಲವು ಪ್ರದೇಶವನ್ನೂ, ಭರತಗಡ ಕೋಟೆಯನ್ನೂ ಸಾವಂತರು ಇಂಗ್ಲಿಷರಿಗೆ ಕೊಡಬೇಕು. ಸಾವಂತರು ಹಡಗುಪಡೆಯನ್ನು ಇಟ್ಟುಕೊಳ್ಳಬಾರದು. ಯುರೋಪಿಯನ್ನರನ್ನು ನೌಕರಿಗೆ ಇಟ್ಟುಕೊಳ್ಳಬಾರದು. ಇಂಗ್ಲಿಷರು ಅವರಿಗೆ ಮದ್ದು-ಗುಂಡು ಮೊದಲಾದ ಯುದ್ಧಸಾಮಗ್ರಿಯನ್ನು ಯೋಗ್ಯ ಬೆಲೆ

ಯಿಂದ ಕೊಡಬೇಕು, ಮೊದಲಾದ ಕಟ್ಟಳೆಗಳಾದವು; ಆದರೆ ಸಾವಂತರು ಈ ಕಟ್ಟಳೆಗಳನ್ನು ನಡೆಯಿಸಲಿಲ್ಲವಾದ್ದರಿಂದ ಹೆಚ್ಚಿನ ಕಟ್ಟಳೆಗಳನ್ನು ಮಾನ್ಯಮಾಡಬೇಕಾಯಿತು. ೧೭೮೪ರಲ್ಲಿ ಜಿವಬಾ ದಾದಾನು ಸಾವಂತರಿಗೆ ಶಹಾ ಅಲಮ ಬಾದಶಹನಿಂದ ರಾಜೇಬಹಾದ್ದರ ಎಂಬ ಪದವಿಯನ್ನು ಕೊಡಿಸಿದನು. ಸಾವಂತರು ಸಿಂದೆಯವರ ಆಪ್ತತ್ವ ಬಳೆಯಿಸಿದ್ದರಿಂದ ಸಾತಾರೆಯವರ ಋಣಾನುಬಂಧವು ನೆಲೆಗೊಂಡಿತು. ಆದ್ದರಿಂದ ೧೭೮೭ರಲ್ಲಿ ಕೊಲ್ಹಾಪುರದವರು ಸಾವಂತರೊಡನೆ ಯುದ್ಧವನ್ನು ಪ್ರಾರಂಭಿಸಿದರು. ಆಗ ಸಾವಂತರು ಸಮೀಪದ ಪೋರ್ತುಗೀಜರ ನೆರವನ್ನು ಹೊಂದಬೇಕಾಯಿತು. ಈ ಕಾಳಗದಲ್ಲಿ ಕೊಲ್ಹಾಪುರದವರು ಸಾವಂತರ ಕೆಲವು ಠಾಣ್ಯಗಳನ್ನು ಹಿಡಕೊಂಡರು. ಅವುಗಳನ್ನು ಸಾವಂತರು ತಿರುಗಿ ದೊರಕಿಸಿಕೊಳ್ಳಬೇಕೆಂದು ಶಿಂದೆಯ ಮುಖಾಂತರ ಪೇಶವೆಯವರ ಕಡೆಗೆ ಸಂಧಾನ ನಡೆಸಿದರು. ಕೊನೆಗೆ ಪರಶುರಾಮಭಾವೂನು ಕರವೀರದವರ ಮೇಲೆ ದಾಳೀ ಮಾಡಿದ ಮೇಲೆ ಆ ಠಾಣ್ಯಗಳು ಮತ್ತೆ ಸಾವಂತರಿಗೆ ದೊರೆತವು. ಮುಂದೆ ಪೋರ್ತುಗೀಜರು ಸಾವಂತರೊಡನೆ ಯುದ್ಧಮಾಡಿ, ಸಾವಂತರ ಕೆಲವು ಠಾಣ್ಯಗಳನ್ನು ತಕ್ಕೊಂಡರು; ಆದರೆ ಸಾವಂತರು ಪೋರ್ತುಗೀಜರನ್ನು ಮತ್ತೆ ಪರಾಭವಗೊಳಿಸಿ, ಇಡೀ ಘೋಂಡಾ ಮಹಾಲನ್ನು ತಿರುಗಿ ತೆಗೆದುಕೊಂಡರು.

೧೭೯೭ರಲ್ಲಿ ಜಿವಬಾ ದಾದಾ ಬಕ್ಷಿಯು ಮಡಿದದ್ದರಿಂದ ಸಾವಂತರ ದೊಡ್ಡ ಆಶ್ರಯವೇ ತಪ್ಪಿದಂತಾಯಿತು. ಖೇಮಸಾವಂತನಾದರೂ ೧೮೦೩ರಲ್ಲಿ ಮರಣಹೊಂದಿದನು. ಈ ರಾಜನು ವಿದ್ಯಾಭಿಲಾಷಿಯೆಂದು ಪ್ರಸಿದ್ಧನಿದ್ದನು. ಇವನು ಸಾಧು-ಸಂತರಿಗೆ ಧರ್ಮಾದಾಯವನ್ನಾದರೂ ಬಹಳ ಮಾಡಿದ್ದನು. ಇವನ ತರುವಾಯ ಇವನ ನಾಲ್ಕು ಜನ ಹೆಂಡಿರು ರಾಜ್ಯಕಾರ್ಯವನ್ನು ಸಾಗಿಸಿದರು. ಇವರಿಗೆ ಶತ್ರುಗಳು ಬಹಳವಿದ್ದುದರಿಂದ ಇವರ ಆಳಿಕೆಯಲ್ಲಿ ಅತಿಯಾಗಿ ಗೊಂದಲವುಂಟಾಯಿತು. ಗೃಹಕಲಹದಿಂದ ಸಾವಂತರ ಸಾಂಪತ್ತಿಕ ಸ್ಥಿತಿಯು ನಿಕೃಷ್ಟವಾಯಿತು. ಪೋರ್ತುಗೀಜರೂ ಕರವೀರದವರೂ ಇವರ ಬೆನ್ನು ಬಿಟ್ಟಿದ್ದಿಲ್ಲ. ೧೮೦೫ರಲ್ಲಿ ಹಿರಿಯ ಹೆಂಡತಿಯಾದ ಲಕ್ಷ್ಮೀಬಾಯಿಯು ಭಾವೂಸಾಹೇಬನನ್ನು ದತ್ತಕ ತೆಗೆದುಕೊಂಡು ರಾಜ್ಯದ ಧನಿಯನ್ನಾಗಿ ಮಾಡಿದಳು; ಆದರೆ ಗೃಹಕಲಹವು ಶಾಂತವಾಗಲಿಲ್ಲ. ೧೮೦೮ರಲ್ಲಿ ಭಾವೂಸಾಹೇಬನ ಕೊಲೆಯಾಯಿತು. ಲಕ್ಷ್ಮೀಬಾಯಿಯಾದರೂ ಅದೇ ವರ್ಷ ಮೃತಿಹೊಂದಿದಳು. ಅನಂತರ ಖೇಮಸಾವಂತನ ಎರಡನೆಯ ಹೆಂಡತಿಯಾದ ದುರ್ಗಾಬಾಯಿಯು ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡಳು. ಇವಳು ಕಾರಸ್ಥಾನಿಯೂ, ರಾಜಕಾರಣ ನಿಪುಣಳೂ, ಜಾಣಳೂ, ಸ್ವಾಭಿಮಾನಿಯೂ, ನ್ಯಾಯಪಕ್ಷಪಾತಿಯೂ ಇದ್ದಳೆಂದು ಖ್ಯಾತಿಯಿದೆ. ಗೃಹಕಲಹವು ಶಾಂತವಾಗಬೇಕೆಂದು ಇವಳು ಫೋಂಡಸಾವಂತನನ್ನು ಪಟ್ಟಕ್ಕೆ ಕುಳ್ಳಿರಿಸಿದಳು;

೧೮೧೨ರಲ್ಲಿ ಇಂಗ್ಲಿಷರು ಸಾವಂತವಾಡಿಯ ಸುತ್ತ-ಮುತ್ತು ನಡೆಯುವ ಸುಲಿಗೆಯನ್ನು ಕಟ್ಟುಮಾಡಬೇಕೆಂದು ಸಾವಂತರಿಗೆ ದುಂಬಾಲ ಬಿದ್ದರು. ಆಗ ಮಾಡುರೆಯಲ್ಲಿ ಒಪ್ಪಂದವಾಯಿತು. ಸಾವಂತರು ತಮ್ಮ ಎಲ್ಲ ಹಡಗುಗಳನ್ನೂ ವೆಂಗುರ್ಲೆಯ ಕೋಟೆಯನ್ನೂ ಬತ್ತೇರಿಯ ಸ್ಥಳಗಳನ್ನೂ ಇಂಗ್ಲಿಷರ ಸ್ವಾಧೀನ ಮಾಡಬೇಕು. ಇಂಗ್ಲಿಷರು ನಿರೀಕ್ಷಣೆ ಮಾಡಿ ಒಪ್ಪಿಗೆ ಕೊಟ್ಟ ಹೊರತು ಯಾವ ಹಡಗುಗಳನ್ನೂ ಬಂದರದ ಹೊರಗೆ ಬಿಡಬಾರದು ಸಂರಕ್ಷಣಕ್ಕಾಗಿ ಇಂಗ್ಲಿಷರ ಸೈನ್ಯವನ್ನು ರಾಜ್ಯದಲ್ಲಿರಿಸಿಕೊಳ್ಳಬೇಕು ಮೊದಲಾದ ಕಟ್ಟಳೆಗಳಾಗಿ ಒಪ್ಪಂದವು ಪೂರೈಸಲ್ಪಟ್ಟಿತು. ಇದೇ ವರ್ಷ ಫೋಂಡ ಸಾವಂತನು ಮರಣಹೊಂದಿದನು. ಅವನ ಮಗನಾದ ಬಾಪೂಸಾಹೇಬನನ್ನು ದುರ್ಗಾಬಾಯಿಯು ಪಟ್ಟಕ್ಕೆ ಕುಳ್ಳಿರಿಸಿದಳು. ೧೮೧೩ರಲ್ಲಿ ಇಂಗ್ಲಿಷರು ಕರವೀರದವರ ಪಕ್ಷವನ್ನು ಹಿಡಿದು, ಭರತಗಡ ಕೋಟೆಯನ್ನು ಸಾವಂತರಿಂದ ಅವರಿಗೆ ಕೊಡಿಸಿದರು. ವೆಂಗುರ್ಲೆಯ ಕೋಟೆಯನ್ನು ತಾವು ತೆಗೆದುಕೊಂಡರು. ತರುವಾಯ ಮತ್ತೆ ಸೈನ್ಯವನ್ನು ಕಳುಹಿಸಿ, ಇತರ ಕೆಲವು ಪ್ರದೇಶಗಳನ್ನು ಕೊಟ್ಟು, ಪ್ರತಿಯಾಗಿ ತಮಗೆ ಬೇಕಾದ ಕೋಟೆ-ಕೊತ್ತಳಗಳನ್ನೂ ಪ್ರದೇಶಗಳನ್ನೂ ಒತ್ತಾಯದಿಂದ ಸ್ವಾಧೀನಪಡಿಸಿಕೊಂಡರು. ೧೮೧೯ರಲ್ಲಿ ರೇಡೀನಿವತಿ ಮತ್ತು ಬಾಂದೆ ಕೋಟೆಗಳನ್ನು ಅವರು ತಮ್ಮ ವಶಕ್ಕೆ ತೆಗೆದುಕೊಂಡರು. ದುರ್ಗಾಬಾಯಿಯು ಇದೇ ವರ್ಷ ಮರಣ ಹೊಂದಿದಳು. ಅವಳ ತರುವಾಯ ಖೇಮ ಸಾವಂತನ ಉಳಿದ ಇಬ್ಬರು ಹೆಂಡಿರು ರಾಜ್ಯಭಾರ ಸಾಗಿಸತೊಡಗಿದರು; ಆದರೆ ಪುರುಷ ಕಾರಭಾರಿಯನ್ನು ನಿಯಮಿಸುವ ಅಧಿಕಾರವು ತಮ್ಮ ಕಡೆಗೆ ಉಳಿದಿರುವದೆಂದು ಹೇಳಿ, ಇಂಗ್ಲಿಷರು ಕ್ಯಾಪ್ಟನ್ ಹಚೀನಸನನನ್ನು ರೆಸಿಡೆಂಟನನ್ನಾಗಿ ನಿಯಮಿಸಿದರು. ೧೮೨೨ರಿಂದ ಈ ಕೆಲಸವು ರತ್ನಾಗಿರಿಯ ಕಲೆಕ್ಟರನ ಕಡೆಗೆ ಒಪ್ಪಿಸಲ್ಪಟ್ಟಿತು ಮುಂದೆ ಕೊಲ್ಲಾಪುರದವರು ಘಟ್ಟದ ಕೆಳಗಿನ ಪ್ರದೇಶದಲ್ಲಿ ಹಣ ಎತ್ತಬಾರದೆಂಬ ಬಗ್ಗೆ ನಿರ್ಧರವಾಗಿ, ಸಾವಂತರು ಇದರ ಸಲುವಾಗಿ ಕೊಲ್ಹಾಪುರದವರಿಗೆ ಪ್ರತಿವರ್ಷ ೭೮೬೪ ರೂಪಾಯಿಗಳನ್ನು ಕೊಡಬೇಕೆಂದು ಇಂಗ್ಲಿಷರು ಗೊತ್ತುಪಡಿಸಿದರು. ೧೮೨೩ರಿಂದ ಬಾಪೂಸಾಹೇಬನು ಸ್ವತಂತ್ರ ರೀತಿಯಿಂದ ರಾಜ್ಯಕಾರಭಾರ ಸಾಗಿಸತೊಡಗಿದನು. ೧೮೩೦ರಲ್ಲಿ ಸಾವಂತರ ವಿರುದ್ಧವಾಗಿ ಬಂಡಾಯವೆದ್ದುದರಿಂದ, ಅವರು ಇಂಗ್ಲಿಷರ ಸೈನ್ಯವನ್ನು ತರಿಸಿಕೊಳ್ಳಬೇಕಾಯಿತು. ೧೮೩೨ರಲ್ಲಿ ಸಂಸ್ಥಾನದ ಸಾಲವು ಕಡಿಮೆಯಾಗುವದಕ್ಕಾಗಿ ಆದಾಯ-ವೆಚ್ಚಗಳ ಬಗ್ಗೆ ವ್ಯವಸ್ಥೆಪಡಿಸಿದರು ೧೮೩೫ರಲ್ಲಿ ಸಾವಂತವಾಡಿ ಸಂಸ್ಥಾನದಲ್ಲಿ ಮತ್ತೆ ಬಂಡಾಯವಾಯಿತು. ಆಂಗ್ಲಸೈನ್ಯವು ಈ ಬಂಡಾಯವನ್ನು ಮುರಿಯಿತು. ೧೮೩೬ರಲ್ಲಿ ಇಂಗ್ಲಿಷರು ಸಾವಂತವಾಡಿಯವರಿಂದ ಸುಂಕವನ್ನು ತೆಗೆದುಕೊಂಡರು. ೧೮೩೮ರಲ್ಲಿ ರಾಜನ ಅಯೋಗ್ಯತನದ ಮೂಲಕವಾಗಿ ಇಂಗ್ಲಿಷ ಸರಕಾರದಿಂದ ಪೋಲಿಟಿಕಲ್ ಎಜಂಟನು ನಿಯಮಿಸಲ್ಪಟ್ಟನು ಮುಂದೆ ಕೆಲವು ವರ್ಷಗಳ ವರೆಗೆ ಸಾವಂತವಾಡಿ ಸಂಸ್ಥಾನದಲ್ಲಿ ಬಂಡಾಯಗಳು ಆಗುತ್ತಲೇ ಇದ್ದವು. ಸಾವಂತವಾಡಿ ಸಂಸ್ಥಾ

ನವು ಬಂಡಾಯ ಮಾಡಲಿಕ್ಕೆ ಅನುಕೂಲವಿದ್ದು, ಜನರಾದರೂ ಸ್ವಚ್ಛಂದವೃತ್ತಿಯುವ ರಿದ್ದರು. ಗೋವೆಯ ಸೀಮೆಯಿಂದ ಅವರಿಗೆ ಮದ್ದು-ಗುಂಡುಗಳು ದೊರೆಯುತ್ತಿದ್ದವು. ಗಲಭೆಗಾರರಲ್ಲಿ ಉಳಿದ ಬಂಡುಗಾರರಿಗೆ ಪ್ರಸಂಗವು ದೊರೆತು ಸಂಸ್ಥಾನದಲ್ಲಿ ಬರಲಿಕ್ಕೆ ಮಾರ್ಗವಾಯಿತು. ಆಗ ಅವರು ಬಂದು ದಂಡಿನಲ್ಲಿ ಸೇರಿದರು. ಸಂಸ್ಥಾನದ ಯುವರಾಜನಾದರೂ ಬಂಡಾಯದಲ್ಲಿ ಕೂಡಿದ್ದನು

---

## ಸಿಂದೆಯರೂ ಇಂಗ್ಲೀಷರೂ.

ಸಿಂದೆಯ ಮೂಲಪುರುಷನಾದ ರಾಣೋಜಿಯು ಕಣ್ಹೇರಖೇಡದ ಗೌಡನು. ಬಾಳಾಜಿ ವಿಶ್ವನಾಥನಲ್ಲಿ ನೌಕರಿ ಮಾಡುತ್ತಿರುವಾಗ ಪುಜರೆಯ ಕೆಲಸವು ಅವನಿಗೆ ದೊರೆಯಿತು ಒಂದು ದಿನ ರಾಣೋಜಿಯು ಬಾಜೀರಾಯನ ಪಾದರಕ್ಷೆಗಳನ್ನು ಎದೆಯ ಮೇಲಿರಿಸಿಕೊಂಡು ಮಲಗಿದ್ದನು. ರಾಣೋಜಿಯ ಈ ಸ್ವಾಮಿನಿಷ್ಠೆಯನ್ನು ಕಂಡು ಅವನ ಮೇಲೆ ಬಾಜೀರಾಯನು ಅನುಗ್ರಹೀತನಾದನು. ಅವನಿಗೆ ಪಾಗೆಯ ಕೆಲಸವು ದೊರೆಯಿತು. ಮುಂದೆ ಅವನು ಸ್ವಪರಾಕ್ರಮದಿಂದ ಒಳ್ಳೇ ಯೋಗ್ಯತೆಗೇರಿ ಮರಾಟರ ಮುಖ್ಯ ಸರದಾರರಲ್ಲೊಬ್ಬನಾದನು. ಮಹಮ್ಮದಶಹ ಬಾದಶಹನ ಬಳಿಯಲ್ಲಿ ಬಾಜೀರಾಯನ ಹೊಣೆಗಾರಿಕೆಯ ನಂಬಿಗೆಯಾಗುವದಕ್ಕಾಗಿ ಈ ರಾಣೋಜಿಯ ಸಹಿಯು ತೆಗೆದುಕೊಳ್ಳಲ್ಪಟ್ಟಿತು. ರಾಣೋಜಿಯು ಮಾಳವೆಯಲ್ಲಿದ್ದಾಗ ಅವನ ಮಕ್ಕಳಾದ ಜಯಪ್ಪ ಹಾಗು ದತ್ತಾಜಿ ಇವರು ಸರಕಾರದ ನೌಕರಿಯನ್ನು ಉತ್ತಮರೀತಿಯಿಂದ ಮಾಡಿದರು ರಾಣೋಜಿಗೆ ರಜಪುತ ರಾಣಿಯಿಂದ ಮಹದಾಜಿ, ತುಕೋಜಿ ಎಂಬಿಬ್ಬರು ಮಕ್ಕಳಿದ್ದರು. ಜಯಪ್ಪನ ಕೊಲೆಯಾಗಿ, ದತ್ತಾಜಿಯು ದಿಲ್ಲಿಯ ಯುದ್ಧದಲ್ಲಿ ಮಡಿದನು. ರಾಣೋಜಿಯ ತರುವಾಯ ಜಯಪ್ಪನ ಮಗನಾದ ಜನಕೋಜಿಯು ಸರದಾರನಾದನು. ಅವನಾದರೂ ಅತ್ಯಂತ ಶೂರನಿದ್ದು ಪಾಣಿಪತ್ತದ ಸಂಗ್ರಾಮದಲ್ಲಿ ಮರಣ ಹೊಂದಿದನು. ಪಾಣಿಪತ್ತದ ಯುದ್ಧದಿಂದ ತಿರುಗಿ ಬಂದ ಮೇಲೆ ಮಹದಾಜಿಗೆ ಪೇಶವೆಯವರ ಹುಜರಾತೀ ಪಥಕದ ಕೆಲಸವು ಕೊಡಲ್ಪಟ್ಟಿತು. ಅವನ ಬಳಿಯಲ್ಲಿ ಸ್ವತಂತ್ರ ಸೈನ್ಯವಾದರೂ ಬಹಳ ಇತ್ತು. ಅಬದಾಲಿಯು ಕಾಬೂಲಕ್ಕೆ ತಿರುಗಿ ಹೋದ ಕೂಡಲೆ ಮರಾಟರು ಮತ್ತೆ ಉತ್ತರ ಹಿಂದುಸ್ತಾನದ ತುಂಬ ಪಸರಿಸಿದರು. ಈ ವೇಳೆಯಲ್ಲಿ ಮಹದಾಜಿಯು ವಿಸಾಜಿ ಕೃಷ್ಣ ಬಿಸೀವಾಲೆ ಎಂಬವನ ಕೈಕೆಳಗೆ ಸರದಾರಿಕೆಯ ಕೆಲಸ ಮಾಡುತ್ತಿದ್ದನು ಮುಂದೆ ಬೇಗನೆ ಇವನು ಸ್ವತಂತ್ರ ಪ್ರದೇಶಗಳನ್ನೂ, ಶಪ್ಪವನ್ನೂ ತೆಗೆದುಕೊಳ್ಳಲಿಕ್ಕೆ ಪ್ರಾರಂಭಿಸಿದನು. ಇದರಲ್ಲಿ ಅವನಿಗೆ ಯಶಸ್ಸು ದೊರಿಯಿತು. ನಾನಾಸಾಹೇಬ ಪೇಶವೆಯ ಮೃತ್ಯುವಿನ ತರುವಾಯ ಮಹದಾಜಿಗೆ ಓಲಗದಲ್ಲಿ ಎಲ್ಲ ಸರದಾರರಿಗಿಂತ ಹೆಚ್ಚಿನ ಮರ್ಯಾದೆಯು ದೊರೆಯತೊಡಗಿತು. ಅವನ ಹಾಗು ನಾನಾಫಡಣವೀಸನ ವರ್ಚಸ್ವಗಳು ಸಮಕಾಲೀನವಿದ್ದವು. ಪೇಶವೆಯವರ ಹಾಗು ಇಂಗ್ಲಿಷರ ನಡುವೆ ಯುದ್ಧವು ಪ್ರಾರಂಭವಾದಾಗ ಪೇಶವೆಯವರ ಮುಖ್ಯ

ಭಾರವು ಶಿಂದೆಯ ಮೇಲೆಯೇ ಇತ್ತು. ಮರಾಟರು ಇಂಗ್ಲಿಷರನ್ನು ವಡಗಾಂವದಲ್ಲಿ ಸೋಲಿಸಿದರು. ಆಗಿನ ಒಪ್ಪಂದವು ಪೇಶವೆಯರಿಗೆ ಅನುಕೂಲವಾಗುವ ರೀತಿಯಿಂದ ಮಾಡಿಸಿಕೊಟ್ಟವನು ಇವನೇ. ಮುಂದೆ ಸಾಲಬಾಯಿಯ ಒಪ್ಪಂದದ ವೇಳೆಯಲ್ಲಿ ಇಂಗ್ಲಿಷ-ಪೇಶವೆಯವರ ನಡುವೆ ಮಧ್ಯಸ್ಥಿಕೆ ಮಾಡಿ ಒಪ್ಪಂದವನ್ನು ಪಾಲಿಸುವ ವಿಷಯದಲ್ಲಿ ಸ್ವತಂತ್ರ ಸಂಸ್ಥಾನಿಕನೆಂದು ಇವನ ಹೊಣೆಗಾರಿಕೆಯೇ ಸ್ವೀಕರಿಸಲ್ಪಟ್ಟಿತು. ದಿಲ್ಲಿಯನ್ನು ಸ್ವಾಧೀನಪಡಿಸಿಕೊಂಡು, ಬಾತಶಹಾ ಶಹಾಆಲಮನನ್ನು ಸ್ವಾಧೀನ ಪಡಿಸಿಕೊಂಡ ಮೇಲೆ ಪೇಶವೆಯವರ ಹೆಸರಿನಿಂದ ಇವನೇ ವಕೀಲ-ಮುತಾಲಿಕನ ಸನದು ತೆಗೆದುಕೊಂಡನು.

ಉತ್ತರ ಹಿಂದುಸ್ಥಾನದಲ್ಲಿ ಸಿಂದೆ-ಇಂಗ್ಲಿಷರಿಬ್ಬರೂ ಸಂಚರಿಸುತ್ತಿದ್ದುದರಿಂದ ಪರಸ್ಪರರಲ್ಲಿ ವೈಮನಸ್ಸು ಉಂಟಾಯಿತು. ದಿಲ್ಲಿಯನ್ನೂ ದಿಲ್ಲಿಯ ಬಾದಶಹನನ್ನೂ ಸ್ವಾಧೀನಪಡಿಸಿಕೊಳ್ಳುವ ಸಾಹಸವನ್ನು ಇಬ್ಬರೂ ಮಾಡುತ್ತಿದ್ದರು ಮಹದಾಜಿಯ ಮರಣದವರೆಗೆ ಇಂಗ್ಲಿಷರ ಮನೋಇಚ್ಛೆಯು ಈಡೇರಲಿಲ್ಲ ಸನ್ ೧೭೯೪ರಲ್ಲಿ ಅವನು ಮೃತಹೊಂದಿದ ಕೂಡಲೆ ಇಂಗ್ಲಿಷರ ಕೈಯು ನಡೆಯತೊಡಗಿತು. ಮಹದಾಜಿ ಸಿಂದೆಯು ಇಂಗ್ಲಿಷರಿಗೆ ಸಮನಾದ ಜಾಣತನದಿಂದಲೂ ರಾಜ್ಯಕಾರ್ಯ ಧುರಂಧರತೆಯಿಂದಲೂ ನಡೆದನು. ಅವನ ಹಿಂದಿನಿಂದ ಶಿಂದೆಯ ಪಟ್ಟದ ಮೇಲೆ ಬಂದವರ ಆಳಿಕೆಯಲ್ಲಿ ಇಂಗ್ಲಿಷರು ಅವರನ್ನು ಪೂರ್ಣವಾಗಿ ಪರಾಭವಗೊಳಿಸಿ ಉತ್ತರದ ಪ್ರಾಂತವನ್ನೆಲ್ಲ ತೆಗೆದುಕೊಂಡರು. ಮಹದಾಜಿಯು ಮಧ್ಯಹಿಂದುಸ್ಥಾನದಲ್ಲಿ ದೊರಕಿಸಿದ ಪ್ರದೇಶವಷ್ಟೇ ಶಿಂದೆಯವರ ಮನೆತನಕ್ಕೆ ಉಳಿಯಿತು ಸನ್ ೧೮೦೩ ಇದೊಂದೇ ವರ್ಷದಲ್ಲಿ ಅಲಿಗಡ, ದಿಲ್ಲಿ, ಅಸಯಿ, ಆಗ್ರಾ, ಲಾಸವಾರಿ, ಅರಗಾಂವ ಮೊದಲಾದ ಸ್ಥಳಗಳಲ್ಲಿಯ ಶಿಂದೆಯ ಸೈನ್ಯದ ಪರಾಭವವಾಗಿ, ಮಹದಾಜಿಯ ಕಾಲದ ಸೈನ್ಯದವೈಭವವೆಲ್ಲ ನಷ್ಟವಾಗಿ ಹೋಯಿತು. ಅದೇ ವರ್ಷ ಡಿಸೆಂಬರದಲ್ಲಿ ಸರಜಿ ಅಂಜನಗಾಂವದ ಒಪ್ಪಂದವಾಗಿ, ಯಮುನಾ-ಗಂಗಾ ನದಿಗಳ ನಡುವಿನ ಪ್ರದೇಶವನ್ನೂ ಜಯಪುರ, ಜೋಧಪುರ, ಗೋಹದ ಇವುಗಳ ಉತ್ತರದ ಸೀಮೆಗಳನ್ನೂ ಭಡೋಚ, ಅಹಮ್ಮದನಗರ ಕೋಟೆಸಹಿತವಾಗಿ ಆ ಪರಗಣೆಗಳನ್ನೂ ಅಜಿಂಟಾಘಟ್ಟ, ಗೋದಾವರಿಗಳ ನಡುವಿನ ಪ್ರದೇಶವನ್ನೂ ನಿಜಾಮ-ಗಾಯಕವಾಡರ ಮೇಲಿನ ಅಧಿಕಾರ-ವಿವಾದಗಳನ್ನೂ ಶಿಂದೆಯು ಬಿಟ್ಟುಕೊಡಬೇಕಾಯಿತು. ತತ್ಕಾಲೀನ ಇಂಗ್ಲಿಷರ ಪಕ್ಷಪಾತಿಗಳೂ ಶಿಂದೆಯ ವರ್ಚಸ್ಸಿನ ಕೆಳಗಿದ್ದವರೂ ಆದ ರಾಜರ ಸ್ವಾತಂತ್ರ್ಯವನ್ನು ಅವನು ಮಾನ್ಯಮಾಡಬೇಕಾಯಿತು. ಮುಂದಿನ ವರ್ಷ ಬರ್ಹಾಣಪುರದಲ್ಲಾದ ಒಪ್ಪಂದದಿಂದ ಇಂಗ್ಲಿಷರ ಆರು ಸಾವಿರ ಸೈನ್ಯವನ್ನು ತನ್ನ ಕಡೆಗೆ ಇಟ್ಟುಕೊಳ್ಳುವದಕ್ಕೆ ದೌಲತರಾವ ಶಿಂದೆಯು ಒಪ್ಪಬೇಕಾಯಿತು. ಮೂರನೆಯ ವರ್ಷ ಅಲ್ಹಾಬಾದದಲ್ಲಾದ ಒಪ್ಪಂದದಿಂದ ಶಿಂದೆಯು ಸರಜಿ-ಅಂಜನಗಾಂವದ ಒಪ್ಪಂದದಲ್ಲಿ ಮಾರ್ಕ್ವಿಸ ವೆಲಸ್ಲಿಯ ಕಡೆಯಿಂದ ಅಲ್ಪಮಟ್ಟಿಗೆ ಸುಧಾರಣೆ ಮಾಡಿಸಿ

ಕೊಂಡನು. ಈ ಒಡಂಬಡಿಕೆಯಿಂದ ಶಿಂದೆಯು ಧೋಲಪುರ, ಬಾರೀ ಮತ್ತು ರಾಜ ಖೇಡ ಮೊದಲಾದ ಪರಗಣೆಗಳನ್ನು ಕೊಟ್ಟು, ಪ್ರತಿಯಾಗಿ ಗ್ವಾಲೇರ ಹಾಗು ಗೋಹದ ಪರಗಣೆಗಳನ್ನು ತೆಗೆದುಕೊಂಡನು. ಇದೇ ವೇಳೆಯಲ್ಲಿ ಚಂಬಳಾ ನದಿಯು ಶಿಂದೆಯ ನಾಡಿನ ಉತ್ತರ ಮೇರೆಯೆಂದು ನಿಶ್ಚಿತವಾಯಿತು; ಹಾಗು ಉದೇಪುರ, ಜೋಧಪುರ, ಕೋಟಾ ಮೊದಲಾದ ಸಂಸ್ಥಾನಿಕರೊಡನೆ ಶಿಂದೆಯನ್ನು ಬಿಟ್ಟು ಸ್ವತಂತ್ರ ಒಪ್ಪಂದ ಮಾಡಿಕೊಳ್ಳುವದಿಲ್ಲವೆಂದು ಇಂಗ್ಲಿಷರು ಒಪ್ಪಿದರು, ಆದರೆ ಲಕ್ಷ್ಯದಲ್ಲಿಡುವಂಥ ಮಾತು ಯಾವುದೆಂದರೆ, ಶಿಂದೆಯು ಸ್ವಂತಕ್ಕಾಗಿ ಹಾಗು ತನ್ನ ಮಗಳಿಗಾಗಿ ನಾಲ್ಕು ಲಕ್ಷದ ಜಹಾಗೀರಿಯನ್ನು ತೆಗೆದುಕೊಂಡು ಇಂಗ್ಲಿಷರ ವೇತನದ ಸರದಾರನಾದನು! ೧೮೧೭ರಲ್ಲಿ ಶಿಂದೆಯು ಬಾಜೀರಾಯನಿಗೆ ನೆರವಾಗುವ ಸಂಭವವಿರುವದೆಂಬದನ್ನು ತಿಳಿದು, ಇಂಗ್ಲಿಷರು ತಮ್ಮ ಸೈನ್ಯವನ್ನು ಅವನ ನಾಡಿನಲ್ಲಿ ಕಳುಹಿಸಿದರು. ಆಗ ಅವನು ಇಂಗ್ಲಿಷರೊಡನೆ ಒಡಂಬಡಿಕೆ ಮಾಡಿಕೊಂಡನು. ಇಂಗ್ಲಿಷರು ಹೇಳಿದಲ್ಲಿ ಸೈನ್ಯದ ಬೀಡು ಇರಬೇಕೆಂತಲೂ, ಅವರ ಆಜ್ಞೆಯಿಲ್ಲದೆ ಅದು ಅತ್ತಿತ್ತ ಚಲಿಸಬಾರ ದೆಂತಲೂ ನಿರ್ಧರವಾಯಿತು. ಇಷ್ಟಲ್ಲದೆ ಮರಾಟರಿಗೂ ಇಂಗ್ಲಿಷರಿಗೂ ಯುದ್ಧವು ಪ್ರಾರಂಭವಾದಾಗ ಇಂಗ್ಲಿಷರ ಸೈನ್ಯಕ್ಕೆ ಪ್ರತಿಬಂಧಮಾಡಬಾರದೆಂಬುದರ ನಂಬಿಗೆ ಗಾಗಿ ಅಶೀರಗಡಕೋಟೆಯನ್ನೂ ರಜಪುತಸಂಸ್ಥಾನಿಕರಿಂದ ಬರುವ ಕಪ್ಪಿನ ಮೂರು ವರ್ಷಗಳ ಆದಾಯವನ್ನೂ ಅವನು ಇಂಗ್ಲಿಷರಿಗೆ ಕೊಟ್ಟನು.

ದೌಲತರಾವ ಶಿಂದೆಯು ೧೮೨೭ನೆಯ ಮಾರ್ಚ ತಿಂಗಳಲ್ಲಿ ಮಡಿದನು. ಇವನ ಆಳಿಕೆಯಲ್ಲಿ ಪೇಶವಾಯಿಯೊಡನೆ ಶಿಂದೆಶಾಹಿಯಾದರೂ ನಷ್ಟವಾಗುವ ಮೆಟ್ಟಿಗೆ ಬಂದಿತ್ತು; ಆದರೆ ಸುದೈವದಿಂದ ಈ ಶಿಂದೆಶಾಹಿಯು ಉಳಿದು, ಒಂದೂವರೆ ಕೋಟಿಯ ಮರಾಟ ರಾಜ್ಯವು ಮಾತ್ರ ಉತ್ತರ ಹಿಂದುಸ್ತಾನದಲ್ಲಿ ಉಳಿದುಕೊಂಡಿತು. ಮಹದಾ ಜಿಯು ಸಂಪಾದಿಸಿದ ಸೀಮೆಯ ಬಹು ಭಾಗವನ್ನು ದೌಲತರಾಯನು ಕಳೆದನು. ದೌಲತರಾಯನ ತರುವಾಯ ದಕ್ಷಿಣದೊಳಗಿನ ಮರಾಟರಲ್ಲಿ ಒಬ್ಬ ಅಲ್ಪ ವಯಸ್ಕ ಬಾಲಕನನ್ನು ಶಿಂದೆಯ ಹೆಂಡತಿಯಾದ ಬಾಯಜಾಬಾಯಿಯು ತೊಡೆಯ ಮೇಲೆ ದತ್ತಪುತ್ರನೆಂದು ಕೊಡಲಾಯಿತು. ಆಗ ರಾಜ್ಯಕಾರಭಾರವು ಬ್ರಿಟಿಶ ರೆಸಿಡೆಂಟನ ಪರವಾಗಿ ಸಾಗಿತು. ೧೮೩೭ರಲ್ಲಿ ಶಿಂದೆಯ ಸೈನ್ಯದ ಪುನರ್ರಚನೆಯಾಗಿ ಅದರ ಮೇಲೆ ಇಂಗ್ಲಿಷ ಅಧಿಕಾರಿಯು ನಿಯಮಿಸಲ್ಪಟ್ಟನು. ಜನಕೋಜಿ ಸಿಂದೆಯ ಆಳಿಕೆ ಯಲ್ಲಿ ನೇಪಾಳ, ಅಫಗಾಣಿಸ್ತಾನಗಳಲ್ಲಿಯು ಹಾಗು ಮುಂದೆ ೧೮೪೭ರಲ್ಲಿ ಬ್ರಹ್ಮಾವರ್ತ ದಿಂದ ಪೇಶವೆಯ ಕಡೆಯ ಯುದ್ಧಕ್ಕಾಗಿ ಇಂಗ್ಲಿಷರ ವಿರುದ್ಧವಾಗಿ ನಿಲ್ಲಲಿಕ್ಕೆ ಶಿಂದೆ ಯನ್ನು ಹುರುಪುಗೊಳಿಸಲಾಗಿತ್ತು; ಆದರೆ ಶಿಂದೆಯು ಹಾಗೆ ಮಾಡಲಿಲ್ಲ. ೧೮೪೪ರಲ್ಲಿ ಶಿಂದೆಯ ಕಡೆಯಿಂದ ಒಡೆದು ಹೋದ ಸೈನ್ಯವು ಇಂಗ್ಲಿಷರ ವಿರುದ್ಧವಾಗಿ ಯುದ್ಧ ಮಾಡಿತು. ಈ ಯುದ್ಧದಲ್ಲಿ ಇಂಗ್ಲಿಷರ ಹಾನಿಯು ಬಹಳವಾಯಿತು. ಕೊನೆಗೆ ಶಿಂದೆಯ ಸೈನ್ಯದ ಪರಾಭವವಾಯಿತು. ಈ ಕೃತ್ಯದ ಪ್ರಾಯಶ್ಚಿತ್ತವೆಂದು ಶಿಂದೆಯು ೧೮ ಲಕ್ಷ

ರೂಪಾಯಿಗಳ ಸೀಮೆಯನ್ನು ಸೈನ್ಯದ ವೆಚ್ಚಕ್ಕಾಗಿ ಇಂಗ್ಲಿಷರಿಗೆ ಕೊಡಬೇಕಾಯಿತು; ಹಾಗು ತನ್ನ ಸೈನ್ಯವನ್ನು ಕಡಿಮೆ ಮಾಡಬೇಕಾಯಿತು. ತರುವಾಯ ೧೮೫೭ರಲ್ಲಿ ಸಿಂದೆಯ ಸೈನಿಕರಲ್ಲಿ ಕೆಲವರು ಬಂಡಾಯ ಮಾಡಿ, ಈ ಬಂಡಾಯದಲ್ಲಿ ಮುಂದಾಳುತನವನ್ನು ಹೊರಬೇಕೆಂದು ಶಿಂದೆಗೆ ವಿನಂತಿ ಮಾಡಿಕೊಂಡರು. ಈ ಸಂಧಿಯು ಕರ್ನಲ ಮ್ಯಾಲೆಸನನು ಅನ್ನುವಂತೆ ಹೀಗೆ ಇರುವದು:—"ಮಹಾದಜಿ ಶಿಂದೆಯು ಜೀವಂತನಿದ್ದರೆ, ಅವನು ಅದರ ಲಾಭಹೊಂದಿ ಇಂಗ್ಲಿಷರ ರಾಜ್ಯವನ್ನು ನಿಶ್ಚಯವಾಗಿ ಮುಳುಗಿಸುತ್ತಿದ್ದನು. ದೌಲತರಾವ ಶಿಂದೆಯು ಇಷ್ಟು ಕಟ್ಟಳೆಗೊಳಗಾಗಿದ್ದರೂ, ಅವರ ಪಕ್ಷಪಾತಿಯಾಗದೆ ಇರುತ್ತಿದ್ದಿಲ್ಲ. ಜಯಾಜಿರಾವ ಶಿಂದೆಯಾದರೂ ಮನಸ್ಸಿನ ಮೇಲೆ ತೆಗೆದುಕೊಂಡಿದ್ದರೆ, ಪೇಶವೆ, ಝಾಂಶಿಯ ಮಹಾರಾಣಿ ಮತ್ತು ಬಂಡುಗಾರ ಸೈನಿಕರು ಇವರೆಲ್ಲರೊಡನೆ ಕೂಡಿ ಹಿಂದುಸ್ಥಾನದಲ್ಲಿ ಇಂಗ್ಲಿಷರ ಅಧಿಕಾರವನ್ನು ಇಲ್ಲದಂತೆ ಮಾಡುತ್ತಿದ್ದನು; ಆದರೆ ಜಯಾಜಿಯು ಇಂಗ್ಲಿಷರ ಪಕ್ಷದವನಾಗಿಯೇ ಉಳಿದನು. ಈ ಪ್ರಾಮಾಣಿಕತನಕ್ಕೆ ಪಾರಿತೋಷಕವೆಂದು ಶಿಂದೆಗೆ ಇಂಗ್ಲಿಷರು ಮೂರು ಲಕ್ಷ ರೂಪಾಯಿಗಳ ಸೀಮೆಯನ್ನು ಕೊಟ್ಟರು. ದತ್ತಕ ತೆಗೆದುಕೊಳ್ಳಲಿಕ್ಕೆ ಒಪ್ಪಿಗೆಯೂ ದೊರೆಯಿತು ಮೂರುಸಾವಿರ ಕಾಲಾಳುಗಳಿಗೆ ಪ್ರತಿಯವಿಗಿ ಐದು ಸಾವಿರ ಕಾಲಾಳುಗಳನ್ನು ಇಟ್ಟುಕೊಳ್ಳಬೇಕೆಂದೂ, ಮೂವತ್ತೆರಡು ತೋಫುಗಳಿಗೆ ಪ್ರತಿಯಾಗಿ ಮೂವತ್ತಾರು ತೋಫುಗಳನ್ನಿರಿಸಿಕೊಳ್ಳಬೇಕೆಂದೂ ಆಜ್ಞೆಯಾಯಿತು. ಬಂಡಾಯದಲ್ಲಿ ಕೂಡಿದ ಶಿಂದೆಯ ಸೈನ್ಯದ ಸ್ಥಳದಲ್ಲಿ ಇಂಗ್ಲಿಷರು ತಮ್ಮ ಅಧಿಕಾರಸ್ಥರ ಕೈಕೆಳಗಿನ ಸೈನ್ಯವನ್ನಿರಿಸಿದರು. ಈ ಮೇರೆಗೆ ಶಿಂದೆ-ಇಂಗ್ಲಿಷರ ಸಂಬಂಧವು ೮೦-೮೫ ವರ್ಷದ್ದಾಗಿದೆ.

---

## ಹೋಳಕರರೂ ಇಂಗ್ಲಿಷರೂ

ಶಿಂದೆಯ ಮೂಲಪುರುಷನು ಹುಜುರೆಯಿದ್ದಂತೆ ಹೋಳಕರನುನೆತನದ ಮೂಲಪುರುಷ ಮಲ್ಹಾರರಾಯನು ಕುರಿಕಾಯುವ ಹಾಗು ಕಂಬಳಿ ನೇಯುವ ಕುರುಬನಾಗಿದ್ದನು. ಒಮ್ಮೆ ಅವನು ತನ್ನ ಊರಲ್ಲಿದ್ದಾಗ ಗುಜರಾಥದ ಕಡೆಗೆ ಸೈನ್ಯವು ಹೋಗುತ್ತಿದ್ದುದನ್ನು ನೋಡಿ ಅದರಲ್ಲಿ ಸೈನಿಕನಾಗಿ ಇರತೊಡಗಿದನು. ಮುಂದೆ ಯುದ್ಧದಲ್ಲಿ ಪರಾಕ್ರಮವನ್ನು ತೋರಿಸಿದ್ದರಿಂದ, ಕಂಠಾಜಿ ಕದಮನೆಂಬ ಸರದಾರನ ಕೈಯಲ್ಲಿ ಇಪ್ಪತ್ತೈದು ಸ್ವಾರರ ಮೇಲಿನ ಮನಸಬದಾರಿಕೆಯು ದೊರೆಯಿತು. ತರುವಾಯ ಪೇಶವೆಯು ಮಾಳವದ ಕಡೆಗೆ ಹೊರಟಾಗ ಶತ್ರುಪಕ್ಷದ ಕಡೆಗಿದ್ದ ಮಲ್ಹಾರರಾಯನ ಶೌರ್ಯವು ದೃಷ್ಟಿಗೆ ಬಿದ್ದುದರಿಂದ, ಬಾಜೀರಾವ ಪೇಶವೆಯು ಅವನನ್ನು ಕಂಠಾಜಿಯ ಕಡೆಯಿಂದ ತನ್ನಲ್ಲಿ ನೌಕರಿಗೆ ತೆಗೆದುಕೊಂಡು, ೧೭೨೪ರಲ್ಲಿ ೫೦೦ ಸ್ವಾರರ ಮೇಲಿನ ಮನಸಬದಾರಿಕೆಯನ್ನು ಕೊಟ್ಟನು. ರಾಣೋಜಿ ಶಿಂದೆಯಂತೆ ಮಲ್ಹಾರರಾವ ಹೋಳಕರನಾದರೂ ಬೇಗನೆ ಉತ್ಕರ್ಷಹೊಂದಿದನು ೧೭೨೮ರಲ್ಲಿ ಹನ್ನೆರಡು

ಪರಗಣೆಗಳನ್ನೂ ೧೭೩೧ರಲ್ಲಿ ಮತ್ತೆ ಇಪ್ಪತ್ತು ಪರಗಣೆಗಳನ್ನೂ ಬಾಜೀರಾಯನು ಮಲ್ಹಾರರಾಯನ ಅಧಿಕಾರದಲ್ಲಿ ಕೊಟ್ಟು, ಮಾಳವದ ಸುಭೇದಾರಿಕೆಯನ್ನು ಸ್ವಹಸ್ತದಿಂದ ಆತನಿಗೆ ಸನದು ಮಾಡಿಕೊಟ್ಟನು.

ಮುಂದೆ ಬೇಗನೆ ಇಂದೂರೂ ಅದರ ಕೆಳಗಿನ ಪ್ರದೇಶವೂ ಮಲ್ಹಾರರಾಯನಿಗೆ ಸ್ಥಿರವಾಗಿ ದೊರೆತವು. ೧೭೩೮ರಲ್ಲಿ ನರ್ಮದೆಯ ಉತ್ತರಬಲ್ಲಿರುವ ಎಲ್ಲ ಮರಾಟರ ಸೈನ್ಯದ ಆಧಿಪತ್ಯವು ಅವನ ಕಡೆಗೆ ಒಪ್ಪಿಸಲ್ಪಟ್ಟಿತು. ನಿಜಾಮನೊಡನೆಯೂ ವಸಯಿಯ ಪೋರ್ತುಗೀಜರೊಡನೆಯೂ ಆದ ಯುದ್ಧಗಳಲ್ಲಿ ಮಲ್ಹಾರರಾಯನೇ ಪ್ರಮುಖನಾಗಿದನು. ೧೭೫೧ರಲ್ಲಿ ಮಲ್ಹಾರರಾಯನು ರೋಹಿಲರ ವಿರುದ್ಧವಾಗಿ ಅಯೋಧ್ಯೆಯ ನವಾಬನಿಗೆ ಸಹಾಯಮಾಡಿದನು. ಪಾಣಿಪತ್ತದ ಸಂಗ್ರಾಮದಲ್ಲಿ ಮಲ್ಹಾರರಾಯನು ಇದ್ದನು. ಅಬದಾಲಿಯೊಡನೆ ರಣಭೂಮಿಯಲ್ಲಿ ಎದುರಾಗಿ ಯುದ್ಧಮಾಡುವದಕ್ಕಿಂತ ತಂತ್ರಯುದ್ಧ ಮಾಡಬೇಕೆಂದು ಅವನು ಸದಾಶಿವರಾವ ಭಾವೂನಿಗೆ ಸಲಹೆಕೊಟ್ಟಿದ್ದನು; ಆದರೆ ಈ ಮಾತು ನಿರಾಕರಿಸಲ್ಪಟ್ಟಿತು. ಪಾಣಿಪತ್ತದ ಪರಾಜಯವಾದ ಮೇಲೆ ಮಲ್ಹಾರರಾಯನು ಉಳಿದ ಸೈನ್ಯವನ್ನು ತೆಗೆದುಕೊಂಡು ದಕ್ಷಿಣಕ್ಕೆ ಬಂದನು. ಅವನು ೧೭೬೬ರಲ್ಲಿ ಮರಣಹೊಂದಿದನು. ಅವನ ಮರಣ ಸಮಯದಲ್ಲಿ ಅವನ ರಾಜ್ಯದ ಉತ್ಪನ್ನವು ೭೫ ಲಕ್ಷ ರೂಪಾಯಿಗಳದಿತ್ತು. ಮಲ್ಹಾರರಾಯನ ತರುವಾಯ ಅವನ ಸೊಸೆಯಾದ ಅಹಲ್ಯಾಬಾಯಿಯೂ ಮತ್ತು ತುಕೋಜಿರಾವ ಹೋಳಕರನೂ ಕೂಡಿ ಸುಮಾರು ೩೦ ವರ್ಷ ರಾಜ್ಯಕಾರಭಾರ ಮಾಡಿದರು. ಪರರಾಜ್ಯಗಳೊಡನೆ ಹೇಗೆ ಸಂಬಂಧವಿಡಬೇಕೆಂಬದನ್ನು ಬಹುತರವಾಗಿ ಅಹಲ್ಯಾಬಾಯಿಯೇ ನಿಶ್ಚಯಿಸುತ್ತಿದ್ದಳು. ತುಕೋಜಿ ಹೋಳಕರನು ಗುಜರಾಥ, ಮೈಸೂರ ಮೊದಲಾದ ಕಡೆಯ ಮರಾಟರ ದಾಳಿಗಳಲ್ಲಿ ಕೂಡಿದ್ದನು.

೧೭೯೫ರಲ್ಲಿ ಅಹಲ್ಯಾಬಾಯಿಯೂ ೧೭೯೭ರಲ್ಲಿ ತುಕೋಜಿ ಹೋಳಕರನೂ ಮರಣಹೊಂದಿದರು ತರುವಾಯ ಶಿಂದೆ-ಹೋಳಕರರಲ್ಲಿ ವೈಮನಸ್ಯ ಉಂಟಾಯಿತು. ಬಾಜೀರಾಯನ ಕಾರಸ್ಥಾನೀ ಸ್ವಭಾವಕ್ಕಾಗಿ ಶಿಂದೆಯಂತೆ ಹೋಳಕರನದಾದರೂ ಪುಣೆಯ ಮಿತ್ರತ್ವದ ಸಂಬಂಧವು ಕಡಿಯಿತು. ೧೭೯೮ರಲ್ಲಿ ಯಶವಂತರಾವ ಹೋಳಕರನು ಸ್ವಪರಾಕ್ರಮದಿಂದ ತಂದೆಯ ಪಟ್ಟವನ್ನು ಹಸ್ತಗತಮಾಡಿಕೊಂಡನು. ಮೊದಲು ಇಂಗ್ಲಿಷರ ಹಾಗು ತುಕೋಜಿರಾಯನ ಶತ್ರುತ್ವದ ಸಂಬಂಧವು ಬೋರಘಟ್ಟದ ಕಡೆಯ ಯುದ್ಧದಲ್ಲಾಯಿತು. ಅನಂತರದಲ್ಲಿ ಅದೇ ಬಗೆಯ ಸಂಬಂಧವು ವಸಯಿಯ ಒಡಂಬಡಿಕೆಯಾದ ಮೇಲೆ ಆಯಿತು. ಮುಂದೆ ೧೮೦೩ರಲ್ಲಿ ವಸಯಿಯ ಒಪ್ಪಂದದ ಸಲುವಾಗಿ ಶಿಂದೆ-ಇಂಗ್ಲಿಷರಲ್ಲಿ ಯುದ್ಧವು ಪ್ರಾರಂಭವಾಯಿತು. ಆಗ ಹೋಳಕರನು ತಟಸ್ಥನಾಗಿದ್ದನು. ಶಿಂದೆಯು ಪರಾಭೂತನಾದ ಮೇಲೆ ಯಶವಂತರಾವ ಹೋಳಕರನು ಇಂಗ್ಲಿಷರೊಡನೆ ಯುದ್ಧವನ್ನು ಪ್ರಾರಂಭಿಸಿದನು. ಹೋಳಕರನು ಕರ್ನಲ್ ಮ್ಯಾನಸನನನ್ನು ಪರಾಭವಗೊಳಿಸಿ, ಇಂಗ್ಲಿಷರ ಸೀಮೆಯು

ಮೇಲೆ ದಾಳಿ ಮಾಡಿದನು; ಆದರೆ ಫತ್ತೇಗಡ, ಡೀಗ, ಭರತಪುರಗಳಲ್ಲಿ ಅವನು ಪರಾಜಿತನಾದ ಮೇಲೆ ಇಂಗ್ಲಿಷರೊಡನೆ ಒಡಂಬಡಿಕೆ ಮಾಡಿಕೊಳ್ಳಬೇಕಾಯಿತು. ಈ ಒಪ್ಪಂದದಿಂದ ಅವನ ಹೆಚ್ಚು ಸೀಮೆಗಳೇನೂ ಹೋಗಲಿಲ್ಲ. ಇಂದೂರಿಗೆ ತಿರುಗಿ ಬಂದ ಮೇಲೆ ಅವನು ತನ್ನ ಸೈನ್ಯವನ್ನು ಕಡಿಮೆ ಮಾಡಿ ರಾಜ್ಯವ್ಯವಸ್ಥೆಯನ್ನು ಸುಧಾರಿಸಹತ್ತಿದನು. ಅಲ್ಪಮುಷ್ಟಿಗೆ ಕವಾಯತಿನ ಸೈನ್ಯವನ್ನಿರಿಸಬೇಕೆಂದೂ ತೋಫಿನ ಕಾರ್ಯಾಲಯವನ್ನು ಮಾಡಬೇಕೆಂದೂ ವಿಚಾರದಲ್ಲಿರುವಾಗ ಅವನು ಹುಚ್ಚುಹಿಡಿದು ೧೮೧೧ ರಲ್ಲಿ ಮರಣಹೊಂದಿದನು. ಯಶವಂತರಾವ ಹೋಳಕರನ ತರುವಾಯ ಅವನ ರಾಜ್ಯದಲ್ಲಿ ಅನಾಯಕತ್ವವುಂಟಾಯಿತು; ಅನೇಕ ಕ್ರಾಂತಿಗಳು ಘಟಿಸಿದವು ೧೮೧೭ರಲ್ಲಿ ಹೋಳಕರನ ಸೈನ್ಯವು ಇಂಗ್ಲಿಷರೊಡನೆ ಯುದ್ಧವನ್ನು ಆರಂಭಿಸಿತು; ಆದರೆ ಮಹಿದಪುರದಲ್ಲಿ ಅದು ಪರಾಭವ ಹೊಂದಿ, ಮಂಡಲೇಶ್ವರದಲ್ಲಿ ಒಡಂಬಡಿಕೆಯಾಯಿತು. ಈ ಒಪ್ಪಂದದಿಂದ ಹೋಳಕರನ ಬಹಳೇ ಪ್ರದೇಶಗಳು ಇಂಗ್ಲಿಷರ ವಶವಾದವು. ಈ ವೇಳೆಯಲ್ಲಿ ಪಟ್ಟಾಧಿಕಾರಿಯಾದ ಮಲ್ಹಾರರಾಯನು ಹದಿನಾರು ವರ್ಷದವನಿದ್ದನು. ಇಂಗ್ಲಿಷರು ಅವನನ್ನು ತಮ್ಮ ಸಂರಕ್ಷಣೆಯಲ್ಲಿ ತೆಗೆದುಕೊಂಡು, ದಿವಾಣ ತಾತ್ಯಾ ಜೋಗ ಇವನಿಂದ ದರಬಾರದ ಕಡೆಯ ಸೈನ್ಯವನ್ನು ಬಹಳವಾಗಿ ಕಡಿಮೆ ಮಾಡಿಸಿದರು. ೧೮೩೧-೩೩ರಲ್ಲಿ ಇಂದೂರ ಸಂಸ್ಥಾನದಲ್ಲಿ ಬಂಡಾಯಗಳಾದವು. ಇಂಗ್ಲಿಷರ ಸಹಾಯದಿಂದ ಈ ಬಂಡಾಯಗಳು ಶಾಂತವಾದವು. ಮಲ್ಹಾರರಾಯನ ಆಳಿಕೆಯಲ್ಲಿ ಇಂಗ್ಲಿಷ ಸರಕಾರದವರು ತಮ್ಮ ಅಫೀಮಿನ ಉತ್ಪನ್ನವನ್ನು ಹಳಿಯಿಸಿದರು. ಮಲ್ಹಾರರಾಯನು ೧೮೩೩ರಲ್ಲಿ ಮಡಿದನು. ಅವನ ತರುವಾಯ ಹರಿರಾವ ಹೋಳಕರನು ಪಟ್ಟಕ್ಕೆ ಬಂದನು. ಇವನ ಆಳಿಕೆಯಲ್ಲಿ ರಾಜ್ಯದೊಳಗೆ ಬಹಳೇ ಅವ್ಯವಸ್ಥೆಯುಂಟಾದ ಮೂಲಕ ಇಂಗ್ಲಿಷ ಸರಕಾರದವರು ಅಂತರ್ವ್ಯವಸ್ಥೆಯಲ್ಲಿ ಕೈಹಾಕತೊಡಗಿದರು. ಅವನ ಹಿಂದೆ ೧೮೪೩ರಲ್ಲಿ ಖಂಡೇರಾಯನೂ ಮುಂದ ಮೂರೇ ತಿಂಗಳ ಮೇಲೆ ತುಕೋಜಿ ಹೋಳಕರನೂ ಪಟ್ಟಕ್ಕೆ ಬಂದರು. ಈ ತುಕೋಜಿಯ ಆಳಿಕೆಯಲ್ಲಿ ಹೋಳಕರಶಾಹಿಯೊಳಗಿನ ಸೈನ್ಯವು ೧೮೫೭ರಲ್ಲಿ ಬಂಡಾಯಮಾಡಿತು; ಆದರೆ ಅದರಲ್ಲಿ ತುಕೋಜಿಯ ಸಂಬಂಧವೇನೂ ಇದ್ದಿಲ್ಲ.

———

## ಗಾಯಕವಾಡರೂ ಇಂಗ್ಲಿಷರೂ.

ಎಲ್ಲ ಮರಾಟ ಸರದಾರರೊಳಗೆ ಗಾಯಕವಾಡನ ಸಂಬಂಧವೇ ಇಂಗ್ಲಿಷರೊಡನೆ ಮೊಟ್ಟ ಮೊದಲು ಉಂಟಾಯಿತು. ಗುಜರಾಥದ ಭಾಗದಲ್ಲಿ ಇಂಗ್ಲಿಷರ ಠಾಣ್ಯವು ಮೊದಲಿನಿಂದ ಇದ್ದುದರಿಂದಲೇ ಹೀಗೆ ಸಂಬಂಧವುಂಟಾಗಿರಬಹುದು.

ಗುಜರಾಥದಲ್ಲಿ ಮೊಗಲರಿಗಿಂತ ಮೊದಲು ಒಂದು ರಾಜ್ಯವಿದ್ದಿತು. ಮುಂದೆ ಮೊಗಲರು ಗುಜರಾಥವನ್ನು ಗೆದ್ದು ಅಹಮ್ಮದಾಬಾದದಲ್ಲಿ ಸೈನ್ಯದ ಬೀಡು ಇಟ್ಟರು. ೧೬೬೪, ೬೬, ೭೦ ಈ ವರ್ಷಗಳಲ್ಲಿ ಶಿವಾಜಿಯು ಗುಜರಾಥದ ಮೇಲೆ ದಾಳೀ ಮಾಡಿ

ದನು. ಆಗಿನಿಂದ ಮರಾಟರ ಹೆಜ್ಜೆಯು ಗುಜರಾಥದಲ್ಲಿ ಬಿದ್ದಿತು. ೧೭೦೫ರಲ್ಲಿ ಧನಾಜಿ ಜಾಧವನ ಕೈ ಕೆಳಗಿನ ಮರಾಟರು ಗುಜರಾಥದ ಮೇಲೆ ದಾಳೀ ಮಾಡಿ, ಅಲ್ಲಿಯ ಮುಸಲ್ಮಾನ ಸುಭೇದಾರನನ್ನು ಪರಾಭವಗೊಳಿಸಿದರು. ಮುಸಲ್ಮಾನರ ಆಳಿಕೆಗೆ ಅಲ್ಲಿಯ ಹಿಂದುಗಳು ಬೇಸತ್ತಿದ್ದುದರಿಂದ, ಮರಾಟರ ಪ್ರವೇಶವಾದೊಡನೆಯೆ ಅವರು ಆ ಜನರನ್ನು ಕೂಡಿಗರು ಹದಿನೆಂಟನೆಯ ಶತಕದ ಆರಂಭದಲ್ಲಿ ಮರಾಟರ ಸೇನಾಪತಿಯಾದ ಖಂಡೇರಾವ ದಾಭಾಡೆಯು ಗುಜರಾಥ-ಕಾಠೇವಾಡಗಳಲ್ಲಿ ಕಪ್ಪವನ್ನು ಎತ್ತುತ್ತಿದ್ದನು. ೧೭೧೮ರಲ್ಲಿ ಮೊಗಲ ಬಾದಶಹನಿಂದ ಶಾಹೂರಾಜನಿಗೆ ದೊರೆತ ಸನದುಗಳಲ್ಲಿ ಗುಜರಾಥಪ್ರಾಂತದ ಚೌಥಾಯಿಯನ್ನು ಎತ್ತುವ ಸನದು ಇದ್ದಿಲ್ಲ; ಆದರೂ ಸೇನಾಪತಿಯು ಅಲ್ಲಿಯ ಚೌಥವನ್ನು ಎತ್ತುವ ಪರಿಪಾಠವನ್ನು ಬಿಟ್ಟಿದ್ದಿಲ್ಲ; ಆದರೆ ಈ ದಾಭಾಡೆಯು ಶಾಹೂರಾಜನಿಗೆ ಸರಿಯಾದ ರೀತಿಯಿಂದ ಹಣವನ್ನು ಸಲ್ಲಿಸುತ್ತಿದ್ದಿಲ್ಲ. ಆದ್ದರಿಂದ ಶಾಹುವು ಅಲ್ಲಿಯ ಹಣವನ್ನು ಎತ್ತುವದಕ್ಕಾಗಿ ಆನಂದರಾವ ಪವಾರನನ್ನು ಸ್ಥಿರವಾಗಿ ಇಟ್ಟನು. ಇದೇ ಸಮಯಕ್ಕೆ ದಾಭಾಡೆಯ ಸೈನ್ಯದೊಳಗಿನ ದಮಾಜಿ ಗಾಯಕವಾಡನೆಂಬ ಸೈನಿಕನು ಪರಾಕ್ರಮವನ್ನು ತೋರಿಸಿ ಶಾಹುವಿನಿಂದ ಸಮಶೇರ ಬಹಾದ್ದರನೆಂಬ ಪದವಿಯನ್ನೂ ದ್ವಿತೀಯ ಸೇನಾಪತಿಯ ಸ್ಥಳವನ್ನೂ ದೊರಕಿಸಿದನು. ಮುಂದೆ ೧೭೨೧ರಲ್ಲಿ ದಮಾಜಿಯು ಮರಣಹೊಂದಿದ ಮೇಲೆ ಅವನ ಮೊಮ್ಮಗನಾದ ಪಿಲಾಜಿಯು ಗಾಯಕವಾಡೀ ಸರದಾರನಾದನು. ಧಾರದ ಪವಾರನೊಡನೆ ವೈಮನಸ್ಸುಂಟಾದ್ದರಿಂದ, ಪಿಲಾಜಿಯು ಸೋನಾಗಡ ಕೋಟೆಯನ್ನು ತನ್ನ ಠಾಣ್ಯವನ್ನಾಗಿ ಮಾಡಿಕೊಂಡನು. ಗಾಯಕವಾಡದವರ ರಾಜಧಾನಿಯು ಅಲ್ಲಿಯೇ ೧೭೬೬ನೆಯ ಇಸವಿಯವರೆಗಿತ್ತು. ಈ ಸಮಯದಲ್ಲಿ ಗುಜರಾಥದೊಳಗಿನ ಮೊಗಲರ ಅಧಿಕಾರವು ಸಂಪೂರ್ಣವಾಗಿ ನಷ್ಟವಾಯಿತು. ಗುಜರಾಥದಲ್ಲಿ ದಾಳಿಮಾಡುವ ಕೆಲಸವು ಉದಾಜಿ ಪವಾರ, ಕಂಠಾಜಿ ಕದಮ, ಪಿಲಾಜಿ ಗಾಯಕವಾಡ ಇವರ ಕಡೆಗಿತ್ತು. ಕೊನೆಗೆ ಈ ಪ್ರಾಂತವನ್ನು ಸರ್ವಸ್ವವಾಗಿ ಯಾರು ಸ್ವಾಧೀನದಲ್ಲಿಟ್ಟುಕೊಳ್ಳಬೇಕೆಂಬದರಬಗ್ಗೆ ಅವರಲ್ಲಿ ಒಂದೇಸವನೆ ಮೇಲಾಟ ನಡೆದಿತ್ತು. ೧೭೨೩ರಲ್ಲಿ ಪಿಲಾಜಿಯು ಸುರತವನ್ನು ತೆಗೆದುಕೊಂಡು, ಅಹಮ್ಮದಾಬಾದದಲ್ಲಾದರೂ ತನ್ನ ಗುಮಾಸ್ತನನ್ನಿರಿಸಿದನು. ಚೌಥದ ಪಾಲಿನ ಸಲುವಾಗಿ ಜಗಳವುಂಟಾಗಿ, ಕದಮನಿಗೂ ಗಾಯಕವಾದನಿಗೂ ಖಂಬಾಯತದಲ್ಲಿ ಯುದ್ಧವಾಯಿತು. ಈ ಯುದ್ಧದಲ್ಲಿ ಪಿಲಾಜಿಯು ಸೋತನು. ಕೊನೆಗೆ ಉತ್ತರ ಗುಜರಾಥದೊಳಗಿನ ಹಣವನ್ನು ಕದಮನೂ ದಕ್ಷಿಣ ಗುಜರಾಥದೊಳಗಿನ ಹಣವನ್ನು ಗಾಯಕವಾಡನೂ ಎತ್ತಬೇಕೆಂದು ಒಪ್ಪಂದವಾಯಿತು. ಮತ್ತೆ ಆ ಇಬ್ಬರಲ್ಲಿ ಕಲಹವು ಉಪಸ್ಥಿತವಾಯಿತು; ಆದರೆ ದಾಭಾಡೆಯ ಪ್ರತಿಸ್ಪರ್ಧಿಯಾದ ಬಾಜೀರಾವ ಪೇಶವೆಯೊಡನೆ ಇವರಿಬ್ಬರ ವೈಮನಸ್ಸುಂಟಾದ್ದರಿಂದ, ೧೭೩೦ರಲ್ಲಿ ಅವರಿಬ್ಬರೂ ಒಂದಾದರು. ಮುಂದೆ ಡಭಯಿಯ ಕಾಳಗದಲ್ಲಿ ಬಾಜೀರಾಯನು ದಾಭಾಡೆ ಹಾಗು ಪಿಲಾಜಿ ಇವರಿಬ್ಬರನ್ನೂ ಪರಾಭವಗೊಳಿಸಿದನು. ಆದರೆ ಶಾಹೂ

ರಾಜನು ದಾಭಾಡೆಯ ಮಗನ ಕಡೆಗೆ ತಂದೆಯ ಅಧಿಕಾರವನ್ನು ಕೊಟ್ಟು, ಪಿಲಾಜಿಯನ್ನು ಅವನ ಮುತಾಲಿಕನನ್ನಾಗಿ ನಿಯಮಿಸಿದನು. ಗಾಯಕವಾಡನಿಗೆ ಸೇನಾಖಾಸಖೇಲ ಎಂಬ ಪದವಿಯು ಶಾಹೂರಾಜನಿಂದ ದೊರೆಯಿತು. ಗುಜರಾಥದ ಚೌಥದೊಳಗಿನ ಅರ್ಧ ಭಾಗವನ್ನೂ, ಕಿರುಕಳ ಮಾಂಡಲಿಕರಿಂದ ಬಂದ ಹಣದಲ್ಲಿಯ ಯೋಗ್ಯ ಭಾಗವನ್ನೂ ಪೇಶವೆಯವರ ಮುಖಾಂತರವಾಗಿ ಛತ್ರಪತಿ ದರಬಾರಕ್ಕೆ ತಲುಪಿಸುವದಕ್ಕೆ ಅವನು ಒಪ್ಪಿದನು. ೧೭೩೧ರಲ್ಲಿ ಪಿಲಾಜಿಯ ಕೊಲೆಯಾಯಿತು. ಅವನ ಹಿಂದೆ ದಮಾಜಿ ಗಾಯಕವಾಡನು ಸರದಾರಿಕೆಯನ್ನು ಮಾಡತೊಡಗಿದನು. ೧೭೩೪ರಲ್ಲಿ ಬಡೋದೆಯು ಗಾಯಕವಾಡನ ವಶಕ್ಕೆ ಬಂತು. ಅದು ಇಂದಿನವರೆಗೂ ಅವರ ವಶದಲ್ಲಿಯೇ ಇದೆ. ಮುಂದೆ ಗುಜರಾಥದಲ್ಲಿ ಕದಮನು ಹೋಳಕರನ ಸಹಾಯದಿಂದ ದಾಳೀ ಮಾಡತೊಡಗಿದನು; ಆದರೆ ಆಗ ದಮಾಜಿಯ ಲಕ್ಷ್ಯವು ರಾಜಸ್ಥಾನದ ಕಡೆಗೆ ಹೋಗಿತ್ತು.

೧೭೪೨ರಲ್ಲಿ ದಮಾಜಿಯು ರಘೂಜಿ ಭೋಸಲೆಯ ಉಪದೇಶದಿಂದ ಮಾಳವವನ್ನು ಸುಲಿದನೆಂದು ಪೇಶವೆಯು ಸಂಶಯಗೊಂಡನು. ಆದ್ದರಿಂದ ಭೋಸಲೆ, ಗಾಯಕವಾಡರ ವಿಷಯವಾಗಿ ಪೇಶವೆಯಲ್ಲಿ ವೈಮನಸ್ಸುಂಟಾಯಿತು. ೧೭೪೪ರಲ್ಲಿ ಗಾಯಕವಾಡನ ಮನೆಯಲ್ಲಿ ಕಲಹವು ಪ್ರಾರಂಭವಾಯಿತು. ೧೭೫೦ರಲ್ಲಿ ದಮಾಜಿಯು ತಾರಾಬಾಯಿಯ ಪಕ್ಷಕ್ಕೆ ಹೋದನು. ಸಾತಾರೆಯ ಮಹಾರಾಜರನ್ನು ಪೇಶವೆಯವರ ಬಂಧನೆಯಿಂದ ಬಿಡಿಸಿ ಎಲ್ಲ ಮರಾಟ ರಾಜ್ಯವನ್ನು ಪೇಶವೆಯ ವರ್ಚಸ್ಸಿನಿಂದ ಮುಕ್ತಗೊಳಿಸಬೇಕೆಂದು ತಾರಾಬಾಯಿಯ ಯೋಜನೆಯಿತ್ತು. ದಮಾಜಿಯಾದರೂ ಇದೇ ಮತದವನಿದ್ದನು. ತಾರಾಬಾಯಿಯು ರಾಮರಾಜನನ್ನು ಹಿಡಿದು ಸಾತಾರೆಯ ಕೋಟೆಯಲ್ಲಿ ಸೆರೆಯಿರಿಸಿದ್ದಳು. ಆಗ ದಮಾಜಿಯು ಇವಳ ನೆರವಿಗೆ ಹೋದನು; ಆದರೆ ಪೇಶವೆಯು ಇವನನ್ನು ಹಿಡಿದು ಪುಣೆಯಲ್ಲಿ ಸೆರೆಯಿರಿಸಿದನು. ದಮಾಜಿಯ ಬಂಧುವಾದ ಖಂಡೇರಾಯನು ಪೇಶವೆಯವರ ಪಕ್ಷವನು ಹಿಡಿದನು; ಆದರೆ ದಮಾಜಿಯು ಸೆರೆಮನೆಯಲ್ಲಿದ್ದೇ ಕಾರಸ್ಥಾನ ಮಾಡಿ ೧೭೩೧ರಿಂದ ನಿಂತ ವಸೂಲಿಯನ್ನು ೧೫ ಲಕ್ಷದಲ್ಲಿ ಬಗೆಹರಿಸಿಕೊಂಡು ಮುಕ್ತತೆ ಹೊಂದಿದನು. ಇದೇ ವೇಳೆಯಲ್ಲಿ ಗಾಯಕವಾಡನು ಹತ್ತು ಸಾವಿರ ಸ್ವಾರರನ್ನು ಬಳಿಯಲ್ಲಿರಿಸಿಕೊಂಡು ಪ್ರಸಂಗವೊದಗಿದಾಗ ಪೇಶವೆಗೆ ನೆರವಾಗಬೇಕು; ವಾರ್ಷಿಕ ತೆರಿಗೆಗಾಗಿ ೫ ಲಕ್ಷ ೨೫ ಸಾವಿರ ರೂಪಾಯಿ ಕೊಡಬೇಕು; ದಾಭಾಡೆಯ ಕುಟುಂಬ ರಕ್ಷಣೆಗಾಗಿ ನಿಯಮಿತ ಹಣ ಕೊಡಬೇಕು; ಮತ್ತು ಮುಂದೆ ಗಾಯಕವಾಡನು ಯಾವ ಪ್ರದೇಶಗಳನ್ನು ಗೆಲ್ಲುವನೋ ಅಥವಾ ಕಪ್ಪವನ್ನು ಎತ್ತುವನೋ ಅದರ ಅರ್ಧ ಭಾಗವನ್ನು ಪೇಶವೆಗೆ ಕೊಡಬೇಕು; ಇದಕ್ಕೆ ಪ್ರತಿಯಾಗಿ ಪೇಶವೆಯು ಅಹಮ್ಮದಾಬಾದವನ್ನು ಜಯಿಸಿ, ಗುಜರಾಥದಲ್ಲಿಯ ಮೊಗಲರ ವರ್ಚಸ್ಸನ್ನು ನಷ್ಟಪಡಿಸುವ ಕಾರ್ಯದಲ್ಲಿ ಗಾಯಕವಾಡನಿಗೆ ಸಹಾಯಮಾಡಬೇಕು, ಮೊದಲಾದ ಕಟ್ಟಳೆಗಳು ಮಾಡಲ್ಪಟ್ಟವು.

ಈ ಸಮಯದಿಂದ ಗಾಯಕವಾಡ ಮನೆತನದಲ್ಲಿ ಹೊಸಬರು ಅಧಿಕಾರಿಗಳಾಗುವಾಗ ಕಾಣಿಕೆ ತೆಗೆದುಕೊಂಡು ಹೊಸ ಸನದು ಕೊಡುವ ಪರಿಪಾಠವನ್ನು ಪೇಶವೆಯವರು ಇಟ್ಟರು. ಈ ಮೇರೆಗೆ ಗಾಯಕವಾಡನು ಪರಾಧೀನನಾದನು. ಆದರೂ ಅವನ ಮನಸ್ಸಿನೊಳಗಿನ ಕುನಸು ಹೋಗಲಿಲ್ಲ. ಮುಂದೆ ಗಾಯಕವಾಡ ಮನೆತನದಲ್ಲಿ ಪ್ರಕಟವಾಗಿ ಇಬ್ಬಣಗಳಾಗಿ, ದಮಾಜಿಯೂ ಫತ್ತೇಸಿಂಗನೂ ರಘುನಾಥರಾಯನ ಮುಖಾಂತರ ಇಂಗ್ಲಿಷರನ್ನು ಕೂಡಿದರು. ೧೭೫೩ರಲ್ಲಿ ಅಹಮ್ಮದಾಬಾದಕ್ಕೆ ಮುತ್ತಿಗೆ ಬಿದ್ದಾಗ ದಮಾಜಿಯು ರಘುನಾಥರಾಯನಿಗೆ ಸಹಾಯ ಮಾಡಿದನು.

ಪಾಣಿಪತ್ತದ ಸಂಗ್ರಾಮದಲ್ಲಿ ದಮಾಜಿ ಗಾಯಕವಾಡನಿದ್ದು, ಅವನು ದೊಡ್ಡ ಶೌರ್ಯವನ್ನು ಪ್ರಕಟಿಸಿದನು. ಆ ಸಂಗ್ರಾಮದಲ್ಲಿ ಮರಾಟರ ಸೈನ್ಯವು ಪರಾಭೂತ ವಾದ ಮೇಲೆ ಅವನು ತಿರುಗಿ ಹೋದನು ಪೇಶವೆ ದೊಡ್ಡ ಮಾಧವರಾಯನ ಆಳಿಕೆ ಯಲ್ಲಿ ರಘುನಾಥರಾಯನು ಮಾಧವರಾಯನೊಡನೆ ಜಗಳಾಡಿ ಹೊರಟನು. ಆಗ ದಮಾಜಿಯು ಅವನಿಗೆ ಸಹಾಯ ಮಾಡಿ ಘೋಡ ನದಿಯ ಬಳಿಯಲ್ಲಿ ಪೇಶವೆಯ ಸೈನ್ಯವನ್ನು ಪರಾಭವಗೊಳಿಸಿದನು. ಮಧ್ಯಂತರದಲ್ಲಿ ಗುಜರಾಥದ ಪಾಲುಗಾರಿಕೆ ಯೊಳಗೆ ದಮಾಜಿಗೆ ಹೆಚ್ಚು ಲಾಭದಾಯಕವಾದುದರಿಂದ, ಪೇಶವೆಯು ಅವನಿಂದ ೨ ಲಕ್ಷ ೫೪ ಸಾವಿರ ರೂಪಾಯಿಗಳ ಸೀಮೆಯನ್ನು ಕಿತ್ತುಕೊಂಡಿದ್ದನು. ೧೭೬೮ರಲ್ಲಿ ದಮಾಜಿಯು ತನ್ನ ಮಗನಾದ ಗೋವಿಂದರಾಯನನ್ನು ರಘುನಾಥರಾಯನ ಸಹಾ ಯಕ್ಕೆ ಕಳುಹಿಸಿದನು; ಆದರೆ ಅವನು ಯುದ್ಧದಲ್ಲಿ ಪರಾಭವ ಹೊಂದಲು ರಘು ನಾಥರಾಯನೊಡನೆ ಪುಣೆಯ ಸೆರೆಮನೆಯನ್ನು ಸೇರಬೇಕಾಯಿತು. ಕಡೆಗೆ ಒಡಂ ಬಡಿಕೆಯಾಗಿ ಗಾಯಕವಾಡನು ಪೇಶವೆಗೆ ೨೩ ಲಕ್ಷ ರೂಪಾಯಿಗಳ ದಂಡವನ್ನೂ ನಿಂತ ತೆರಿಗೆಯ ಬಗ್ಗೆ ೧೬ ಲಕ್ಷ ರೂಪಾಯಿಗಳನ್ನೂ ಕೊಡಬೇಕಾಯಿತು. ಆಗ ಮೊದಲು ತೆಗೆದುಕೊಂಡ ಪ್ರಾಂತವು ದಮಾಜಿಗೆ ತಿರುಗಿ ದೊರೆಯಿತು; ಆದರೆ ಗಾಯಕವಾಡನು ವಾರ್ಷಿಕ ತೆರಿಗೆಯೆಂದು ೭ ಲಕ್ಷ೭೯ ಸಾವಿರ ರೂಪಾಯಿಗಳನ್ನು ಕೊಡಬೇಕೆಂದೂ, ನಾಲ್ಕು ಸಾವಿರ ಸೈನ್ಯವನ್ನು ತೆಗೆದುಕೊಂಡು ಪ್ರತ್ಯಕ್ಷ ಪೇಶವೆ ಯಲ್ಲಿ ಸೇವೆಗೆ ನಿಲ್ಲಬೇಕೆಂದೂ ಗೊತ್ತಾಯಿತು.

ಮುಂದೆ ದಮಾಜಿಯು ಅಪಘಾತದಿಂದ ಮಡಿದನು. ಆಗ ಅವನ ಚಿಕ್ಕಮಗ ನಾದ ಫತ್ತೇಸಿಂಗನು ಬಡೋದೆಯನ್ನು ಹಿಡಿದುಕೊಂಡನು. ಇತ್ತ ಪುಣೆಯಲ್ಲಿ ಅವನ ಅಣ್ಣನಾದ ಗೋವಿಂದರಾಯನು ಇರುತ್ತಿದ್ದನು. ಅವನು ಪೇಶವೆಯಿಂದ ತನ್ನ ಔರಸತನವನ್ನು ಸಮ್ಮತಿ ಮಾಡಿಸಿಕೊಂಡನು. ಆಗ ಅವನು ಪೇಶವೆಗೆ ೫೦॥ ಲಕ್ಷ ರೂಪಾಯಿಗಳ ಕಾಣಿಕೆ ಕೊಟ್ಟನು; ಆದರೆ ೧೭೭೧ರಲ್ಲಿ ಫತ್ತೇಸಿಂಗನು ಪುಣೆಗೆ ಬಂದು ಅದೇ ಕಟ್ಟಳೆಯಿಂದ ತನ್ನ ನಡುವಿನ ಅಣ್ಣನ ಹೆಸರಿನಿಂದ 'ಸೇನಾಖಾಸ ಖೇಲ' ಪದವಿಯನ್ನೂ ಸರದಾರಿಕೆಯನ್ನು ಮಾಡಿಸಿ, ತನ್ನ ಕಡೆಗೆ ಮುತಾಲಿಕಿ ಯನ್ನು ತೆಗೆದುಕೊಂಡನು. ೧೭೭೮ರಲ್ಲಿ ಫತ್ತೇಸಿಂಗನು ಗುಜರಾಥಕ್ಕೆ ಹೋದ

ಮೇಲೆ ಇಂಗ್ಲಿಷರ ಸಹಾಯ ದೊರಕಿಸುವ ಪ್ರಯತ್ನ ನಡೆಯಿಸಿ, ಸುರತ ಮಹಾಲನ್ನು ಅವರಿಗೆ ಪ್ರತಿಫಲವಾಗಿ ಕೊಡಲೊಪ್ಪಿದನು. ೧೭೭೫ರಲ್ಲಿ ರಾಘೋಬನು ಪುಣೆಯಲ್ಲಿ ಜಗಳ ಕಾದಿ, ಬಡೋದೆಗೆ ಬಂದು ಗೋವಿಂದರಾಯನನ್ನು ಕೂಡಿದನು. ಆಗ ಫತ್ತೇಸಿಂಗನು ನಾನಾ ಫಡಣವೀಸನ ಸಹಾಯವನ್ನು ಬೇಡಿದನು. ಸುರತದ ಒಪ್ಪಂದದಿಂದ ವಸಯಿ, ಸಾಷ್ಟಿ ಮತ್ತು ಸುರತದ ಸುತ್ತಮುತ್ತಲಿನ ಪ್ರದೇಶ ಮೊದಲಾದವುಗಳನ್ನು ರಘುನಾಥರಾಯನು ಇಂಗ್ಲಿಷರಿಗೆ ಕೊಡಲೊಪ್ಪಿದನು. ಇವುಗಳೊಡನೆ ಭಡೋಚದೊಳಗಿನ ಗಾಯಕವಾಡನ ಪಾಲನ್ನೂ ಗೋವಿಂದರಾಯನಿಂದ ಕೊಡಿಸುವದಕ್ಕೆ ಅವನು ಒಡಂಬಟ್ಟನು. ಸುರತ, ಭಡೋಚ, ಖಂಬಾಯತ ಈ ಮೂರು ಬಂದರಗಳು ವ್ಯಾಪಾರೀ ದೃಷ್ಟಿಯಿಂದ ಉಪಯೋಗವುಳ್ಳವುಗಳಾದ್ದರಿಂದ, ಇಂಗ್ಲಿಷರಿಗೆ ಅವುಗಳ ಮೇಲೆ ಬಹಳ ಲೋಭವಿತ್ತು. ಈ ಬಂದರಗಳೂ ಸಾಷ್ಟಿ-ವಸಯಿಗಳೂ ತಮ್ಮ ಕೈಗೆ ದೊರೆಯಬೇಕೆಂಬ ಕುತೂಹಲದಿಂದ ಅವರು ಪೇಶವೆ-ಗಾಯಕವಾಡರ ಜಗಳದಲ್ಲಿ ಕೈಹಾಕಿದರು. ಮುಂದೆ ಅವರು ಗೋವಿಂದರಾಯನ ಕೈಹಿಡಿದುದರಿಂದ, ಫತ್ತೇಸಿಂಗನು ನಾನಾ ಫಡಣವೀಸನ ಪಕ್ಷಕ್ಕೆ ಹೋದನು. ಅವನು ಶಿಂದೆ, ಹೋಳಕರ, ಹರಿಪಂತ ಫಡಕೆ ಇವರ ಸೈನ್ಯದ ಸಹಾಯ ಹೊಂದಿ, ಗೋವಿಂದರಾಯನು ಬಡೋದೆಗೆ ಹಾಕಿದ ಮುತ್ತಿಗೆಯನ್ನೆಬ್ಬಿಸಿ ರಾಘೋಬನನ್ನು ಸೋಲಿಸಿದನು. ಮಾರನೆಯ ವರ್ಷ ಫತ್ತೇಸಿಂಗನು ತನ್ನ ಪಕ್ಷವನ್ನು ಬದಲಿಸಿದನು. ರಘುನಾಥರಾಯನಿಗೆ ಮೂರು ಸಾವಿರಸೈನ್ಯದೊಡನೆ ಸಹಾಯ ಮಾಡಬೇಕೆಂದೂ, ಇಂಗ್ಲಿಷರಿಗೆ ಭಡೋಚ, ಚಿಖಲಿ ಮೊದಲಾದ ಪರಗಣೆಗಳನ್ನು ಕೊಡಬೇಕೆಂದೂ ಗೊತ್ತು ಮಾಡಿ, ಗೋವಿಂದರಾಯನ ಪಕ್ಷಬಿಡುವದಕ್ಕಾಗಿ ಇಂಗ್ಲಿಷರ ಮನಸ್ಸು ತಿರುಗಿಸಿದನು. ೧೭೭೮ರಲ್ಲಿ ಪೇಶವೆಯವರು ಫತ್ತೇಸಿಂಗನಿಗೆ "ಸೇನಾಖಾಸಖೇಲ" ಪದವಿಯನ್ನು ಕೊಟ್ಟರು. ಆದರೆ ಅವನಿಗೆ ಭಡೋಚದ ತೆರಿಗೆಯಲ್ಲಿ ಪಾಲು ದೊರೆಯಲಿಲ್ಲ. ೧೭೮೦ರಲ್ಲಿ ಫತ್ತೇಸಿಂಗನು ತಿರುಗಿ ಇಂಗ್ಲಿಷರೊಡನೆ ಒಪ್ಪಂದ ಮಾಡಿಕೊಂಡನು. ಇಂಗ್ಲಿಷರಾದರೂ ಅವನಿಗೆ ಅಹಮ್ಮದಾಬಾದವನ್ನು ಗೆದ್ದು ಕೊಟ್ಟರು. ಈ ದಾಳಿಯಲ್ಲಿ ಫತ್ತೇಸಿಂಗನು ಇಂಗ್ಲಿಷರಿಗೆ ಬಹಳೇ ಸಹಾಯ ಮಾಡಿದನು. ಇದೇ ವರ್ಷ ಇಂಗ್ಲಿಷರು ಬಡೋದೆಯಲ್ಲಿ ಕ್ಯಾಪ್ಟನ್ ಅರ್ಲ ಎಂಬ ಗೃಹಸ್ಥನನ್ನು ತಮ್ಮ ಮೊದಲನೇ ರೆಸಿಡೆಂಟನನ್ನಾಗಿ ನಿಯಮಿಸಿದರು; ಆದರೆ ೧೭೮೨ರಲ್ಲಿ ಸಾಲಬಾಯಿಯ ಒಪ್ಪಂದವಾಗಲು ಇಂಗ್ಲಿಷರು ಫತ್ತೇಸಿಂಗನನ್ನು ಬಿಟ್ಟುಕೊಟ್ಟರು; ಅವನೊಡನೆ ಆದ ಒಡಂಬಡಿಕೆಯೂ ರದ್ದುಮಾಡಲ್ಪಟ್ಟಿತು; ಹಾಗು ಇಂಗ್ಲಿಷರು ಅಹಮ್ಮದಾಬಾದವನ್ನು ಪೇಶವೆಯವರಿಗೇ ಕೊಡಬೇಕಾಯಿತು. ಪೇಶವೆಯವರು ಫತ್ತೇಸಿಂಗನ ನಿಂತ ತೆರಿಗೆಯನ್ನು ಸೂಟ ಮಾಡಿದರು; ಆದರೆ ಗಾಯಕವಾಡನು ಪೇಶವೆಯ ದರಬಾರದಲ್ಲಿ ಇದ್ದು ಸೇನಾಧಿಪತ್ಯದ ಸೇವೆಯನ್ನು ಮಾಡುವ ಪ್ರಸಂಗವು ಮಾತ್ರ ಮತ್ತೆ ಪ್ರಾಪ್ತವಾಯಿತು.

೧೭೮೯ರಲ್ಲಿ ಫತ್ತೇಸಿಂಗನು ಅಪಘಾತದಿಂದ ಮಡಿದನು. ಆಗ ಪುಣೆ ದರಬಾರದವರು ಅವನ ಚಿಕ್ಕ ತಮ್ಮನಾದ ಮಾನಾಜಿಯ ಬಾಧ್ಯತೆಯನ್ನು ಮಾನ್ಯ ಮಾಡಿ, ಅವನನ್ನು ಸಯಾಜಿಯ ಕಾರಭಾರಿಯನ್ನಾಗಿ ನಿಯಮಿಸಿದರು. ಇದಕ್ಕಾಗಿ ಗಾಯಕವಾಡನು ಪೇಶವೆಯವರಿಗೆ ಹಳೆ-ಹೊಸ ತೆರಿಗೆಯೆಂದು ೬೦ ಲಕ್ಷ ರೂಪಾಯಿಗಳನ್ನು ನಾಲ್ಕು ಕಂತಗಳಿಂದ ಕೊಡಲಿಕ್ಕೆ ಒಪ್ಪಿಕೊಂಡನು. ೧೭೯೩ರಲ್ಲಿ ಮಾನಾಜಿಯು ಮಡಿದನು. ಆಗ ಗೋವಿಂದರಾಯನು ತನಗೆ ಸರದಾರಿಕೆ ದೊರೆಯಬೇಕೆಂದು ಪೇಶವೆಯವರ ಬೆನ್ನು ಹತ್ತಿದನು; ಆದರೆ ಆಗ ಪೇಶವೆಯವರು ಹಾಕಿದ ಕಟ್ಟಳೆಗಳು ಬಹಳೇ ಕಠಿಣವಿದ್ದವು. ಮೊದಲಿನ ನಿಂತ ತೆರಿಗೆ ೨೦ ಲಕ್ಷ, ಕಾಣಿಕೆಯ ಹಣ ೫೬ ಲಕ್ಷ, ಸೇನಾಧಿಪತ್ಯ ಸೇವೆಯಲ್ಲಿ ನಿಂತ ಹಣ ೪೩ ಲಕ್ಷ ಹೀಗೆ ಹಣವನ್ನು ಕೊಟ್ಟು, ತಾಪಿಯ ದಕ್ಷಿಣದ ಸೀಮೆಯನ್ನೂ ಸುರತ ಬಂದರದೊಳಗಿನ ಸುಂಕದ ಪಾಲನ್ನೂ ಅವನು ಪೇಶವೆಗೆ ಕೊಡಬೇಕೆಂದು ಗೊತ್ತಾಯಿತು; ಆದರೆ ಸಾಲಬಾಯಿ ಒಪ್ಪಂದದ ನಿಮಿತ್ಯವನ್ನು ಮುಂದೆ ಮಾಡಿ, ತಾಪಿಯ ದಕ್ಷಿಣದ ಸೀಮೆಯನ್ನು ಪೇಶವೆಯವರಿಗೆ ಕೊಡಲಿಕ್ಕೆ ಇಂಗ್ಲಿಷರು ಅಡ್ಡಿಮಾಡಿದರು. ಇನ್ನು ಮುಂದಿನ ಗಾಯಕವಾಡರ ಇತಿಹಾಸವು ಅತ್ಯಂತ ಅವ್ಯವಸ್ಥೆಯದಾಗಿರುವದು. ೧೭೯೬ರಲ್ಲಿ ಗೋವಿಂದರಾಯನು ಪೇಶವೆಗೆ ೬೮ ಲಕ್ಷ ರೂಪಾಯಿಗಳನ್ನು ಕೊಟ್ಟು ೬೦ ಲಕ್ಷ ರೂಪಾಯಿಗಳನ್ನು ಬಿಡಿಸಿಕೊಂಡನು; ಆದರೂ ಪೇಶವೆಯವರಿಗೆ ೪೦ ಲಕ್ಷ ರೂಪಾಯಿಗಳನ್ನು ಕೊಡುವದು ನಿಂತಿತ್ತು. ಬಾಜೀರಾಯನ ಆಳಿಕೆಯಲ್ಲಿ ಗೋವಿಂದರಾಯನಿಗೂ ಪೇಶವೆಯವರ ಚಿಟಣೀಸನಿಗೂ ವೈಮನಸ್ಸುಂಟಾಗಿ ಯುದ್ಧವು ಪ್ರಾರಂಭವಾಯಿತು. ಗೋವಿಂದರಾಯನು ೧೮೦೦ರಲ್ಲಿ ಇಂಗ್ಲಿಷರ ಸಹಾಯ ಬೇಡಿದನು. ಈ ವೇಳೆಯಲ್ಲಿ ಗಾಯಕವಾಡನ ಎಲ್ಲ ಮಹಾಲುಗಳು ಸಾವುಕಾರರ ಕಡೆಗೆ ಒತ್ತೀ ಬಿದ್ದಿದ್ದವು. ಪರಗಣೆಗಳ ಮಾಮಲೇದಾರರು ತೆರಿಗೆಯನ್ನು ತಿಂದು ಕುಳಿತುಕೊಳ್ಳತೊಡಗಿದ್ದರು. ಮಾಂಡಲಿಕರು ತೆರಿಗೆಯನ್ನು ಮುಳುಗಿಸಿದರು. ಸೈನ್ಯದಲ್ಲಿ ಅರಬರೇ ಮೊದಲಾದವರ ವರ್ಚಸ್ಸು ಬೆಳೆಯಿತು. ಈ ಬಾಡಿಗೆಯ ಸೈನ್ಯಕ್ಕೆ ವರ್ಷವೊಂದಕ್ಕೆ ೩೦-೩೫ ಲಕ್ಷ ರೂಪಾಯಿಗಳ ವೆಚ್ಚ ಬೇಕಾಗುತ್ತಿತ್ತು. ಈ ಹಣದಲ್ಲಿಯ ಬಹು ಭಾಗವು ಅರಬ, ಬಗದಾದೀ, ಅಬಿಸಿನೀಯನ್, ಮುಸಲ್ಮಾನ, ಪಠಾಣ ಮೊದಲಾದ ಜನರ ಕೈಯಲ್ಲಿ ಬೀಳುತ್ತಿತ್ತು. ಈ ಬಾಡಿಗೆಯ ಜನರಲ್ಲಾದರೂ ಪಕ್ಷಭೇದವಿತ್ತು. ಹೊಣೆಗಾರಿಕೆಯ ಹೊರತು ಬಡೋದೆಯ ಸರಕಾರವು ತನ್ನ ವಚನವನ್ನು ಪಾಲಿಸುವದೆಂಬ ನಂಬಿಗೆಯು ಪ್ರಜೆಗಳಿಗಿರಲಿಲ್ಲ. ಈ ಹೊಣೆಗಾರಿಕೆಗೇ 'ಬಹಾನದರೀ' ಪದ್ಧತಿಯೆಂದು ಅನ್ನುತ್ತಿದ್ದರು.

ಮುಂದೆ ಬೇಗನೆ ಗಾಯಕವಾಡೆಯ ಎರಡೂ ಪಕ್ಷದವರು ಇಂಗ್ಲಿಷರನ್ನು ಪಂಚರನ್ನಾಗಿ ನಿಯಮಿಸಿದರು. ಆದರೆ ಇಂಗ್ಲಿಷರು ಈ ಪಂಚಾಯತಿಯನ್ನು ಜೊತೆಯಲ್ಲಿ ಸೈನ್ಯತೆಗೆದುಕೊಂಡೇ ಮಾಡಬೇಕಾಯಿತು. ಮೇಜರ ವಾಕರ ಇವನು ೧೮೦೨ರಲ್ಲಿ

ಬಡೋದೆಗೆ ಬಂದು ಗಾಯಕವಾಡರ ಜಹಾಗೀರದಾರರೊಡನೆ ಯುದ್ಧಮಾಡಿದನು. ತರುವಾಯ್ಕೆ ಇಂಗ್ಲಿಷರಿಗೂ ಗಾಯಕವಾಡನಿಗೂ ಒಪ್ಪಂದವಾಯಿತು. ಇಂಗ್ಲಿಷರಿಗೆ ಗಾಯಕವಾಡನು ೮೪ ಪರಗಣೆಗಳನ್ನೂ, ಸುರತದ ಚೌಥವನ್ನೂ, ಯುದ್ಧದ ವೆಚ್ಚವನ್ನೂ ಕೊಡಬೇಕು; ಬಾಡಿಗೆಯ ಸೈನಿಕರನ್ನು ತೆಗೆದುಹಾಕಿ ಇಂಗ್ಲಿಷರ ೨ ಸಾವಿರ ಸೈನ್ಯವನ್ನೂ ತೋಫುಗಳನ್ನೂ ಇಟ್ಟುಕೊಳ್ಳಬೇಕು; ಇವುಗಳ ವೆಚ್ಚಕ್ಕಾಗಿ ೬೫೦೪೦ ರೂಪಾಯಿಗಳ ಉತ್ಪನ್ನದ ಪ್ರಾಂತವನ್ನು ಇಂಗ್ಲಿಷರ ಸ್ವಾಧೀನಪಡಿಸಬೇಕು; ಮೊದಲಾದ ಕಟ್ಟಳೆಗಳು ಮಾಡಲ್ಪಟ್ಟವು. ಇಂಗ್ಲಿಷರಿಗೆ ಕೊಡತಕ್ಕ ಹಣವನ್ನು ಕೊಡುವದಾಗದ್ದರಿಂದ ಗಾಯಕವಾಡನು ಅವರಿಗೆ ೧೮೦೩ರಲ್ಲಿ ಘೋಡಕಾ, ನಡಿಯಾದ, ವಿಜಾಪುರ ಮೊದಲಾದ ಪ್ರಾಂತಗಳನ್ನು ಕೊಡಲು, ಅವರು ಅವುಗಳನ್ನು ತೆಗೆದುಕೊಂಡರು. ಮೊದಲು ಪೇಶವೆಯುವರು ಗೋವಿಂದರಾಯನಿಂದ ಪ್ರಾಂತಗಳನ್ನು ಕಿತ್ತುಕೊಳ್ಳುವಾಗ ಇಂಗ್ಲಿಷರು ಅಡ್ಡಿ ಮಾಡಿದ್ದರು; ಆದರೆ ಈಗ ತಾವೇ ಗಾಯಕವಾಡ ರಾಜ್ಯವನ್ನು ತುಂಡು ತುಂಡು ಮಾಡಿ ತೆಗೆದುಕೊಂಡರು! ಎರಡನೇ ಬಾಜೀರಾಯನ ಆಳಿಕೆಯಲ್ಲಿ ಪೇಶವೆ-ಗಾಯಕವಾಡರಲ್ಲಿ ವಿವಾದವೂ ಇಂಗ್ಲಿಷರೊಡನೆ ಜಗಳವೂ ಉಂಟಾದದ್ದೇ ಇದಕ್ಕೆ ಒಂದು ಕಾರಣವಾಗಿದೆ. ಮೇಲಿನ ಒಪ್ಪಂದದಿಂದ ಗಾಯಕವಾಡನ ರಾಜ್ಯದಲ್ಲಿ ಬೇಕಾದಂಥ ಕಾರಭಾರದೊಳಗೆ ಕೈ ಹಾಕಲಿಕ್ಕೆ ತಮಗೆ ಅಧಿಕಾರ ದೊರೆಯಿತೆಂದು ಇಂಗ್ಲಿಷರು ತಿಳದುಕೊಂಡರು. ಸುರಾಜ್ಯವ್ಯವಸ್ಥೆಯಾದ ಮೇಲಾದರೂ ಅವರು ಅಲ್ಲಿಯ ರಾಜ್ಯಕಾರಭಾರದಲ್ಲಿ ಉಪದ್ವ್ಯಾಪ ನಡೆಯಿಸತೊಡಗಿದರು. ಆಗ ಬಡೋದೆಯ ರಾಜ್ಯಕರ್ತರಲ್ಲಿಯೂ ಇಂಗ್ಲಿಷರಲ್ಲಿಯೂ ವಿರೋಧವು ಉತ್ಪನ್ನವಾಯಿತು. ಪಟ್ಟಬಾಧ್ಯರನ್ನು ಗೊತ್ತುಮಾಡುವದು, ಪೇಶವೆಯುವರೊಡನೆ ಮಾತು-ಕತೆಗಳನ್ನಾಡುವದು ಮೊದಲಾದ ಎಲ್ಲ ಭಾರವನ್ನು ಇಂಗ್ಲಿಷರು ತಾವೇ ಸ್ವೀಕರಿಸಿದರು; ಹಾಗು ಕಾಠೇವಾಡದ ಸಂಸ್ಥಾನಿಕರಲ್ಲಿ ಯಾವ ಯಾವ ಬಾಧ್ಯತೆಗಳು ಗಾಯಕವಾಡನವಿದ್ದವೋ ಅವುಗಳಲ್ಲಿ ಸಹ ಬ್ರಿಟಿಷ ರೆಸಿಡೆಂಟನು ಕೈಹಾಕತೊಡಗಿದನು. ಕೊನೆಗೆ ೧೮೦೫ನೆಯ ಇಸವಿಯ ಒಪ್ಪಂದದಿಂದ ಬ್ರಿಟಿಷರ ಉಪದ್ವ್ಯಾಪಕ್ಕೆ ಸುವ್ಯವಸ್ಥಿತ ಸ್ವರೂಪವು ಕೊಡಲ್ಪಟ್ಟಿತು.

೧೮೧೨ರಲ್ಲಿ ಇಂಗ್ಲಿಷರು ಗಾಯಕವಾಡನನ್ನು ತಮ್ಮ ಹಾಗು ಇತರರ ಸಾಲದಿಂದ ಮುಕ್ತಗೊಳಿಸಿದ್ದರು. ಇದೇ ಸಮಯಕ್ಕೆ ಬಡೋದೆಯಲ್ಲಿ ಎರಡು ಪಕ್ಷಗಳು ಹುಟ್ಟಿದವು. ಒಂದು ಪಕ್ಷವು ಇಂಗ್ಲಿಷರಿಗೆ ಅನುಕೂಲವಾದದ್ದೂ ಮತ್ತೊಂದು ಪಟ್ಟಬಾಧ್ಯನಾದ ಆನಂದರಾಯನಿಗೆ ಅನುಕೂಲವಾದದ್ದೂ ಆಗಿತ್ತು. ಆನಂದರಾಯನೂ ಪೇಶವೆಯುವರೂ ಸ್ನೇಹದಿಂದ ಇದ್ದರು; ಆದರೆ ಗಂಗಾಧರಶಾಸ್ತ್ರಿಯೇ ಮೊದಲಾದ ಪ್ರಮುಖ ಮಂಡಳಿಯಿಂದ ಅವರ ಪತ್ರವ್ಯವಹಾರಕ್ಕೆ ಅಡ್ಡಿಯಾಗುತ್ತಿತ್ತು. ಗಾಯಕವಾಡನ ಮೇಲಿದ್ದ ಪೇಶವಾಯಿಯ ಅಧಿಕಾರವನ್ನು ಇಂಗ್ಲಿಷರು ವಶಪಡಿಸಿಕೊಂಡದ್ದರಿಂದ ಅವರ ವಿಷಯವಾಗಿ ಬಾಜೀರಾಯನ ಮನಸ್ಸಿನಲ್ಲಿ ವೈಷಮ್ಯವು ಇದ್ದೇ

ಇತ್ತು. ಅಹಮ್ಮದಾಬಾದದ ಒತ್ತಿಯ ಅವಧಿಯು ಮುಗಿದಿದ್ದು, ಅದನ್ನು ಗಾಯಕ ವಾಡರಿಗೆ ಬಿಡುವದೂ ಬಿಡದೆ ಇರುವದೂ ಪೇಶವೆಯ ಕೈಯಲ್ಲಿತ್ತು; ಮತ್ತು ಈ ಸಾಧನದಿಂದ ಬಡೋದೆಯ ಮೇಲೆ ತಮ್ಮ ವರ್ಚಸ್ಸನ್ನು ಸ್ಥಾಪಿಸಬೇಕೆಂದು ಪೇಶವೆ ಯವರ ಮನಸ್ಸಿತ್ತು. ಅಹಮ್ಮದಾಬಾದವನ್ನು ದೊರಕಿಸಬೇಕೆಂದು ಗಂಗಾಧರ ಶಾಸ್ತ್ರಿಯು ಪುಣೆಗೆ ೧೮೧೪ರಲ್ಲಿ ಬಂದನು. ಆಗ ಪೇಶವೆ-ಗಾಯಕವಾಡರ ನಡುವೆ ೨ ಕೋಟಿ ೬೧ ಲಕ್ಷ ರೂಪಾಯಿಗಳ ಲೆಕ್ಕದ ವಾದವಿತ್ತು. ಇವುಗಳ ಸಲುವಾಗಿ ಎಷ್ಟೋ ದಿವಸ ಮಾತು-ಕತೆಗಳು ಜರುಗಿ ಕೊನೆಗೆ ಹೊಂದಿಕೆಯಾಗುವ ಲಕ್ಷಣವು ಕಾಣಹ ತ್ತಿತ್ತು; ಆದರೆ ೧೮೧೫ರಲ್ಲಿ ಗಂಗಾಧರ ಶಾಸ್ತ್ರಿಯು ಕೊಲೆಯಾಗಿ ಆ ಪ್ರಕರ್ಣವು ಅಷ್ಟಕ್ಕೇ ಉಳಿಯಿತು. ಆದರೂ ಮುಂದೆ ಇಂಗ್ಲಿಷರು ಈ ಪ್ರಕರ್ಣದ ಸೇಡಿನ ಬಗ್ಗೆ ಬಾಜೀರಾಯನಿಂದ ಪೂರಾ ಲಾಭಹೊಂದಿದರು; ಹಾಗು ೧೮೧೭ರಲ್ಲಿ ಪುಣೆಗೆ ಮುತ್ತಿಗೆ ಹಾಕಿದಾಗ ಆದ ಒಡಂಬಡಿಕೆಯಲ್ಲಿ ಗಾಯಕವಾಡನ ಮೇಲಿನ ಎಲ್ಲ ವಾದ ಗಳನ್ನು ಬಿಟ್ಟುಕೊಟ್ಟಬಗ್ಗೆ ಪೇಶವೆಯಿಂದ ಕಟ್ಟಳೆ ಬರೆಯಿಸಿಕೊಂಡರು. ಈ ಪ್ರಕಾರ ವಾಗಿ ಇಂಗ್ಲಿಷರಿಗೆ ಕಾಠೇವಾಡದ ತೆರಿಗೆಯೂ ಪೇಶವೆಯ ಎಲ್ಲ ಅಧಿಕಾರಗಳೂ ದೊರೆ ತವು. ಆಗ ಗಾಯಕವಾಡನು ಸ್ವತಂತ್ರನಾದನು; ಆದರೆ ಪೇಶವೆಯವರು ಹೋಗಿ ಅವ ರ ಸ್ಥಳದಲ್ಲಿ ಇಂಗ್ಲಿಷರು ಅವನಿಗೆ ಧನಿಗಳಾಗಿ ಕುಳಿತರು! ಗಂಗಾಧರ ಶಾಸ್ತ್ರಿಯು ಪ್ರಾಣ ಕೊಟ್ಟರೂ, ಆದರಿಂದ ಗಾಯಕವಾಡನಿಗೂ ಇಂಗ್ಲಿಷರಿಗೂ ಕೂಡಿಯೇ ಲಾಭಮಾಡಿಕೊಟ್ಟನು! ಆಗಿನ ಒಪ್ಪಂದದಿಂದ ಗಾಯಕವಾಡನು ಪೇಶವೆಗೆ ವರ್ಷ ಕ್ಕೆ ೪|| ಲಕ್ಷ ರೂಪಾಯಿಗಳನ್ನು ಕೊಡುವ ಕಟ್ಟಳೆಯಾಗಿತ್ತು. ಮುಂದಿನ ವರ್ಷ ಪೇಶವಾಯಿಯು ನಷ್ಟವಾದುದರಿಂದ ಆ ೪|| ಲಕ್ಷ ರೂಪಾಯಿಗಳನ್ನು ಕೊಡುವುದೂ ಉಳಿಯಿತು! ಮುಂದೆ ಇಂಗ್ಲಿಷರು, ಗಾಯಕವಾಡರು ಇವರು ಇಬ್ಬರೇ ಇಬ್ಬರು ಉಳಿದ ಬಳಿಕ ಇಂಗ್ಲಿಷರ ಪಕ್ಷವು ಮೊದಲಿಗಿಂತ ಹೇಗೆ ಉನ್ನತಿಹೊಂದುತ್ತ ನಡೆಯಿತೆಂಬದನ್ನು ಇಲ್ಲಿ ಹೇಳುತ್ತ ಕುಳಿತುಕೊಳ್ಳುವ ಆವಶ್ಯಕತೆಯಿಲ್ಲ.

---

## ಆಂಗ್ರೆಯರೂ ಇಂಗ್ಲಿಷರೂ

ಕುಲಾಬಾದ ಆಂಗ್ರೆಯರೂ ಮೊದಲು ಆಂಗರವಾಡಿಯಲ್ಲಿ ವಾಸಿಸುತ್ತಿದ್ದರು. ಇವರ ಮೂಲಪುರುಷನಾದ ತುಕೋಜಿ ಸಂಖಪಾಳ ಇವನು ಶಹಾಜಿ ಭೋಸಲೆಗೆ ಮೊಗಲರ ವಿರುದ್ಧವಾಗಿ ಯುದ್ಧಮಾಡುವದಕ್ಕೆ ನೆರವಾಗಿದ್ದನು. ಶಹಾಜಿಯ ತರು ವಾಯ ತುಕೋಜಿಯು ಶಿವಾಜಿಯ ಕೈಯಲ್ಲಿ ಕೆಲಸಮಾಡತೊಡಗಿದನು. ಶಿವಾ ಜಿಯು ಅವನನ್ನು ತನ್ನ ಹಡಗುಪಡೆಯಲ್ಲಿ ಮೇಲಧಿಕಾರಿಯ ಸ್ಥಳದಲ್ಲಿ ನಿಯಮಿಸಿ ದನು. ಈ ತುಕೋಜಿಯ ಮಗನಾದ ಕಾನ್ಹೋಜಿಯು ೧೬೯೦ರಲ್ಲಿ ರಾಜಾರಾಮನ ಹಡಗುಪಡೆಯಲ್ಲಿ ದ್ವಿತೀಯ ಸೇನಾಪತಿಯ ಕೆಲಸ ಮಾಡುತ್ತಿದ್ದನೆಂದು ತಿಳಿಯು

ತ್ತದೆ. ಮುಖ್ಯಸೇನಾಪತಿಯಾದ ಸಿದ್ಧೋಜಿ ಗುಜರ ಇವನು ಮಡಿದ ಮೇಲೆ, ಕಾನ್ಹೋಜಿಗೆ ೧೬೯೮ರಲ್ಲಿ ಈ ಸ್ಥಳವು ದೊರೆಯಿತು. ಇವನು ಎದೆಗಾರ ಅಂಬಿಗ ನೆಂದು ಪ್ರಸಿದ್ಧಿಯಿರುವದು. ಮುಂಬಯಿಯ ಕೆಳಗಿನ ಅರಬೀಸಮುದ್ರದ ದಂಡೆ ಎಲ್ಲ ಬಂದರಗಳಲ್ಲಿ ಕಾನ್ಹೋಜಿಯ ವರ್ಚಸ್ಸು ಇದ್ದು, ಆಳವಿನೊಳಗೆ ಸಿಲುಕಿದ ಎಲ್ಲ ಯುರೋಪೀಯರ ನೌಕೆಗಳ ಮೇಲೆ ಅವನು ನಿರಾತಂಕವಾಗಿ ದಾಳೀ ಮಾಡು ತ್ತಿದ್ದನು. ಕುಲಾಬಾ, ಸುವರ್ಣದುರ್ಗ, ವಿಜಯದುರ್ಗ ಮೊದಲಾದ ಸ್ಥಳಗಳು ಇವನ ಭದ್ರವಾದ ಠಾಣ್ಯಗಳಾಗಿದ್ದವು. ಯುರೋಪೀಯರ ಬರ-ಹೋಗುವ ಮಾರ್ಗ ವೆಂದರೆ ಅರಬೀಸಮುದ್ರದ ದಂಡೆಯೇ ಇದ್ದುದರಿಂದ, ಮೊಟ್ಟಮೊದಲು ಅವರಿಗೆ ಆಂಗ್ರೆಯೇ ಗಂಟುಬಿದ್ದಿರಲಿಕ್ಕೆ ಸಾಕು. ಕಾನ್ಹೋಜಿಗೆ ಕೊಂಕಣಪಟ್ಟಿಯ ಮೇಲೆ ಇಂಗ್ಲಿಷ-ಪೋರ್ತುಗೀಜರ ಸರಿಸಮಾನಸ್ಕಂದನಾದ ಶತ್ರುವೆಂದರೆ, ಜಂಜೀರೆಯ ಶಿದ್ದಿಯೇ. ೧೬೯೯ರಲ್ಲಿ ಪೋರ್ತುಗೀಜರೂ ಶಿದ್ದಿಯೂ ಒಂದಾಗಿ ಆಂಗ್ರೆಯೊಡನೆ ಯುದ್ಧವನ್ನು ಪ್ರಾರಂಭಿಸಿದರು; ಆದರೆ ಆಂಗ್ರೆಯು ಅವರನ್ನು ಪರಾಭವಗೊಳಿಸಿ ಸಾಗರಗಡವನ್ನು ತೆಗೆದುಕೊಂಡನು. ಕೊನೆಗೆ ಅವರಲ್ಲಿ ಒಪ್ಪಂದವಾಗಿ ಕುಲಾಬಾ, ಖಾಂದೇರಿ, ಸಾಗರಗಡ ಈ ಠಾಣ್ಯಗಳಲ್ಲಿಯ ಕೆಲ ಉತ್ಪನ್ನವೂ, ರಾಜಕೋಟ-ಚೌಲ ಗಳಲ್ಲಿಯ ಎಲ್ಲ ಉತ್ಪನ್ನವೂ ಆಂಗ್ರೆಗೇ ದೊರೆಯಬೇಕು. ೧೭೦೫ರಿಂದ ೧೭೧೦ ಈ ಇಸವಿಗಳ ಮಧ್ಯಂತರದಲ್ಲಿ ಆಂಗ್ರೆಯ ವರ್ಚಸ್ಸು ಬಹಳೇ ಬೆಳೆಯಿತು. ಇಂಗ್ಲಿಷ ಜನರ ಕಾಗದ-ಪತ್ರಗಳಿಂದ ಕಾನ್ಹೋಜಿಯ ಗುಣಸಾದೃಶದ ಮೇಲೆ ಇವನಿಗೆ "ಶಿವಾಜಿ" ಎಂಬ ಹೆಸರು ಕೊಟ್ಟಿದ್ದು ಗೋಚರವಾಗುವದು. ಶಾಹೂ ಮತ್ತು ತಾರಾಬಾಯಿ ಇವರ ಜಗಳದಲ್ಲಿ ಕಾನ್ಹೋಜಿಯು ತಾರಾಬಾಯಿಯ ಪಕ್ಷ ವನ್ನು ಹಿಡಿದಿದ್ದನು. ಅವಳು ಮುಂಬಯಿಯಿಂದ ಸಾವಂತವಾಡಿಯವರೆಗಿನ ಸಮುದ್ರತೀರದ ಪ್ರದೇಶವನ್ನೂ, ರಾಜಮಾಚಿಯ ದುರ್ಗವನ್ನೂ ಕಲ್ಯಾಣ-ಭಿವಂಡಿ ಪರಗಣೆಗಳನ್ನೂ ಆಂಗ್ರೆಯ ಸ್ವಾಧೀನಮಾಡಿ ಅಧಿಕಾರಪತ್ರ ಬರೆದುಕೊಟ್ಟಳು.

ಆಗ ಶಾಹುವು ತನ್ನ ಪೇಶವೆಯಾದ ಬಹಿರೋಪಂತ ಪಿಂಗಳೆಯನ್ನು ಆಂಗ್ರೆ ಯ ಮೇಲೆ ಕಳುಹಿಸಿದನು. ಆಂಗ್ರೆಯು ಅವನನ್ನು ಪರಾಭವಗೊಳಿಸಿ ಸೆರೆ ಹಿಡಿ ದನು; ಹಾಗು ಸಾತಾರೆಯ ಮೇಲೆ ದಾಳೀ ಮಾಡುವ ಸಿದ್ಧತೆ ನಡೆಯಿಸಿದನು. ಆಗ ಶಾಹುವು ಬಾಳಾಜಿ ವಿಶ್ವನಾಥನನ್ನು ಆಂಗ್ರೆಯ ಮೇಲೆ ಕಳುಹಿಸಿದನು. ಮುಂದೆ ಉಭಯತರ ನಡುವೆ ಒಪ್ಪಂದವಾಯಿತು. ಆಂಗ್ರೆಗೆ ಖಾಂದೇರಿಯಿಂದ ದೇವಗಡದ ವರೆಗಿನ ಪ್ರದೇಶವೂ, ಕೊಂಕಣದೊಳಗಿನ ಹತ್ತು ಕೋಟೆಗಳೂ, ಹಡಗು ಪಡೆಯ ಮುಖ್ಯ ಸೇನಾಪತಿಯ ಸ್ಥಳವೂ, ಸರಖೇಲ ಪದವಿಯೂ ಶಾಹೂನಿಂದ ದೊರೆತವು. ಇವುಗಳೊಳಗಿನ ಕೆಲವು ಕೋಟೆಗಳು ಸಿದ್ದಿಯ ಕೈಕೆಳಗಿದ್ದವು. ಆಂಗ್ರೆ ಯು ಶಿದ್ದಯೊಡನೆ ಯುದ್ಧ ಮಾಡಿ ಅವುಗಳನ್ನು ತೆಗೆದುಕೊಂಡನು. ೧೭೩೦ ರಲ್ಲಿ ಕೊಂಕಣದೊಳಗಿನ ಮೊಗಲರ ಅಧಿಕಾರವು ನಷ್ಟಪ್ರಾಯವಾಗಿ ಅಲ್ಲಿ ಮರಾ

ಟರ ವರ್ಚಸ್ಸು ಬೆಳೆಯಹತ್ತಿತು. ಕಾನ್ಹೋಜಿಯು ದೊಡ್ಡ ಹಡಗುಪಡೆಯನ್ನಿರಿಸಿ ಕೊಂಡಿದ್ದನು. ಅದರಲ್ಲಿ ಮರಾಟರೊಡನೆ ಡಚ್ಚರು, ಪೋರ್ತುಗೀಜರು, ಅರಬರು, ನಿಗ್ರೋ, ಮುಸಲ್ಮಾನರು ಮೊದಲಾದ ಪರಜಾತಿಯ ಜನರೂ ಸಮಾವೇಶವಾಗಿದ್ದರು. ಮುಂದೆ ಆಂಗ್ರೇಯು ಯುರೋಪೀಯ ಜನರೊಡನೆ ಯುದ್ಧ ಮಾಡಬೇಕಾಯಿತು. ಸಮುದ್ರತೀರವು ಮುಕ್ತದ್ವಾರವಾಗಿದ್ದರೂ, ಈಗಿನಂತೆ ಅಗ್ಗೆ ಬಂದರಗಳಿಗೆ ಹಡಗುಗಳು ಬರಬೇಕಾದರೆ ಒಪ್ಪಿಗೆಯ ಪತ್ರವು ಬೇಕಾಗುತ್ತಿತ್ತು. ಆಜ್ಞಾಪತ್ರ ವಿರದಿದ್ದರೆ ಬೇಕಾದವರ ಹಡಗುಗಳ ಮೇಲೆ ದಾಳೀ ಮಾಡಲಿಕ್ಕೆ ಕಾನ್ಹೋಜಿಗೆ ಅಧಿಕಾರವಿತ್ತು. ಯಾಕಂದರೆ, ಇವನು ಸಮುದ್ರಪಡೆಯ ಸರದಾರನಿದ್ದು, ಬಂದರ ತೀರದ ಆಜ್ಞಾಪತ್ರ ಕೊಡುವ ಗುತ್ತಿಗೆಯು ಇವನ ಕಡೆಗೇ ಇತ್ತು. ಇವನು ಪ್ರತಿ ವರ್ಷ ಈ ಕೆಲಸಕ್ಕಾಗಿ ಛತ್ರಪತಿಯ ಭಂಡಾರದಲ್ಲಿ ನಿಯತಮಿತ ಹಣವನ್ನು ತುಂಬುತ್ತಿದ್ದನು.

೧೭೧೭ರಲ್ಲಿಇಂಗ್ಲಿಷರು ವಿಜಯದುರ್ಗ ಕೋಟೆಯನ್ನು ತೆಗೆದುಕೊಳ್ಳುವ ಪ್ರಯತ್ನ ಮಾಡಿದರು. ಆಗ ಅವರು ಮೋಸ ಹೋದರು. ಅವರ ಸಕ್ಸೆಸ್ ಎಂಬ ಹಡಗವು ಆಂಗ್ರೆಯ ಸ್ವಾಧೀನವಾಯಿತು. ೧೭೧೮ರಲ್ಲಿ ಇಂಗ್ಲಿಷರು ಆಂಗ್ರೆಯ ವಶದಲ್ಲಿದ್ದ ಖಾಂದೇರಿದ್ವೀಪದ ಮೇಲೆ ದಾಳೀ ಮಾಡಿದರು; ಆದರೆ ಕಾನ್ಹೋಜಿಯು ಅಲ್ಲಿಯೂ ಅವರನ್ನು ಚದರಿಸಿ ಬಹಳ ನಷ್ಟಕ್ಕೊಳಪಡಿಸಿದನು. ೧೭೨೦ರಲ್ಲಿ ಕಾನ್ಹೋಜಿಯು ಇಂಗ್ಲಿಷರ ಮತ್ತೊಂದು ನೌಕೆಯನ್ನು ಹಿಡಿದನು. ಆಗ ಇಂಗ್ಲಿಷರೂ ಪೋರ್ತುಗೀಜರೂ ಒಕ್ಕಟ್ಟಾಗಿ ವಿಜಯದುರ್ಗದ ಒತ್ತಿನೊಳಗೆ ಸೇರಿ, ಆಂಗ್ರೆಯ ಹದಿನಾರು ನೌಕೆಗಳನ್ನು ಸುಟ್ಟರು; ಆದರೂ ಅವರಿಗೆ ಆ ಕೋಟೆಯು ವಶವಾಗಲಿಲ್ಲ. ೧೭೨೨ರಲ್ಲಿ ಆಂಗ್ರೆಯ ಠಾಣೇದಾರನು ಕುಲಾಬಾದಲ್ಲಿ ಇಂಗ್ಲಿಷ-ಪೋರ್ತುಗೀಜರನ್ನು ಪರಾಭವ ಗೊಳಿಸಿದನು. ೧೭೨೪ರಲ್ಲಿ ಡಚ್ಚರು ಏಳು ದೊಡ್ಡ ಹಡಗಗಳನ್ನು ತೆಗೆದು ಕೊಂಡು ವಿಜಯದುರ್ಗದ ಮೇಲೆ ದಾಳಿ ಮಾಡಿದರು; ಆದರೆ ಆಂಗ್ರೆಯು ಅವರನ್ನು ಚದರಿಸಿದನು. ೧೭೨೭-೨೮ರಲ್ಲಿ ಅವನು ಯುರೋಪೀಯರ ಅನೇಕ ಹಡಗಗಳನ್ನು ಹಿಡಿದನು; ಹಾಗು ಇಂಗ್ಲಿಷರ ವ್ಯಾಕನೀಲನೆಂಬ ಕಪ್ತಾನನನ್ನು ಹಿಡಿದು ಹೊಡೆದು, ಬಡಿದು ಕಾಲಲ್ಲಿ ಶೃಂಖಲೆ ಹಾಕಿ ಕೋಟೆಯಲ್ಲಿ ಚಲ್ಲಿದನು. ಆಗ ಇಂಗ್ಲಿಷರು ಸಾವಂತವಾಡಿಯ ಫೋಂಡ ಸಾವಂತನೊಡನೆ ಒಪ್ಪಂದ ಮಾಡಿಕೊಂಡು, ಆಂಗ್ರೆಯ ವಿರುದ್ಧವಾಗಿ ಸಹಾಯ ತೆಗೆದುಕೊಂಡರು. ೧೭೩೧ರಲ್ಲಿ ಕಾನ್ಹೋಜಿಯು ಮಡಿದನು. ಅವನಿಗೆ ನಾಲ್ಕು ಜನ ಮಕ್ಕಳಿದ್ದರು. ಕಾನ್ಹೋಜಿಯು ಮರಣ ಹೊಂದಿದ ಕೂಡಲೆ ಇವರೊಳಗೆ ವ್ಯಾಜ್ಯವು ಆರಂಭವಾಯಿತು. ಅವರಲ್ಲಿ ಸಖೋಜಿ ಯೆಂಬವನು ಪೇಶವೆಯವರನ್ನು ಕೂಡಿಕೊಂಡು ಮೊಗಲ ಸರದಾರನಾದ ಗಾಜೀ ಖಾನನನ್ನು ಸೋಲಿಸಿ ಚೌಲ ಕೋಟೆಯನ್ನು ಹಿಡಿದುಕೊಂಡನು. ಅಂಜನವೇಲ ದಲ್ಲಿಯ ಕಾಳಗದಲ್ಲಿ ಸಖೋಜಿಯು ಪೇಶವೆಯವರಿಗೆ ಸಹಾಯ ಮಾಡಿದನು.

ಸಖೋಜಿಯು ೧೭೩೩ರಲ್ಲಿ ಮರಣಹೊಂದಿದ ಮೇಲೆ ಅವನ ಬಂಧುಗಳಾದ ಮಾನಾಜಿ, ಸಂಭಾಜಿ ಇವರಲ್ಲಿ ವ್ಯಾಜ್ಯವು ನಡೆದು, ಮಾನಾಜಿಯು ಪೋರ್ತುಗೀಜರ ನೆರವಿನಿಂದ ಕುಲಾಬಾ ಕೋಟೆಯನ್ನು ತೆಗೆದುಕೊಂಡನು. ಅವನ ವಿರುದ್ಧವಾಗಿ ಶಿದ್ದಿಯೂ ಇಂಗ್ಲಿಷರೂ ಒಕ್ಕಟ್ಟಾಗಿ ಅವನ ಎಲ್ಲ ಪ್ರಾಂತವನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದರು; ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಮುಂದೆ ಸಂಭಾಜಿಯು ಪ್ರಬಲನಾಗಿ ಆಲೀಬಾಗದ ಮೇಲೆ ದಾಳೀ ಮಾಡಿದನು. ಆಗ ಮಾನಾಜಿಯು ಇಂಗ್ಲಿಷರ ಹಾಗು ಪೇಶವೆಯರ ಸಹಾಯ ತೆಗೆದುಕೊಳ್ಳಬೇಕಾಯಿತು. ಬರಬರುತ್ತ ಸಂಭಾಜಿಯು ಬಹಳೇ ಪ್ರಬಲನಾಗಿ, ಇಂಗ್ಲಿಷರು ತಮ್ಮ ಹಡಗಗಳಿಗೂ ನೌಕೆಗಳಿಗೂ ತನ್ನಿಂದ ಆಜ್ಞಾಪತ್ರ ಪಡೆಯಬೇಕೆಂತಲೂ, ಪ್ರತಿವರ್ಷ ತನಗೆ ೨೦ ಲಕ್ಷ ರೂಪಾಯಿ ಕಪ್ಪನ್ನು ಕೊಡಬೇಕೆಂತಲೂ ಅವರಿಗೆ ತಿಳಿಸಿದನು. ಇಂಗ್ಲಿಷರು ಈ ಬೇಡಿಕೆಗೆ ಮಾನ್ಯತೆಯೀಯಲಿಲ್ಲ.

೧೭೪೦ರಲ್ಲಿ ಸಂಭಾಜಿಯು ಅಸಾಧ್ಯನಾದುದರಿಂದ ಮಾನಾಜಿಯು ಬಾಳಾಜಿ ಬಾಜೀರಾವ ಪೇಶ್ವೆಯ ಸಹಾಯವನ್ನು ಬೇಡಿದನು ಅದರಂತೆ ಪೇಶವೆಯು ಸಹಾಯವಿತ್ತನು; ಆದರೆ ಪೇಶವೆಯು ತಾನೇ ಕುಲಾಬಾ ಕೋಟೆಯನ್ನು ಹಸ್ತಗತ ಮಾಡಿಕೊಳ್ಳುವವನಿರುವನೆಂಬ ಸಂಶಯವುಂಟಾದ್ದರಿಂದ, ಮಾನಾಜಿಯು ಹೇಗಾದರೂ ಮಾಡಿ ಸಂಭಾಜಿಯೊಡನೆ ಒಪ್ಪಂದ ಮಾಡಿಕೊಂಡನು. ೧೭೪೮ರಲ್ಲಿ ಸಂಭಾಜಿಯು ಮರಣಹೊಂದಿದನು. ಅವನ ಹಿಂದೆ ಬಂದ ತುಳಾಜಿಯಾದರೂ ಇಂಗ್ಲಿಷರ ಕಟ್ಟಾವೈರಿಯಾಗಿದ್ದನು. ತುಳಾಜಿಯು ಕಾಲಕೀರ್ದಿಯಲ್ಲಿ ತಮ್ಮ ಹಡಗಗಳ ರಕ್ಷಣೆ ಮಾಡಿಕೊಳ್ಳಲಿಕ್ಕೆ ಇಂಗ್ಲಿಷರಿಗೆ ಪ್ರತಿವರ್ಷ ಐದು ಲಕ್ಷ ರೂಪಾಯಿಗಳ ವೆಚ್ಚ ಬರುತ್ತಿತ್ತು. ತುಳಾಜಿಯು ದೊಡ್ಡ ದೊಡ್ಡ ಹಡಗಗಳನ್ನು ಕಟ್ಟಿಸಿ ದಕ್ಷಿಣ ಸಮುದ್ರದೊಳಗಿನ ವ್ಯಾಪಾರವನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳಬೇಕೆಂದು ಯೋಚಿಸಿದ್ದನು. ೧೭೫೫ರಲ್ಲಿ ಪೇಶವೆಯವರೂ ಇಂಗ್ಲಿಷರೂ ಕೂಡಿ ತುಳಾಜಿಯ ಮೇಲೆ ದಾಳೀ ಮಾಡಬೇಕೆಂದು ನಿಶ್ಚಯಿಸಿದರು. ಮರಾಟರು ಭೂಮಾರ್ಗದಿಂದಲೂ ಇಂಗ್ಲಿಷರೂ ಜಲಮಾರ್ಗದಿಂದಲೂ ವಿಜಯದುರ್ಗ ಕೋಟೆಯ ಮೇಲೆ ದಾಳೀ ಮಾಡಿದರು. ಕೊನೆಗೆ ಆ ಕೋಟೆಯು ಅವರ ಸ್ವಾದೀನವಾಯಿತು. ಈ ದಾಳಿಯಲ್ಲಿ ಅಡಮಿರಲ್ ವಾಟಸನ್ನನೊಡನೆ ಕರ್ನಲ್ಲ ಕ್ಲೈವನೂ ಇದ್ದನು. ಕೋಟೆಯಲ್ಲಿ ಎಂಟು ಜನ ಇಂಗ್ಲಿಷ ಹಾಗು ಮೂರು ಮಂದಿ ಡಚ್ಚ ಸೆರೆಯಾಳುಗಳಿದ್ದರು. ಕೋಟೆಯು ಸ್ವಾಧೀನವಾದ ಕೂಡಲೆ ಅವರ ಬಿಡುಗಡೆಯಾಯಿತು. ಇಂಗ್ಲಿಷರೂ ಪೇಶವೆಯರೂ ಕೂಡಿ ಆ ಕೋಟೆಯಲ್ಲಿ ೧೨॥ ಲಕ್ಷ ರೂಪಾಯಿಗಳ ಸುಲಿಗೆ ಮಾಡಿದರು. ತುಳಾಜಿ ಆಂಗ್ರೆಯು ಆಮರಣವಾಗಿ ಸೆರೆಯಲ್ಲಿರಬೇಕಾಯಿತು. ಮೊದಲಿನ ಕಟ್ಟಳೆಯ ಮೇರೆಗೆ ವಿಜಯದುರ್ಗ ಕೋಟೆಯು ಪೇಶವೆಯರಿಗೆ ದೊರೆಯಿತು. ಇದಕ್ಕೆ ಪ್ರತಿಯಾಗಿ ಬಾಣಕೋಟ, ದಾಸಗಾಂವಗಳು

ಇಂಗ್ಲಿಷರಿಗೆ ದೊರೆತವು. ವಿಜಯದುರ್ಗದಲ್ಲಿ ಪೇಶವೆಯರು ತಮ್ಮ ಹಡಗು ಪಡೆಯ ಸುಭೆಯನ್ನು ಸ್ಥಾಪಿಸಿ, ಆನಂದರಾವ ಧುಳಪನನ್ನು ಸುಭೇದಾರರನ್ನಾಗಿ ನಿಯಮಿಸಿದರು.

ಮಾನಾಜ ಆಂಗ್ರೆಯು ಇತ್ತ ಘಟ್ಟದ ಮೇಲೆ ಬಂದು ಪೇಶವೆಯರಿಗೆ ಸಹಾಯ ಮಾಡುತ್ತಿದ್ದನು. ವಿಜಯದುರ್ಗವು ಪೇಶವೆಯರ ಅಂಕಿತವಾದ ಮೇಲೆ ಅವನು ತಿರುಗಿ ಹೋದನು. ೧೭೫೬ರಲ್ಲಿ ಮಾನಾಜಿಯು ಮಡಿದ ಮೇಲೆ ಅವನ ದಾಸೀ ಪುತ್ರನಾದ ರಘೋಜಿಯು ಪೇಶವೆಯರ ಸಹಾಯದಿಂದ ಮೊದಲು ಶಿದ್ದಿಯೊಡನೆ ಯುದ್ಧ ಮಾಡಬೇಕಾಯಿತು. ಅವನು ಉಂಡೇರೀ ನಡುಗಡ್ಡೆಯನ್ನು ಶಿದ್ದಿಯಿಂದ ತೆಗೆದುಕೊಂಡು ಪೇಶವೆಗೆ ಕೊಟ್ಟನು. ರಘೋಜಿಯು ಅಲೀಬಾಗದಲ್ಲಿದ್ದು ತನ್ನ ಪ್ರಾಂತವನ್ನು ಸುವ್ಯವಸ್ಥೆಗೊಳಿಸಿದನು. ಚೌಲ ಮೊದಲಾದ ಸ್ಥಳಗಳಲ್ಲಿ ಉಪ್ಪಿನ ಆಗರಗಳನ್ನು ನಿರ್ಮಿಸಿ, ತನ್ನ ಉತ್ಪನ್ನವನ್ನು ಬೆಳೆಯಿಸಿಕೊಂಡನು. ಅವನು ಪೇಶವೆಗೆ ಪ್ರತಿವರ್ಷ ೨ ಲಕ್ಷ ರೂಪಾಯಿಗಳ ಕಪ್ಪ ಕೊಡುತ್ತಿದ್ದನು. ಅಲಿಬಾಗ ಸರಂಜಾಮದ ಪ್ರತಿಫಲವಾಗಿ ಅವನು ಸೈನ್ಯವನ್ನಿರಿಸಿಕೊಂಡು ಅವರ ಸೇವೆ ಮಾಡುತ್ತಿದ್ದನು. ರಘೋಜಿಯು ೧೭೯೩ರಲ್ಲಿ ಮರಣ ಹೊಂದಿದನು. ಅನಂತರದಲ್ಲಿ ಆಂಗ್ರೆಯವರ ಮನೆತನದಲ್ಲಿ ಮತ್ತೆ ಕಲಹವು ಪ್ರಾರಂಭವಾಯಿತು. ಪೇಶವೆಯು ಮಾನಾಜಿಯ ಪಕ್ಷವನ್ನು ಹಿಡಿದುದರಿಂದ, ಜಯಸಿಂಗನು ಶಿಂದೆಯ ದರಬಾರದ ಸಹಾಯವನ್ನಪೇಕ್ಷಿಸಿದನು. ಶಿಂದೆಯ ಸರದಾರನಾದ ಬಾಬೂರಾಯನು ಅಲಿಬಾಗಕ್ಕೆ ಬಂದು ಎರಡೂ ಪಕ್ಷದ ಬಾಧ್ಯಸ್ತರನ್ನು ಸೆರೆಯಲ್ಲಿರಿಸಿ, ಅಲಿಬಾಗವನ್ನು ಸ್ವಾಧೀನಪಡಿಸಿಕೊಂಡನು. ಈ ಎಲ್ಲ ಪ್ರಕರಣದಲ್ಲಿ ಜಯಸಿಂಗನ ಹೆಂಡತಿಯಾದ ಸೋನಕುವರಬಾಯಿಯು ಅನೇಕ ಸಲ ಪ್ರತ್ಯಕ್ಷ ಯುದ್ಧ ಮಾಡಿ, ಅತಿಶಯವಾಗಿ ಶೌರ್ಯ ತೋರಿಸಿದಳು. ೧೮೧೩ರಲ್ಲಿ ಬಾಬೂರಾಯನು ಮಡಿದ ಮೇಲೆ ಮಾನಾಜಿಯು ತಲೆಯೆತ್ತಿದನು. ಅವನು ಪೇಶವೆಗ ೧೦ ಸಾವಿರ ಉತ್ಪನ್ನದ ಸೀಮೆಯನ್ನೂ ಖಾಂದೇರಿ ನಡುಗಡ್ಡೆಯನ್ನೂ ಕೊಟ್ಟು ಅಲೀಬಾಗವನ್ನು ತಿರುಗಿ ತೆಗೆದುಕೊಂಡನು. ಮಾನಾಜಿಯು ೧೮೧೭ರಲ್ಲಿ ಮಡಿದನು. ಈ ಎರಡು ತಲೆಗಳ ಜಗಳದ ಮೂಲಕ ಆಂಗ್ರೆಯ ಮೂವತ್ತು ಲಕ್ಷದ ಉತ್ಪನ್ನವು ಮೂರು ಲಕ್ಷಕ್ಕೆ ಬಂದಿತು! ಮಾನಾಜಿಯ ತರುವಾಯ ಅವನ ಅಲ್ಪವಯಸ್ಕನಾದ ಮಗನು ಪಟ್ಟಕ್ಕೆ ಬಂದನು. ಅವನ ಕಾರಭಾರವನ್ನು ಬಿವಲಕರನು ನೋಡುತ್ತಿದ್ದನು. ಪೇಶವಾಯಿಯು ಸಮಾಪ್ತಿಯಾದ ಮೇಲೆ ೧೮೨೨ರಲ್ಲಿ ಇಂಗ್ಲಿಷರ ಹಾಗು ಆಂಗ್ರೆಯರ ನಡುವೆ ಒಡಂಬಡಿಕೆಯಾಗಿ, ಆಂಗ್ರೆಯು ಇಂಗ್ಲಿಷರ ಅಧಿರಾಜ್ಯವನ್ನು ಒಪ್ಪಿಕೊಂಡನು. ಅಂದಿನಿಂದ ಆಂಗ್ರೆಯರ ಔರಸತೆಯನ್ನು ಸಿದ್ಧಡಿಸುವ ಅಧಿಕಾರವು ಇಂಗ್ಲಿಷರ ಕಡೆಗೇ ಹೋಯಿತು. ೧೮೩೮ರಲ್ಲಿ ರಘೋಜಿಯು ಮಡಿದನು. ಮುಂದೆ ಎರಡು ವರ್ಷಗಳ ಮೇಲೆ ಅವನ ಮಗನಾದ ಕಾನ್ಹೋಜಿಯೂ ಮರಣ

ಹೊಂದಿದನು. ಆಗ ರಘೂಜಿಯ ಹೆಂಡತಿಯು ದತ್ತಕಕ್ಕೆ ಒಪ್ಪಿಗೆ ಬೇಡಿದಳು; ಆದರೆ ಈ ಉಪಯುಕ್ತವಾದ ಪ್ರಾಂತವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಲಿಕ್ಕೆ ಇದು ಒಳ್ಳೇ ಸಂಧಿಯಿರುವದೆಂದು ತಿಳಿದು, ಇಂಥ ಸಂಧಿಯನ್ನು ವ್ಯರ್ಥವಾಗಗೊಡಬಾರದೆಂಬ ನಿಶ್ಚಯದಿಂದ ಇಂಗ್ಲಿಷ ಸರಕಾರವು ಆಕೆಗೆ ದತ್ತಕಕ್ಕೆ ಒಪ್ಪಿಗೆ ಕೊಡಲಿಲ್ಲ. ಅಂದಿನಿಂದ ಆಲಿಬಾಗ ಸಂಸ್ಥಾನವು ಆಂಗ್ಲರಾಧೀನವಾಯಿತು!

## ಪಟವರ್ಧನರೂ ಇಂಗ್ಲಿಷರೂ

ಪೇಶವಾಯಿಯಲ್ಲಿ ಹೆಸರುವಾಸಿಗಳಾದ ಸರದಾರರಲ್ಲಿ ಪಟವರ್ಧನರೇ ಪ್ರಮುಖರು. ಇವರ ಮೂಲಪುರುಷನಾದ ಹರಭಟ್ಟ ಪಟವರ್ಧನನು ವೈದಿಕ ಬ್ರಾಹ್ಮಣನು. ಇವನು ಮೊದಲು ಇಚಲಕರಂಜಿಯ ಘೋರಪಡೆಯ ಬಳಿಯಲ್ಲಿ ಆಶ್ರಿತನೂ ಉಪಾಧ್ಯಾಯನೂ ಆಗಿದ್ದನು. ಇವನು ೧೭೨೮ರಲ್ಲಿ ಪುಣೆಗೆ ಹೋಗಿ ಬಾಳಾಜಿ ವಿಶ್ವನಾಥನ ಆಶ್ರಯದಲ್ಲಿ ಇರತೊಡಗಿದನು. ಹರಭಟ್ಟನಿಗೆ ಏಳು ಜನ ಮಕ್ಕಳಿದ್ದರು. ಇವರಲ್ಲಿ ಮೂರು ನಾಲ್ಕು ಜನರು ರಾಜಕಾರಣದ ಕಡೆಗೆ ಮನಸ್ಸು ಹಾಕಿದರು. ೧೭೩೦ರಲ್ಲಿ ಗೋವಿಂದ ಹರಿಯು ಕದಮನ ಪಾಗೆಯ ಫಡಣವೀಸನಾದನು. ಇವನ ಉದಾಹರಣೆಯನ್ನು ನೋಡಿ ಇವನ ತಮ್ಮನಾದ ರಾಮಚಂದ್ರರಾಯನು ಸೇನೆಯಲ್ಲಿ ಕೆಲಸ ಮಾಡತೊಡಗಿದನು. ೧೭೩೯ರಲ್ಲಿ ಶಿದ್ದಿ ಪೋರ್ತುಗೀಜರೊಡನೆ ಆದ ಯುದ್ಧದಲ್ಲಿ ರಾಮಚಂದ್ರ ಹರಿಯು ದೊಡ್ಡ ಯಶಸ್ಸನ್ನು ಸಂಪಾದಿಸಿದನು. ೧೭೪೫ರಲ್ಲಿ ದಮಾಜಿ ಗಾಯಕವಾಡನು ತಾರಾಬಾಯಿಯ ಪಕ್ಷವನ್ನು ಹಿಡಿದು ಪೇಶವೆಗೆ ವಿರುದ್ಧನಾದಾಗ, ಪೇಶವೆಯು ಅವನ ಮೇಲೆ ಸೈನ್ಯ ಕಳುಹಿಸಿದನು. ಆ ಸೈನ್ಯದಲ್ಲಿ ಗೋವಿಂದ ಹರಿಯೂ ಅವನ ಮಗನಾದ ಗೋಪಾಳರಾಯನೂ ಇದ್ದು, ಅವರು ಒಳ್ಳೇ ಪರಾಕ್ರಮದಿಂದ ಕಾದಿ ದಮಾಜಿಯನ್ನು ಸೆರೆಹಿಡಿದು ಪುಣೆಗೆ ತಂದರು. ಮುಂದೆ ಪಟವರ್ಧನ ಸರದಾರರು ಪೇಶವೆಯರ ಸಹಾಯಕರಲ್ಲಿ ಅಗ್ರಗಣ್ಯರಾಗಿ ಕುಳಿತರು. ತದನಂತರ ನಡೆದಂಥ ದೊಡ್ಡ ದೊಡ್ಡ ಯುದ್ಧಗಳಲ್ಲಿ ಪಟವರ್ಧನ ಮನೆತನದೊಳಗಿನ ಯಾವನಾದರೊಬ್ಬನು ಇದ್ದೇ ಇರುತ್ತಿದ್ದನು. ೧೭೬೦ರಲ್ಲಿ ಗೋಪಾಳರಾಯನು ದೌಲತಾಬಾದ ಕೋಟೆಯನ್ನು ನಿಜಾಮನೊಡನೆ ಯುದ್ಧ ಮಾಡಿ ಸ್ವಾಧೀನಪಡಿಸಿಕೊಂಡನು. ದೊಡ್ಡ ಮಾಧವರಾಯನ ಆಳಿಕೆಯಲ್ಲಿ (೧೭೬೪) ಗೋವಿಂದ ಹರಿ, ಪರಶುರಾಮ ರಾಮಚಂದ್ರ, ನೀಲಕಂಠ ತ್ರ್ಯಂಬಕ ಈ ಮೂವರಿಗೂ ಕೂಡಿ ೨೪ ಲಕ್ಷದ ಜಹಗೀರಿಯು ಕೊಡಲ್ಪಟ್ಟಿತು; ಮತ್ತು ಅವರಿಗೆ ಎಂಟು ಸಾವಿರ ಸ್ವಾರರ ಸರದಾರಿಕೆಯೂ ದೊರೆಯಿತು. ಪಟವರ್ಧನರಿಗೆ ಕೊಟ್ಟ ಜಹಗೀರಿಯಲ್ಲಿ ಬಹಳ ಸೀಮೆಯು ಕೊಲ್ಹಾಪುರದ ಸಮೀಪದಲ್ಲಿದ್ದುದರಿಂದ ಕರವೀರದವರನ್ನು ಬಿಗಿ ಮಾಡಲಿಕ್ಕೆ ಪೇಶವೆಯವರಿಗೆ ಅನುಕೂಲವಾಯಿತು. ಪಟ

ವರ್ಧನರ ಜಹಾಗೀರಿಯು ಮುಖ್ಯಸ್ಥಳವು ಮಿರಜಿಯಾಯಿತು. ನಿಜಾಮ, ಹೈದರ, ಟೀಪು, ನಾಗಪುರದ ಭೋಸಲೆ, ಇಂಗ್ಲಿಷರು ಮೊದಲಾದವರೊಡನೆ ನಡೆದ ಯುದ್ಧಗಳಲ್ಲಿ ಪಟವರ್ಧನ ಸರದಾರರು ದೊಡ್ಡ ದೊಡ್ಡ ಪರಾಕ್ರಮ ತೋರಿಸಿ ಕೀರ್ತಿಶಾಲಿಗಳಾದರು. ಅವರೊಳಗೆ ಗೋಪಾಳರಾಯ, ರಾಮಚಂದ್ರರಾಯ, ಪರಶುರಾಮ ಭಾವೂ, ಕೋನ್ಹೇರರಾಯ, ಚಿಂತಾಮಣಿರಾಯ ಮೊದಲಾದ ಸರದಾರರು ಹೆಚ್ಚು ನಾಮಾಂಕಿತರಾಗಿದ್ದರು.

ಪಟವರ್ಧನ ಇಂಗ್ಲಿಷರ ಸಂಬಂಧವು ಮೊದಲು ಜನರಲ್ ಗಾಡರ್ಡನೊಡನೆ ಆದ ಯುದ್ಧ ಪ್ರಸಂಗದಲ್ಲಿ ಉಂಟಾಯಿತು. ಅನಂತರ ಟೀಪುವಿನ ಮೇಲಿನ ದಾಳಿಯಲ್ಲಿ ಜನರಲ್ ವೆಲಸ್ಲೀ ಮತ್ತು ಪರಶುರಾಮ ಭಾವೂ ಇವರ ಸಂಬಂಧವು ನಿಕಟವಾಗಿ ಉಂಟಾಗಿ, ಪರಶುರಾಮ ಭಾವುವಿನ ವಿಷಯವಾಗಿ ಇಂಗ್ಲಿಷರಲ್ಲಿ ಅತಿಶಯವಾದ ಆದರವು ಉತ್ಪನ್ನವಾಯಿತು. ಎರಡನೇ ಬಾಜೀರಾಯನು ಪೇಶವೆಯಾದ ಮೇಲೆ ನಾನಾಫಡಣವೀಸನ ಮಿತ್ರರೂ ರಘುನಾಥರಾಯನ ಶತ್ರುಗಳೂ ಎಂದು ಬಾಜೀರಾಯನು ಎಲ್ಲ ಪಟವರ್ಧನರ ಮೇಲೆ ಶಸ್ತ್ರವನ್ನೆತ್ತಿದನು; ಹಾಗು ಅವರ ಜಹಾಗೀರುಗಳನ್ನು ಸ್ವಾಧಿನಪಡಿಸಿಕೊಳ್ಳುವ ಉಪಕ್ರಮವಿರಿಸಿದನು; ಆದರೆ ಪಟವರ್ಧನರ ವಿಷಯವಾಗಿ ಇಂಗ್ಲಿಷರಲ್ಲಿ ಆದರ ಬುದ್ಧಿಯು ವಾಸಿಸಿದ್ದುದರಿಂದ, ಎಲ್ಫಿನಿಸ್ಟನ್ನ ಸಾಹೇಬನು ಮಧ್ಯಸ್ತಿಕೆಮಾಡಿ ಅವರ ಜಹಾಗೀರುಗಳನ್ನು ಕಾಯ್ದನು; ಆದರೂ ಬಾಜೀರಾಯನ ಹಾಗು ಪಟವರ್ಧನ ಸರದಾರರ ವೈಮನಸ್ಸು ಕೊನೆಯವರೆಗೂ ಸ್ಥಿರವಾಗಿ ಉಳಿಯಿತು. ೧೮೧೭ರಲ್ಲಿ ಬಾಜೀರಾಯನೊಡನೆ ಇಂಗ್ಲಿಷರು ಯುದ್ಧವನ್ನು ಪ್ರಾರಂಭಿಸಿದಾಗ ಪಟವರ್ಧನ ಸರದಾರರು ನಾಮಮಾತ್ರವಾಗಿ ಬಾಜೀರಾಯನ ಪಕ್ಷವನ್ನು ಹಿಡಿದಿದ್ದರು; ಆದರೆ ಬಾಜೀರಾಯನು ಓಡಲಿಕ್ಕೆ ಪ್ರಾರಂಭ ಮಾಡಿದ್ದರಿಂದಲೂ, ಇಂಗ್ಲಿಷರು ತಾವೇ ಪೇಶವೆಪದವನ್ನು ವಹಿಸುವೆವೆಂದು ಸುದ್ದೀ ಹರಡಿದ್ದರಿಂದಲೂ, ಎಲ್ಫಿನಿಸ್ಟನ್ನ ಸಾಹೇಬನು ಪಟವರ್ಧನರ ಜಹಾಗೀರುಗಳನ್ನು ಪ್ರಯಾಸದಿಂದ ಉಳಿಸಿದ್ದಕ್ಕಾಗಿ ಇವರಲ್ಲಿ ಇಂಗ್ಲಿಷರ ಬಗ್ಗೆ ಕೃತಜ್ಞತಾಬುದ್ಧಿಯಿದ್ದುದರಿಂದಲೂ ಪಟವರ್ಧನರು ತಮ್ಮ ಸೈನ್ಯಸಹಿತ ಹಿಂದಿರುಗಿ ತಮ್ಮ ತಮ್ಮ ಊರುಗಳಿಗೆ ಹೊರಟು ಹೋದರು. ಬಾಜೀಶಾಹಿಯ ಕೊನೆಗೆ ಸಾಂಗಲಿಯ ಚಿಂತಾಮಣಿರಾವ ಅಪ್ಪಾಸಾಹೇಬನೊಬ್ಬನೇ ಬಾಜೀರಾಯನು ಓಡಿಹೋಗುವಾಗ ಉತ್ತರ ಹಿಂದುಸ್ತಾನಕ್ಕೆ ಹೋಗಿದ್ದನು. ಅವನಾದರೂ ಬಾಜೀರಾಯನು ಇಂಗ್ಲಿಷರ ಸ್ವಾಧೀನವಾಗುವದಕ್ಕಿಂತ ಮೊದಲೇ ತಿರುಗಿದನು. ಚಿಂತಾಮಣಿರಾಯನ ವರ್ಚಸ್ಸು ಇಂಗ್ಲಿಷರ ಮೇಲೆ ಬಹಳವಾಗಿದ್ದುದರಿಂದ, ಅವನು ತನ್ನ ಜೀವಮಾನವಿರುವವರೆಗೂ ಸ್ವಾಭಿಮಾನದಿಂದ ಜಹಾಗೀರಿಯ ಕಾರಭಾರವನ್ನು ಸಾಗಿಸಿದನು. ಬಾಜೀರಾಯನ ಆಳಿಕೆಯಲ್ಲಿ ಪಟವರ್ಧನ ಜಹಾಗೀರುಗಳು ಸರಕಾರಕ್ಕೆ ಸೇರುವದು ತಪ್ಪಿತು. ಅವರ ಮನೆತನದೊಳಗಿನ ನಾಲ್ಕಾರು ಶಾಖೆಗಳು ತಮ್ಮ ಸರಂಜಾಮನ್ನು ಪಾಲುಮಾಡಿ

ಕೊಳ್ಳಲಿಕ್ಕೆ ಬೇಡಿದ್ದರಿಂದ ಪೇಶವೆಯರೂ ಇಂಗ್ಲಿಷರೂ ಒಪ್ಪಿಗೆಕೊಟ್ಟರು. ಹೀಗಾಗಿ ಜಹಾಗೀರುಗಳು ಸಣ್ಣವಾಗಿ ಬಲಹೀನವಾದವು. ಪೇಶ್ವಾಯಿಯು ನಷ್ಟವಾದ ಮೇಲೆ ಇಂಗ್ಲಿಷರು ಪ್ರತಿಯೊಂದು ಮನೆತನದವರೊಡನೆ ಬೇರೆ ಬೇರೆ ಒಪ್ಪಂದ ಮಾಡಿಕೊಂಡರು. ಪ್ರತ್ಯಕ್ಷ ದಂಡು ಇಟ್ಟು ನೌಕರಿಮಾಡುವದು ತಪ್ಪಿತು. ಅದರಿಂದ ಪ್ರತಿಯೊಬ್ಬರ ನಾಡಿನೊಳಗಿನ ಎಷ್ಟೋ ಪ್ರದೇಶವನ್ನು ಕಿತ್ತು ಇಂಗ್ಲಿಷರು ತಮ್ಮ ವಶಕ್ಕೆ ತೆಗೆದುಕೊಂಡರು. ಪಟವರ್ಧನರ ಉತ್ಕರ್ಷಕಾಲವು ಸುಮಾರು ಅರವತ್ತು ವರ್ಷದ್ದಾಗಿದೆ. ಬಾಜೀರಾಯನ ವೈರದಿಂದಲೂ ಇಂಗ್ಲಿಷರ ಸ್ನೇಹದಿಂದಲೂ ಮರಾಟಶಾಹಿಯು ನಷ್ಟವಾಗಲಿಕ್ಕೆ ಪಟವರ್ಧನರಿಂದ ಹೆಚ್ಚಾಗಿ ಅಡ್ಡಿಯೂಗಲಿಲ್ಲ.

ಪೇಶವಾಯಿಯು ನಷ್ಟವಾದ ಮೇಲೆ ಪಟವರ್ಧನರ ತೇಜವೂ ನಷ್ಟವಾಯಿತು. ಆದರೂ ಅವರೊಳಗಿನ ಮಿರಜಿಯ ದೊಡ್ಡ ಅಪ್ಪಾಸಾಹೇಬ, ದೊಡ್ಡ ಬಾಳಾಸಾಹೇಬ, ತಾತ್ಯಾಸಾಹೇಬ, ಮಿರಜ ಮಳೆಯ ಅಣ್ಣಾಸಾಹೇಬ ಮೊದಲಾದ ಸಂಸ್ಥಾನಿಕರು ಪ್ರಸಿದ್ಧರಿರುವರು. ಎಲ್ಲಿಯ ವರೆಗೆ ಪಟವರ್ಧನರಲ್ಲಿ ಪಾಲು ಆಗದೆ ಇತ್ತೋ, ಅಲ್ಲಿಯುವರೆಗೆ ಆವರ ಪ್ರಾಂತದಲ್ಲಿಯ ಮುಲಕೀ ಫೌಜದಾರೀ ಅಧಿಕಾರಗಳು ಅವರ ಕಡೆಗೇ ಇದ್ದವು; ಆದರೆ ಪಾಲು ಆದ ಮೇಲೆ ಹಿರಿಯ ಮನೆತನಕ್ಕೆ ಮಾತ್ರ ಈ ಅಧಿಕಾರಗಳು ಉಳಿದವು; ಆದರೆ ಕೆಲವು ಸರಂಜಾಮೀ ಪ್ರದೇಶವನ್ನು ಇಂಗ್ಲಿಷರು ಕಿತ್ತುಕೊಂಡದ್ದರಿಂದ ನೌಕರಿಯು ಬಿಡುಗಡೆಯಾಗಿ ಮೊದಲು ಪಟವರ್ಧನ ಸರದಾರರಲ್ಲಿದ್ದ ಸಾವಿರಾರು ಸೈನಿಕರ ಪಥಕಗಳು ನಾಮಶೇಷವಾದವು. ಹೆಸರುವಾಸಿಯಾಗುವದರ ಉಗಮಸ್ಥಾನವು ಸೈನ್ಯದ ನೌಕರಿಯುದಿದ್ದು, ಅದೇ ಹೊರಟು ಹೋದದ್ದರಿಂದ ಪಟವರ್ಧನರ ವೈಭವವೂ ವ್ಯವಸಾಯವೂ ಹೋಗಿ, ಮುಂದೆ ಮುಂದೆ ಏನು ಮಾಡಬೇಕೆಂಬದೇ ಅವರಿಗೆ ತಿಳಿಯದಂತಾಗಿ ಸ್ವಚ್ಛಂದ ವೃತ್ತಿಯುವರೂ ಅಲಸಿಗರೂ ಆದರು. ೧೮೫೭ರ ಬಂಡಾಯದಲ್ಲಿ ಸೇರಿದ ಆರೋಪದಿಂದ ಜತುಖಂಡಿಯ ಅಪ್ಪಾಸಾಹೇಬನು ಕೆಲದಿವಸ ಪ್ರತಿಬಂಧದಲ್ಲಿದ್ದನು. ಮಿರಜಿಯ ದೊಡ್ಡ ಬಾಳಾಸಾಹೇಬನ ಮೇಲೆ ಇಂಗ್ಲಿಷರ ವಕ್ರದೃಷ್ಟಿಯಿತ್ತು. ಪೇಶವಾಯಿಯನ್ನು ತಿರುಗಿ ತರಲು ಸಾಧ್ಯವಿಲ್ಲ; ಇಂಗ್ಲಿಷರ ಸೇವೆಯನ್ನು ಮುಕ್ತಮನದಿಂದ ಮಾಡುವ ಇಚ್ಛೆಯೂ ಇಲ್ಲ, ಇದೇ ಗೊಂದಲದಲ್ಲಿ ಪಟವರ್ಧನ ಸಂಸ್ಥಾನಿಕರ ಎಷ್ಟೋ ವರ್ಷಗಳು ಕಳೆದವು!

---

## ಮರಾಟರ ಹಾಗು ಇಂಗ್ಲಿಷರ ಸಮಕಾಲೀನ ಉತ್ಕರ್ಷಾಪಕರ್ಷ

ಮರಾಟರ ಹಾಗು ಇಂಗ್ಲಿಷರ ಪರಸ್ಪರ ಸಂಬಂಧದ ಕಾಲಾವಧಿಯಲ್ಲಿ ಮುಂದೆ ಬರೆದಂತೆ ನಾಲ್ಕು ವಿಭಾಗ ಮಾಡಬಹುದು,

(೧) ೧೬೪೪ರಿಂದ ೧೬೭೧ ಈ ಕಾಲಾವಧಿಯಲ್ಲಿ ಇಂಗ್ಲಿಷರ ಹಾಗು ಮರಾಠರ ನಿಕಟ ಪರಿಚಯವಾಯಿತು. ಆಗ ಇಂಗ್ಲಿಷರು ಮರಾಟರಿಗೆ ಬಾಗಿ ನಡೆಯುತ್ತಿದ್ದು, ಅವರೊಡನೆ ಸ್ನೇಹಬಳೆಯಿಸಲು ಇಚ್ಛಿಸುತ್ತಿದ್ದರು.

(೨) ೧೬೭೧ರಿಂದ ೧೭೮೬ ಈ ಕಾಲಾವಧಿಯಲ್ಲಿ ಇಂಗ್ಲಿಷರ ವರ್ಚಸ್ಸು ಇತರ ಪ್ರಾಂತಗಳಲ್ಲಿ ಚನ್ನಾಗಿ ಕುಳಿತದ್ದರಿಂದ ಅವರಿಗೆ ಆತ್ಮಸಾಮರ್ಥ್ಯದ ವಿಶ್ವಾಸವು ತೋರಹತ್ತಿತು. ಆಗ ಅವರು ಮರಾಟರೊಡನೆ ಹೋರಾಡಿ ತಮ್ಮ ಶಕ್ತಿಯನ್ನು ಅಳೆಯುವ ಪ್ರಯತ್ನಕ್ಕಾಗಿ ಕಾದಿ, ಸೋತು, ಮೋಸ ಹೋದರು.

(೩) ೧೭೮೬ರಿಂದ ೧೮೦೦ ಈ ಕಾಲಾವಧಿಯಲ್ಲಿ ಮರಾಟರೂ ಇಂಗ್ಲಿಷರೂ ಪರಸ್ಪರರು ತುಲ್ಯಬಲರಾಗಿ ಕಂಡು, ಪರಸ್ಪರ ಸ್ನೇಹ-ಸಹಕಾರಿತೆಗಳಿಂದ ನಡೆಯುಹತ್ತಿದರು.

(೪) ೧೮೦೦ರಿಂದ ೧೮೧೮ ಈ ಕಾಲದಲ್ಲಿ ಮರಾಟರು ಬಲಹೀನರಾಗಿ ಇಂಗ್ಲಿಷರ ಪಕ್ಷವು ತಲೆಯೆತ್ತಹತ್ತಿತು. ಕೊನೆಗೆ ಮರಾಟರ ಪರಾಭವವಾಗಿ ಇಂಗ್ಲಿಷರ ವರ್ಚಸ್ಸು ಎಲ್ಲ ಮರಾಟರ ಮೇಲೂ ಪ್ರಸ್ಥಾಪಿತವಾಯಿತು.

ಮೊದಲನೆಯ ಕಾಲಾವಧಿಯಲ್ಲಿ ಇಂಗ್ಲಿಷರು ತಮ್ಮ ವ್ಯಾಪಾರೀ ಸೋಗನ್ನು ಚನ್ನಾಗಿ ಕಾಯ್ದುಕೊಂಡಿದ್ದರು. ಪೇಶವೆಯರ ಕಡೆಗೂ ಛತ್ರಪತಿಗಳ ಕಡೆಗೂ ಪ್ರತಿನಿಧಿಗಳನ್ನು ಕಳಿಸುವದೂ, ಕಾಣಿಕೆ ಕೊಡುವದೂ, ವ್ಯಾಪಾರೀ ಸೌಕರ್ಯಗಳನ್ನು ದೊರಕಿಸುವದೂ, ಮನೋವೇಧಕ ಅಥವಾ ಉಪಯುಕ್ತ ಒಡವೆಗಳನ್ನು ಮಾರಿ ಗ್ರಾಹಕರನ್ನು ಸಂಪಾದಿಸುವದೂ, ನಮಗೆ ವ್ಯಾಪಾರ ಮಾಡಲಿಕ್ಕೆ ಆಜ್ಞೆಯಾದರೆ ಸಾಕು; ಯಾರ ಗೊಂದಲದಲ್ಲಿಯೂ ನಾವು ಬೀಳುವದಿಲ್ಲ; ನಾಡುಗಳು ನಮಗೆ ಬೇಕಾಗಿಲ್ಲ, ಇತ್ಯಾದಿ ಭಾಸಮಾಡುವದೂ ಅವರ ಧೋರಣವಾಗಿತ್ತು. ೧೭೬೫ರಲ್ಲಿ ಅವರ ವಶಕ್ಕೆ ಬಂಗಾಲ ಪ್ರಾಂತದ ಬಹು ಭಾಗವು ಬಂದಿತು. ಅವರು ದಿಲ್ಲೀ ಪ್ರಾಂತದ ದಿವಾಣರಾದರು. ದಕ್ಷಿಣದಲ್ಲಿಯ ಫ್ರೆಂಚರ ಪರಾಭವವಾಗಿ ಅಲ್ಲಿಯ ಅವರ ರಾಜ್ಯಗಳು ನಾಮಶೇಷವಾದವು. ನಿಜಾಮನನ್ನು ಅವರು ಸಂಪೂರ್ಣವಾಗಿ ಸ್ನೇಹಾಂಕಿತನನ್ನು ಮಾಡಿಕೊಂಡಿದ್ದರು. ದಕ್ಷಿಣದಲ್ಲಿ ಹೈದರನಾಯಕ ಹಾಗು ಮರಾಟರು ಇವರಿಬ್ಬರು ಮಾತ್ರ ಅವರಿಗೆ ಶತ್ರುಗಳಾಗಿ ಉಳಿದಿದ್ದರು. ಹೈದರನ ವಿರುದ್ಧವಾಗಿ ಇವರ ಆಟವು ಎಂದೂ ಸಾಗಲಿಲ್ಲ. ಮರಾಟರ ವಿರುದ್ಧವಾದರೂ ಅವರ ಆಟವು ಸಾಗುತ್ತಿದ್ದಿಲ್ಲ; ಆದರೆ ರಾಘೋಬನ ಗೃಹಕಲಹದ ಮೂಲಕ ಪೇಶವೆಯರ ರಾಜಕಾರಣದಲ್ಲಿ ಅವರ ಕೈಯು ಸೇರಿತು. ಇಂಗ್ಲಿಷರು ಸಾಷ್ಟಿಯನ್ನು ತೆಗೆದುಕೊಂಡ ಕೆಲವು ಕಾಲದ ವರೆಗೆ ಅದನ್ನು ಪೇಶವೆಯವರಿಂದ ತಿರುಗಿ ತೆಗೆದುಕೊಳ್ಳುವದಾಗಲಿಲ್ಲ. ಆದ್ದರಿಂದ ಇಂಗ್ಲಿಷರು ರಾಘೋಬನ ಪಕ್ಷವನ್ನು ಹಿಡಿದು ಮರಾಟರೊಡನೆ ಯುದ್ಧವನ್ನು ಆರಂಭಿಸಿದರು. ಕೊನೆಗೆ ಸಾಷ್ಟಿಯು ಅವರ ಕಡೆಗೇ ಉಳಿದರೂ, ವಡಗಾಂವದ ಸಂಗ್ರಾಮದಲ್ಲಿ ಪರಾಭವವುಂಟಾದ್ದರಿಂದ

ಅವರು ಮರಾಟರೊಡನೆ ಒಪ್ಪಂದ ಮಾಡಿಕೊಂಡು, ರಾಘೋಬನನ್ನು ಪೇಶವೆಯರ ವಶಕ್ಕೆ ಕೊಟ್ಟು, ಇನ್ನು ತಮ್ಮ ಪಕ್ಷವು ದುರ್ಬಲವಾದದ್ದಿರುವದೆಂಬದನ್ನು ಹೃತ್ಪೂರ್ವಕವಾಗಿ ಒಪ್ಪಬೇಕಾಯಿತು. ೧೭೮೬ರಿಂದ ೧೮೦೨ ಈ ಕಾಲಾವಧಿಯು ಇಂಗ್ಲಿಷರ ಹಾಗು ಪೇಶವೆಯ ಏರಿಕೆಯದಾಗಿತ್ತು. ಅವರಿಬ್ಬರೂ ತುಲ್ಯಬಲರಿದ್ದುದರಿಂದ, ಪರಸ್ಪರರಲ್ಲಿ ಸಹಕಾರಿತೆಯುಂಟಾಗುವ ಸಂಭವವಿತ್ತು. ಅಂತೆಯೇ ಅವರಿಬ್ಬರೂ ಕೂಡಿ ತಮ್ಮ ಸರಿಸಮಾನಸ್ಕಂಧ ಶತ್ರುವಾದ ಟೀಪೂ ಸುಲ್ತಾನನನ್ನು ನಿಃಪಾತಗೊಳಿಸಿದರು. ಎರಡನೆಯ ಮಾಧವರಾಯನ ಕಾಲದಲ್ಲಿ ಮರಾಟರು ಪರಮಾವಧಿ ಉತ್ಕರ್ಷ ಹೊಂದಿದರು. ಅವರು ದಕ್ಷಿಣದಲ್ಲಿ ನಿಜಾಮನನ್ನು ಚೆನ್ನಾಗಿ ಹಣ್ಣು ಮಾಡಿದರು. ನಿಜಾಮನಿಗೆ ಇಂಗ್ಲಿಷರು ಸ್ನೇಹಿತರಾಗಿದ್ದರೂ, ಪೇಶವೆಯರ ವರ್ಚಸ್ಸಿನ ಮೂಲಕ ಅವನ ಪಕ್ಷಪಾತಿಗಳಾಗಿ ಸಹಾಯ ಮಾಡಲಿಕ್ಕೆ ಇವರಿಗೆ ಸಾಧ್ಯವಾಗಲಿಲ್ಲ. ಟೀಪುವಿನ ನಾಶವಾದದ್ದರಿಂದ ತುಂಗಭದ್ರೆಯ ಕೆಳಗಿನ ಎಲ್ಲ ದಕ್ಷಿಣ ಹಿಂದುಸ್ತಾನದಲ್ಲಿ ನಿಷ್ಕಂಟಕವಾಗಿ ರಾಜ್ಯವಾಳಲಿಕ್ಕೆ ಸುಲಭವಾಯಿತು. ಉತ್ತರ ಹಿಂದುಸ್ತಾನದಲ್ಲಿ ಮರಾಟರು ಹಾಗು ಇಂಗ್ಲಿಷರು ಸರಿಸಮಾನರಾಗಿದ್ದರು. ನರ್ಮದೆಯಿಂದ ಯಮುನೆಯ ವರೆಗೆ ಶಿಂದೆಯರು ವ್ಯಾಪಿಸಿದ್ದು, ಯಮುನೆಯ ಉತ್ತರದ ರಾಜ್ಯಕ್ಕೆಲ್ಲ ಇಂಗ್ಲಿಷರು ಒಡೆಯರಾಗಿದ್ದರೆಂದು ಹೇಳಬಹುದು. ಜಗಳದ ಒಂದು ಮೂಲವೆಂದರೆ ದಿಲ್ಲಿಯು ಮಾತ್ರ ಉಳಿದಿತ್ತು. ದಿಲ್ಲಿಯ ಮೇಲಿನ ಸತ್ತೆಯು ಶಿಂದೆಯ ವಶವಲ್ಲಿತ್ತು; ರಾಜ್ಯದಲ್ಲಿಯ ಹಣ ಎತ್ತುವಿಕೆಯು ಕೆಲಸವು ಇಂಗ್ಲಿಷರ ಕಡೆಗಿತ್ತು. ನಾನಾಫಡಣವೀಸ, ಮಹದಾಜಿ ಶಿಂದೆ ಇವರ ಮರಣದ ವರೆಗಿನ ಇಪ್ಪತ್ತೈದು ವರ್ಷಗಳ ಕಾಲದಲ್ಲಿ ಮರಾಟರೂ ಇಂಗ್ಲಿಷರೂ ತುಲ್ಯಬಲರಿದ್ದುದರಿಂದ ತೋರಿಕೆಗೆ ಸಹಕಾರಿಗಳು-ಸ್ನೇಹಿಗಳೂ; ಒಳಗಿಂದೊಳಗೆ ಪರಸ್ಪರರು ಪರಸ್ಪರರನ್ನು ಮುರಿಯುವದಕ್ಕಾಗಿ ಹವಣಿಸಿಕೊಂಡು ಕುಳಿತ ಶತ್ರುಗಳೂ ಆಗಿದ್ದರು. ರಾಜಕಾರಣಪಟು ನಾನಾಫಡಣವೀಸನ ಹಾಗು ಖಡ್ಗಪಟು ಮಹದಾಜಿ ಶಿಂದೆಯ ಮರಣಾನಂತರದಲ್ಲಿ ತಕ್ಕಡಿಯ ಪರಡಿಗಳು ಒಮ್ಮೆಲೆ ಏರುಪೇರಾದವು. ಬಾಜೀರಾಯನು ದುರ್ಬಲನೂ ಮೂರ್ಖನೂ ಇದ್ದು, ಇಂಗ್ಲಿಷರ ಉಪಕಾರದಿಂದ ಬದ್ಧನಾಗಿದ್ದನು. ಇದ್ದುಬಿದ್ದ ಇಂಗ್ಲಿಷರ ಶತ್ರುಗಳೆಂದರೆ, ಶಿಂದೆ-ಹೋಳಕರರು. ಇವರಲ್ಲಿ ವೈಮನಸ್ಸಿದ್ದು, ಉಭಯತರ ಶೌರ್ಯವು ಅಂತಃಕಲಹಾಗ್ನಿಯಿಂದ ದಗ್ಧವಾಗಿ ಹೋಯಿತು. ಆದ್ದರಿಂದ ೧೮೦೩-೦೪ನೆಯ ವರ್ಷಗಳಲ್ಲಿ ಇವರಿಬ್ಬರೊಡನೆ ಬೇರೆ ಬೇರೆ ಯುದ್ಧಮಾಡಿ ಇವರನ್ನು ಪರಾಭವಗೊಳಿಸಿ, ಹಿಂದುಸ್ತಾನದ ಎದೆಯ ಮೇಲೆ ನಿಂತು ಭುಜ ಚಪ್ಪರಿಸಿಕೊಂಡ ಇಂಗ್ಲಿಷರಿಗೆ, ನಿರ್ವೀರ್ಯಮುರ್ವೀತಲಂ ಎಂಬ ಸಿಂಹನಾದವನ್ನು ಈ ದೇಶದಲ್ಲಿ ಮಾಡಲಿಕ್ಕೆ ಅವಕಾಶ ದೊರೆಯಿತು!

ಇಂಗ್ಲಿಷರ ಹಾಗು ಮರಾಟರ ಉತ್ಕರ್ಷವು ಬಹಳ ಕಾಲದ ವರೆಗೆ ಸಮಾನ

ವಾಗಿತ್ತು. ಇಂಗ್ಲಿಷರ ಉತ್ಕರ್ಷವು ಬಹಳ ಮಾಡಿ ಎಂದಿಗೂ ಇಳಿಕೆಯ ಸ್ಥಿತಿ ಹೊಂದದೆ ಕ್ರಮವಾಗಿ ಏರುತ್ತಲೇ ನಡೆಯಿತು. ಅವರು ಕೆಲವು ಯುದ್ಧಗಳಲ್ಲಿ ಅಪಜಯ ಹೊಂದಿದರೂ, ಅವರ ಆ ಪರಾಭವವು ತಾತ್ಪೂರ್ತಿಕವಾಗಿತ್ತು. ಆದರಿಂದ ಅವರ ಅಧಿಕಾರ-ವರ್ಚಸ್ಸುಗಳಿಗೂ ವೈಭವಕ್ಕೂ ಕುಂದು ಉಂಟಾಗಲಿಲ್ಲ; ಆದರೆ ಮರಾಟರ ರಾಜ್ಯಕಾರ್ಯ ದುರಂಧರತೆಯು ಹಿಂಜರಿಯುತ್ತ ನಡೆಯಿತು. ಮರಾಟರ ಹಾಗು ಇಂಗ್ಲಿಷರ ಅಸ್ತೋದಯದ ತುಲನೆಯನ್ನು ನೋಡುವದಕ್ಕಾಗಿ ಸನ್ ೧೬೦೦ ರಿಂದ ೧೮೫೮ರ ವರೆಗಿನ ಕಾಲದ ಇತಿಹಾಸವನ್ನು ಸ್ವಲ್ಪಮಟ್ಟಿಗೆ ಪರ್ಯಾಲೋಚಿಸೋಣ.

ಹಿಂದುಸ್ತಾನದ ವೈಭವದ ವಿಷಯವಾಗಿ ಇಂಗ್ಲಂಡದಲ್ಲಿ ಯಾವ ವೇಳೆಯಲ್ಲಿ ಆಶ್ಚರ್ಯಪೂರ್ಣವಾದ ವಾದ-ವಿವಾದಗಳು ನಡೆದು ವ್ಯಾಪಾರೀ ಸಂಘವನ್ನು ನಿರ್ಮಿಸಿ, ವ್ಯಾಪಾರಕ್ಕೆಂದು ಹಿಂದುಸ್ತಾನಕ್ಕೆ ಹೊರಡಲುದ್ಯುಕ್ತವಾದವೋ, ಆಗ ಹಿಂದುಸ್ತಾನದಲ್ಲಿ ಮೊಗಲರ ವರ್ಚಸ್ಸು ದಕ್ಷಿಣದ ಹೊರತು ಉತ್ತರಹಿಂದುಸ್ತಾನದಲ್ಲೆಲ್ಲ ನೆಲೆಗೊಂಡಿತ್ತು. ದಕ್ಷಿಣದಲ್ಲಿ ಮೊಗಲರ ವರ್ಚಸ್ಸು ಇರದಿದ್ದರೂ ಇತರ ಮುಸಲ್ಮಾನರ ರಾಜ್ಯಗಳಿದ್ದವು. ರಾಕ್ಷಸತಂಗಡಿ (ತಾಳೀಕೋಟೆ) ಯ ಯುದ್ಧವಾಗಿ ಹಿಂದುಪದಪಾತಶಾಹಿಯು ನಾಮಶೇಷಹೊಂದಿತ್ತು. ಬ್ರಾಹ್ಮಣೀರಾಜ್ಯದಿಂದ ಉತ್ಪನ್ನವಾದ ಅಹಮ್ಮದನಗರದ ನಿಜಾಮಶಾಹಿ, ಗೋವಳಕೊಂಡದ ಕುತುಬಶಾಹಿ, ವಿಜಾಪುರದ ಆದಿಲಶಾಹಿ ಈ ಮೂರು ಮುಸಲ್ಮಾನೀ ರಾಷ್ಟ್ರಗಳು ಜೀವಂತವಿದ್ದು, ಅವು ಇಡೀ ಮಹಾರಾಷ್ಟ್ರವನ್ನು ವ್ಯಾಪಿಸಿದ್ದವು. ಅವು ಮೊಗಲರ ವರ್ಚಸ್ಸಿನ ಓಘವು ದಕ್ಷಿಣಕ್ಕೆ ಬಾರದಂತೆ ತಡೆದು ಹಿಡಿದಿದ್ದವು. ಆ ಕಾಲಕ್ಕೆ ಮರಾಟರ ಸ್ಥಿತಿಯು ಚಮತ್ಕಾರಿಕವಾಗಿತ್ತು. ಅವರು ಈ ಮೂರೂ ಮುಸಲ್ಮಾನರ ಓಲಗದಲ್ಲಿ ಸರದಾರಿಕೆ ಮನಸಬದಾರಿಕೆಗಳನ್ನೂ, ಅವುಗಳೊಡನೆ ಒದಗುವ ಪಾರತಂತ್ರ್ಯವನ್ನೂ ಸ್ವೀಕರಿಸಿದ್ದರು. ಇಷ್ಟಲ್ಲದೆ ಬೇರೆ ಬೇರೆ ಮರಾಟರ ಮನೆತನಗಳಲ್ಲಿ ಅಸ್ಥಿವೈರವು ನೆಲೆಗೊಂಡಿತ್ತು. ಮುಸಲ್ಮಾನ ಬಾದಶಹರು ಮರಾಟರ ಆ ಅಂತಃಕಲಹಗಳ ಮೇಲೆಯೇ ಹೆಚ್ಚಾಗಿ ಕೈಯೂರಿದ್ದರು. ಆ ಕಲಹಗಳು ಶಾಂತವಾಗದ ಹಾಗೆ ಅವರಿಂದ ವ್ಯವಸ್ಥೆಯಾಗುತ್ತಿತ್ತು. ಯಾವ ವರ್ಷ ಇಂಗ್ಲಂಡದಲ್ಲಿ 'ಈಸ್ಟ ಇಂಡಿಯಾ' ಎಂಬ ಹೆಸರಿನ ವ್ಯಾಪಾರೀ ಸಂಘವು ಸ್ಥಾಪಿಸಲ್ಪಟ್ಟಿತೋ, ಅದರ ಮುಂಚಿನ ವರ್ಷವೇ ಮಾಲೋಜಿ ಭೋಸಲೆಯ ಮಗನಾದ ಶಹಾಜಿಯೊಡನೆ ಜಾಧವರಾಯನ ಕನ್ಯೆಯಾದ ಜಿಜಾಬಾಯಿಯ ವಿವಾಹವಾಯಿತು. ಈ ವೇಳೆಯಲ್ಲಿ ಶಹಾಜಿಯು ಐದೇ ವರ್ಷದವನಿದ್ದನು. ೧೬೧೩ರಲ್ಲಿ ಇಂಗ್ಲಿಷರು ಸುರತದಲ್ಲಿ ಅಂಗಡಿಯನ್ನು ಸ್ಥಾಪಿಸಿದಾಗ ಶಹಾಜಿಯು ಹದಿನೇಳು ವರ್ಷದವನಿದ್ದನು. ಶಿವಾಜಿಯು ಹುಟ್ಟುವ ಪೂರ್ವದಲ್ಲಿ ಇಂಗ್ಲಿಷರು ಜಹಾಂಗೀರ-ಶಹಾಜಹಾನರುಗಳಿಂದ ಒಪ್ಪಿಗೆ ಪಡೆದು, ಬಂಗಾಲದಲ್ಲಿ ತಮ್ಮ ಅಂಗಡಿಗಳನ್ನು ಸ್ಥಾಪಿಸತೊಡಗಿದ್ದರು. ಅವರು ಮಚ್ಛಲೀ ಪಟ್ಟಣದಲ್ಲಿ

ಅಂಗಡಿಯನ್ನು ಸ್ಥಾಪಿಸಿ ಮದ್ರಾಸ ಇಲಾಖೆಯಲ್ಲಿ ಕಾಲೂರಿದಾಗ ಶಿವಾಜಿಯು ನಾಕ್ಕೇ ವರ್ಷದವನಿದ್ದನು. ಶಿವಾಜಿಯು ಹನ್ನೆರಡು ವರ್ಷದವನಾದಾಗ ಇಂಗ್ಲಿಷರು ಮದ್ರಾಸದಲ್ಲಿ ಫೋರ್ಟ ಸೆಂಟಜಾರ್ಜ ಕೋಟೆಯನ್ನು ಕಟ್ಟುವಷ್ಟು ಸಮರ್ಥರಾಗಿದ್ದರು (೧೬೩೯). ಶಿವಾಜಿಯು ಮಹಾರಾಷ್ಟ್ರದೊಳಗಿನ ಪ್ರಮುಖ ಕೋಟೆ-ಕೊತ್ತಳಗಳನ್ನು ಹಸ್ತಗತಮಾಡಿಕೊಂಡು ಅಫಝುಲ್ಲಖಾನನ ವಧೆಮಾಡಿ ಕಲ್ಯಾಣದಿಂದ ಗೋವೆಯ ವರೆಗೂ ಭೀಮಾನದಿಯಿಂದ ವಾರಣಾನದಿಯ ವರೆಗೂ ಇದ್ದ ವಿಜಾಪುರ ಪಾತಶಾಹಿಯ ಸೀಮೆಯನ್ನು ವಶಪಡಿಸಿಕೊಂಡಾಗ ಇಂಗ್ಲಿಷರಿಗೆ ಮುಂಬಯಿ ದ್ವೀಪವು ದೊರೆತು; ಮುಂಬಯಿ ಇಲಾಖೆಯ ಹಾಗು ಕೊಂಕಣ ಪಟ್ಟಿಯ ಮುಖದಲ್ಲಿ ಅವರ ಪ್ರವೇಶವಾಗಿತ್ತು. ಅಷ್ಟರಲ್ಲಿ ಡಚ್ಚರು ಹತಪ್ರಭರಾಗಿದ್ದರು; ಆದರೆ ಪೋರ್ತುಗೀಜರು ಮಾತ್ರ ಇನ್ನೂ ಸಾಮರ್ಥ್ಯಶಾಲಿಗಳಾಗಿದ್ದರು. ಶಹಾಜಿಯು ಮಡಿದ ಮೇಲೆ ಶಿವಾಜಿಯು ಸ್ವತಂತ್ರನಾದನು. ಅದೇ ವರ್ಷ ಸುರತದಲ್ಲಿ ಶಿವಾಜಿಯ ಪ್ರಥಮ ಲಷ್ಕರೀ ಸಲಾಮಿಯಾಯಿತು. ಆಗ ಶಿವಾಜಿಯು ಇಂಗ್ಲಿಷರಿಗೆ ಬಂದರದ ಮೇಲಿನ ಸುಂಕದಲ್ಲಿ ನೂರಕ್ಕೆ ಒಂದರಂತೆ ಕಡಿಮೆ ಮಾಡಿದನು. ಶಿವಾಜಿಯ ರಾಜ್ಯಾರೋಹಣ ಸಮಾರಂಭದ ವೇಳೆಯಲ್ಲಿ ಇಂಗ್ಲಿಷರು ಮುಂಬಯಿ ಇಲಾಖೆಯಲ್ಲಿ ಅಷ್ಟಕ್ಕಷ್ಟೇ ಇದ್ದರೂ, ಬಂಗಾಲದಲ್ಲಿಯೂ ಮದ್ರಾಸ ಇಲಾಖೆಯಲ್ಲಿಯೂ ಅವರು ಪ್ರಗತಿ ಪಥವನ್ನು ಹಿಡಿದಿದ್ದರು. ಶಿವಾಜಿಯ ಪಟ್ಟಾಭಿಷೇಕದ ಮರು ವರ್ಷ ಇಂಗ್ಲಿಷರು ಚಂದ್ರನಗರದಲ್ಲಿ ಅಂಗಡಿ ಹಾಕಿದರು. ಅವರಿಗೂ ಫ್ರೆಂಚರಿಗೂ ಯುದ್ಧಪ್ರಸಂಗಗಳು ಇನ್ನೂ ಆಗತಕ್ಕವಿದ್ದವು.

ಶಿವಾಜಿಯ ನಿಧನದ ನಂತರ ಐದು ವರ್ಷಗಳಿಗೆ (೧೬೮೫) ಮುಂಬಯಿ ನಡುಗಡ್ಡೆಯಲ್ಲಿ ಇಂಗ್ಲಿಷರ ಈಸ್ಟ ಇಂಡಿಯಾ ಸಂಘದ ಪ್ರತಿಷ್ಠಾಪನೆಯಾಯಿತು; ಹಾಗು ಮೂರನೇ ವರ್ಷವೇ ಅವರು ಕಲಕತ್ತೆಯಲ್ಲಿ ತಮ್ಮ ಠಾಣ್ಯವನ್ನು ಕೂಡ್ರಿಸಿದರು. ಔರಂಗಜೇಬನು ದಕ್ಷಿಣದಲ್ಲಿ ಮರಾಟರೊಡನೆ ಯುದ್ಧಪ್ರಸಂಗ ನಡೆಯಿಸಿದಾಗ ಇಂಗ್ಲಿಷರು ಮೆಲ್ಲಮೆಲ್ಲನೆ ತಮ್ಮ ವ್ಯಾಪಾರವನ್ನು ಬಲಿಸತೊಡಗಿದ್ದರು ೧೬೯೮ರಲ್ಲಿ ಝುಲಫಿಕಾರಖಾನನು ಜಿಂಜಿಯ ಕೋಟೆಯನ್ನು ಕೈವಶ ಮಾಡಿಕೊಂಡು ರಾಜಾರಾಮ ಮಹಾರಾಜನನ್ನೂ ಅವನೊಡನೆ ಇಡೀ ಮರಾಟಾಶಾಹಿಯನ್ನೂ ಪ್ರಾಣಸಂಕಟದಲ್ಲಿ ಕೆಡಹಿದಾಗ ಇಂಗ್ಲಿಷರು ಕಲಕತ್ತೆಯಲ್ಲಿ ಫೋರ್ಟ ಉಯಿಲ್ಯಮ್ ಕೋಟೆಯನ್ನು ಕಟ್ಟಿದರು. ೧೬೮೭ರಲ್ಲಿ ಇಂಗ್ಲಿಷರು ಔರಂಗಜೇಬನೊಡನೆ ಯುದ್ಧ ಮಾಡುವಷ್ಟು ಮನಃಸಾಮರ್ಥ್ಯವನ್ನು ಸಂಪಾದಿಸಿದ್ದರು; ಆದರೆ ಯುದ್ಧದಲ್ಲಿ ಅವರು ತಡೆಯುವಂತಿದ್ದಿಲ್ಲ; ಹಾಗು ಅವಿಚಾರದ ಕೃತ್ಯದಿಂದ ತಾವು ಈ ಸಂಕಟವನ್ನು ತಂದುಕೊಂಡೆವಲ್ಲ, ಎಂದು ಎಲ್ಲ ವಸಾಹತುಗಳಲ್ಲಿಯ ಇಂಗ್ಲಿಷರಿಗೂ ಅನಿಸಬಹುದಾಗಿತ್ತು; ಆದರೆ ಇದೇ ವೇಳೆಯಲ್ಲಿ ಸಂಭಾಜಿ-ಔರಂಗಜೇಬರ ನಡುವೆ ಯುದ್ಧ ನಡೆದುದರಿಂದ, ಈ ಘಟನೆಯು ಇಂಗ್ಲಿಷರಿಗೆ ಒಳ್ಳೇ ಸಹಾಯಕಾರಿಯಾಯಿತು. ಇಂಗ್ಲಿಷರಿಗಿಂತ ಮೊದಲು

ಸಂಭಾಜಿಯನ್ನು ನಾಶಮಾಡುವ ಆವಶ್ಯಕತೆಯು ಔರಂಗಜೇಬನಿಗೆ ಬಹಳವಾಗಿ ಕಾಣುತ್ತಿತ್ತು. ೧೬೮೯ರಲ್ಲಿ ಸಂಭಾಜಿಯು ವಧೆಯಾದರೂ ದಕ್ಷಿಣದಲ್ಲಿಯ ಯುದ್ಧವು ಶಾಂತವಾಗದೆ, ಕಡಜೇರಿಗೆಯು ಹುಳಗಳ ಹುಟ್ಟು ಕೆಡಿಸುವಂಥ ಬುದ್ಧಿಯು ತನ್ನಲ್ಲಿ ಏಕೆ ಹುಟ್ಟಿತೆಂಬ ಪಶ್ಚಾತ್ತಾಪವು ಅವನಿಗೆ ಉಂಟಾಗುವಂತೆ ಮರಾಟರು ಹೆಚ್ಚಿಗೆ ರೊಚ್ಚಿಗೆದ್ದು ಕಾದತೊಡಗಿದರು. ಇಂಗ್ಲಿಷರ ಪ್ರದೇಶಗಳು ಬಂದರಗಳ ಬಳಿಯಲ್ಲಿದ್ದುದರಿಂದಲೂ, ಔರಂಗಜೇಬನ ಗುರಿಯು ಪರ್ವತ-ಘಟ್ಟಗಳ ಕಡೆಗಿದ್ದುದರಿಂದಲೂ ಪರಸ್ಪರರಲ್ಲಿ ಎಲ್ಲಿಯೂ ಗಂಟು ಬೀಳುವಂತಿದ್ದಿಲ್ಲ. ಅಲ್ಲದೆ ಇಂಗ್ಲಿಷರೆಂದರೆ ಕೇವಲ ನೊರಜುಗಳು; ಅವರನ್ನು ಬೇಕಾದಾಗ ಒಡಿಸಿಬಿಡುವೆನು; ಆದರೆ ಮೊದಲು ಮರಾಟರ ಸಮಾಚಾರವನ್ನು ತೆಗೆದುಕೊಳ್ಳಬೇಕು, ಎಂಬ ಬುದ್ಧಿಯು ಔರಂಗಜೇಬನಲ್ಲಿ ಹುಟ್ಟಿರಬಹುದು.

ಸಂಭಾಜಿಯು ಕೊಲೆಯಾದ ಮೇಲೆ ಇಂಗ್ಲಿಷರು ವ್ಯಾಪಾರದೃಷ್ಟಿಯನ್ನಷ್ಟೇ ಇಡದೆ, ಇಲ್ಲಿಯ ಪ್ರಾಂತಗಳಿಂದ ತೆರಿಗೆ ಎತ್ತಬೇಕೆಂಬ ಹವ್ಯಾಸ ತಾಳಿದರು. ಈ ಸಮಯದಲ್ಲಿ ಅವರ ಸಲುವಾಗಿ ವಿಲಾಯತಿಯಲ್ಲಿ ಸೈನ್ಯವು ಸಜ್ಜಾಗತೊಡಗಿದ್ದು, ಪ್ರಸಂಗವೊದಗಿದರೆ ಇಲ್ಲಿಯ ರಾಜ-ಮಹಾರಾಜರೊಡನೆ ಯುದ್ಧ ಮಾಡುವ ಒಪ್ಪಿಗೆಯಾದರೂ ಅವರಿಗೆ ದೊರೆತಿತ್ತು.

ರಾಜಾರಾಮ ಮಹಾರಾಜರ ಮರಣದ ನಂತರ ಎರಡೇ ವರ್ಷಗಳಲ್ಲಿ ಹಿಂದುಸ್ಥಾನದೊಳಗಿನ ಚಿಲ್ಲ-ಚಿಲ್ಲರೆ ವ್ಯಾಪಾರ ಮಾಡುವ ಬೇರೆ ಬೇರೆ ವ್ಯಾಪಾರೀ ಸಂಘಗಳು ಮುರಿದು 'ಯುನೈಟಿಡ ಈಸ್ಟ ಇಂಡಿಯಾ ಕಂಪನಿ' ಎಂಬ ಒಂದೇ ಸಂಘಟಿತ ವ್ಯಾಪಾರೀ ಸಂಘವು ನಿರ್ಮಾಣವಾಯಿತು. ಅರ್ಥಾತ್ ಆ ಕಂಪನಿಯು ವ್ಯಾಪಾರಕ್ಕೂ ಸಾಮರ್ಥ್ಯಕ್ಕೂ ಐಕ್ಯದಿಂದ ಉನ್ನತಿಯುಂಟಾಯಿತು. ೧೭೦೭ರಲ್ಲಿ ಔರಂಗಜೇಬನು ಗತಿಸಲು ಮರಾಟರ ಶಕ್ತಿಯು ಬೆಳೆಯತೊಡಗಿತು. ೧೭೦೮ರಲ್ಲಿ ಶಾಹೂವಿಗೆ ರಾಜ್ಯಾಭಿಷೇಕವಾಯಿತು. ಮುಂದೆ ಹತ್ತು ವರ್ಷಗಳಲ್ಲೇ ಬಾಳಾಜಿ ವಿಶ್ವನಾಥನು ದಿಲ್ಲಿಯಿಂದ ಚೌಥಾಯಿ ಸರದೇಶಮುಖಿಗಳ ಅಧಿಕಾರವನ್ನು ತಂದನು. ಅಂದಿನಿಂದ ಮೊಗಲ ಪಾತಶಾಹೀ ರಾಜಕಾರಣದಲ್ಲಿ ಮರಾಟರು ತಮ್ಮ ಕೈತೊಡಕಿಸಿದರು. ಇದೇ ಸಮಯದಲ್ಲಿ (೧೭೧೫) ಇಂಗ್ಲಿಷರು ದಿಲ್ಲಿಯ ಬಾದಶಹನಿಂದ ಬಂಗಾಲದೊಳಗಿನ ೩೮ ನಗರಗಳನ್ನೂ ವ್ಯಾಪಾರದ ಮೇಲಿನ ತೆರಿಗೆಯ ಮಾಫಿಯನ್ನೂ ಸಂಪಾದಿಸಿದರು. ಇಲ್ಲಿಂದ ಮುಂದೆ ಒಂದು ಕಡೆಯಿಂದ ಇಂಗ್ಲಿಷರೂ ಮತ್ತೊಂದು ಕಡೆಯಿಂದ ಮರಾಟರೂ ಬಾದಶಾಹೀ ರಾಜಕಾರಣದಲ್ಲಿ ಸೇರಿಕೊಂಡರು. ಈ ರಾಜಕಾರಣವು ೧೮೦೩ರಲ್ಲಿ ಇಂಗ್ಲಿಷರು ಶಿಂದೆಯಿಂದ ದಿಲ್ಲಿಯನ್ನು ಕೈವಶ ಮಾಡಿಕೊಳ್ಳುವವರೆಗೂ ನಡೆದಿತ್ತು. ಮೊದಲನೆಯ ಬಾಜೀರಾಯನು ೧೭೩೮ರಲ್ಲಿ ದಿಲ್ಲಿಯ ಮೇಲೆ ದಾಳೀ ಮಾಡಿದನು; ಮತ್ತು ನಿಜಾಮನನ್ನು ಪರಾಭವಗೊಳಿಸಿ, ಮಾಳವದ ಸನದನ್ನು ದಿಲ್ಲಿಯ ಬಾದಶಹನಿಂದ ದೊರಕಿಸಿ ಕೊಡುವ ಹೊಣೆ ಹೊತ್ತನು (೧೭೩೮). ಚಿಮಣಾಜಿ ಅಪ್ಪಾನು

ವಸಯಿಯನ್ನು ತೆಗೆದುಕೊಂಡು ಇಂಗ್ಲಿಷರ ಪ್ರತಿಸ್ಪರ್ಧಿಯಾದ ಪೋರ್ತುಗೀಜರನ್ನು ಪರಾಭವಗೊಳಿಸಿದನು (೧೭೩೯). ನಾನಾಸಾಹೇಬ ಪೇಶವೆಯು ಮಾಳವದ ಸನದನ್ನು ದೊರಕಿಸಿದನು ಸದಾಶಿವರಾವ ಭಾವುವು ಕರ್ನಾಟಕದ ಮೇಲೆ ದಾಳೀ ಮಾಡಿ ಸವಣೂರ ನವಾಬನಿಂದ ೨೫ ಲಕ್ಷದ ಪ್ರಾಂತವನ್ನು ಸಂಪಾದಿಸಿದನು. ಈ ಎಲ್ಲ ಪ್ರಸಂಗಗಳಲ್ಲಿ ಕರ್ನಾಟಕದಲ್ಲಿ ಇಂಗ್ಲಿಷರಿಗೂ ಫ್ರೆಂಚರಿಗೂ ಯುದ್ಧವು ನಡೆದಿತ್ತು. ಯಾವ ವರ್ಷ ರಾಘೋಬನು ಉತ್ತರ ಹಿಂದುಸ್ತಾನದ ಮೇಲೆ ದಾಳೀ ಮಾಡಿದನೋ, ಅದೇ ವರ್ಷ ಕರ್ನಾಟಕದಲ್ಲಿ ಫ್ರೆಂಚರ ಬಲವು ಕುಗ್ಗಿ ಇಂಗ್ಲಿಷರು ಮುಂದೆ ಬಿದ್ದರು. ರಘುನಾಥರಾಯ ಪೇಶವೆ ಹಾಗು ಕ್ಲೈವ ಇವರ ಪರಾಕ್ರಮಗಳು ಉತ್ತರ-ದಕ್ಷಿಣ ಹಿಂದುಸ್ತಾನಗಳಲ್ಲಿ ಸಮಕಾಲೀನವಾಗಿ ಘಟಿಸಿದವು. ೧೭೫೭ರಲ್ಲಿ ಮರಾಟರು ಇತ್ತ ದಕ್ಷಿಣದಲ್ಲಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ೩೨ ಲ ಕಾಣಿಕೆ ತೆಗೆದುಕೊಂಡರೆ, ಅತ್ತ ಉತ್ತರಕ್ಕೆ ಬಂಗಾಲದಲ್ಲಿ ಲಾರ್ಡ ಕ್ಲೈವನು ಪ್ಲಾಸಿಯ ಕಾಳಗದಲ್ಲಿ ಜಯಶಾಲಿಯಾಗಿ, ಅಲ್ಲಿ ಇಂಗ್ಲಿಷ ರಾಜ್ಯವನ್ನು ಅದೇ ವರ್ಷ ಸ್ಥಾಪಿಸಿದನು. ಯಾವ ೧೭೫೮ರಲ್ಲಿ ಅಟಕದ ಮೇಲೆ ಮರಾಟರ ಭಗವಾ ಝೇಂಡೆಯು ಹತ್ತಿತೋ, ಅದೇ ವರ್ಷ ಫ್ರೆಂಚರಿಂದ ಉತ್ತರ ಸರಕಾರ ಪ್ರಾಂತವು ಹೋಗಿ ಮದ್ರಾಸದಲ್ಲಿ ಇಂಗ್ಲಿಷರು ಮುಂದೆ ಬಂದರು. ೧೭೬೦ರಲ್ಲಿ ಮರಾಟರು ಉದಯಗಿರಿಯ ಕಾಳಗದಲ್ಲಿ ನಿಜಾಮನನ್ನು ಪರಾಭವಗೊಳಿಸಿ ಅವನಿಂದ ೬೦ ಲಕ್ಷ ರೂ. ಉತ್ಪನ್ನದ ಪ್ರಾಂತವನ್ನು ತೆಗೆದುಕೊಂಡರು; ಅದೇ ವರ್ಷ ಇಂಗ್ಲಿಷರು ಬಂಗಾಲವನ್ನು ಸಂಪೂರ್ಣವಾಗಿ ಗ್ರಾಸಿಸಿದರು. ಈ ಮೇರೆಗೆ ಅನೇಕ ವರ್ಷ ಸಮಾನವಾಗಿ ನಡೆದ ಇಂಗ್ಲಿಷರ ಹಾಗು ಮರಾಟರ ಯಶದ ಜ್ಯೋತಿಯು ಒಡೆಯಲಿಕ್ಕೆ ೧೭೬೧ರಿಂದ ಪ್ರಾರಂಭವಾಯಿತು. ಯಾಕಂದರೆ ಈ ವರ್ಷ ಪಾಣಿಪತ್ತದ ಸಂಗ್ರಾಮದಲ್ಲಿ ಮರಾಟರಿಗೆ ದೊಡ್ಡ ಪರಾಭವವಾಯಿತು; ಇದೇ ವರ್ಷ ಮದ್ರಾಸದ ಕಡೆಗೆ ಫ್ರೆಂಚ ಸರದಾರ ಲಾಲಿಯ ಪರಾಭವವಾಗಿ ಇಂಗ್ಲಿಷರು ಪಾಂಡಿಚರಿ ಪಟ್ಟಣವನ್ನು ತೆಗೆದುಕೊಂಡರು.

ಅನಂತರದಲ್ಲಿ ಕೆಲವು ಕಾಲದ ವರೆಗೆ ಮರಾಟರ ಹಾಗು ಇಂಗ್ಲಿಷರ ಯಶದ ಜೊತೆಯು ಸರಿಯಾಗಿ ನಡೆಯಹತ್ತಿತು. ೧೭೬೩ರಲ್ಲಿ ಮರಾಟರು ರಾಕ್ಷಸಭುವನದ ಕಾಳಗದಲ್ಲಿ ಗೆದ್ದು ನಿಜಾಮನನ್ನು ಸಂಪೂರ್ಣ ಪರಾಭವಗೊಳಿಸಿದರು. ಅತ್ತ ಕಡೆಗೆ ಇಂಗ್ಲಿಷರು ಫ್ರೆಂಚರನ್ನು ಸಂಪೂರ್ಣ ನಿಃಪಾತಗೊಳಿಸಿದರು. ೧೭೬೪ರಲ್ಲಿ ಮಾಧವರಾವ ಪೇಶವೆಯು ಹೈದರನನ್ನು ಪರಾಭವಗೊಳಿಸಿದರೆ, ಕ್ಲೈವನು ಅದೇ ವರ್ಷ ಬಂಗಾಲದೊಳಗೆ ಬಕ್ಸಾರದ ಕಾಳಗದಲ್ಲಿ ಜಯಶಾಲಿಯಾದನು. ೧೭೬೫ರಲ್ಲಿ ಪೇಶವೆಯು ಉತ್ತರ ಹಿಂದುಸ್ತಾನದ ಮೇಲೆ ದಾಳೀ ಮಾಡಿ ೧೫ ಲಕ್ಷ ಕಪ್ಪ ತೆಗೆದುಕೊಂಡರೆ, ಅದೇ ವರ್ಷ ಕ್ಲೈವನು ದಿಲ್ಲೀಬಾದಶಹನಿಂದ ಬಂಗಾಲದ ದಿವಾಣಿಯ ಹಾಗು ಉತ್ತರ ಸರಕಾರ ಪ್ರಾಂತದ ಸನದನ್ನು ದೊರಕಿಸಿದನು.

೧೭೭೧ರಲ್ಲಿ ಮರಾಟರು ಶಹಾ ಆಲಮ್‌ಬಾದಶಹನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ದಿಲ್ಲಿಯಲ್ಲಿ ತಮ್ಮ ವರ್ಚಸ್ಸನ್ನು ನೆಲೆಗೊಳಿಸಿದರು. ೧೭೭೨ನೇ ವರ್ಷವು ಈ ತುಲನೆಯ ದೃಷ್ಟಿಯಿಂದ ಬಹು ಮಹತ್ವದ್ದಿದೆ. ೧೭೭೩ರಲ್ಲಿ ನಾರಾಯಣರಾಯನ ಕೊಲೆಯಿಂದ ಮರಾಟರ ರಾಜ್ಯದಲ್ಲಿ ಒಡಕಿನ ಸಸಿಯು ನಾಟಿತು. ಇದೇ ವರ್ಷ ವಿಲಾಯತಿಯ ಪಾರ್ಲಮೆಂಟಿನಲ್ಲಿ ರೆಗ್ಯುಲೇಶನ್ ಆಕ್ಟ ಪಾಸಮಾಡಿ, ಹಿಂದುಸ್ತಾನದಲ್ಲಿ ಬೇರೆ ಬೇರೆಯಾಗಿ ವಿಭಾಗಿಸಲ್ಪಟ್ಟಿದ್ದ ತಮ್ಮ ಸತ್ತೆಯನ್ನು ಒಬ್ಬ ಗವರ್ನರ ಜನರಲ್ಲನಲ್ಲೇ ಒಟ್ಟುಗೂಡಿಸಿದರು. ಮರಾಟರ ಬಲಹೀನತೆಗೂ ಇಂಗ್ಲಿಷರ ಸಾಮರ್ಥ್ಯದ ಬೆಳವಣಿಗೆಗೂ ಮತ್ತು ಮರಾಟರ ರಾಜ್ಯ ಕಾರಭಾರದಲ್ಲಿ ಇಂಗ್ಲಿಷರ ಕೈಸೇರುವದಕ್ಕೂ ಇದೇ ವರ್ಷದಿಂದಲೇ ನಿಜವಾಗಿ ಪ್ರಾರಂಭವಾಯಿತು. ಪುರಂದರದ ಒಪ್ಪಂದದಿಂದ ಇಂಗ್ಲಿಷರು ರಾಘೋಬನ ಪಕ್ಷವನ್ನು ಬಿಡಬೇಕೆಂದು ಗೊತ್ತಾದರೂ, ಅವರಿಗೆ ಸಾಷ್ಟಿ-ವಸಯಿಗಳು ದೊರೆತವು. ೧೭೭೯ರಲ್ಲಿ ವಡಗಾಂವ ಕಾಳಗದಲ್ಲಿ ಇಂಗ್ಲಿಷರ ಪರಾಭವವಾಗಿ ಅವರು ಮರಾಟರಿಗೆ ಸಾಷ್ಟೀ ದ್ವೀಪವನ್ನು ತಿರುಗಿ ಕೊಡುವೆವೆಂದು ಉಪಾಯವಿಲ್ಲದೆ ಒಡಂಬಡಿಕೆಯಲ್ಲಿ ಒಪ್ಪಿಕೊಂಡರು. ಇಂಗ್ಲಿಷರನ್ನು ಪೂರ್ಣವಾಗಿ ನಿಃಪಾತ ಮಾಡಬೇಕೆಂಬ ಉದ್ದೇಶದಿಂದ ಮರಾಟರೂ ನಿಜಾಮನೂ ಹೈದರನೂ ಒಂದಾಗುವ ಹವಣಿಕೆ ಹಾಕತೊಡಗಿದರು; ಆದರೆ ೧೭೮೧ರಲ್ಲಿ ಇಂಗ್ಲಿಷರು ಅತ್ತ ಹೈದರನನ್ನು ಪರಾಭವಗೊಳಿಸಿ, ಮರಾಟರೊಡನೆ ಶಾಂತತೆಯ ಒಡಂಬಡಿಕೆ ಮಾಡಿಕೊಂಡು ತಮ್ಮ ಪಕ್ಷವನ್ನು ಸಾವರಿಸಿಕೊಂಡರು. ೧೭೮೨ರಲ್ಲಿ ಹೈದರ ಅಲ್ಲಿಯು ಮಡಿದದ್ದರಿಂದ ಇಂಗ್ಲಿಷರು ನಿರ್ಧಾಸ್ತರಾದರು. ಅದರಿಂದ ಸಾಲಬಾಯಿಯ ಒಪ್ಪಂದದಲ್ಲಿ ಸಾಷ್ಟಿ ವಸಯಿಗಳನ್ನು ಮರಾಟರು ಇಂಗ್ಲಿಷರಿಗೆ ಸ್ಥಿರವಾಗಿ ಬಿಟ್ಟುಕೊಡಬೇಕಾಯಿತು; ಮತ್ತು ಈ ಒಪ್ಪಂದದಿಂದ ಮರಾಟರು ಆಗ ದೊರಕಿಸಿದ್ದೇನಂದರೆ, ತಮ್ಮ ಶತ್ರುಗಳಿಗೆ ಇಂಗ್ಲಿಷರು ಸಹಾಯಮಾಡಬಾರದೆಂಬ ಅಭಿವಚನವನ್ನಷ್ಟೇ! ಆಗ ಇಂಗ್ಲಿಷರ ಕಡೆಯ ಪರಡಿಯು ಇಷ್ಟು ಜಡವಾಗಿ ಕುಳಿತಿತ್ತು. ೧೭೮೪ರಿಂದ ೧೭೯೯ರ ವರೆಗೆ ಟೀಪುವು ಮರಾಟರಿಗೂ ಇಂಗ್ಲಿಷರಿಗೂ ಸಮಾನ ಶತ್ರುವಾದದ್ದರಿಂದ ಪರಸ್ಪರರಲ್ಲಿ ಸ್ನೇಹ-ಸಹಕಾರಗಳು ನೆಲೆಗೊಂಡಿದ್ದವು. ನಡುವೆ ೧೭೮೫ ರಲ್ಲಿ ಮಹದಾಜಿ ಶಿಂದೆಯು ದಿಲ್ಲಿಯನ್ನು ತೆಗೆದುಕೊಂಡು ಅಲ್ಲಿಯ ಎಲ್ಲ ಸೂತ್ರಗಳನ್ನು ತನ್ನ ಕೈಯಲ್ಲೇ ತೆಗೆದುಕೊಂಡನು; ಹಾಗು ೧೭೯೧ರಲ್ಲಿ ಅಂದರೆ ಇಂಗ್ಲಿಷರೂ ಮರಾಟರೂ ಕೂಡಿ ಟೀಪುವಿನ ಅರ್ಧ ರಾಜ್ಯವನ್ನು ತೆಗೆದುಕೊಂಡ ವರ್ಷವೇ ಮಹದಾಜಿಯು ಪೇಶವೆಗೆ ವಕೀಲ ಮುತಾಲಕಿಯ ವಸ್ತ್ರಗಳನ್ನು ಅರ್ಪಿಸಿ, ದಿಲ್ಲಿಯಲ್ಲಿ ತಾನು ಸ್ಥಾಪಿಸಿದ ವರ್ಚಸ್ವದ ಅನುಭವವನ್ನು ಪುಣೆಯಲ್ಲಿದ್ದ ನಾನಾಫಡಣವೀಸನಿಗೆ ಮಾಡಿಕೊಟ್ಟನು. ಮುಂದೆ ನಾಲ್ಕು ವರ್ಷಗಳಲ್ಲಿ ಖರ್ಡೆಯ ಕಾಳಗವಾಗಿ ಪೇಶವೆಯರ ಯಶಸ್ಸು ಶಿಖರವನ್ನು ತಲುಪಿತು; ಆದರೆ ಅದರ ಮುಂದಿನ ವರ್ಷವೇ ಸವಾಯಿ ಮಾಧವರಾಯನು ಮಡಿದದ್ದರಿಂದ ಮರಾಟರ ಯಶವೂ ಹಿಂಜರಿಯತೊಡಗಿತು. ಅತ್ತಕಡೆಗೆ ಬಂಗಾಲದಲ್ಲಿ

ಕಾರ್ನವಾಲೀಸನಂಥ ಗವರ್ನರ ಜನರಲ್ಲನು ಬಂದು ಇಂಗ್ಲಿಷ ರಾಜ್ಯದ ವ್ಯವಸ್ಥೆಯನ್ನು ಉತ್ತಮರೀತಿಯಿಂದ ನಡೆಯಿಸಹತ್ತಿರಲು, ಇತ್ತ ಸವಾಯಿ ಮಾಧವರಾಯನ ಹಾಗು ಮಹದಾಜಿಯ ಮೃತ್ಯುವಿನಿಂದ ನಾನಾಫಡಣವೀಸನು ದುರ್ಬಲನಾಗಿ ಹೋದನು; ಹಾಗು ಬಾಜೀರಾಯನನ್ನು ಪಟ್ಟಕ್ಕೆ ಕುಳ್ಳಿರಿಸುವ ಬಗ್ಗೆ ವ್ಯಾಜ್ಯಗಳುಂಟಾಗಿ, ಬಾಜೀರಾಯ ಮತ್ತು ನಾನಾಫಡಣವೀಸ ಇವರಿಬ್ಬರೂ ಸಿಂದೆ-ಹೋಳಕರರ ಬೆದರಿಕೆಯ ಮೂಲಕ ಸರತಿಯ ಮೇಲೆ ಸರತಿಯಂತೆ ಇಂಗ್ಲಿಷರ ಸಹಾಯ ತೆಗೆದುಕೊಳ್ಳಬೇಕಾಯಿತು; ಹಾಗು ಕೊನೆಗೆ ೧೮೦೩ರಲ್ಲಿ ವಸಯಿಯ ಒಡಂಬಡಿಕೆಯಾಗಿ, ಬಾಜೀರಾಯನು ಇಂಗ್ಲಿಷರ ಕೈ ಗೊಂಬೆಯಾಗಿಬಿಟ್ಟನು. ತದನಂತರ ಇಂಗ್ಲಿಷರಿಗೆ ಮರಾಟರ ಹೊರತು ಬೇರೆ ಯಾರೊಡನೆಯೂ ಕಾದುವ ಕಾರಣವಿರಲಿಲ್ಲ. ಆದರಿಂದ ಅವರು ೧೮೦೩-೦೪ರಲ್ಲಿ ಶಿಂದೆಯನ್ನು ೧೮೦೪ರಲ್ಲಿ ಹೋಳಕರನನ್ನು, ೧೮೧೭-೧೮ರಲ್ಲಿ ಸ್ವತಃ ಪೇಶವೆಯನ್ನು ಪರಾಭವಗೊಳಿಸಿ, ಪೇಶವೇರಾಜ್ಯವನ್ನು ಆಂಗ್ಲಾಧೀನಪಡಿಸಿಕೊಂಡರು!

---

# ೩ ಮರಾಟಶಾಹಿಯು ಏತರಿಂದ ಮುಳುಗಿತು?

## ಬ್ರಾಹ್ಮಣರ ಹೊಣೆ

ಮರಾಟಶಾಹಿಯನ್ನು ಮುಳುಗಿಸಿದ ದೋಷವು ಎರಡನೆಯ ಬಾಜೀರಾಯನ ಮೇಲೆ ಸಹಜವಾಗಿಯೇ ಬರುವದು. ಈ ದೋಷಕ್ಕೆ ಪಾತ್ರನಾಗುವಷ್ಟು ಯೋಗ್ಯತೆಯೇ ಆತನಲ್ಲಿತ್ತೆಂಬದರಲ್ಲಿ ಸಂದೇಹವಿಲ್ಲ. ೨ನೇ ಬಾಜೀರಾಯ-ನಾರಾಯಣರಾಯರಂಥ ಬಲಹೀನ ಪುರುಷರು ಇಡೀ ಪೇಶವಾಯಿಯಲ್ಲಿ ಮತ್ತಾರೂ ಹುಟ್ಟಲಿಲ್ಲೆಂಬದು ಲಕ್ಷ್ಯದಲ್ಲಿಡತಕ್ಕ ಸಂಗತಿಯಾಗಿದೆ. ಸವಾಯಿ ಮಾಧವರಾಯನು ಅಲ್ಪ ವಯಸ್ಸಿನಲ್ಲಿ ಮಡಿದನು. ಅವನು ಇದ್ದಾಗ ನಾನಾಫಡಣವೀಸನ ಕೈಯಲ್ಲಿ ರಾಜ್ಯಸೂತ್ರಗಳಿದ್ದುದರಿಂದ, ಅವನ ಆಳಿಕೆಗೆ ದೋಷ ಕೊಡಲಿಕ್ಕೆ ಸ್ಥಳವೇ ಇಲ್ಲ. ರಘುನಾಥರಾಯನು ಸ್ತ್ರೈಣನಿದ್ದರೂ ಕೂಡ ಖಡ್ಗಪ್ರತಾಪಶಾಲಿಯಾಗಿದ್ದನು. ಈ ದೃಷ್ಟಿಯಿಂದ ಅವನಿಂದ ರಾಜ್ಯರಕ್ಷಣಕ್ಕೆ ಉಪಯೋಗವೇ ಆಗಬಹುದಿತ್ತು. ಇದರ ಮೇಲಿಂದ ೧೭೧೩ರಿಂದ ೧೭೯೫ರ ವರೆಗೆ ಮರಾಟರ ರಾಜ್ಯವು ಉನ್ನತಾವಸ್ಥೆಯಲ್ಲಿತ್ತು; ಮತ್ತು ಖರ್ಡೆಯ ಕಾಳಗದ ವರೆಗೆ ಮರಾಟರ ವೈಭವವು ಸ್ಥಿರವಾಗಿದ್ದಿದ್ದರೆ, ಮರಾಟಶಾಹಿಯು ಮುಳುಗಲಿಕ್ಕೆ ಕಾರಣವೇ ಇರಲಿಲ್ಲ. ಮರಾಟರ ರಾಜ್ಯದಲ್ಲಿ ಬ್ರಾಹ್ಮಣ-ಪೇಶ್ವೆಯರು ಹೇಗೆ ಉದಯಕ್ಕೆ ಬಂದರೋ, ಹಾಗೆಯೇ ಬ್ರಾಹ್ಮಣ ಪೇಶವಾಯಿಯಲ್ಲಿ ಅವರು ಶಿಂದೆ, ಹೋಳಕರ, ಗಾಯಕವಾಡ ಮೊದಲಾದ ಮರಾಟರ ಸರದಾರರನ್ನೂ ಉದಯಗೊಳಿಸಿದರು. ಮರಾಟರ ರಾಜ್ಯವನ್ನು ಸ್ಥಿರವಿರಿಸುವ ಭಾರವು ಕೇವಲ ಒಬ್ಬ ಪೇಶವೆಯ ಮೇಲೆಯೇ ಇತ್ತೆಂದು ಹೇಳಲಾಗುವದಿಲ್ಲ. ಪೇಶವೆ,

ರಾಸ್ತೆ, ಪಟವರ್ಧನ ಮೊದಲಾದ ಬ್ರಾಹ್ಮಣ ಸರದಾರರಂತೆ ಆ ಭಾರವು ಸಾತಾರೆಯ ಮಹಾರಾಜರ ಮೇಲೂ; ಶಿಂದೆ, ಹೋಳಕರ, ಗಾಯಕವಾಡ ಮೊದಲಾದ ಮರಾಟಸರದಾರರ ಮೇಲೂ ಇತ್ತು. ಸಾತಾರೆಯ ಓಲಗದಲ್ಲಿ ಮೊದಲನೆಯ ಮಾಧವರಾಯನ ಅಂತ್ಯದ ವರೆಗೆ ಪೇಶವೆಯರ ಕರ್ತೃತ್ವದ ದೃಷ್ಟಿಯಿಂದ ಅವರಿಗೆ ವರಿಷ್ಠಸ್ಥಾನವಿದ್ದದ್ದು ಸಕಾರಣವೇ ಆಗಿತ್ತು. ಶಾಹೂ ಮಹಾರಾಜನು ಎಂದೂ ಪೇಶವೆಯರ ಸೆರೆಯಲ್ಲಿದ್ದಿಲ್ಲ; ಹಾಗು ಅವನ ತರುವಾಯ ಬಂದ ಛತ್ರಪತಿಗಳು ಪೇಶವೆಯರ ಸೆರೆಯಾಳಾಗಿದ್ದರೆ, ಅದು ಅವರ ನಿರ್ಬಲತೆಯ ಮೂಲಕವೇ ಆಗಿತ್ತು. ಶಿಂದೆ, ಹೋಳಕರ, ಗಾಯಕವಾಡ ಮೊದಲಾದ ಮರಾಟ ಸರದಾರರಿಗೆ ಸಾತಾರೆಯ ಸಿಂಹಾಸನದ ಅಭಿಮಾನವು ಇದ್ದಿತೋ ಇಲ್ಲವೋ ಎಂಬದರಲ್ಲಿ ಯಾವುದೊಂದನ್ನು ಸ್ಪಷ್ಟವಾಗಿ ಹೇಳಬೇಕು. ಅವರಿಗೆ ಆ ಅಭಿಮಾನವು ಇರಲಿಲ್ಲವೆಂದರೆ, ಪೇಶ್ವೆಯರ ಮೇಲಿನ ಎಲ್ಲ ದೋಷಾರೋಪವೂ ನಾಮಶೇಷವಾಯಿತು. ತದ್ವಿರುದ್ಧವಾಗಿ ಅವರಿಗೆ ಆ ಅಭಿಮಾನವಿದ್ದಿತೆಂದರೆ, ಅವರು ಪೇಶ್ವೆಯರನ್ನು ಹಿಂದೂಡಿ, ಮತ್ತು ಸಾತಾರೆಯ ಮಹಾರಾಜರ ಹೆಸರನ್ನು ಮುಂದೆ ಮಾಡಿ ರಾಜ್ಯಕಾರಭಾರ ನಡೆಯಿಸುವ ಉದ್ಯೋಗ ಮಾಡಲಿಕ್ಕೆ ಅವರಿಗಾರು ಬೇಡವೆಂದು ಹೇಳಿದ್ದರು?

---

## ಮರಾಟರ ಹೊಣೆ

ಸಾತಾರೆಯ ಸಿಂಹಾಸನದ ವಿಶೇಷ ಅಭಿಮಾನವು ಶಿಂದೆ, ಹೋಳಕರ, ಗಾಯಕವಾಡರ ಮನಸ್ಸಿನಲ್ಲಿ ಇತ್ತೆಂಬದು ಕಾಗದ-ಪತ್ರಗಳಿಂದ ತಿಳಿದು ಬರುವದಿಲ್ಲ. ಶಿಂದೆ-ಹೋಳಕರರು ಸಂಪಾದಿಸಿದ ಪ್ರಾಂತಗಳೆಲ್ಲ ಉತ್ತರಹಿಂದುಸ್ತಾನದಲ್ಲಿದ್ದು, ಅವರು ಅಲ್ಲಿ ಸ್ವತಂತ್ರರಾಗಿ ರಾಜ್ಯಕಾರಭಾರ ಸಾಗಿಸಲಿಕ್ಕೆ ಪ್ರಯತ್ನಿಸಿದರು. ಸಾಲಬಾಯಿಯ ಒಪ್ಪಂದದ ಕಾಲಕ್ಕೆ ಶಿಂದೆಯು ಸ್ವತಂತ್ರ ಸಂಸ್ಥಾನಿಕನಾಗಿ, ಸಾತಾರೆಯ ಮಹಾರಾಜರ ಹಾಗು ಪೇಶವೆಯರ ದೊಡ್ಡಸ್ತಿಕೆಯನ್ನೇನೂ ಉಳಿಸಲಿಲ್ಲ. ಶಿಂದೆ,-ಹೋಳಕರ, ಗಾಯಕವಾಡ ಇವರು ಪೇಶವೆಯರ ಆಳಿಕೆಯಲ್ಲಿ ಉದಯಕ್ಕೆ ಬಂದವರಾಗಿದ್ದು, ಪೇಶವೆಯರೇ ಅವರನ್ನು ಎತ್ತಿ ಹಿಡಿದು ಸರದಾರರನ್ನಾಗಿ ಮಾಡಿದ್ದರಿಂದ, ಒಂದು ಅರ್ಥದಿಂದ ಇವರಿಗೆ ಪೇಶ್ವೆಯರೇ ಧನಿಗಳಾಗಿದ್ದರೆಂಬದು ನಿಜವು. ರಾಣೋಜಿ ಶಿಂದೆಯು ಮೊದಲನೆಯ ಬಾಜೀರಾಯನ ಪಾದರಕ್ಷೆಗಳನ್ನು ಎದೆಯಮೇಲಿರಿಸಿ-ರಕ್ಷಿಸಿ, ತನ್ನ ಸ್ವಾಮಿಪ್ರೇಮದ ಪರೀಕ್ಷೆಕೊಟ್ಟು ಸರದಾರಿಕೆಯನ್ನು ದೊರಕಿಸಿದನು. ಅವನ ಮಗನಾದ ಮಹದಾಜಿಯು ಉತ್ತರಹಿಂದುಸ್ತಾನದಲ್ಲಿ ಪರಾಕ್ರಮವನ್ನು ತೋರಿಸಿ ದಿಗಂತ ಕೀರ್ತಿಯನ್ನು ಪಡೆದರೂ, ಪೇಶವೆಯರ ಚರಣ-ಪಾದುಕೆಗಳನ್ನು ಮರೆಯಲಿಲ್ಲ; ಮತ್ತು ಸವಾಯಿಮಾಧವರಾಯನಿಗೆ ಅವನು ಯಾವ ಕೈಯಿಂದ ದಿಲ್ಲಿಯ ಬಾದಶಹನಿಂದ ತಂದ ವಕೀಲ ಮುತಾಲಿಕೆಯ ವಸ್ತ್ರಗಳನ್ನು ಅರ್ಪಿಸಿ ಪೇಶವೆಯ ವೈಭವವನ್ನು ಹೆಚ್ಚಿಸಿದ್ದನೋ, ಅದೇ ಕೈಯಿಂದ ಅವನು ಅದೇ ಮಾಧವ

ರಾಯನ ಪಾದರಕ್ಷೆಗಳನ್ನು ಎತ್ತಿಕೊಂಡನು. ಶಿಂದೆಯ ವೈಭವದ ಭೂಷಣಗಳಲ್ಲಿ ಪೇಶವೆಯರ ಪಾದರಕ್ಷೆಗಳೂ ಕಾಯ್ದಿಡಲ್ಪಟ್ಟಿದ್ದವೆಂದು ಗ್ರ್ಯಾಂಟ ಡಫನು ಅನ್ನುತ್ತಾನೆ ಮಹದಾಜಿ ಶಿಂದೆಯ ಕಾಲದ ವರೆಗೆ ಪೇಶವೆಯರ ಪಟ್ಟದ ವಿಷಯವಾಗಿ ಶಿಂದೆಯರು ಇಟ್ಟ ಭಕ್ತಿ-ವಿಶ್ವಾಸಗಳನ್ನು ದೌಲತರಾವ ಶಿಂದೆಯು ಎಷ್ಟರ ಮಟ್ಟಿಗೆ ಕಾಯ್ದನು? ಎರಡನೆಯ ಬಾಜೀರಾಯನು ಹೇಡಿಯೆಂದು ಅವನು ಧನಿಯಾಗಿದ್ದರೂ ಪ್ರತಿಬಂಧದಲ್ಲಿರಿಸುವ ಅಧಿಕಾರವು ಶಿಂದೆ-ಹೋಳಕರರಿಗಿರುತ್ತಿದ್ದರೆ, ಸಾತಾರೆಯ ಮಹಾರಾಜರು ಹೇಡಿಯಾಗಿದ್ದರೆ ಅವರನ್ನು ಪ್ರತಿಬಂಧದಲ್ಲಿರಿಸುವ ಅಧಿಕಾರವು ಪೇಶವೆಯರಿಗೆ ಇಲ್ಲವೆ ನಾನಾಫಡಣವೀಸನಿಗೆ ಯಾಕೆ ಇರಬಾರದು? ಸಾತಾರೆಯ ಮಹಾರಾಜರು ಶಿವಾಜಿಮಹಾರಾಜನ ವಂಶಜರೆಂಬ ದೃಷ್ಟಿಯಿಂದ ನೋಡುವದಾದರೆ, ಶಿಂದೆಯು ಕೊಲ್ಲಾಪುರದ ಮಹಾರಾಜರ ಮೇಲೆ ದಂಡಯಾತ್ರೆಯನ್ನೇಕೆ ಮಾಡಬೇಕು? ಕೊಲ್ಹಾಪುರದ ಮಹಾರಾಜರಾದರೂ ಶಿವಾಜಿಯ ವಂಶಜರೇ ಆಗಿದ್ದರು. ಯಾವದೊಂದು ತತ್ವದ ವರೆಗೆ ಹಚ್ಚಹೋದರೆ, ಮರಾಟ ಸರದಾರರು ಪೇಶವೆ-ಫಡಣವೀಸರಂತೆ ದೋಷಿಗಳೂ ಅಥವಾ ನಿರ್ದೋಷಿಗಳೂ ಎಂದು ನಿರ್ಣಯವಾಗುವದು. ಶಿಂದೆ ಹೋಳಕರರು ಇಂಗ್ಲಿಷರೊಡನೆ ಕೊನೆಯ ಒಪ್ಪಂದ ಮಾಡಿಕೊಂಡಾಗ ಸಾತಾರೆಯ ಸಿಂಹಾಸನದ ಇಲ್ಲವೆ ಸರ್ವಸಾಧಾರಣ ರೀತಿಯಿಂದ ಶಿವಾಜಿಯ ವಂಶಜರ ನೆನಪು ಇಟ್ಟುಕೊಂಡಿದ್ದರೆಂದು ಕಂಡುಬರುವದಿಲ್ಲ. ಎಲ್ಲಕ್ಕೂ ಮಹತ್ವದ ಸಂಗತಿಯೇನಂದರೆ, ಪೇಶವಾಯಿಯು ಮುಳುಗಿದ ಮೇಲೆ ಸಣ್ಣದೇ ಏಕಾಗಲೊಲ್ಲದು ಒಂದು ಸ್ವತಂತ್ರ ರಾಜ್ಯವನ್ನು ಇಂಗ್ಲಿಷರು ಸಾತಾರೆಯ ಛತ್ರಪತಿಗಳಿಗೆ ಕೊಟ್ಟಿದ್ದರು. ಅವನ್ನಾದರೂ ಅವರು ಎಲ್ಲಿ ಉಳಿಸಿಕೊಂಡರು? ಪೇಶವಾಯಿಯ ನಾಶದ ನಂತರ ಮೂವತ್ತೇ ವರ್ಷಗಳಲ್ಲಿ ಆ ರಾಜ್ಯವೂ ಮುಳುಗಿಹೋಯಿತು! ಇಂಗ್ಲಿಷರು ಎಲ್ಲ ಮರಾಟರನ್ನೂ ಮುಳುಗಿಸಲು ಪ್ರವೃತ್ತರಾಗಿದ್ದರೆಂದರೆ ಶಿವಾಜಿಯ ವಂಶಜರ ಒಂದು ರಾಜ್ಯವು ಇಂದಿಗೂ ಕೊಲ್ಹಾಪುರದಲ್ಲಿ ಹಾಗು ಪೇಶವೆಯರ ಸರ್ದಾರರಾದ ಶಿಂದೆ ಹೋಳಕರರ ರಾಜ್ಯಗಳು ಉತ್ತರಹಿಂದುಸ್ತಾನದಲ್ಲಿ ಜೀವಂತವಿರುವವು. ಈ ಎಲ್ಲ ಸಂಗತಿಗಳನ್ನು ಪರ್ಯಾಲೋಚಿಸಲಾಗಿ ಮರಾಟಶಾಹಿಯು ಮುಳುಗಲಿಕ್ಕೆ ಯಾವದೊಂದು ವಿಶಿಷ್ಟ ಜಾತಿಯು, ಯಾವನೊಬ್ಬ ವಿಶಿಷ್ಟ ಮನುಷ್ಯನು ಅಥವಾ ಯಾವುದೊಂದು ವಿಶಿಷ್ಟ ಮನೆತನವು ಕಾರಣೀಭೂತವಾಯಿತೆಂದು ಹೇಳಲಿಕ್ಕೆ ಬರುವದಿಲ್ಲ. ಇಂಗ್ಲಿಷ ಸತ್ತೆಯ ಪ್ರವಾಹವು ಬಂದುದರಿಂದ ಯಾವುದೊಂದು ನಿಮಿತ್ತದಿಂದ ಮರಾಟಶಾಹಿಯು ಅದರಲ್ಲಿ ಮುಳುಗಿ ಹೋಯಿತು. ಮಹಾಪ್ರವಾಹದಲ್ಲಿ ಎಲ್ಲ ಗಿಡಗಳೂ ಸಮೂಲವಾಗಿ ಕಿತ್ತಿಯೇ ಹೋಗುವವೆಂಬ ನಿಯಮವಿಲ್ಲ. ಕೆಲವು ಉಳಿದೇ ಉಳಿಯುವವು. ಈ ತತ್ವದಿಂದ ಕೆಲವು ಮರಾಟರ ರಾಜ್ಯಗಳು ಇನ್ನೂ ಜೀವಂತವಾಗಿ ಉಳಿದಿವೆಯಷ್ಟೆ.

ಮರಾಟ ಪಾತಶಾಹಿಯನ್ನು ಬ್ರಾಹ್ಮಣರೇ ಮುಳುಗಿಸಿದರೆಂಬ ಆರೋಪ

ಹೊರಿಸುವ ಕೆಲವು ಅಸಮಂಜಸ ಜನರು ಕಂಡುಬರುತ್ತಾರೆ; ಹಾಗು ಪೇಶವಾಯಿಯು ಕೊನೆಗೆ ಇಂಗ್ಲಿಷರೊಡನೆ ಪರಭಾರೆ ರಾಜಕಾರಣ ನಡೆಯಿಸಿ, ತಮ್ಮ ಬಂಧ ಮುಕ್ತತೆ ಮಾಡಿಕೊಳ್ಳಲು ಪ್ರಯತ್ನಮಾಡಿದ ದೋಷಾರೋಪವನ್ನು ಸಾತಾರೆಯ ದರಬಾರದ ಮೇಲೆ ಹೊರಿಸಿ, ಪೇಶವಾಯಿಯನ್ನು ಮುಳುಗಿಸಲಿಕ್ಕೆ ಅವರೇ ಕಾರಣೀ ಭೂತರಾದರೆಂದು ಅನ್ನುವ ಅಸಮಂಜಸ ಜನರೂ ಕೆಲವರಿರುವರು. ಪೇಶವೆಯರು ಸೇವಕರು, ಸಾತಾರೆಯ ಮಹಾರಾಜರು ಸ್ವಾಮಿಗಳು. ಈ ಸಂಬಂಧವನ್ನು ಲಕ್ಷ್ಯದಲ್ಲಿ ತೆಗೆದುಕೊಂಡರೆ, ಪೇಶ್ವೆಯರು ಸಾತಾರೆಯವರನ್ನು ಸೆರೆಯಲ್ಲಿರಿಸಿದ್ದು ಅಯೋಗ್ಯ ವೆಂದು ಒಂದು ದೃಷ್ಟಿಯಿಂದ ಅನ್ನಬಹುದು; ಆದರೆ ತಮ್ಮನ್ನು ಬಂಧನೆಯಲ್ಲಿ ಹಾಕುವ ಸೇವಕರ ವಿರುದ್ಧವಾಗಿ ನಡೆದು, ತಮ್ಮ ಬಂಧಮುಕ್ತತೆಗಾಗಿ ಇಂಗ್ಲಿಷರಲ್ಲಿ ನೆರವು ಬೇಡುವದರಿಂದ ಸಾತಾರೆಯ ಮಹಾರಾಜರಿಗೆ ಅಪ್ರಾಮಾಣಿಕತನದ ಲಾಂಛ ನವು ಹೇಗೆ ಬರುತ್ತದೆಂಬದನ್ನು ತಿಳಿದುಕೊಳ್ಳುವದು ಕಠಿಣವೇ ಸರಿ.

ವ್ಯಾಪಾರೀ ದೋರಣವು ತಪ್ಪಿತೇನು?

ಇಂಗ್ಲಿಷರು ಮೊದಲು ವ್ಯಾಪಾರೀ ವೇಷದಿಂದ ಹಿಂದುಸ್ತಾನಕ್ಕೆ ಬಂದರು. ಅನಂತರದಲ್ಲಿ ಮೆಲ್ಲ ಮೆಲ್ಲನೆ ರಾಜ್ಯಸ್ಥಾಪನೆ ಮಾಡಿದರು. ಈ ಸಂಗತಿಯನ್ನನುಲಕ್ಷಿ ಸಿದರೆ, ಇಂಗ್ಲಿಷರಿಗೆ ಈ ದೇಶದಲ್ಲಿ ವ್ಯಾಪಾರಕ್ಕೆ ಅವಕಾಶ ಕೊಟ್ಟು ಮರಾಟರೇ ತಪ್ಪು ಮಾಡಿದರೆಂದು ಕೆಲವು ಜನರು ಅನ್ನಬಹುದು; ಆದರೆ ಈ ಅಭಿಪ್ರಾಯವು ಸಮಂ ಜಸತನದ್ದೆಂದು ತೋರುವದಿಲ್ಲ. ಇಂದಿನ ವಿಚಾರಗಳನ್ನು ಹಿಂದಿನ ಕಾಲಕ್ಕೆ ಹಚ್ಚುವ ತಪ್ಪುಗಳನ್ನು ಮನುಷ್ಯನು ಯಾವಾಗಲೂ ಮಾಡುತ್ತಿರುತ್ತಾನೆ. ಇಂಗ್ಲಿಷರು ನಮ್ಮ ದೇಶಕ್ಕೆ ವ್ಯಾಪಾರಕ್ಕೆಂದು ಬಂದಾಗ, ಅವರು ಬಾರದಿದ್ದರೆ ಒಳಿತಾಗುತ್ತಿತ್ತೆಂದು ಅನ್ನು ವದಕ್ಕೆ ಕಾರಣವೇನೂ ಇರಲಿಲ್ಲ. ಈ ಜನರು ಮುಂದೆ ತಲೆಭಾರವಾಗಿ ತಮ್ಮ ರಾಜ್ಯ ವನ್ನು ತೆಗೆದುಕೊಳ್ಳುವರೆಂಬ ದುಃಸ್ವಪ್ನವು ಮರಾಟರಿಗೆ ಬಿದ್ದಿರಲಿಲ್ಲ. ಯಾಕಂದರೆ, ಅವರಿಗೆ ಗೊತ್ತಿದ್ದ ಜಗತ್ತಿನ ಪೂರ್ವದ ಇತಿಹಾಸದಲ್ಲಿ ಮೊದಲು ಕೈಯೊಳಗೆ ತಕ್ಕಡಿ ಯನ್ನು ಹಿಡಿದುಕೊಂಡು ಬಂದವರು, ಬಳಿಕ ಪಟ್ಟವನ್ನು ಕಸಿದುಕೊಂಡ ದೃಷ್ಟಾಂತ ಗಳು ಇರಲೇ ಇಲ್ಲ. ವೈಶ್ಯವೃತ್ತಿ, ಕ್ಷಾತ್ರವೃತ್ತಿಗಳು ಬೇರೆ ಬೇರೆಯಾದವುಗಳಾಗಿವೆ. ಅವುಗಳು ಅದಲುಬದಲಾಗುವ ಸಂಭವವಿಲ್ಲ. ವರ್ಣವು ವೃತ್ತಿನಿಷ್ಠವಿದ್ದುದರಿಂದ ವೃತ್ತಿಸಂಕರವೆಂದರೆ ವರ್ಣಸಂಕರವೇ. ಈ ವರ್ಣಸಂಕರವನ್ನು ಯಾರೂ ಮಾಡುವ ದಿಲ್ಲವೆಂದು ಚಾತುರ್ವರ್ಣ್ಯದ ಮೇಲೆ ವಿಶ್ವಾಸವಿದ್ದ ಹಿಂದುಗಳು ತಿಳಿದಿದ್ದರೆ ಆಶ್ಚರ್ಯ ವಿಲ್ಲ. ಮಾರವಾಡಿ ಮೊದಲಾದ ವೈಶ್ಯವೃತ್ತಿಯ ಜನರು ವ್ಯಾಪಾರಕ್ಕಾಗಿ ದೇಶಾಂ- ತರಕ್ಕೆ ಹೋಗುವರು; ಆದರೆ ಅವರಲ್ಲಿ ಒಬ್ಬನೂ ರಾಜ್ಯದ ಆಕಾಂಕ್ಷೆಯನ್ನು ತಾಳಿದ್ದರ ಅನುಭವವಿರಲಿಲ್ಲ. ಮೊಗಲ ಮೊದಲಾದ ಯವನರು ಇಲ್ಲಿಗೆ ಬಂದು ರಾಜ್ಯಸ್ಥಾಪನೆ ಮಾಡಿದ್ದು ನಿಜವು; ಆದರೆ ಅವರು ಪ್ರಕಟವಾಗಿ ವಿಜಯಶಾಲಿಗಳೆಂದೇ ಬಂದರಲ್ಲದೆ, ವ್ಯಾಪಾರಿಗಳಾಗಿ ಬಂದಿರಲಿಲ್ಲ. ಅರ್ಥಾತ್ ವ್ಯಾಪಾರಿಗಳ ಜಾತಿ ಬೇರೆ, ರಾಜಕಾರಣದ

ಜಾತಿ ಬೇರೆ; ಇವುಗಳು ಎಂದೂ ಬದಲಾಗುವ ಸಂಭವವಿಲ್ಲೆಂಬ ವಿಚಾರಗಳು ತತ್ಕಾಲೀನ ಮರಾಟರಲ್ಲಿ ಹುಟ್ಟಿರಲಿಕ್ಕೆಬೇಕು. ಹೀಗೆ ಅವರಲ್ಲಿ ನಂಬಿಗೆಯುಂಟಾಗಿದ್ದರೆ, ಅದಕ್ಕೆ ಅವರ ತಪ್ಪೆಂದು ಅನ್ನಲಿಕ್ಕೆ ಬರುವದಿಲ್ಲ.

ತಮ್ಮ ಕೈಯೊಳಗಿನ ತಕ್ಕಡಿ ಕಳಚಿ ಬಿದ್ದದ್ದು ಯಾವಾಗ, ಆ ಸ್ಥಳದಲ್ಲಿ ಖಡ್ಗವು ಬಂದದ್ದು ಯಾವಾಗ, ತಮ್ಮ ಕೆಳಗೆ ಗದ್ದುಗೆ ಬಂದದ್ದು ಯಾವಾಗ ಮೊದಲಾದ ಸಂಗತಿಗಳು ಇಂಗ್ಲಿಷರವು ಇಂಗ್ಲಿಷರಿಗೇ ತಿಳಿಯಲಿಲ್ಲ. ಈ ಎಲ್ಲ ಪ್ರಕಾರಗಳು ಅವರಿಗೇ ಸ್ವಪ್ನ ಸಾಕ್ಷಾತ್ಕಾರದಂತೆ-ನಿದ್ರೆಯಲ್ಲಿಯೇ ಘಟಿಸಿದ ಹಾಗೆ ಆಗಿದ್ದರೆ, ಮರಾಟರಿಗಂತೂ ಈ ಟೊಪ್ಪಿಗೆಯವರು ಕಣ್ಣಿಗೆ ಬೀಳುತ್ತಲೆ, ಮುಂದೆ ಇವರು ನಮ್ಮ ರಾಜ್ಯ ತೆಗೆದುಕೊಳ್ಳುವರೆಂದು ಹೇಗೆ ತಿಳಿಯಬೇಕು? ಅಂಥ ಇಂಗ್ಲಿಷರಿಗೆ ರಾಜ್ಯದಲ್ಲಿರಲಿಕ್ಕೆ ಪ್ರತಿಬಂಧಮಾಡಬೇಕೆಂಬ ಬುದ್ಧಿಯು ಅವರಲ್ಲಿ ಹೇಗೆ ಹುಟ್ಟಬೇಕು? ತಿರುಗಿ ಕೇಳಿದರೆ, ಅವರು ತಮ್ಮ ರಾಜ್ಯದಲ್ಲಿ ಬಂದರೆ ಒಂದು ಬಗೆಯಿಂದ ಹಿತವೇ ಆಗುವದೆಂದು ಇವರಿಗೆ ಅನಿಸಿರಲಿಕ್ಕೆಬೇಕು. 'ಸ್ವದೇಶಿ'ಯ ಮಂತ್ರವು ಮನುಷ್ಯನಿಗೆ ಆಪತ್ತು-ವಿಪತ್ತುಗಳ ಪ್ರಸಂಗದಲ್ಲದೆ ಸುಸ್ಥಿತಿಯಲ್ಲಿ ನೆನಪಾಗುವದಿಲ್ಲವೆಂಬ ಮಾತು ಪ್ರಸಿದ್ಧವೇ ಇರುವದು. ಹಿಂದು ಜನರಿಗೆ ಬಂಗಾಲದ ವಿಭಕ್ತೀಕರಣವಾದ ಮೇಲೆಯೇ ಸ್ವದೇಶಿಯ ನೆನಪಾಯಿತು! ಇಂಗ್ಲಿಷರಿಗೆ ಅದು ಕಳೆದ ಮಹಾಯುದ್ಧದ ತರುವಾಯವೇ ನೆನಪಾಯಿತು! ಇಂಗ್ಲಿಷರು ಹಿಂದುಸ್ತಾನದಲ್ಲಿ ಬಂದಾಗ ಹಿಂದುಗಳು ಸುಸ್ಥಿತಿಯಲ್ಲಿದ್ದರು. ಆಗ ಈಗಿನ ಅರ್ಥದ ಸ್ವದೇಶೀ ತತ್ವವು ಹೇಗೆ ಗೊತ್ತಾಗಬೇಕು? ಮನುಷ್ಯನು ಸ್ವಭಾವತಃ ವಿಲಾಸಪ್ರಿಯನಿರುವನು. ಸಾಂಪತ್ತಿಕ ಸುಸ್ಥಿತಿಯಿದ್ದರೆ ಆತನ ವಿಲಾಸಬುದ್ಧಿಯು ಸಹಜವಾಗಿಯೇ ಬೆಳೆಯುತ್ತದೆ. ಅಲ್ಲದೆ ಎಲ್ಲ ವಿಧದ ಕೈಗಾರಿಕೆಯ ಹಾಗು ಕಲೆಯ ಗುತ್ತಿಗೆಯನ್ನು ದೇವರು ಯಾವುದೊಂದೇ ದೇಶಕ್ಕೆ ಕೊಟ್ಟಿರುವನೆಂದು ಹೇಳಲಾಗುವದಿಲ್ಲ. ಆದ್ದರಿಂದ ಸ್ವಚ್ಛಂದವೃತ್ತಿಯ ಹಾಗು ವಿಲಾಸದ ಪದಾರ್ಥಗಳನ್ನು ಸ್ವಪರಭಾವನೆಯಿಲ್ಲದೆ ಮನುಷ್ಯನು ಕೊಳ್ಳುತ್ತಿರುತ್ತಾನೆ. ಹಿಂದುಸ್ತಾನದಲ್ಲಿ ಇಂಗ್ಲಿಷರೊಬ್ಬರೇ ವಿದೇಶೀಯ ವ್ಯಾಪಾರಿಗಳು ಬಂದಿದ್ದರೆಂತಲ್ಲ. ಅವರಿಗಿಂತ ಮೊದಲು ಪೋರ್ತುಗೀಜರೂ, ಅವರಿಗಿಂತ ಮುಂಚೆ ಡಚ್ಚರೂ, ಅವರಿಗಿಂತ ಮೊದಲು ಯವನರೂ ಹೀಗೆ ಹಲವು ಪರಕೀಯರು ವ್ಯಾಪಾರಕ್ಕಾಗಿ ಇತ್ತ ಬಂದವರಾಗಿದ್ದು, ವಿದೇಶೀಯ ವಸ್ತು-ಒಡವೆಗಳನ್ನು ಕೊಳ್ಳುವ ಪರಿಪಾಠವು ಇಲ್ಲಿ ಎಂದಿನಿಂದಲೋ ಬಿದ್ದಿತ್ತು. ಇನ್ನು ಹಿಂದುಸ್ತಾನದಲ್ಲಿ ಮರಾಟರೊಬ್ಬರೇ ಸರ್ವಸತ್ತಾಧಿಕಾರಿಗಳಿದ್ದರೆಂಬಂತೇನೂ ಇಲ್ಲ. ಇವರ ಪ್ರಾಂತಗಳು ಸಮುದ್ರತೀರದಲ್ಲಿದ್ದು ಅಲ್ಲಿ ಇಂಗ್ಲಿಷ ವ್ಯಾಪಾರಿಗಳು ಅಲ್ಪಸಂಖ್ಯಾಕರಿದ್ದರು. ಅವರ ವ್ಯಾಪಾರವು ಮರಾಟರ ಕೈಯಲ್ಲಿರದ ಪ್ರಾಂತಗಳಲ್ಲಿಯೇ ವಿಶೇಷವಾಗಿತ್ತು. ಮರಾಟರು ಇಂಗ್ಲಿಷರನ್ನು ತಮ್ಮ ಪ್ರಾಂತದಲ್ಲಿ ಬರಗೊಡದಿದ್ದರೆ ಅವರಿಗೆ ತಮ್ಮ ಗಂಟು-ಗದಡಿಗಳನ್ನು ಕಟ್ಟಿಕೊಂಡು ಹೋಗಬೇಕಾದ ಪ್ರಸಂಗವಿರಲಿಲ್ಲ; ಯಾಕಂದರೆ,

ಅವರು ಬೇರೆ ಆ ಪ್ರಾಂತಗಳಲ್ಲಿ ಚನ್ನಾಗಿ ಬೇರುಬಿಟ್ಟು ಬಲಗೊಂಡವರಾಗಿದ್ದರು. ಇಂಗ್ಲಿಷ ವ್ಯಾಪಾರಿಗಳಿಗೆ ಅವರು ಈ ದೇಶದಲ್ಲಿ ಬರುತ್ತಲೆ ಬಹಿಷ್ಕಾರ ಹಾಕುವದು ಆ ವೇಳೆಯಲ್ಲಿ ಸ್ವಾಭಾವಿಕವೂ ಶಕ್ಯವೂ ಆಗಿರಲಿಲ್ಲ.

ಆಗ ಇಂಗ್ಲಿಷ ವ್ಯಾಪಾರಿಗಳಿಗೆ ಪ್ರತಿಬಂಧ ಮಾಡದೆ, ಅವರಿಗೆ ಉತ್ತೇಜನ ವನ್ನೂ ಸೌಕರ್ಯವನ್ನೂ ಕೊಟ್ಟು ತಮ್ಮ ದೇಶಕ್ಕೆ ಕರೆಸಿಕೊಳ್ಳುವದೇ ಹೆಚ್ಚು ಸ್ವಾಭಾ ವಿಕವಿದ್ದುದರಿಂದ, ಅದು ಆ ವೇಳೆಯ ಮರಾಟರಿಗೆ ಇಷ್ಟವಾಗಿ ತೋರಿರಲಿಕ್ಕೆ ಬೇಕು. ವ್ಯಾಪಾರಿಗಳನ್ನು ತಮ್ಮ ಕಡೆಗೆ ಎಳೆದುಕೊಂಡು, ಅವರಿಗೆ ಲಾಭವಾದರೂ ಅಡ್ಡಿ ಯಿಲ್ಲ; ಅವರಿಂದ ತಮ್ಮ ಲಾಭವನ್ನು ಮಾಡಿಕೊಳ್ಳಬೇಕೆಂಬ ಬುದ್ಧಿಯು ಪ್ರತಿ ಯೊಬ್ಬನಲ್ಲಿಯೂ ಇರುವದು. ಮನೆಗೆ ಬಂದ ಸೌದಾಗರನನ್ನು ತಳ್ಳಿದಂಥ ಉದಾಹರಣೆಯು ಜಗತ್ತಿನಲ್ಲಿಯ ಯಾವ ರಾಷ್ಟ್ರದ ಇತಿಹಾಸದಲ್ಲಿಯೂ ಕಂಡು ಬರುವದಿಲ್ಲ. ತಮ್ಮಲ್ಲಿಯ ಕೈಗಾರಿಕೆಯವರಿಗೆ ಉತ್ತೇಜನ ಕೊಡುವದು ಬೇರೆ; ಪರಕೀಯ ವ್ಯಾಪಾರಿಗಳ ಮೇಲೆ ಬಹಿಷ್ಕಾರ ಹಾಕುವದು ಬೇರೆ. ಸ್ವದೇಶೀಯ ಕೈಗಾರಿಕೆಯವರ ಕೆಲಸಗಳ ಪ್ರಸಾರವಾಗಬೇಕಾದರೆ, ವಿದೇಶೀಯ ವ್ಯಾಪಾರಿಗಳ ಅವಶ್ಯಕತೆಯು ಭಾಸವಾಗುತ್ತದೆ. ನಮ್ಮ ದೇಶದ ಒಡವೆಗಳು ವಿದೇಶಕ್ಕೆ ಹೋದರೇನೇ ಅವುಗಳಿಗೆ ಹೆಚ್ಚು ಬೆಲೆ ಬರುವದು; ಯಾಕಂದರೆ, ಅಲ್ಲಿ ಅವುಗಳ ಅಪೂರ್ವತೆಯಿರುವದು; ಹಾಗು ಆಯಾತ ವಸ್ತುಗಳ ಸುಂಕವೂ ಬಹಳವಾಗಿ ಬರು ವದು. ಅದನ್ನು ಸುಮ್ಮ ಸುಮ್ಮನೆ ಯಾರು ಕಳಕೊಳ್ಳುವರು? ಈ ನಿಯಮಕ್ಕೆ ಅನುಸಾರವಾಗಿಯೇ ಆ ಕಾಲದಲ್ಲಿ ಪರಕೀಯ ವ್ಯಾಪಾರಿಗಳು ಹಿಂದುಸ್ತಾನದಲ್ಲಿ ಪ್ರಿಯರಾಗುತ್ತಿದ್ದರು. ಯಾಕಂದರೆ, ಇವರ ಕೈಯಿಂದ ಕೋಟ್ಯವಧಿ ರೂಪಾಯಿ ಬೆಲೆಯ ದೇಶೀಯ ಕೈಗಾರಿಕೆಯ ಒಡವೆಗಳು ಪರದೇಶಕ್ಕೆ ಹೋಗಿ, ಅವುಗಳಿಗೆ ಪ್ರತಿ ಯಾಗಿ ಬೆಲೆಯುಳ್ಳ ಬಂಗಾರ, ಬೆಳ್ಳಿಗಳು ಈ ದೇಶಕ್ಕೆ ಬರುತ್ತಿದ್ದವು; ಹಾಗು ಈ ದೇಶದಲ್ಲಿ ದೊರೆಯದಂಥ ಅನೇಕ ವಿಲಾಸೀ ವಸ್ತುಗಳು ಅವರ ಮೂಲಕ ದೊರೆಯು ತ್ತಿದ್ದವು. ಈ ಮೇರೆಗೆ ಇಬ್ಬಗೆಯಿಂದಾಗುವ ಲಾಭವನ್ನು ಅದಾರು ಕಳಕೊಳ್ಳು ವರು? ಈ ವ್ಯಾಪಾರಿಗಳು ಮುಂದೆ ತಲೆಭಾರಾಗಿ ವ್ಯಾಪಾರ ಸ್ವಾತಂತ್ರ್ಯವನ್ನೂ, ರಾಜಕೀಯ ಸ್ವಾತಂತ್ರ್ಯವನ್ನೂ ಕೆರೆದುಕೊಳ್ಳುವರೆಂಬ ಭಯದಿಂದ ಈ ಲಾಭ ಗಳನ್ನು ಕಳೆದುಕೊಳ್ಳಬೇಕೇನು? ನಮ್ಮ ಪೂರ್ವಜರಿಗೆ ಭಾವೀ ಇತಿಹಾಸವನ್ನು ಯಾವ ಜ್ಯೋತಿಷಿಯಾದರೂ ಹೇಳಿದ್ದರ, ಪರಕೀಯ ವ್ಯಾಪಾರಿಗಳ ಪಿಳ್ಳೆ ಕೂಡ ಬಾರದಂತೆ ಅವರು ವ್ಯವಸ್ಥೆ ಮಾಡುತ್ತಿದ್ದರು. ಅವರಿಗೆ ಭವಿಷ್ಯ ಚಿತ್ರವು ಕಾಣ ದ್ದಕ್ಕಾಗಿ ಅಂದು ವಿದೇಶೀಯ ವ್ಯಾಪಾರಿಗಳ ಮೇಲೆ ಬಹಿಷ್ಕಾರ ಹಾಕಲಿಲ್ಲೆಂಬ ದೋಷವನ್ನು ಅವರ ಮೇಲೆ ಹೊರಿಸುವದು ಉಚಿತವೆನಿಸುವದಿಲ್ಲ. ದೈವಗತಿಯ ಎಳೆತವೇ ಈ ಘಟನೆಗೆ ಕಾರಣವಲ್ಲದೆ, ತತ್ಕಾಲೀನ ಮರಾಟಗರು ವ್ಯಾಪಾರೀ ಧೋರಣದಲ್ಲಿ ತಪ್ಪುಮಾಡಿದರೆಂದು ಹೇಳಲಿಕ್ಕೆ ಬರುವದಿಲ್ಲ. ಮನೆಕಟ್ಟಲು

ಅದರಲ್ಲಿ ಮುಂಗಲಿ-ಹೆಗ್ಗಣಗಳು ಬೀಡಾರ ಮಾಡುವವೆಂದು ಅದನ್ನು ಕಟ್ಟಲೇ ಬಾರದೇನು? ಇಂಗ್ಲಿಷ ವ್ಯಾಪಾರಿಗಳು ಮುಂದೆ ಆ ಮುಂಗಲಿ-ಹೆಗ್ಗಣಗಳಂತಾದಾರೆಂದು ಮರಾಟರು ಆಗ ಹೇಗೆ ತಿಳಿಯಬೇಕು?

## ಇಂಗ್ಲಿಷರ ಸಹಾಯ.

ಮರಾಟರು ಇಂಗ್ಲಿಷರಿಗೆ ವ್ಯಾಪಾರ ಮಾಡಲಿಕ್ಕೆ ಅಜ್ಞೆ ಕೊಟ್ಟು ತಪ್ಪು ಮಾಡಿದರೆಂಬ ಆರೋಪವಿದ್ದಂತೆ, ಅವರು ಇಂಗ್ಲಿಷರ ಸಹಾಯ ಹೊಂದಿ ಅವರನ್ನು ತಮ್ಮ ರಾಜಕಾರಣದಲ್ಲಿ ಸೇರಿಸಿಕೊಂಡರೆಂಬದೊಂದು ಬೇರೆ ಆರೋಪವೂ ಇರುವದು. ಮೊದಲಿನಂತೆ ಈ ಆರೋಪವು ಅಯಥಾರ್ಥವಲ್ಲ. ಇದರಲ್ಲಿ ಸತ್ಯಾಂಶವು ಬಹಳ ಇದೆ. ಆ ಕಾಲದಲ್ಲಿ ಇಂಗ್ಲಿಷರ ಸಹಾಯವನ್ನು ತೀರ ಪಡೆಯದಿದ್ದರೆ ಸಾಗುತ್ತಿತ್ತೋ ಇಲ್ಲವೋ ಎಂಬುದು ಒಂದು ದೊಡ್ಡ ಪ್ರಶ್ನೆಯೇ ಆಗಿರುವದು. ತಮ್ಮ ಒಳಜಗಳದಲ್ಲಿ ಪರಕೀಯರನ್ನು ಸೇರಗೊಡದಿದ್ದರೆ ಅದು ವಿಹಿತವೇ. ಸ್ವಾವಲಂಬನವು ಯಾವಾಗಲೂ ಸುಖಪರ್ಯವಸಾಯಿಯಾಗಿದೆ. ಸ್ವಹಿತವನ್ನು ಸಾಧಿಸುವಾಗ ಹಾಗು ಶತ್ರುಪ್ರತೀಕಾರ ಮಾಡುವಾಗ ಮತ್ತು ಸಂಕಟದಲ್ಲಿರುವಾಗ ಬೇಕಾದಂಥ ಸಾಧನಗಳನ್ನು ಉಪಯೋಗ ಮಾಡಿಕೊಳ್ಳಲಿಕ್ಕೆ ಸಂಪನ್ನ ಮನುಷ್ಯನೂ ಸಹ ಸಿದ್ಧನಾಗುವನೆಂಬದಕ್ಕೆ ಸಂದೇಹವಿಲ್ಲ. ಗೌರ ಗೌರ ಕಾಯದವರ ಯುದ್ಧದಲ್ಲಿ ಕಪ್ಪುಬಣ್ಣದ ಒಂದಿಷ್ಟೂ ರೇಖೆಯುಳ್ಳ ಜನರ ಸಹಾಯ ಪಡೆಯಬಾರದೆಂಬ ಇಂಗ್ಲಿಷರ ಸ್ವಾಭಿಮಾನಬುದ್ಧಿಯು ಬೋಅರ ಜನರೊಡನೆ ಯುದ್ಧ ಮಾಡುವವರೆಗೆ ಜಾಗ್ರತವಾಗಿತ್ತು; ಆದರೆ ಗತ ಮಹಾಯುದ್ಧದಲ್ಲಿ ಪ್ರಾಣಸಂಕಟವು ಉಪಸ್ಥಿತವಾದಾಗ ಹಾಗು ಪ್ರಸ್ತುತದ ಮಹಾಯುದ್ಧದ ಕಾಲಕ್ಕೆ ಇಂಗ್ಲಿಷರ ಈ ಸ್ವಾವಲಂಬನದ ವಿಚಾರವು ಸ್ಥಿರವಾಗುಳಿಯಲಿಲ್ಲ. ಈಗಂತೂ ನಿಗ್ರೋ ಜನರಿಗಿಂತಲೂ ಹತ್ತುಪಟ್ಟು ಹೆಚ್ಚು ಕಪ್ಪು ಬಣ್ಣದವರಾದರೂ ಅವರಿಗೆ ಸಾಗುವದು. ಯಾವ ಬಣ್ಣವಿದ್ದರೇನು, ತುಬಾಕಿ ಹಿಡಿಯಲು ಸಮರ್ಥನಿದ್ದರಾಯಿತೆಂದರೆ ತೀರಿತು! ಗತ ಹಾಗು ಸದ್ಯದ ಮಹಾಯುದ್ಧಗಳಲ್ಲಿ ಫ್ರಾನ್ಸದವರು ಮೋರೋಕ್ಕೋದ ಜನರ ಹಾಗು ಇಂಗ್ಲಿಷರು ಹಿಂದುಗಳ ದಂಡನ್ನು ತಮ್ಮ ಯುರೋಪೀಯ ಗೌರಕಾಯದ ವೈರಿ ಜನರ ವಿರುದ್ಧವಾಗಿ ನಿಲ್ಲಿಸಿದ್ದು ಪ್ರಸಿದ್ಧವೇ ಇದೆ. ಅವರ ಆ ಸ್ವಾವಲಂಬನದ ತತ್ವ, ವರ್ಣಮದ ಇವು ತತ್ಕಾಲಿಕ ಸಂಕಟದಲ್ಲಿ ಜೀರ್ಣವಾಗಿ ಹೋದವು.

ಆದರೆ ಮರಾಟರು ತಮ್ಮ ಒಳಜಗಳಗಳಲ್ಲಿ ಇಂಗ್ಲಿಷರ ನೆರವು ತೆಗೆದುಕೊಂಡದ್ದು ಮಾತ್ರ ತಮ್ಮ ಪ್ರಾಣಸಂಕಟ ಪ್ರಸಂಗಗಳಲ್ಲೇ ತೆಗೆದುಕೊಂಡರೆಂದು ಹೇಳಲಿಕ್ಕೆ ಬರುವದಿಲ್ಲ. ತಮ್ಮೊಳಗಿಯ ವೈರ ಬುದ್ಧಿ-ಸ್ವಾರ್ಥಬುದ್ಧಿಗಳ ಪ್ರಶಮನಾರ್ಥವಾಗಿಯೇ ಅವರು ಆ ನೆರವನ್ನು ಹೊಂದಿದರು. ಮರಾಟರ ರಾಜಕಾರಣದಲ್ಲಿ ಇಂಗ್ಲಿಷರ ಕೈಯನ್ನು ಮೊಟ್ಟಮೊದಲು ಸೇರಿಸಿಕೊಂಡ ಮರ್ಯಾದೆಯನ್ನು ರಾಘೋಬನಿಗೇ ಕೊಡಲಾಗುತ್ತದೆ; ಆದರೆ ಇದು ಸರಿಯಾದದ್ದಲ್ಲ. ಈ ಮಾನವನ್ನು ನಾನಾ

ಸಾಹೇಬ ಪೇಶವೆಗೇ ಕೊಡತಕ್ಕದೆಂದು ನಮ್ಮ ಮತವಿದೆ. ರಾಘೋಬನಿಗೆ ಪೇಶ್ವೇ ಪದಾಧಿಕಾರವಾದರೂ ಬೇಕಾಗಿತ್ತು; ಆದರೆ ನಾನಾಸಾಹೇಬನಿಗೆ ಮಾತ್ರ ಕೇವಲ ತನ್ನೊಬ್ಬ ಮಲೆತುನಿಂತ ಸರದಾರನನ್ನು ಪರಾಭವಗೊಳಿಸುವದಿತ್ತು. ಇಂಗ್ಲಿಷರು ತಮ್ಮ ಭಾವೀಪ್ರತಿಸ್ಪರ್ಧಿಗಳೆಂಬದು ನಾನಾಸಾಹೇಬನಿಗೆ ಚನ್ನಾಗಿ ಗೊತ್ತಿತ್ತು. ಆಂಗ್ರೆಯನ್ನು ನಾಶಗೊಳಿಸುವದರಿಂದ ಸಮುದ್ರತೀರದ ಇಂಗ್ಲಿಷರ ಶತ್ರುವೊಬ್ಬನು ಇಲ್ಲದಂತಾಗುವನೆಂಬದಾದರೂ ಅವನಿಗೆ ತಿಳಿದಿರಬೇಕು ಆದರೂ ಇಂಗ್ಲಿಷರ ನೆರವಿನಿಂದ ಆಂಗ್ರೆಯನ್ನು ವಿಧ್ವಂಸಗೊಳಿಸುವ ಮೋಹವನ್ನು ಮಾತ್ರ ಅವನಿಂದ ತಡೆಯುವದಾಗಲಿಲ್ಲ. ರಾಘೋಬನು ಸುರತದ ಒಪ್ಪಂದದಿಂದ ೧೭೭೫ರಲ್ಲಿ ಇಂಗ್ಲಿಷರನ್ನು ತಮ್ಮ ಮನೆಯಲ್ಲಿ ಸೇರಿಸಿಕೊಂಡನು; ಆದರೆ ಅವನಿಗಿಂತ ಇಪ್ಪತ್ತು ವರ್ಷ ಮೊದಲೇ, ಅಂದರೆ ೧೭೫೫ರಲ್ಲೇ ನಾನಾಸಾಹೇಬ ಪೇಶವೆಯು ಮುಂಬಯಿಯ ಒಪ್ಪಂದದಿಂದ ಅದೇ ಕರ್ಮವನ್ನು ಮಾಡಿದ್ದನೆಂಬ ಸಂಗತಿಯು ಸಾಮಾನ್ಯ ವಾಚಕರ ನೆನಪಿನಲ್ಲಿ ಚೆನ್ನಾಗಿ ಉಳಿಯುವದಿಲ್ಲ. ಇಂಗ್ಲಿಷರು ಆಂಗ್ರೆಯನ್ನು ಪರಾಭವಗೊಳಿಸಲಿಕ್ಕೆ ಸಹಾಯ ಮಾಡಬೇಕು; ಇದಕ್ಕೆ ಪ್ರತಿಫಲವಾಗಿ ಪಶ್ಚಿಮ ಸಮುದ್ರತೀರದ ಬಾಧ್ಯತೆಯು ಇಂಗ್ಲಿಷರ ಕಡೆಗೆ ಇರಬೇಕು; ಹಾಗು ಅವರಿಗೆ ಬಾಣಕೋಟ, ಹಿಮ್ಮತಗಡ ಹಾಗು ನೆರೆಯ ಐದು ಗ್ರಾಮಗಳು ಪಾರಿತೋಷಕವೆಂದು ದೊರೆಯಬೇಕು, ಮೊದಲಾದ ಕಟ್ಟಳೆಗಳು ಆ ಒಪ್ಪಂದದಲ್ಲಾದವು ಆ ಒಪ್ಪಂದದಂತೆ ವಿಜಯದುರ್ಗ ಕೋಟೆಯನ್ನು ಇಂಗ್ಲಿಷರು ತೆಗೆದುಕೊಂಡರು; ಹಾಗು ಆಂಗ್ರೆಯ ಹಡಗುಗಳನ್ನು ಸುಟ್ಟು ಬೂದಿ ಮಾಡಿದರು; ಕೋಟೆಯೊಳಗಿನ ಹತ್ತು ಲಕ್ಷ ಸುಲಿಗೆಯನ್ನು ನುಂಗಿ ಒಡಂಬಡಿಕೆಯ ವಿರುದ್ಧವಾಗಿ ಆ ಕೋಟೆಯನ್ನೂ ಮೊದಲು ತಮ್ಮ ವಶದಲ್ಲೇ ಇರಿಸಿಕೊಂಡರು. ಆಂಗ್ರೆಯ ಪರಾಭವವಾಗುವವರೆಗೆ ಇಂಗ್ಲಿಷರಿಗೆ ಮುಂಬಯಿಯ ದಕ್ಷಿಣದಲ್ಲಿ ಪ್ರವೇಶವಿರಲಿಲ್ಲ ಆಂಗ್ರೆಯ ಅಂಜಿಕೆ ತಪ್ಪಲು ಇಂಗ್ಲಿಷರಿಗೆ ಕೊಂಕಣಪಟ್ಟಿಯಲ್ಲಿ ಅನಿರುದ್ಧ ಸಂಚಾರಮಾಡಲಿಕ್ಕೆ ಮಾರ್ಗವಾಯಿತು. ಇದರಲ್ಲಿ ನಾನಾಸಾಹೇಬ ಪೇಶವೆಯು ಯಾವ ಸ್ವಾವಲಂಬನ, ಯಾವ ದೂರದರ್ಶಿತ್ವ ಹಾಗು ಯಾವ ಸ್ವಾಭಿಮಾನಗಳನ್ನು ವ್ಯಕ್ತಪಡಿಸಿದಂತಾಯಿತು? ತುಳಾಜಿ ಆಂಗ್ರೆಯು ತಾರಾಬಾಯಿಯ ಪಕ್ಷದವನಿರಬಹುದು; ಆದರೂ ಆತನು ಪೇಶವೆಯರಿಗೆ ಇಂಗ್ಲಿಷರಿಗಿಂತ ನಿಜವಾಗಿಯೂ ಎಷ್ಟೋ ಪಾಲು ಸಮೀಪವರ್ತಿಯಾಗಿದ್ದನು. ಆಂಗ್ರೆಯವರು ಶಿವಾಜಿಯ ಕಾಲದಿಂದ ಹಡುಗುಪಡೆಯ ಅಧಿಪತಿಗಳಿದ್ದರು; ಹಾಗು ಅವರು ಸುಮಾರು ನೂರು ವರ್ಷಗಳ ವರೆಗೆ ಮರಾಟರ ಹಡಗುಪಡೆಯ ಲೌಕಿಕವನ್ನು ಕಾಯ್ದಿದ್ದರು. ತಾರಾಬಾಯಿಯ ಪಕ್ಷದವನೆಂದು ಅವನು ಪೇಶವೆಯರ ಕಣ್ಣಲ್ಲಿ ಮುಳ್ಳಿನಂತೆ ಒತ್ತುತ್ತಿರಬಹುದು; ಆದರೆ ಅವನೇನೂ ಇಂಗ್ಲಿಷರ ಸಹಾಯ ಪಡೆದಿರಲಿಲ್ಲ. ತದ್ವಿರುದ್ಧವಾಗಿ ಅವನು ಪೇಶ್ವೆಯರಂತೆ ಇಂಗ್ಲಿಷರೊಡನೆಯೂ ಜಗಳ ಕಾದುತ್ತಲೇ ಇದ್ದನು. ಅದಕ್ಕೂ ಮೊದಲು ಪೇಶವೆಯರು

ಜಿಂಜೀರೆಯ ಹಬಸಿಯ ವಿರುದ್ಧ ಇಂಗ್ಲಿಷರ ಸಹಾಯವನ್ನು ಬೇಡಿದ್ದರು; ಆದರೆ ಅವರು ಆಗ ಪೇಶವೆಯರಿಗೆ ನೆರವಾಗಲಿಲ್ಲವೆಂಬ ಮಾತು ಬೇರೆ. ಹಬಸಿಯು ಮರಾಟನಾಗಿರದಿದ್ದರೂ ಇಂಗ್ಲಿಷರಿಗಿಂತಲೂ ಕಡಿಮೆ ಪರಕೀಯನಾಗಿದ್ದನೆಂದು ಅವರಿಗೆ ಅನಿಸಬೇಕಾಗಿತ್ತೆಂದು ನಾವು ಇಂದಿಗೆ ಅನ್ನುತ್ತೇವೆ; ಆದರೆ ಆ ವೇಳೆಯಲ್ಲಿ ಸ್ವಪರ ಭಾವವನ್ನು ಗುರುತಿಸುವ ದೃಷ್ಟಿಯು ಈಗಿನಂತಿದ್ದಿಲ್ಲವೆಂದು ಸ್ಪಷ್ಟವಾಗುವದು.

ಸ್ವಕೀಯರ ವಿರುದ್ಧವಾಗಿ ಇಂಗ್ಲಿಷರನ್ನು ಸಹಾಯಕ್ಕೆ ತೆಗೆದುಕೊಳ್ಳುವದು ಅಪರಾಧವೆಂದು ತಿಳಿದರೆ, ಆ ಅಪರಾಧವನ್ನು ಮಾಡದೆ ಇರುವವರು ಬಹುಮಟ್ಟಿಗೆ ಯಾರೂ ಇದ್ದಿಲ್ಲವೆಂದು ಕಂಡುಬರುವದು. ಇಂಗ್ಲಿಷರು ಸಹಾಯಮಾಡಲಿಕ್ಕೆ ಸಮರ್ಥರಿರುವರೆಂಬ ನಂಬಿಕೆಯಾದಂದಿನಿಂದ ಸ್ವಕೀಯರ ವಿರುದ್ಧವಾಗಿ ಅವರನ್ನು ಸಹಾಯಕ್ಕೆ ತೆಗೆದುಕೊಳ್ಳುವ ಚಟವು ಪ್ರಾಯಶಃ ಎಲ್ಲರಿಗೂ ಬಡಕೊಂಡಿದೆ. ಅಲೀಬಾಗದ ಆಂಗ್ರೆಯು ತಲೆಭಾರಾಗಿರಬಹುದು; ಆದರೆ ಅವನು ಮರಾಟನಿದ್ದುದರಿಂದ ಸ್ವಕೀಯನೇ ಅಲ್ಲವೆ? ಹೀಗಿದ್ದು ನಾನಾಸಾಹೇಬ ಪೇಶವೆಯು ಅವನನ್ನು ಬೊಗ್ಗುಬಡಿಯುವದಕ್ಕಾಗಿ ಇಂಗ್ಲಿಷರ ಸಹಾಯವನ್ನು ಏಕೆ ತೆಗೆದುಕೊಳ್ಳಬೇಕು? ರಘುನಾಥರಾಯನು ಇಂಗ್ಲಿಷರನ್ನು ಸಹಾಯಕ್ಕೆ ತೆಗೆದುಕೊಂಡದ್ದಕ್ಕಾಗಿ ಅವನನ್ನು ದೋಷಿಯೆಂದು ಗಣಿಸಿದರೆ, ಟೀಪುವಿನ ವಿರುದ್ಧವಾಗಿ ಹಾಗು ಶಿಂದೆಯ ವಿರುದ್ಧವಾಗಿ ಖುದ್ದ ನಾನಾಫಡಣವೀಸನು ಇಂಗ್ಲಿಷರ ನೆರವು ಹೊಂದಿದ್ದಕ್ಕಾಗಿ ಅವನಿಗೆ ಯಾಕೆ ಹೆಸರಿಡಬಾರದು! ಇಂಗ್ಲಿಷರು ಯಾವ ಅರ್ಥದಿಂದ ಪರಕೀಯರೋ, ಟೀಪುವೂ ಅದೇ ಅರ್ಥದಿಂದ ಪರಕೀಯನಾಗಿದ್ದರೂ ಅವನು ಏತದ್ದೇಶೀಯನೇ ಅಲ್ಲವೆ? ಸ್ವಕೀಯರ ವಿರುದ್ಧವಾಗಿ ಹಿಂದುಸ್ತಾನದಲ್ಲಿ ಸಹಾಯ ತೆಗೆದುಕೊಳ್ಳದೆ ಇದ್ದವರೆಂದರೆ, ಒಬ್ಬ ಇಂಗ್ಲಿಷರೇ! ಹಿಂದುಸ್ತಾನದೊಳಗಿನ ಎಲ್ಲ ಜಾತಿಯ ಅಂದರೆ ಬ್ರಾಹ್ಮಣ, ಮರಾಟ, ರಜಪುತ ರಾಜ-ಮಹಾರಾಜರು ಪರಸ್ಪರರ ವಿರುದ್ಧ ಯುದ್ಧ ಮಾಡಲಿಕ್ಕೂ ಅಥವಾ ತಮ್ಮ ಗೃಹಕಲಹಗಳನ್ನು ಮುರಿಯಲಿಕ್ಕೂ ಇಂಗ್ಲಿಷರ ನೆರವಿನ ಹಾಗು ಮಧ್ಯಸ್ತಿಕೆಯ ಯೋಚನೆ ಮಾಡುತ್ತಿರಲು, ಇಂಗ್ಲಿಷರು ಮಾತ್ರ ಹಿಂದುಸ್ತಾನದೊಳಗಿನ ಇಂಗ್ಲಿಷರೆಂದರೆ ಎಲ್ಲರೂ ಒಂದೇ; ಅವರಲ್ಲಿ ಪಕ್ಷಭೇದವಿಲ್ಲ. ಹಿಂದುಸ್ತಾನದೊಳಗಿನ ಮೂರೂ ನಿಟ್ಟಿನ ಇಂಗ್ಲಿಷರು ಒಂದೇ ವರಿಷ್ಠಾಜ್ಞೆಯ ದಾಸರು. ಎಲ್ಲರೂ ಒಂದೇ ಧೋರಣದಿಂದ ನಡೆಯತಕ್ಕವರು. ಅವರು ವರಿಷ್ಠಾಜ್ಞೆಯನ್ನು ಉಲ್ಲಂಘಿಸತಕ್ಕವರಲ್ಲ. ಅವರಲ್ಲಿ ಸ್ಪರ್ಧೆಯುಂಟಾದರೆ, ತಮ್ಮ ರಾಜ್ಯದ ಹಿತವು ಯಾವುದರಿಂದ ಹೆಚ್ಚಾಗಿ ಆಗುವದೆಂಬದನ್ನು ನಿರೀಕ್ಷಿಸುವದರಲ್ಲಿಯೇ ಇರುವದೆಂಬದನ್ನು ಇಂಗ್ಲಿಷರು ಇಲ್ಲಿಯ ಜನರ ನಿದರ್ಶನಕ್ಕೆ ಚೆನ್ನಾಗಿ ತಂದುಕೊಟ್ಟರು.

ಏತದ್ದೇಶಿಯ ರಾಜ-ಮಹಾರಾಜರು ಇಂಗ್ಲಿಷರನ್ನು ನೆರವಿಗೆ ತೆಗೆದುಕೊಳ್ಳುತ್ತಿದ್ದುದಕ್ಕೆ ಕಾರಣವೇನಂದರೆ, ಇಂಗ್ಲಿಷರಲ್ಲಿ ಕವಾಯತಿಯ ಸೈನ್ಯವೂ ಸುಧಾರಿಸಿದ ಯುದ್ಧಸಾಮಗ್ರಿಯೂ ಅಗಿದ್ದಿತು. ಇಂಗ್ಲಿಷರಲ್ಲಿ ಪರಸ್ಪರರೊಳಗೆ ವ್ಯಾಜ್ಯವುಂಟಾಗ

ಲಿಲ್ಲ. ಅಲ್ಪಮಟ್ಟಿಗುಂಟಾಗಿದ್ದರೂ, ಹಿಂದುಗಳ ಸಹಾಯ ಹೊಂದಿ ಅವರು ಅದನ್ನು ಬಗೆ ಹರಿಯಿಸಿಕೊಳ್ಳಲಿಲ್ಲವೆಂಬ ಸಂಗತಿಯು ನಿರ್ವಿವಾದವು. ದಿಲ್ಲಿಯ ಬಾದಶಹರ ಸುಭೇದಾರರು ಹೇಗೆ ಸ್ವತಂತ್ರ ನವಾಬರೂ ರಾಜರೂ ಆದರೋ, ಹಾಗೆ ಮನಸ್ಸು ಮಾಡಿದ್ದರೆ ಕ್ಲೈವ, ;ವಾರನ್‌ಹೇಸ್ಟಿಂಗ್ಸ ಇವರೂ ಸ್ವತಂತ್ರ ರಾಜರಾಗುತ್ತಿದ್ದರು. ದಿಲ್ಲಿಯಿಂದ ಕೇವಲ ಎರಡೇ ನೂರು ಮೈಲುಗಳೊಳಗೆ ಸ್ವತಂತ್ರ ನವಾಬರಾಗುವದಕ್ಕೆ ಪ್ರಾರಂಭವಾಗಿತ್ತು! ಆದರೆ ಕಂಪನಿಯವರ ಸಿಂಹಾಸನವು ಲಂಡನದಲ್ಲಿ; ಅಂದರೆ ಹಿಂದುಸ್ಥಾನದಿಂದ ಆರು ಸಾವಿರ ಮೈಲುಗಳಾಚೆಯಲ್ಲಿ! ಆದರಿಂದ ಕಂಪನಿಯ ಯಾವನೊಬ್ಬ ಮಹತ್ವಾಕಾಂಕ್ಷಿ ನೌಕರನು ರಾಜ್ಯವನ್ನು ಪಾದಾಕ್ರಾಂತಗೊಳಿಸಿ ಸ್ವತಂತ್ರರಾಜನಾಗಿ ಬಿಟ್ಟಿದ್ದರೆ, ಅವನ ಶಾಸನ ಮಾಡಲಿಕ್ಕೆ ಕಂಪನಿಯವರಿಗೆ ಅದೆಷ್ಟೋ ಶ್ರಮವಹಿಸಬೇಕಾಗುತ್ತಿತ್ತು. ಆರುಸಾವಿರ ಮೈಲಿನ ಮೇಲಿಂದ ಗೌರರ ಪಡೆಯು ಬಂದೀತೆಷ್ಟು? ಮತ್ತು ಇಲ್ಲಿ ಕೂಡಿಸಿದ ಮಹಾಸೇನೆಯೊಡನೆ ಅದು ಯುದ್ಧ ಮಾಡಬೇಕೆಂತು? ಇಂಗ್ಲಿಷರಿಗೆ ಯಾವಾಗಲೂ ಆಧಾರವೆಂದರೆ, ಇತ್ತಕಡೆಯ ಸೈನ್ಯವೇ. ಯಾವಾಗಾದರೊಮ್ಮೆ ಅವಶ್ಯವೆನಿಸಿದಾಗ ಅಲ್ಲಿಂದ ಅತ್ಯಲ್ಪ ಸೈನ್ಯವು ಬರುತ್ತಿತ್ತು. ಯಾವನೊಬ್ಬ ಗೌರಕ್ಷಾಯದ ಬಂಡುಗಾರ ನವಾಬನು ಏತದ್ದೇಶೀಯ ರಾಜ-ಮಹಾರಾಜರ ಸಹಾಯ ಕೇಳಿದ್ದರೆ, ಅವನಿಗದು ಅವಶ್ಯವಾಗಿ ದೊರೆಯುತ್ತಿತ್ತು; ಆದರೆ ಇಂಗ್ಲಿಷರಲ್ಲಿ ಅಂಥ ಬಂಡುಗಾರನೊಬ್ಬನೂ ತಲೆದೋರಲಿಲ್ಲ! ಜಾಣತನದ ಹಾಗು ಶಸ್ತ್ರದ ಬಲದ ಮೇಲೆ ಫ್ರೆಂಚರೂ ಆಂಗ್ಲರೂ ವ್ಯಕ್ತಿಶಃ ಇಲ್ಲಿ ಲಕ್ಷಾವಧಿ ಸಂಪತ್ತನ್ನು ದೊರಕಿಸಿದರು. ಅವರಲ್ಲಿಯ ಕೆಲವರು ಖಾಸಗೀ ಜಹಗೀರುಗಳನ್ನೂ ಸಂಪಾದಿಸಿದರು; ಮತ್ತು ಎಷ್ಟೋ ಮಂದಿ ಇಲ್ಲಿಯ ಹಿಂದು-ಮುಸಲ್ಮಾನ ರಾಜರಲ್ಲಿ ಸೇನಾಪತಿ, ಮಂತ್ರಿ, ದಿವಾನರೆಂದು ನೌಕರಿಗೆ ನಿಂತರು.

ಆದರೆ ಯುರೋಪದೊಳಗಿನ ಕಂಪನಿಯ ವಿರುದ್ಧವಾಗಿ ಇಲ್ಲವೆ ಕಂಪನಿಯಿಂದ ಭಿನ್ನನಾಗಿ ಬಂಡಾಯಹೂಡಲಿಕ್ಕೆ ಯಾವ ಯುರೋಪೀಯನೂ ಸಿದ್ಧನಾಗಲಿಲ್ಲ; ಹಾಗು ತಮ್ಮ ಜ್ಞಾತಿ ಬಂಧುಗಳ ವಿರುದ್ಧವಾಗಿ ಎಂದೂ ಏತದ್ದೇಶೀಯರ ಸಹಾಯಹೊಂದಲಿಲ್ಲ. ಇಲ್ಲಿಯ ಇಂಗ್ಲಿಷರಲ್ಲಿ ವೈರವಿದ್ದಿಲ್ಲವೆಂಬಂತಿದ್ದಿಲ್ಲ. ವಾರನ್ ಹೇಸ್ಟಿಂಗ್ಸನ ಜನ್ಮವು ಕೌನ್ಸಿಲ್ಲದೊಳಗಿನ ಜನರೊಡನೆ ಬಡಿದಾಡುತ್ತಲೇ ಹೋಯಿತು; ಆದರೆ ಅವನು ತನ್ನ ಪ್ರತಿಸ್ಪರ್ಧಿಗಳನ್ನು ಮುರಿಯುವದಕ್ಕಾಗಿ ಏತದ್ದೇಶೀಯರ ಸೈನ್ಯದ ಸಹಾಯ ತೆಗೆದುಕೊಳ್ಳಲಿಲ್ಲ. ಅದೇ ಮಾತು ಫ್ರೆಂಚರದು. ಡೂಪ್ಲೆ ಮೊದಲಾದ ಫ್ರೆಂಚ ಮುತ್ಸದ್ದಿಗಳು ತಮ್ಮ ತಮ್ಮಲ್ಲಿ ಅನೇಕ ಸಾರೆ ವ್ಯಾಜ್ಯಮಾಡಿದರು; ಆದರೆ ಅವರಲ್ಲಾರೂ ಏತದ್ದೇಶೀಯರನ್ನು ಸಹಾಯಕ್ಕೆ ತೆಗೆದುಕೊಂಡಂತೆ ಕಂಡು ಬರುವದಿಲ್ಲ. ಇಂಗ್ಲಿಷ-ಫ್ರೆಂಚರು ಪರಸ್ಪರರ ವಿರುದ್ಧ ಕಾಳಗ ಮಾಡಿದಾಗ ಮಾತ್ರ ಹಿಂದುಗಳ ಸಹಾಯ ತೆಗೆದುಕೊಂಡಿದ್ದರು; ಆದರೆ ಇಂಗ್ಲಿಷರು ಇಂಗ್ಲಿಷರ ವಿರುದ್ಧ ಅಥವಾ ಫ್ರೆಂಚರು ಫ್ರೆಂಚರ ವಿರುದ್ಧ ಎಂದೂ ನಮ್ಮಗಳ ಸಹಾಯ ತೆಗೆದುಕೊಳ್ಳ

ಲಿಲ್ಲ. ಇಷ್ಟಲ್ಲದೆ ಏತದ್ದೇಶೀಯರಲ್ಲಿ ಯಾವ ಯುರೋಪೀಯರು ನೌಕರಿಗೆ ನಿಂತಿದ್ದರೋ, ಬಹುತರವಾಗಿ ಅವರೆಲ್ಲರೂ ಸ್ವಕೀಯರೊಡನೆ ಕಾದುವದಿಲ್ಲವೆಂಬ ಕಟ್ಟಳೆಯಿಂದಲೇ ಅಲ್ಲಿ ನೌಕರಿಗೆ ನಿಲ್ಲುತ್ತಿದ್ದರು. ಹೋಳಕರನಲ್ಲಿದ್ದ ಇಂಗ್ಲಿಷರು ಸ್ವಕೀಯರ ವಿರುದ್ಧ ಯುದ್ಧಮಾಡಲಿಲ್ಲವೆಂದು ಅವನು ಅವರನ್ನು ತೋಫಿನ ಬಾಯಿಗೆ ಕೊಟ್ಟನೆಂದು ಅನ್ನುತ್ತಾರೆ. ಬಾಜೀರಾಯನ ಆಶ್ರಯದಲ್ಲಿ ಕ್ಯಾಪ್ಟನ್ ಫೋರ್ಡ ನೆಂಬ ಸಾಹೇಬನಿದ್ದನು; ಆದರೆ 1817ರಲ್ಲಿ ಇಂಗ್ಲಿಷರೊಡನೆ ಯುದ್ಧವು ಪ್ರಾರಂಭವಾದ ಕೂಡಲೆ ತಾನು ಇಂಗ್ಲಿಷರ ವಿರುದ್ಧವಾಗಿ ಯುದ್ಧಮಾಡುವದಿಲ್ಲವೆಂದು ಆತನು ಹೇಳಿದನು. ಈ ಗೌರಜನರು ದೇಶಪ್ರೇಮಿಗಳೋ ಕೃತಘ್ನರೋ ಎಂಬುದನ್ನು ವಾಚಕರೇ ವಿಚಾರಿಸತಕ್ಕದ್ದು. ಅವರನ್ನು ಕೇವಲ ಕೃತಘ್ನರೆಂದೆನ್ನಬರುವಂತಿಲ್ಲ; ಯಾಕಂದರೆ, ಅವರು ದೇಶೀಯ ರಾಜರಲ್ಲಿ ನೌಕರಿಗೆ ನಿಲ್ಲುವಾಗಲೇ ತಮ್ಮ ಜ್ಞಾತಿಗಳ ವಿರುದ್ಧ ತಾವು ಶಸ್ತ್ರವೆತ್ತಲಾರೆವೆಂದು ಕರಾರುಮಾಡಿಕೊಳ್ಳುತ್ತಿದ್ದರು. ಸ್ವಕೀಯರೊಡನೆ ಅವರು ಯುದ್ಧ ಮಾಡದಿದ್ದರೂ, ಕವಾಯತಿಯ ಸೈನ್ಯಸಿದ್ಧಪಡಿಸಲಿಕ್ಕೆ ಅವರಿಂದ ಉಪಯೋಗವಾಗಬಹುದೆಂಬ ವಿಚಾರದಿಂದಲೇ ಏತದ್ದೇಶೀಯರು ಅವರನ್ನು ನೌಕರಿಗೆ ಇಟ್ಟುಕೊಳ್ಳುತ್ತಿರಬಹುದು. ಇಂಗ್ಲಿಷರೂ ಫ್ರೇಂಚರೂ ಹಿಂದುಸ್ತಾನದಲ್ಲಿ ಪರಸ್ಪರರೊಡನೆ ಬಡಿದಾಡಿದರಲ್ಲದೆ, ಇಂಗ್ಲಿಷರು ಇಂಗ್ಲಿಷರೊಡನೆಯೂ ಫ್ರೇಂಚರು ಫ್ರೇಂಚರೊಡನೆಯೂ ಕಾದಲಿಲ್ಲ. ಇದರ ಮೇಲಿಂದ ನೋಡಲಾಗಿ ಅವರಲ್ಲಿಯ ಪರಸ್ಪರ-ಇಮಾನ-ವೃತ್ತಿಯು ಧರ್ಮನಿಷ್ಠವಿರದೆ, ಸ್ವದೇಶಭಕ್ತಿನಿಷ್ಠವಿದ್ದಿತೆಂದು ವ್ಯಕ್ತವಾಗುತ್ತದೆ. ಕೇವಲ ಕ್ರಿಸ್ತೀಧರ್ಮಕ್ಕಾಗಿಯೇ ಅವರಿಗೆ ಆತ್ಮೀಯಭಾವನೆಯು ಹುಟ್ಟುತ್ತಿದ್ದಿಲ್ಲ; ಆದರೆ ತಾವು ಒಂದು ರಾಷ್ಟ್ರದ-ಒಂದು ದೇಶದ ಜನರೆಂಬ ಭಾವನೆಯಿಂದಲೇ ಅವರಿಗೆ ತಮ್ಮವರೆಂದು ಅನಿಸುತ್ತಿತ್ತು. ತಮ್ಮ ತಮ್ಮೊಳಗೆ ಬಡಿದಾಡಿ ಮೂರನೆಯವರಿಗೆ ಲಾಭಮಾಡಿಕೊಡಬಾರದೆಂಬ ಬುದ್ಧಿ ಪರದೇಶದಲ್ಲಿ ವಾಸವಾಗಿದ್ದ ಮೂಲಕ ಅವರಲ್ಲಿ ವಿಶೇಷಜಾಗ್ರತವಿತ್ತೆಂದು ತೋರುವದು.

ಹಿಂದುಗಳು ವ್ಯಾಪಾರಕ್ಕಾಗಿ ಹೀಗೆಯೇ ಪರದೇಶಕ್ಕೆ ಹೋಗಿದ್ದರೆ ಅವರಾದರೂ ಪರಸ್ಪರರ ವಿರುದ್ಧವಾಗಿ ಬಡಿದಾಡುತ್ತಿರಲಿಲ್ಲ; ಆದರೆ ಸ್ವದೇಶದಲ್ಲಿರುವಾಗ ಅವರ ಆ ಬುದ್ಧಿಯು ಜಾಗೃತವಾಗಿರಲಿಲ್ಲವೆಂಬುದು ಮಾತ್ರ ನಿಜವು. ಯಾಕೆಂದರೆ, ತಮ್ಮ ತಮ್ಮೊಳಗೆ ಕಾದಾಡಿ, ತಮ್ಮ ಒಳಜಗಳಗಳಲ್ಲಿ ಪರಕೀಯರ ನೆರವು ತೆಗೆದುಕೊಂಡದ್ದರಿಂದಲೇ ಹಿಂದುಗಳ ಸ್ವಾತಂತ್ರ್ಯವು ನಷ್ಟವಾಯಿತು. ಈ ವಿಷಯದಲ್ಲಿ ಬೇಕಾಗುವ ದೂರದರ್ಶಿತ್ವವು ಯಾವ ಹಿಂದು ಮುತ್ಸದ್ದಿಯಲ್ಲಿಯೂ ಕಂಡು ಬರಲಿಲ್ಲ. ಹಿರಿಯ ಬಾಜೀರಾಯನೂ ನಾನಾಸಾಹೇಬನೂ ಆಂಗ್ರೆಯ ವಿರುದ್ಧವಾಗಿ ಇಂಗ್ಲಿಷರ ಸಹಾಯ ತೆಗೆದುಕೊಂಡರು; ರಘುನಾಥರಾಯನು ನಾನಾಫಡಣವೀಸನ ವಿರುದ್ಧ ಇಂಗ್ಲಿಷರ ನೆರವು ಪಡೆದನು; ನಾನಾನು ಹೋಳಕರನ ವಿರುದ್ಧ ಅವರ ಸಹಾಯ ಪಡೆದನು; ಬಾಜೀರಾಯನು ಸಿಂಧೆಯ ವಿರುದ್ಧ ಪಡೆ

ದನು; ನಾಗಪುರದ ಭೋಸಲೆಯು ಪೇಶವೆಯರ ವಿರುದ್ಧ ಸಹಾಯ ಹೊಂದಿದನು; ಮುಸಲ್ಮಾನರು ತಮ್ಮ ತಮ್ಮೊಳಗಿನ ವೈರಕ್ಕಾಗಿಯೂ ಪೇಶವೆಯರ ವಿರುದ್ಧವಾಗಿಯೂ ಇಂಗ್ಲಿಷರ ಸಹಾಯ ಹೊಂದಿದರು. ದಿಲ್ಲಿ, ಬಂಗಾಲ, ಔಂಧ, ಹೈದ್ರಾಬಾದ ಮತ್ತು ಕರ್ನಾಟಕ ಮೊದಲಾದ ಕಡೆಯ ಎಲ್ಲ ರಾಜಕಾರಣಗಳ ತಾಕಲಾಟಗಳು ಇಂಗ್ಲಿಷರ ಹಾಗು ಫ್ರೆಂಚರ ಸಹಾಯ ಹೊಂದಿಯೇ ನಡೆದವು. ಯುದ್ಧದಲ್ಲಿ ಇಂಗ್ಲಿಷರಿಂದ ಸಹಾಯ ಹೊಂದದೇ ಇದ್ದವರೆಂದರೆ ಶಿಂದೆ, ಹೊಳಕರ, ಆಂಗ್ರೆ ಮತ್ತು ವಿಶೇಷವಾಗಿ ಹೈದರ, ಟೀಪೂ ಇವರೇ; ಆದರೆ ಟೀಪುವು ಇಂಗ್ಲಿಷರ ಸಹಾಯ ಹೊಂದದಿದ್ದರೂ ಫ್ರೆಂಚರ ಸಹಾಯ ಹೊಂದಿದನು. ಅಂತೂ ಪರಕೀಯರ ಸಹಾಯ ಪಡೆದನು! ಇನ್ನು ಇವೆಲ್ಲ ಸಂಗತಿಗಳನ್ನು ಪರ್ಯಾಲೋಚಿಸಿದರೆ ಈ ಎಲ್ಲರಿಗೆ ಅದೂರದರ್ಶಿ ಮುತ್ಸದ್ದಿಗಳೆನ್ನುವದಕ್ಕಿಂತ, ಆಗಿನ ಪರಿಸ್ಥಿತಿಯ ಮೂಲಕ ಯೋಗ್ಯವಾದದ್ದನ್ನೇ ಅವರು ಮಾಡಿದರೆಂದು ಏಕೆ ಅನ್ನಬಾರದೆಂಬದು ಒಂದು ಪ್ರಶ್ನೆಯೇ ಇದೆ.

ರಾಜಕಾರಣದಲ್ಲಿ ಎಲ್ಲರೂ ಎಲ್ಲರ ಸಹಾಯ ಹೊಂದಬೇಕಾಗುವದು. ಇಂಗ್ಲಿಷರಿಗಾದರೂ ಟೀಪುವಿನ ವಿರುದ್ಧವಾಗಿ ಪೇಶವೆಯರ ಹಾಗು ನಿಜಾಮನ ಸಹಾಯ ತೆಗೆದುಕೊಳ್ಳದೆ ಎಲ್ಲಿ ನಡೆಯಿತು? ಆದರೆ ಇವರಲ್ಲಿ ದೋಷವೇನಂದರೆ, ಕೆಲವರಿಗೆ ಸಹಾಯ ತೆಗೆದುಕೊಳ್ಳುವ ಪ್ರಸಂಗವು ಮುಗಿದ ಕೂಡಲೆ ಆ ಸಹಾಯಕರನ್ನು ದೂರವಿರಿಸುವದಾಗಲಿಲ್ಲ. ಸ್ವಂತದ ಕಾಲಲ್ಲಿ ಎಷ್ಟಾದರೂ ಸಾಮರ್ಥ್ಯವಿರುವ ವರೆಗೆ ಬೇರೆಯವರ ನೆರವು ತೆಗೆದುಕೊಳ್ಳುವದರಿಂದ ಅಷ್ಟೇನೂ ಬಾಧಕವಾಗುವದಿಲ್ಲ; ಆದರೆ ಯಾರ ಎಲ್ಲ ಭಾರವೂ ಸಹಾಯಕರ ಮೇಲೆಯೇ ಇರುವುದೋ ಅವರದೆಲ್ಲವನ್ನೂ ಆ ಸಹಾಯಕರೇ ನುಂಗಿ ಕುಳಿತುಕೊಂಡರೆ ಆಶ್ಚರ್ಯವಿಲ್ಲ. ಆಂಗ್ರೆಯ ಪ್ರಕರಣದಲ್ಲಿ ಮರಾಟರು ಇಂಗ್ಲಿಷರ ಸಹಾಯ ಹೊಂದಿದರು. ಟೀಪುವಿನ ಪ್ರಕರಣದಲ್ಲಿ ಇಂಗ್ಲಿಷರು ಮರಾಟರ ಸಹಾಯ ತೆಗೆದುಕೊಂಡರು. ಆದರೂ ಕೂಡ ಉಭಯತರ ಕಾರ್ಯಭಾಗವಾದ ಕೂಡಲೆ ಉಭಯತರೂ ಮೊದಲಿನಂತೆ ಸ್ವತಂತ್ರರಾಗಿಯೇ ಉಳಿದರು. ಈ ನೆರವಿನಿಂದ ಅಪ್ರತ್ಯಕ್ಷ ಪರಿಣಾಮವೇನೇ ಆಗಲಿ; ಆದರೆ ಪ್ರತ್ಯಕ್ಷವಾಗಿ ಯಾರ ಸ್ವಾತಂತ್ರ್ಯನಾಶವೂ ಆಗಲಿಲ್ಲ; ಆದರೆ ಅದಕ್ಕೆ ವಿರುದ್ಧವಾದ ಉದಾಹರಣೆಗಳೆಂದರೆ, ರಾಘೋಬ, ಎರಡನೆಯ ಬಾಜೀರಾಯ, ನಿಜಾಮ, ಕರ್ನಾಟಕದ ನವಾಬರು ಇವರ ಪ್ರಕರಣಗಳಾಗಿವೆ. ಇವರು ಪ್ರತಿಯೊಬ್ಬರೂ ಇಂಗ್ಲಿಷರ ಸಹಾಯಹೊಂದುವದಕ್ಕೆ ಹೋದಾಗ ಆ ಸಹಾಯಕರನ್ನು ದೂರಮಾಡಲಿಕ್ಕೆ ಬಾರದಷ್ಟು ತಮ್ಮ ಕೈಕಾಲುಗಳನ್ನು ಬಂಧಿಸಿಕೊಂಡರು. 'ಕುದುರೆಯು ತನ್ನ ಶತ್ರುವಿನ ನಾಶ ಮಾಡುವದಕ್ಕೆ ಮನುಷ್ಯನನ್ನು ತನ್ನ ಮೇಲೆ ಕುಳ್ಳಿರಿಸಿಕೊಂಡಿತು; ಆದರೆ ಶತ್ರುವು ನಾಶಹೊಂದಿದ ಮೇಲೆ ಆ ಮನುಷ್ಯನನ್ನು ತನ್ನ ಬೆನ್ನಮೇಲಿಂದ ಕೆಳಗೆ ಒಗೆಯಲಿಕ್ಕೆ ಬರಲಿಲ್ಲ' ಎಂಬೀ ಇಸಾಪನೀತಿಯೊಳಗಿನ ಕಥೆಯ ರಹಸ್ಯವು ಹಿಂದು

ಸ್ಥಾನದೊಳಗಿನ ಹಿಂದು-ಮುಸಲ್ಮಾನ ರಾಜಮಹಾರಾಜರ ಹಾಗು ಇಂಗ್ಲಿಷರ ಸಂಬಂಧದಲ್ಲಿ ಮೇಲಿಂದ ಮೇಲೆ ಅನುಭವಕ್ಕೆ ಬರುತ್ತಿದೆ.

— ನಾಶದ ನಿಜವಾದ ಕಾರಣ. —

ಇಂಗ್ಲಿಷರಿಗೆ ತಮ್ಮ ರಾಜ್ಯದಲ್ಲಿ ವ್ಯಾಪಾರ ಮಾಡಲು ಒಪ್ಪಿಗೆ ಕೊಟ್ಟದ್ದರಿಂದ ಇಲ್ಲವೆ ಅವರ ಸಹಾಯ ಹೊಂದಿದ್ದರಿಂದ ಮರಾಟರ ರಾಜ್ಯವು ನಾಶವಾಯಿತೆಂದು ಹೇಳಲಿಕ್ಕೆ ಬರುವದಿಲ್ಲ. ಇವೆರಡು ಸಂಗತಿಗಳಿಂದಲೂ ರಾಜ್ಯವುಳಿಯುವ ಸಂಭವವಿತ್ತು; ಆದರೆ ನಮ್ಮ ಮತದಿಂದ ಮರಾಟರ ರಾಜ್ಯದ ನಾಶಕ್ಕೆ ಎರಡೇ ಮುಖ್ಯವಾದ ಕಾರಣಗಳು ಕಂಡುಬರುವವು. ಮರಾಟರಲ್ಲಿಯ ಸವತಿಸುಭೆ ನಿರ್ಮಾಣ ಮಾಡುವದರಲ್ಲಿಯ ಪ್ರೇಮ ಮತ್ತು ಐಕ್ಯದ ಸುವ್ಯವಸ್ಥೆ ಹಾಗು ರಾಷ್ಟ್ರಾಭಿಮಾನ ಮುಂತಾದವುಗಳ ಅಭಾವವು ಮೊದಲನೇ ಕಾರಣವು; ಮತ್ತು ಎರಡನೇ ಕಾರಣವೆಂದರೆ, ಕವಾಯತೀ ಸೈನ್ಯ, ಸುಧಾರಿಸಿದ ಯುದ್ಧಸಾಮಗ್ರಿ ಇವುಗಳ ಅಭಾವ. ಮೊದಲನೇ ಕಾರಣದ ಬಗ್ಗೆ ಹೇಳುವುದಾದರೆ, ರಘುನಾಥರಾಯ ಅಥವಾ ಗಾಯಕವಾಡ ಇವರು ತಮ್ಮ ಗೃಹಕಲಹದಲ್ಲಿ ಇಂಗ್ಲಿಷರ ನೆರವು ತೆಗೆದುಕೊಂಡ ಮೇಲೂ ಸಹ ಮರಾಟರು ಬುದ್ಧಿವಂತರಾಗಿದ್ದರೆ ಹಾಗು ಒಕ್ಕಟ್ಟಾಗಿದ್ದರೆ ಇಂಗ್ಲಿಷರದೇನೂ ನಡೆಯುತ್ತಿದ್ದಿಲ್ಲ; ಆದರೆ ಒಮ್ಮನದಿಂದ ಮತ್ತು ಒಕ್ಕಟ್ಟಿನಿಂದ ಕೆಲಸ ಮಾಡುವ ರೂಢಿಯೇ ಮರಾಟರಿಗಿದ್ದಿಲ್ಲವೆಂದಂದರೂ ನಡೆಯುಬಹುದು. ಇಂಗ್ಲಿಷರೊಡನೆ ಯುದ್ಧ ಮಾಡದಂತಹ ಒಬ್ಬ ಮರಾಟ ಸರದಾರನೂ ಇರಲಿಲ್ಲ; ಆದರೆ ಆ ಎಲ್ಲ ಸರದಾರರು ಕೂಡಿ, ಹೆಚ್ಚೇಕೆ ಇಬ್ಬಿಬ್ಬರು, ಮೂರುಮೂರು ಜನರು ಕೂಡಿ ಕೂಡ ಇಂಗ್ಲಿಷರೊಡನೆ ಯುದ್ಧ ಮಾಡಲಿಲ್ಲ. ಒಂದೇ ಕಾಲಕ್ಕೆ ಯುದ್ಧ ಮಾಡಲಿಲ್ಲ. ಇದೇ ಕಾರಣದಿಂದಲೇ ಇಂಗ್ಲಿಷರಿಗೆ ಎಲ್ಲಕ್ಕೂ ಹೆಚ್ಚು ಲಾಭವು ದೊರೆಯಿತು. ರಾಘೋಬನ ಕಲಹದ ಕಾಲಕ್ಕೆ ಪೇಶವೆ, ಶಿಂದೆ, ಹೋಳಕರ ಇವರೆಲ್ಲ ಒಕ್ಕಟ್ಟಿನಿಂದ ನಡೆದುದರಿಂದ ಇಂಗ್ಲಿಷರ ಆಟವೇನೂ ನಡೆಯಲಿಲ್ಲ. ಅವರು ವಡಗಾವದಲ್ಲಿ ಮರಾಟರಿಗೆ ಶರಣುಹೋಗಿ, ಅಪಮಾನಾಸ್ಪದ ಒಪ್ಪಂದವೆಂದು ಅದನ್ನು ಮುರಿದು ಅವರು ಮತ್ತೆ ಯುದ್ಧವನ್ನು ಆರಂಭಿಸಿದರೂ, ಕೊನೆಗೂ ಆಗ ಅವರು ಪರಾಭವವನ್ನೇ ಹೊಂದಿದರು. 'ಇಂಗ್ಲಿಷರಿಗೆ ಶರಣು ಬಂದವರನ್ನು ಬೆನ್ನಿಗೆ ಹಾಕಿಕೊಂಡು ಅವರಿಗೆ ಅಭಯವನ್ನು ಕೊಡುವದು ಇಂಗ್ಲಿಷರ ಶೀಲವು' ಎಂಬ ಅಭಿಮಾನದ ಭಾಷೆಯು ಮೊದಲು ಅವರ ಮುಖದಿಂದ ಹೊರಡುತ್ತಿತ್ತು; ಆದರೆ ಅವರು ಆ ಮಾತನ್ನು ಮರೆತುಬಿಟ್ಟು, ರಾಘೋಬನನ್ನು ಕೊನೆಗೆ ನಾನಾಫಡಣವೀಸನ ವಶಕ್ಕೆ ಕೊಡಲೇಬೇಕಾಯಿತು. ಆದರಂತೆ ಮರಾಟರಿಂದ ಯಾವ ನಿಜಾಮನ ರಕ್ಷಣೆ ಮಾಡುವ ವೀಳ್ಯವನ್ನು ಇಂಗ್ಲಿಷರು ತೆಗೆದುಕೊಂಡಿದ್ದರೋ, ಯಾವ ನಿಜಾಮನ ಸಹಾಯದಿಂದ ಟೀಪುವಿನನ್ನು ಪರಾಭವಗೊಳಿಸಿದ್ದರೋ, ಅದೇ ನಿಜಾಮನ ಮೇಲೆ ಮರಾಟರು ಗರ್ಡಕರಲ್ಲಿ ದಾಳಿ ಮಾಡಿದಾಗ ಆ ಇಂಗ್ಲಿಷರು ಏನೂ ಚಲನವಲನ ಮಾಡದೆ ಸುಮ್ಮನೆ ಕುಳಿತುಕೊಳ್ಳಬೇಕಾಯಿತು!

ಯಾಕಂದರೆ ಆಗ ಎಲ್ಲ ಮರಾಟರೂ ಒಕ್ಕಟ್ಟಾಗಿದ್ದರು. ಮುಂದೆ ಬಾಜೀರಾಯನನ್ನು ಪಟ್ಟಕ್ಕೆ ಕುಳ್ಳಿರಿಸುವ ಪ್ರಶ್ನೆಯು ಉಪಸ್ಥಿತವಾದಾಗ ಶಿಂದೆ-ಹೋಳಕರರು ಏಕವಿಚಾರದಿಂದ ನಡೆದಿದ್ದರೆ, ಬಾಜೀರಾಯನು ಇಂಗ್ಲಿಷರ ಕಡೆಗೆ ಹೋಗುವ ಧೈರ್ಯತಾಳುತ್ತಿದ್ದಿಲ್ಲ. ಶಿಂದೆ-ಹೋಳಕರರು ಹೇಳಿದವನನ್ನೇ ಅವರು ಪಟ್ಟಗಟ್ಟುತ್ತಿದ್ದರು. ನಾನಾ ಫಡಣವೀಸನಲ್ಲಿ ಜಾಣತನವಿದ್ದರೂ ಶೂರತನವಿದ್ದಿಲ್ಲ; ಮತ್ತು ಬಾಜೀರಾಯನನ್ನು ಪದಚ್ಯುತಗೊಳಿಸಿದ ಮೇಲೆ ಅವನು ಇಂಗ್ಲಿಷರ ಕಡೆಗೆ ಹೋಗಿದ್ದರೂ ಕೂಡ ವಸಯಿಯ ಒಡಂಬಡಿಕೆಯಾಗುತ್ತಿದ್ದಿಲ್ಲ. ರಘುನಾಥರಾಯನನ್ನು ಬೆನ್ನಿಗೆ ಹಾಕಿಕೊಂಡದ್ದರ ಪರಿಣಾಮವು ಇಂಗ್ಲಿಷರಿಗೆ ಚೆನ್ನಾಗಿ ಗೊತ್ತಿದ್ದುದರಿಂದ, ಅವರು ಬಾಜೀರಾಯನನ್ನು ಒಮ್ಮೆಲೆ ತಮ್ಮ ಬೆನ್ನಿಗೆ ಹಾಕಿಕೊಳ್ಳುತ್ತಿದ್ದಿಲ್ಲ; ಒಂದುವೇಳೆ ಹಾಕಿಕೊಂಡಿದ್ದರೂ, ಶಿಂದೆ-ಹೋಳಕರರು ಐಕ್ಯತೆಯಿಂದ ಕಾದಿದ್ದರೆ ಅವರ ಆಟವೇನೂ ಸಾಗುತ್ತಿದ್ದಿಲ್ಲ.

ಇನ್ನು ವಸಯಿಯ ಒಡಂಬಡಿಕೆಯು ಸಮ್ಮತವಾಗದ್ದರಿಂದಲೂ ತಮ್ಮ ಹಸ್ತಕನಾದ ಪೇಶ್ವೆಯನ್ನು ಇಂಗ್ಲಿಷರು ಸ್ವಂತಃ ಸ್ವಾಧೀನಪಡಿಸಿಕೊಂಡರೆಂಬ ಸಿಟ್ಟಿಗಾಗಿಯೂ ಶಿಂದೆ-ಹೋಳಕರರಿಬ್ಬರೂ ಇಂಗ್ಲಿಷರೊಡನೆ ಕಾದಿದರು. ಅವರ ಬೇರೆ ಜಗಳವೇನೇ ಇದ್ದರೂ, ವಸಯಿಯ ಒಪ್ಪಂದವನ್ನು ರದ್ದುಗೊಳಿಸಿ ಪೇಶ್ವೆಯನ್ನು ಮರಾಟರ ಸ್ವಾಧೀನಪಡಿಸಿಕೊಳ್ಳುವಷ್ಟರಮಟ್ಟಿಗಾದರೂ ಅವರಲ್ಲಿ ಒಮ್ಮತವಿದ್ದಿತು. ಅದರಿಂದ ಅವರಿಬ್ಬರೂ ಕೂಡಿ ಇಂಗ್ಲಿಷರೊಡನೆ ಕಾದಿದ್ದರೆ ವಸಯಿಯ ಒಪ್ಪಂದವು ರದ್ದಾಗುತ್ತಿತ್ತು; ಆದರೆ ಮೊದಲು ಶಿಂದೆಯು ಯುದ್ಧಮಾಡಿ ಸಂಪೂರ್ಣ ಪರಾಭೂತನಾದ ಮೇಲೆಯೇ ಹೋಳಕರನಿಗೆ ಯುದ್ಧಮಾಡುವ ಉತ್ಸಾಹವು ಹುಟ್ಟಿತು! ಇವರಿಬ್ಬರೊಡನೆ ಪ್ರತ್ ಪ್ರತ್ಯೇಕವಾಗಿ ಯುದ್ಧಮಾಡಲು ದೊರೆತದ್ದರಿಂದ ಇಂಗ್ಲಿಷರಿಗೆ ಸುಲಭವೇ ಆಯಿತು. ಶಿಂದೆಯ ಪರಾಭವವು ಹೇಗಾಗುವದೆಂಬದರ ಕೌತುಕವನ್ನು ನೋಡುತ್ತ ಹೋಳಕರನು ಸುಮ್ಮನೆ ಕುಳಿತಿದ್ದನು. ಶಿಂದೆಯು ಪರಾಭವವಾದದ್ದನ್ನು ನೋಡಿಯಾದರೂ ಅವನು ಬೋಧಪಡೆದು ಸುಮ್ಮನೆ ಕುಳಿತುಕೊಂಡನೋ? ಅದೂ ಇಲ್ಲ. ತಾನೊಬ್ಬನೇ ಯುದ್ಧಮಾಡಿ ನಿಷ್ಕಾರಣವಾಗಿ ತನ್ನ ನಾಶ ಮಾತ್ರ ಮಾಡಿಕೊಂಡನು. ಇದೇ ಸಂಧಿಯು ೧೮೧೭-೧೮ರಲ್ಲಿ ಮತ್ತೆ ಬಂದಿತ್ತು. ಇಂಗ್ಲಿಷರು ತಮ್ಮ ಮೇಲೆ ಇಷ್ಟು ಉಪಕಾರ ಮಾಡಿದರೂ, ಎಲ್ಲರೂ ತನ್ನ ಪಕ್ಷವನ್ನು ಬಿಟ್ಟರೂ, ಇಂಗ್ಲಿಷರು ತನ್ನನ್ನು ಬೆನ್ನಿಗೆ ಹಾಕಿಕೊಂಡು ರಾಜ್ಯಾಧಿಕಾರಿಯನ್ನು ಮಾಡಿದರು; ತಮ್ಮ ಅಪ್ಪನಿಗೆ ದೊರಕಿಸಿ ಕೊಡಲಾಗದಿದ್ದರೂ ತನ್ನನ್ನು ಪೇಶ್ವೇಪಟ್ಟಗಟ್ಟಿದರು; ಅದಲ್ಲ, ಇದನ್ನಾದರೂ ಮಾಡಿ ಅವರು ತಮ್ಮ ವರ್ಚಸ್ಸನ್ನು ಕಾಯ್ದುಕೊಂಡರು, ಮೊದಲಾದ ಸಂಗತಿಗಳನ್ನು ಲಕ್ಷ್ಯದಲ್ಲಿಟ್ಟು ಬಾಜೀರಾಯನು ಇಂಗ್ಲಿಷರ ವಿರುದ್ಧ ಹೋರಾಡಲಿಕ್ಕೆ ಮನಸ್ಸು ಮಾಡತಕ್ಕದ್ದಿದ್ದಿಲ್ಲ; ಆದರೆ ವಸಯಿ ಒಪ್ಪಂದದ ಕಟ್ಟಳೆಗಳ ನಾಚಿಕೆ ಹಾಗು ಇಂಗ್ಲಿಷರ ಪೀಡೆ ಇವುಗಳ ಮೂಲಕ ಬಾಜೀರಾಯನು ಇಂಗ್ಲಿಷರೊಡನೆ ಯುದ್ಧಕ್ಕೆ

ಸಿದ್ಧನಾದನು. ಆಗ ಶಿಂದೆ ಹೋಳಕರರ ದೃಷ್ಟಿಯಿಂದ ಮತ್ತೆ ೧೮೦೩ನೆಯ ಇಸವಿಯ ಸ್ಥಿತಿಯೇ ಪ್ರಾಪ್ತವಾಯಿತು. ಆಗಲಾದರೂ ಅವರು ಒಕ್ಕಟ್ಟಾಗಿ ಬಂದು ಸಹಾಯ ಮಾಡಬೇಕಾಗಿತ್ತು; ಆದರೆ ಅವರು ಅದನ್ನೂ ಮಾಡಲಿಲ್ಲ; ಆದರೆ ಬಾಜೀರಾಯನು ಶರಣು ಬಂದ ಮೇಲೆ ಹೋಳಕರನೊಬ್ಬನೇ ಕೈಕಾಲು ಅಲ್ಲಾಡಿಸಿ ಅವುಗಳನ್ನು ಮತ್ತಿಷ್ಟು ಬಿಗಿ ಮಾತ್ರ ಮಾಡಿಸಿಕೊಂಡನು. ಇಂಗ್ಲಿಷರ ವರ್ಚಸ್ಸು ಮಹಾರಾಷ್ಟ್ರದೊಳಗಿಂದ ಕಡಿಮೆಯಾಗಬೇಕೆಂದು ಶಿಂದೆ, ಹೋಳಕರ, ಭೋಸಲೆಯವರ ಮನದಿಚ್ಛೆಯಿದ್ದರೂ ಅವರಲ್ಲಿ ಹೆಚ್ಚಾಗಿ ತೊಡಕಿದ್ದಿತು. ಇಂಗ್ಲಿಷರೊಡನೆ ತಮ್ಮ ಹೊರತು ಇತರ ಮರಾಠಾ ಸರದಾರರ ವರ್ಚಸ್ಸು ಕಡಿಮೆಯಾದರೆ ವಿಹಿತವು. ಇಂಗ್ಲಿಷರಿಂದಲೇ ಅದು ಪರಭಾರೆ ಆಗಿ, ಇಂಗ್ಲಿಷರು ನಡುವೇ ಪ್ರಬಲವಾದರೂ ನಡೆದೀತು—ಎಂದು ಪ್ರತಿಯೊಬ್ಬರ ಮನಸ್ಸಿನಲ್ಲೂ ಗುಪ್ತಭಾವನೆ ಇದ್ದುದರಿಂದ, ಯಾರದೂ ಏನೂ ಸಾಧಿಸಲಿಲ್ಲ. ಇತರರ ನಾಶವಂತೂ ಆಗೇ ಆಯಿತು; ಕೊನೆಗೆ ತಮ್ಮ ಸ್ವಂತದ ನಾಶವೂ ಆಗದಿರಲಿಲ್ಲ.

ಮರಾಟರೊಳಗಿನ ದೂರದರ್ಶೀ ಮುತ್ಸದ್ದಿಗಳಿಗೆ ಇಂಗ್ಲಿಷರ ಧೋರಣವೂ ಹಿಡಿತಗಳೂ ತಿಳಿಯುತ್ತಿದ್ದಿಲ್ಲನೆಂಬಂತಿದ್ದಿಲ್ಲ; ಆದರೆ ಅವರಿಂದ ಇಂಗ್ಲಿಷರೊಡನೆ ಎದೆಗೊಟ್ಟು ನಿಲ್ಲಲಿಕ್ಕೆ ಮಾತ್ರ ಆಗಲಿಲ್ಲೆಂಬದು ನಿಜ. ಮೊಗಲಪಾತಶಾಹಿಯು ಔರಂಗಜೇಬನ ಮರಣದೊಡನೆಯೇ ಕುಸಿಬಿದ್ದಿತ್ತು; ಮತ್ತು ಸಾಮ್ರಾಜ್ಯ ಸತ್ತೆಯ ಚತುರಂಗದಾಟವನ್ನು ಹಿಂದುಸ್ಥಾನದ ಪ್ರಚಂಡ ಪಟದ ಮೇಲೆ ಒಂದು ನಿಟ್ಟಿಗೆ ಇಂಗ್ಲಿಷರು ಮತ್ತೊಂದು ಕಡೆಗೆ ಮರಾಟರು ಆಡಲಿಕ್ಕೆ ಕುಳಿತಿದ್ದರು. ಇವರಿಬ್ಬರೂ ತಮ್ಮ ತಮ್ಮ ಬಂಟರಿಂದ ತಾವೇ ಇಡೀ ಪಟವನ್ನು ಮೊದಲು ಆಕ್ರಮಿಸಬೇಕೆಂದಿದ್ದರು. ಕೆಲವು ದಿನ ಇಬ್ಬರ ಆಟಗಳೂ ಸಮವಾಗಿ ಸಾಗಿದ್ದವು. ಇಂಗ್ಲಿಷರು ದಕ್ಷಿಣದಲ್ಲಿ ನುಗ್ಗಿದ್ದಕ್ಕಿಂತ ಹೆಚ್ಚಾಗಿ ಮರಾಟರು ಉತ್ತರಾಪಥವನ್ನು ನುಗ್ಗಿದ್ದರು. ಇಂಗ್ಲಿಷರು ಜಾಣತನದಿಂದ ಆಯಕಟ್ಟಿನ ಸ್ಥಳಗಳನ್ನು ಹಿಡಿದದ್ದರಿಂದ ಕೊನೆಯ ಹೊಡೆದಾಟದ ವೇಳೆಯಲ್ಲಿ ಮರಾಟರ ಕಡೆಯ ಪ್ರಬಲ ಬಲವು ನಿರ್ಬಲವಾಗಿ ಪರಾಭೂತವಾಯಿತು! ಇಂಗ್ಲಿಷರು ವ್ಯಾಪಾರವನ್ನು ಬಿಟ್ಟು ರಾಜಕಾರಣದಲ್ಲಿ ಸೇರಿದರೆಂಬದು ಮರಾಟರಿಗೆ ೧೭೬೫ರ ಸುಮಾರಕ್ಕೇ ಗೊತ್ತಾಗಿತ್ತು. ಹಿಂದುರಾಜ-ಮಹಾರಾಜರ ಜಗಳಗಳಲ್ಲಿ ನಡುವೆ ಹೋಗಿ ತಮ್ಮ ಲಾಭಮಾಡಿಕೊಳ್ಳಬೇಕೆಂಬ ಅವರ ಸಾಹಸವಾದರೂ ಮರಾಟರಿಗೆ ಗೊತ್ತಾಗಿತ್ತು; ಆದರೆ ಇಳುಕಲಿನಲ್ಲಿ ತುಂಬಿದ ಬಂಡಿಯು ಮೈಮೇಲೆ ಬಂದರೆ ಹೇಗೆ ಸಾವರಿಸಿ ಹಿಡಿಯಲಿಕ್ಕೆ ಸಾಧ್ಯವಾಗುವದಿಲ್ಲವೋ, ಮರಾಟರಿಗೆ ಇಂಗ್ಲಿಷರ ವಿಷಯದಲ್ಲಿ ಅದರಂತೆಯೆ ಆಯಿತು. ಇಂಗ್ಲಿಷರನ್ನು ಪ್ರಾಮಾಣಿಕರೆಂದು ಯಾರೂ ತಿಳಿಯಲಿಲ್ಲ. ಎಲ್ಲ ಮರಾಟರೂ ತಮ್ಮಮನಸ್ಸಿನಲ್ಲಿ ಅವರನ್ನು ನಂಬಿಗೆಗೇಡಿಗಳೆಂದೇ ತಿಳಿದಿದ್ದರು. ಹೈದರಖಾನ, ಪೇಶವೇ, ನವಾಬ ಈ ಮೂವರ ರಾಜ್ಯಗಳನ್ನೂ ತೆಗೆದುಕೊಳ್ಳುವ ಮಾನಸವು ಇಂಗ್ಲಿಷರದಿರುವದೆಂಬದು ಪುಣೆಯ ದರಬಾರದವರಿಗೆ

ಗೊತ್ತಿತ್ತು. ಹೀಗಿದ್ದರೂ ಮರಾಟರು ಟೀಪುವಿನ ವಿರುದ್ಧವಾಗಿ ಇಂಗ್ಲಿಷರಿಗೆ ಸಹಾಯ ಮಾಡೇ ಮಾಡಿದರಲ್ಲವೆ?

"ಬಲವಂತನು ನಿರ್ಬಲನನ್ನು ಕೆಡಹುವನು." ಎಂಬ ರೀತಿಯಿಂದ ಇಂಗ್ಲಿಷರು ನಡೆದರು. ಅವರು ಈ ದೇಶಕ್ಕೆ ಮೋಕ್ಷಸಾಧನೆಗಾಗಿ ಬಂದವರಾಗಿದ್ದಿಲ್ಲ. ವ್ಯಾಪಾರ ಮಾಡಿ ಸಂಪತ್ತು ದೊರಕಿಸಬೇಕೆಂದೂ, ತದನುಷಂಗವಾಗಿ ರಾಜ್ಯವು ದೊರೆತರೆ ತೆಗೆದುಕೊಳ್ಳಬೇಕೆಂದೂ ಅವರ ಮಾನಸವಿದ್ದಿತು. ರಾಜಸತ್ತೆಯು ಬಲದ ಮೇಲೆ ವ್ಯಾಪಾರಾಭಿವೃದ್ಧಿ ಮಾಡಲಿಕ್ಕೆ ಬರುವದು; ಅಲ್ಲದೆ ಸಂಪಾದಿಸಿದ ರಾಜ್ಯದಿಂದ ತೆರಿಗೆಯೂ ಬರುವದು. ಈ ದೃಷ್ಟಿಯಿಂದ ಅವರಿಗೆ ದೋಷಕೊಡುವದಕ್ಕಿಂತ, ರಾಜ್ಯ ಕಳೆದುಕೊಂಡವರಿಗೇ ದೋಷಕೊಡಲಿಕ್ಕೆಬೇಕು. ಮಹತ್ವಾಕಾಂಕ್ಷಿಗಳು ರಾಜ್ಯ ಸಂಪಾದನೆ ಮಾಡುವ ಹವ್ಯಾಸಕ್ಕೆ ಬಿದ್ದರೆಂದರೆ, ಅವರು ನ್ಯಾಯಾನ್ಯಾಯಗಳ ಸೂಕ್ಷ್ಮ ವಿಚಾರ ಮಾಡುತ್ತ ಕುಳಿತುಕೊಳ್ಳುವದಿಲ್ಲ. ಮರಾಟರಿಗಾದರೂ ಉತ್ತರ ಹಿಂದುಸ್ತಾನದ ರಾಜ್ಯಸಂಪಾದನೆ ಮಾಡುವ ಅಧಿಕಾರವೆಲ್ಲಿತ್ತು? ಅವರು ಮೊಗಲರಿಂದ ತಮ್ಮ ಹಳೆಯ ಸ್ವರಾಜ್ಯವನ್ನು ತಿರುಗಿ ತೆಗೆದುಕೊಳ್ಳುವವರೆಗೆ ಅವರ ನ್ಯಾಯದ ಬಗೆಯು ಒಳಿತಾಗಿತ್ತು; ಆದರೆ ಸಾಮ್ರಾಜ್ಯಸತ್ತೆಯನ್ನು ಸ್ಥಾಪಿಸುವ ಹವ್ಯಾಸಕ್ಕೆ ಬಿದ್ದು, ಉತ್ತರಹಿಂದುಸ್ತಾನದಲ್ಲಿ ಅವರು ಕೋಲಾಹಲವೆಬ್ಬಿಸಿದಾಗ ನ್ಯಾಯವು ಎಲ್ಲಿ ಉಳಿದಿತ್ತು? ಮೊಗಲರಿಂದ ಸನದು ದೊರಕಿಸಿದ್ದರಿಂದ, ರಜಪುತರ ಮೇಲೆ ಶಸ್ತ್ರಎತ್ತುವ ಅಧಿಕಾರವು ಮರಾಟರಿಗೆ ಎಷ್ಟು ನ್ಯಾಯದಿಂದ ದೊರಕಿತೋ, ಅಷ್ಟೇ ಮೊಗಲರ ದಿವಾಣರಿಂದು ಸಾಧಿಸಿದ ತರದಿಂದ ದಕ್ಷಿಣದ ಮರಾಟರ ರಾಜ್ಯಗಳನ್ನು ಗೆಲ್ಲುವ ಮೊಗಲರ ಶಿಲ್ಕು ಕೆಲಸವನ್ನು ಪೂರ್ಣಗೊಳಿಸುವ ಅಧಿಕಾರವು ಇಂಗ್ಲಿಷರಿಗೂ ದೊರೆತಿರುವ ಯುಕ್ತಿವಾದವನ್ನು ಯಾರಾದರೂ ಮಾಡಿದರೆ ಅದಕ್ಕೆ ಉತ್ತರಕೊಡುವದು ಕಠಿಣವಾದೀತು. ಕೇವಲ ಸಾಮರ್ಥ್ಯ, ಮಹತ್ವಾಕಾಂಕ್ಷೆಗಳ ದೃಷ್ಟಿಯಿಂದ ಹೇಳುವದಾದರೆ ಮರಾಟರ ರಾಜ್ಯವನ್ನು ಇಂಗ್ಲಿಷರು ತೆಗೆದುಕೊಂಡ ಬಗ್ಗೆ ಇಂಗ್ಲಿಷರ ಮೇಲೆ ಸಿಟ್ಟಿಗೇಳದೆ, ಕೈಯೊಳಗಿನ ರಾಜ್ಯವನ್ನು ಕಳೆದುಕೊಳ್ಳುವದರಲ್ಲಿ ಮರಾಟರು ತೋರಿಸಿದ ಹೇಡಿತನದ ಬಗ್ಗೆ ಸಿಟ್ಟಿಗೇಳಬಹುದು.

ಇಂಗ್ಲಿಷರು ರಾಜ್ಯಸಂಪಾದನೆ ಮಾಡಬೇಕಾದರೆ ಮರಾಟರಿಗಿಂದ ಹೆಚ್ಚಿಗೆ ತೊಂದರೆಗಳನ್ನು ಅನುಭವಿಸಿದರೆಂಬದು ನಿರ್ವಿವಾದವು. ಇವರು ಆರು ಸಾವಿರ ಮೈಲುಗಳಿಂದ ಬಂದವರು. ಮರಾಟರು ತಮ್ಮ ದೇಶದಲ್ಲಿಯೇ ತಮ್ಮ ಮನೆಯಲ್ಲಿಯೆ ಇದ್ದವರು. ಇಂಗ್ಲಿಷರಿಗೆ ಎಲ್ಲ ಪ್ರಾಂತಗಳು ಪರಕೀಯವಿದ್ದವು. ಪ್ರವಾಸ ಮಾಡಿ, ಗೊತ್ತುವಳಿ ದೊರಕಿಸಿಕೊಂಡು, ನಕಾಶ ತೆಗೆಯದೆ ಪ್ರಾಂತಗಳ ಪರಿಚಯವಾಗುವದು ಅವರಿಗೆ ಅಸಾಧ್ಯವಿತ್ತು. ಮರಾಟರಿಗೆ ಎಲ್ಲ ಪ್ರದೇಶಗಳ ಪರಿಚಯವು ಚನ್ನಾಗಿತ್ತು. ಕಠಿಣವಾದ ದಾರಿಗಳು, ದರಿಕಂದರಗಳು, ಅಡವಿಗಳು ಮೊದಲಾದವುಗಳನ್ನು ಹುಡುಕುವದು ಇಂಗ್ಲಿಷರಿಗೆ ಬಹುಮಟ್ಟಿಗೆ ಅಸಾಧ್ಯವೇ ಆಗಿತ್ತು. ಮರಾಟರು ತಮ್ಮ ರಾಜ್ಯದಲ್ಲಿ

ಇಂಗ್ಲಿಷರು ಹೆಜ್ಜೆಯಿಡದಂತೆ ವ್ಯವಸ್ಥೆ ಮಾಡಿದ್ದರೆ, ಇಂಗ್ಲಿಷರ ಅಧಿಕಾರದ ಬೀಜವು ಇಲ್ಲಿ ನೆಲೆಗೊಳ್ಳುತ್ತಿದ್ದಿಲ್ಲ. ಇಂಥ ಪ್ರಚಂಡವಾದ ವೃಕ್ಷವು ಆಗುತ್ತಿದ್ದಿಲ್ಲ. ಇಂಗ್ಲಿಷರ ಸರಕುಗಳೇ ಬೇಡವೆಂದು ಮರಾಟರು ಮೊದಲಿನಿಂದಲೂ ನಿರ್ಧರ ಮಾಡಿದ್ದರೆ, ಇಲ್ಲವೆ ವ್ಯಾಪಾರದ ಮೇಲೆ ಬಲವಾಗಿ ಸುಂಕ ಹೇರಿದ್ದರೆ, ಅವರು ತಮ್ಮ ಗಂಟುಗದಡಿಗಳನ್ನು ಕಟ್ಟಿಕೊಂಡು ಹೋಗುತ್ತಿದ್ದರು. ಇಂಗ್ಲಿಷ ವ್ಯಾಪಾರಿಗಳು ಬಳಿಯಲ್ಲಿ ಸೈನ್ಯವನ್ನು ಇಟ್ಟುಕೊಳ್ಳತೊಡಗಿದೊಡನೆಯೆ ಮರಾಟರು ಸಾವಧರಾಗಲಿಲ್ಲವೇಕೆ? ಇಂಗ್ಲಿಷರ ಸತ್ತೆಯು ದಿನದಿನಕ್ಕೆ ಬೆಳೆಯತೊಡಗಿದ್ದು ಅವರ ಕಣ್ಣಿಗೆ ಏಕೆ ಕಾಣಲಿಲ್ಲ? ಕಂಡಕೂಡಲೆ ಅವರನ್ನು ಹೊರಗೆ ಹಾಕುವ ಪ್ರಯತ್ನ ಮಾಡಲಿಲ್ಲವೇಕೆ? ಇಂಗ್ಲಿಷರು ತುಬಾಕಿ ತೋಫು ಮೊದಲಾದ ಯುದ್ಧ ಸಾಮುಗ್ರಿಗಳನ್ನು ಸಿದ್ಧಪಡಿಸಿ ಕೂಡಿಸತೊಡಗಿನೊಡನೆಯೆ ಮರಾಟರು ಇಂತಹ ಸಾಮುಗ್ರಿಗಳನ್ನು ಮಾಡುವ ಕಾರ್ಯಾಲಯಗಳನ್ನು ಪ್ರಾರಂಭಿಸಲಿಲ್ಲವೇಕೆ? ಈಗಿನಂತೆ ಶಸ್ತ್ರನಿಯಮನವು ಆಗ ಖಂಡಿತವಾಗಿಯೂ ಇದ್ದಿಲ್ಲ. ಯುರೋಪೀಯ ರಾಷ್ಟ್ರಗಳು ಹಿಂದು ಜನರಿಗೆ ಶಸ್ತ್ರಾಸ್ತ್ರಗಳನ್ನು ಮಾರಲಿಕ್ಕೆ ಒಂದೇ ಕಾಲಿನ ಮೇಲೆ ಸಿದ್ಧವಿದ್ದವು. ಇಂಗ್ಲಿಷರ ಹೊರತು ಇತರ ಅನೇಕ ಯುರೋಪೀಯರು ಮರಾಟರಲ್ಲಿ ನೌಕರಿಗೆ ನಿಂತು, ಅವರ ಸೈನ್ಯಕ್ಕೆ ಕವಾಯತು ಕಲಿಸಿ ಸಿದ್ಧಮಾಡಲಿಕ್ಕೆ ಹಾಗು ತುಬಾಕಿ ತೋಫುಗಳ ಕಾರ್ಯಾಲಯ ನಡೆಯಿಸಲಿಕ್ಕೆ ಸಿದ್ಧರಿದ್ದರು. ಇಂಗ್ಲಿಷರು ಆರು ಸಾವಿರ ಮೈಲಿನ ಮೇಲಿಂದ ಹಿಂದುಸ್ಥಾನಕ್ಕೆ ಬಂದುದರ ಉದಾಹರಣೆಯನ್ನು ನೋಡಿ, ಮರಾಟರು ಎದೆಗಾರಿಕೆ ಮಾಡಿ ಯುರೋಪಕ್ಕೆ ಹೋಗಿ ಹಿಂದುಸ್ತಾನದಲ್ಲಿ ಉಪಲಬ್ಧವಿಲ್ಲದ ವಿದ್ಯೆಯನ್ನು ಕಲಿಯಲಿಕ್ಕೂ ಸ್ನೇಹಿತರನ್ನು ಸಂಪಾದಿಸಲಿಕ್ಕೂ ಇವರಿಗೆ ಬೇಡವೆಂದು ಯಾರು ಹೇಳಿದ್ದರು? ಇಂಗ್ಲಿಷರ ಮನಸ್ಸಿನಲ್ಲಿ ರಾಜ್ಯಲೋಭವು ಎಷ್ಟೇ ಪ್ರಬಲವಿದ್ದರೂ, ಅವರ ಸೈನ್ಯದಲ್ಲಿ ಹಿಂದುಗಳೇ ಸೇರದಿದ್ದರೆ ಅವರು ಏನು ಮಾಡುತ್ತಿದ್ದರು? ಇಂಗ್ಲಿಷರು ಇಂಗ್ಲಿಷರ ವಿರುದ್ಧವಾಗಿ ಯುದ್ಧಮಾಡಲಿಕ್ಕೆ ಒಪ್ಪದಿದ್ದಮೇಲೆ, ಮರಾಟರಾದರೂ ಮರಾಟರ ವಿರುದ್ಧವಾಗಿ ಕಾದಲಿಕ್ಕೆ ಇಂಗ್ಲಿಷರಿಗೆ ಏಕೆ ದೊರೆಯಬೇಕು?

ಇಂಗ್ಲಿಷರ ಸೈನ್ಯದಲ್ಲಿ ನೂರಕ್ಕೆ ಇಪ್ಪತ್ತಕ್ಕಿಂತ ಹೆಚ್ಚು ಇಂಗ್ಲಿಷ ಸೈನಿಕರು ಎಂದೂ ಇದ್ದಿಲ್ಲ; ನೂರಕ್ಕೆ ಎಂಬತ್ತರಂತೆ ಹಿಂದೀಯ ಸೈನಿಕರೇ ಇದ್ದರು. ಇಂಗ್ಲಿಷರಲ್ಲಿ ಪರಸ್ಪರರ ವಿಷಯವಾಗಿ ಯಾವ ಆತ್ಮೀಯಭಾವನೆಯಿದ್ದಿತೋ ಅದರಂತೆ ಹಿಂದೀಯರ ವಿಷಯವಾಗಿ ಹಿಂದೀಯರಲ್ಲಿ, ಕೊನೆಗೆ ಹಿಂದುಗಳ ವಿಷಯಕ್ಕೆ ಹಿಂದುಗಳಲ್ಲಿ, ಕನಿಷ್ಠಪಕ್ಷಕ್ಕೆ ಮರಾಟರ ವಿಷಯವಾಗಿ ಮರಾಟರಲ್ಲಿ ಆ ಭಾವನೆಯು ಏಕೆ ಇರಬಾರದು? ಆದರೆ ಎಲ್ಲಕ್ಕೂ ಮಹತ್ವದ ಸಂಗತಿಯೇನಂದರೆ, ಮರಾಟರ ಜಗಳಗಳಲ್ಲಿ ಮರಾಟರು ತಾವಾಗಿ ಇಂಗ್ಲಿಷರನ್ನು ಸೇರಿಸಿಕೊಳ್ಳದಿದ್ದರೆ. ಇಷ್ಟದ ಜಗಳ ಕೆದರಿ ತೆಗೆದು, ಇಲ್ಲವೆ ಕೇವಲ ವಿಜಿಗೀಷುತನದಿಂದ ಮರಾಟರ ರಾಜ್ಯದ ಮೇಲೆ ದಾಳೀ ಮಾಡಿ, ಅವರ ರಾಜ್ಯವನ್ನು ಗೆಲ್ಲಲಿಕ್ಕೆ ಇಂಗ್ಲಿಷರಿಗೆ ಇನ್ನೂ ಮೂರು ನಾಲ್ಕು ನೂರು ವರ್ಷಗಳಾ

ದರೂ ಸಾಲುತ್ತಿದ್ದಿಲ್ಲ. ಉತ್ತರ ಹಿಂದುಸ್ಥಾನವನ್ನು ಮೊಗಲರು ಹುಚ್ಚುತನದಿಂದ ಇಂಗ್ಲಿಷರಿಗೆ ಕೊಟ್ಟರೆಂದು ತಿಳಿದರೂ, ಹದಿನೆಂಟನೆಯ ಶತಕದ ಕೊನೆಯವರೆಗೆ ಯಮುನಾನದಿಯ ದಕ್ಷಿಣದಲ್ಲಿ ಒಂದು ಗೇಣು ಭೂಮಿಯೂ ಕೂಡ ಇಂಗ್ಲಿಷರಿಗಿದ್ದಿಲ್ಲ. ಪಶ್ಚಿಮ ದಂಡೆಯಲ್ಲಿ ಮುಂಬಯಿ, ಸುರತ ಮೊದಲಾದ ಠಾಣ್ಯಗಳೂ ಪೂರ್ವದಂಡೆಯಲ್ಲಿ ಸ್ವಲ್ಪಸೀಮೆ ಇಷ್ಟು ಮಾತ್ರ ಇಂಗ್ಲಿಷರ ವಶದಲ್ಲಿದ್ದವು. ಹೀಗಿರಲು, ಟೀಪುವಿನ ವಿರುದ್ಧವಾಗಿ ಸಹಾಯ ಮಾಡಿ ಅವರಿಗೆ ನೂರಾರು ಮೈಲುಗಳ ಪ್ರದೇಶವನ್ನು ಯಾರು ದೊರಕಿಸಿ ಕೊಟ್ಟರು? ಮರಾಟರೇ ಅಲ್ಲವೆ? ನಿಜಾಮನೂ ಮದ್ರಾಸ ಇಲಾಖೆಯೊಳಗಿನ ಮುಸಲ್ಮಾನರೂ ಇಂಗ್ಲಿಷರನ್ನು ತಮ್ಮ ಮನೆಯಲ್ಲಿ ಸೇರಿಸಿಕೊಂಡದ್ದನ್ನು ಬದಿಗಿರಿಸಿದರೆ, ಉತ್ತರಕ್ಕೆ ಯಮುನಾನದಿ, ಈಶಾನ್ಯಕ್ಕೆ ಕಟಕ-ಸಂಬಳಪುರ, ಪೂರ್ವಕ್ಕೆ ಪೂರ್ವಸಮುದ್ರ, ಆಗ್ನೇಯಕ್ಕೆ ಕಾವೇರಿ ನದಿ, ದಕ್ಷಿಣಕ್ಕೆ ಮೈಸೂರು, ನೈಋತ್ಯಕ್ಕೆ ಮಲಬಾರ, ಪಶ್ಚಿಮಕ್ಕೆ ಪಶ್ಚಿಮಸಮುದ್ರ, ವಾಯುವ್ಯಕ್ಕೆ ರಾಜಸ್ಥಾನ ಇಂಥ ಪರಿಸೀಮೆಯ ಪ್ರಚಂಡವಾದ ಕ್ಷೇತ್ರದಲ್ಲಿ ಹದಿನೆಂಟನೆಯ ಶತಕದ ಮಧ್ಯಭಾಗದವರೆಗೆ ಇಂಗ್ಲಿಷರಿಗೆ ಕಾಲು ಇಡಲಿಕ್ಕೆ ಸ್ಥಳವೆಲ್ಲಿತ್ತು? ಹೀಗಿದ್ದು ಮರಾಟರು ತಮ್ಮ ಒಳಜಗಳಗಳಲ್ಲಿ ಅವರನ್ನು ಸಹಾಯಕರೆಂದಾಗಲಿ ನ್ಯಾಯಾಧೀಶರೆಂದಾಗಲಿ ಏಕೆ ಸೇರಿಸಿಕೊಂಡರು?

ಈ ಪ್ರಚಂಡವಾದ ಕ್ಷೇತ್ರದಲ್ಲಿ ಮರಾಟರ ಎಲ್ಲ ರಾಜ್ಯಗಳಿದ್ದವು ಎಲ್ಲ ಪ್ರದೇಶವು ಒಬ್ಬ ಛತ್ರಪತಿಯ ಕೈಯಲ್ಲಿತ್ತೆಂದು ಹೇಳಲಿಕ್ಕೂ ಅಡ್ಡಿಯಿಲ್ಲ; ಯಾಕಂದರೆ ಪೇಶವೆ, ಶಿಂದೆ, ಹೋಳಕರ, ಗಾಯಕವಾಡ, ಪಟವರ್ಧನ ಮೊದಲಾದ ಬ್ರಾಹ್ಮಣ ಮರಾಟ ಸರದಾರರು ಔಪಚಾರಿಕತನಕ್ಕಾಗಿಯಾದರೂ ಒಬ್ಬ ರಾಜನ ವರ್ಚಸ್ಸನ್ನು ಮನ್ನಿಸುತ್ತಿದ್ದರು. ಒಂದೇ ರಾಜ್ಯದ ಆಧಾರಸ್ತಂಭವಾಗಿದ್ದ ಇವರಲ್ಲಿ ಯಾರಾದರೂ ಕುಸಿಬಿದ್ದರೆ ಅದು ಎಲ್ಲರ ಮೇಲೆ ಬೀಳುವದೆಂಬ ಭಯವಿದ್ದರೂ, ಅದನ್ನು ಸಾವರಿಸಿ ಹಿಡಿದರೆ ಎಲ್ಲರ ಕಲ್ಯಾಣವಾಗುವದೆಂಬದು ಗೊತ್ತಿದ್ದರೂ ಮರಾಟರು ತಮ್ಮ ರಾಜ್ಯದಲ್ಲಿ ಇಂಗ್ಲಿಷರನ್ನು ಏಕೆ ಸೇರಿಸಿಕೊಂಡರು? ಇಂಗ್ಲಿಷರು ಮುಂಬಯಿ, ಮದ್ರಾಸ, ಕಲಕತ್ತೆ ಈ ಮೂರು ದೂರ ದೂರದ ಸ್ಥಳಗಳಲ್ಲಿ ವಾಸವಾಗಿದ್ದರು. ಮರಾಟರ ರಾಜ್ಯಗಳು ಎಷ್ಟಾದರೂ ಸಮೀಪದಲ್ಲಿದ್ದವು. ಇವರು ಒಕ್ಕಟ್ಟಾಗಿದ್ದರೆ ಅವರ ಅಂಚೆಯು ಕೂಡ ಇವರ ರಾಜ್ಯದಲ್ಲಿ ಹೋಗುವದು ಕಠಿಣವಿತ್ತು; ಅವರ ಸೈನ್ಯವು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವದು ಅಸಂಭಾವ್ಯವಿತ್ತು. ಹೀಗೆ ಎಲ್ಲರೂ ಒಕ್ಕಟ್ಟಿನಿಂದ ನಡೆದಿದ್ದರೆ, ಈಸ್ಟ ಇಂಡಿಯಾ ಕಂಪನಿಯಲ್ಲಿ ಇಂಗ್ಲಿಷರು ರಾಜ್ಯದೊರಕಿಸುವ ಉಪದ್ವ್ಯಾಪದಲ್ಲಿ ಬೀಳಬಾರದೆಂದು ಸಲಹೆ ಕೊಡುವ ಯಾವ ಒಂದು ಪಕ್ಷವಿತ್ತೋ, ಅದಕ್ಕೆ ವಿಜಯ ದೊರೆಯುತ್ತಿತ್ತು. ಇಂಗ್ಲಿಷರು ಮರಾಟರ ಸಹಾಯದಿಂದ ಮರಾಟರನ್ನು ಪರಾಭವಗೊಳಿಸಿದರು. ಅವರು ಸ್ವಲ್ಪ ವಿಲಾಯತಿಯ ಸರಕು, ಭೂರಿ ಬುದ್ಧಿ ಮತ್ತೆ ಇವುಗಳ ಬಲದಿಂದ ಹಿಂದುಸ್ಥಾನದ ವ್ಯಾಪಾರವನ್ನೂ ರಾಜ್ಯವನ್ನೂ

ದೊರೆಕಿಸಿದರು. ಅವರು ಮೊಗಲರಂಥ ಜೀರ್ಣವಾದ ರಾಜ್ಯವನ್ನಷ್ಟೇ ಗೆದ್ದರಂತಲ್ಲ; ಹೊಸ ಹುರುಪಿನ ಮಹತ್ವಾಕಾಂಕ್ಷಿಯೂ ಉದಯೋನ್ಮುಖವೂ ಆದ ಮರಾಟರ ರಾಜ್ಯವನ್ನೂ ಸಹ ತಮ್ಮ ಬುದ್ಧಿಮತ್ತೆಯಿಂದಲೂ ಪರಾಕ್ರಮದಿಂದಲೂ ಮರಾಟರ ಅದೂರದೃಷ್ಟಿಯ ಹಾಗು ಒಡಕಿನ ಯೋಗದಿಂದಲೂ ಗೆದ್ದುಕೊಂಡರು!

## ಮಧ್ಯವರ್ತೀ ಅಧಿಕಾರದ ಅಭಾವ.

ಶಿವಾಜಿಯು ಸ್ವರಾಜ್ಯಸ್ಥಾಪನೆ ಮಾಡಿದ ವೇಳೆಯಲ್ಲಿ ರಾಜನು, ಅಷ್ಟಪ್ರಧಾನರು ಇವರಷ್ಟೇ ರಾಜ್ಯದ ಅಂಗಗಳಾಗಿದ್ದರು. ರಾಜ್ಯವು ಏಕಸತ್ತಾತ್ಮಕವಿದ್ದು, ಪ್ರಧಾನರು ಸಲಹೆ ಕೊಡುವ ಕರ್ತವ್ಯಭಾರವುಳ್ಳ ಕೆಲಸಗಾರರಾಗಿದ್ದರು. ಶಾಹೂರಾಯನ ಆಳಿಕೆಯಲ್ಲಿ ಸರಂಜಾಮಿ ಸರದಾರರು ಉತ್ಪನ್ನರಾದರು. ಈ ಸರದಾರರ ಕಡೆಗೆ ತಮ್ಮ ತಮ್ಮ ಪ್ರಾಂತಗಳೊಳಗಿನ ನ್ಯಾಯ, ಕಂದಾಯ, ಸೈನ್ಯ ಮೊದಲಾದ ವ್ಯವಸ್ಥೆಗಳಿರುತ್ತಿದ್ದವು. ಈ ವ್ಯವಸ್ಥೆಮಾಡಿ ಉಳಿದ ಇಲ್ಲವೆ ನಿಶ್ಚಯಿಸಿದ ಹಣವು ಛತ್ರಪತಿಗೆ ಸಲ್ಲುತ್ತಿತ್ತು. ಸ್ವರಾಜ್ಯದ ಹೊರಗ ರಾಜ್ಯವಿಸ್ತಾರವಾಗಲಿಕ್ಕೆ ಪ್ರಾರಂಭವಾದೊಡನೆಯೆ ಈ ಸರಂಜಾಮಿ ಪದ್ಧತಿಯು ರೂಢವಾಯಿತು. ಶಾಹುವಿನ ಸನದಿನ ದಾರೀ ನೋಡದೆ ದಾಭಾಡೆ, ಬಾಂಡೆ, ಭೋಸಲೆ, ಆಂಗ್ರೆ ಮೊದಲಾದ ಸರದಾರರು ಮೊಗಲರಾಜ್ಯವನ್ನು ತೆಗೆದುಕೊಳ್ಳಲಿಕ್ಕೂ, ಗೆದ್ದಪ್ರಾಂತಗಳಲ್ಲಿ ಸ್ವತಂತ್ರ ಅಧಿಕಾರ ನಡೆಯಿಸಲಿಕ್ಕೂ ಸಿದ್ಧರಾಗಿದ್ದರು. ಇಂಥ ಸರದಾರರನ್ನು ಕೈಯಲ್ಲಿಟ್ಟುಕೊಳ್ಳುವದರಿಂದ ಛತ್ರಪತಿಯ ಲಾಭವೇ ಇತ್ತು; ಸರದಾರರಿಗಾದರೂ ಛತ್ರಪತಿಯ ಅಧಿಕಾರ ರಕ್ಷಣೆ ಮಾಡುವದು ಬೇಕಾಗಿತ್ತು. ಪ್ರತ್ಯಕ್ಷ ಶಿವಾಜಿಯು ಇದ್ದರೆ ಸಹ ಈ ಸರಂಜಾಮಿ ಪದ್ಧತಿಯನ್ನು ತಪ್ಪಿಸಲಿಕ್ಕೆ ಆಗುತ್ತಿತ್ತೋ ಇಲ್ಲವೋ ಹೇಳಲಾಗುವದಿಲ್ಲ. ಈ ಪದ್ಧತಿಯು ನಾಶವಾಗಿ ರಾಜ್ಯಘಟನೆಯು ಸ್ವತಂತ್ರವಾಗಿ ಉತ್ಕ್ರಾಂತಿಹೊಂದಲಿಕ್ಕೆ ಕೆಲವು ಕಾಲದ ಅವಕಾಶವು ಬೇಕಾಗಿತ್ತು. ಅಷ್ಟಪ್ರಧಾನರ ಮೇಲೆ ಪೇಶವೆಯನ್ನು ನಿಯಮಿಸಿದ್ದು ಈ ಉತ್ಕ್ರಾಂತಿಯ ಒಂದು ಮೆಟ್ಟಿಲಾಗಿದೆ. ಪ್ರಬಲ ಛತ್ರಪತಿಯ ಹಾಗು ಪ್ರಬಲ ಪೇಶವೆಯ ಜೊತೆಯು ಕೂಡಿದ್ದರೆ, ಸರಂಜಾಮಿ ಪದ್ಧತಿಗೆ ಆತಂಕವಾಗುತ್ತಿತ್ತು. ಪೇಶವೆಯು ಸ್ವರಾಜ್ಯದ ಹೊರಗೆ ಉದ್ಯೋಗಮಾಡುವಾಗ ಸ್ವರಾಜ್ಯದಲ್ಲಿ ಛತ್ರಪತಿಯ ಬಲವಾದ ಸತ್ತೆಯ ಆಧಾರವು ದೊರೆತಿದ್ದರೆ, ಹಳೆಯ ಹಾಗು ಹೊಸ ಸರದಾರರು ತಮ್ಮ ಸೇವಕಭಾವವನ್ನು ಇಷ್ಟು ಬೇಗನೆ ಮರೆಯುತ್ತಿದ್ದಿಲ್ಲ. ಪೇಶವೆಗೆ ಅವನ ಕರ್ತೃತ್ವವೇ ಮುಖ್ಯವಾದ ಆಧಾರವಾಗಿದ್ದುದರಿಂದ, ಅವನು ತನ್ನ ಪೇಶವಾಯಿ ಅಧಿಕಾರವನ್ನು ಹೋಗಗೊಡಲಿಲ್ಲ. ಅವನು ಇದೊಂದು ದೊಡ್ಡ ಕೆಲಸ ಮಾಡಿದನೆಂದು ಅನ್ನಬಹುದು. ಛತ್ರಪತಿಯು ಕರ್ತೃತ್ವಶಾಲಿಯೂ ಸ್ವಾಭಿಮಾನಿಯೂ ಇದ್ದರೆ, ಸರಂಜಾಮಿ ಸರದಾರರ ಅಧಿಕಾರಾತಿಕ್ರಮಣಕ್ಕೆ ಎಷ್ಟಾದರೂ ಪ್ರತಿಬಂಧವಾಗುತ್ತಿತ್ತು; ಪೇಶವೆಯಾದರೂ ಇಷ್ಟು ಸ್ವತಂತ್ರನಾಗುತ್ತಿದ್ದಿಲ್ಲ. ಪ್ರತ್ಯಕ್ಷ

ಮುಖ್ಯ ಮಂತ್ರಿಗೇ ಸ್ವಾತಂತ್ರ್ಯವಿಲ್ಲದ ಮೇಲೆ, ಅದು ಮಿಕ್ಕ ಸರದಾರರಿಗೆ ಹೇಗೆ ದೊರೆಯುತ್ತಿತ್ತು?

"ಬಾಳಾಜಿ ವಿಶ್ವನಾಥ, ಶಾಹೂರಾಜ ಇವರ ಕಾಲದಲ್ಲಿ ಸಂಯುಕ್ತರಾಜ್ಯಪದ್ಧತಿಯಿತ್ತು. ಪೇಶವಾಯಿಯ ವೇಳೆಯಲ್ಲಿ ಈ ಅಧಿಕಾರವು ಪೇಶವೆಯಲ್ಲಿ ಒಟ್ಟುಗೂಡಿತ್ತು" ಎಂದು ಇತಿಹಾಸಕಾರರು ಅನ್ನುವರು. ಆದರೆ ಪೇಶವಾಯಿಯ ಕಾಲದ ಆಳಿಕೆಗೆ ಸಂಯುಕ್ತರಾಜ್ಯ ಪದ್ಧತಿಯೆಂಬ ಹೆಸರು ಕೊಡಲಿಕ್ಕೆ ಬರುವದಿಲ್ಲ. ಕೇವಲ ರಾಜಸತ್ತಾತ್ಮಕವಿದ್ದರೆ ಸಾಗುವದು; ಆದರೆ ಕೇವಲ ಏಕತಂತ್ರಿಯಾದ ಪ್ರಧಾನ ಸತ್ತೆಯು ಎಂದೂ ನಡೆಯಲಾರದು. ಪಟ್ಟಬಾಧ್ಯ ರಾಜವಂಶೀಯ ವ್ಯಕ್ತಿಯ ಬಗ್ಗೆ ಯಾವ ಆದರವು ನೌಕರ ಜನರಲ್ಲಿ ಇರುವದೋ, ಆ ಆದರವು ಪ್ರಧಾನಿಯು ಎಷ್ಟೇ ಗುಣಿಯೂ ಪ್ರಬಲನೂ ಇದ್ದರೂ ಅವನ ವಿಷಯವಾಗಿ ಹುಟ್ಟುವದಿಲ್ಲ. ಪ್ರಾತಿನಿಧಿಕ ಪದ್ಧತಿಯ ರಾಜ್ಯಘಟನೆಯಿದ್ದರೆ ಪ್ರಧಾನನಿಗೆ ಜನತೆಯ ಬೆಂಬಲವಾದರೂ ಇರುವದು; ಆದರೆ ಆ ಕಾಲದ ರಾಜ್ಯ ಘಟನೆಯು ಆ ವಿಧದ್ದಾಗದ್ದರಿಂದ ಪೇಶವೆಗೆ ಜನತೆಯ ಬೆಂಬಲವೂ ಇದ್ದಿಲ್ಲ. ಇಂಥ ಪೊಳ್ಳು ಬುನಾದಿಯ ಮೇಲೆ ಪೇಶವೆಯ ಅಧಿಕಾರ ಮಂದಿರವು ಕಟ್ಟಲ್ಪಟ್ಟಿತ್ತು. ಅದ್ದರಿಂದ ತನಗೆ ಆಧಾರವೆಂದು ಪೇಶವೆಯು ಸರಂಜಾಮಿ ಸರದಾರ ಮಂಡಲವನ್ನು ನಿರ್ಮಾಣ ಮಾಡಿದ್ದನು. ಕೊನೆಗೆ ಅವನಿಗೆ ಆ ಸರದಾರರೇ ತಲೆಭಾರಾದರು!

ಪೇಶವೆಯು ಅವರಿಗೆ 'ಆಜ್ಞೆಮಾಡುತ್ತೇನೆ' ಎಂಬ ಭಾಷೆಯನ್ನು ಎಂದೂ ಉಪಯೋಗಿಸಲಿಲ್ಲ. ಯಾವದೊಂದು ಸಂಗತಿಯ ವಿಷಯವಾಗಿ ಅವನು ಸರದಾರರಿಗೆ ಸೂಚನೆ ಕೊಡುತ್ತಿದ್ದನು. ಆ ಸೂಚನೆಯನ್ನು ಸರದಾರರು ಪ್ರಚಾರದಲ್ಲಿ ತಂದರೆ ಅದೊಂದು ಪೇಶವೆಯ ಭಾಗ್ಯವು! ಅವರಿಗೆ ಆಜ್ಞೆ ಮಾಡುವ ಅಧಿಕಾರವು ಪೇಶವೆಗೆ ಇದ್ದಿಲ್ಲ. ಆಜ್ಞೆ ಮಾಡುವ ಅಧಿಕಾರವೇ ಇಲ್ಲದಿರುವಾಗ, ಆಜ್ಞೆಯನ್ನು ಉಲ್ಲಂಘಿಸಿದ ಬಗ್ಗೆ ಶಿಕ್ಷೆ ಕೊಡುವ ಅಧಿಕಾರವಾದರೂ ಅವನಿಗೆ ಎಲ್ಲಿಂದ ಬರಬೇಕು? ಪೇಶವೆಯ ಆಜ್ಞೆಯನ್ನು ಉಲ್ಲಂಘನೆ ಮಾಡಿದ ಉದಾಹರಣೆಗಳು ದೊರೆಯುವವು; ಆದರೆ ಆಜ್ಞೋಲ್ಲಂಘನೆಗೆ ಶಿಕ್ಷೆಯಾದ ದೃಶ್ಯಗಳು ಅತ್ಯಲ್ಪ ಕಾಣುವವು. ಎಲ್ಲಿಯ ವರೆಗೆ ಪೇಶವೆಯವರು ಸೇನಾಪತಿಗಳಾಗಿದ್ದರೋ, ಎಲ್ಲಿಯ ವರೆಗೆ ಸೈನ್ಯ ತೆಗೆದುಕೊಂಡು ದಂಡಯಾತ್ರೆಗೆ ಹೊರಡುತ್ತಿದ್ದರೋ ಅಲ್ಲಿಯವರೆಗೆ ಅವರ ಅಧಿಕಾರವು ಸ್ವಲ್ಪವಾದರೂ ಸಾಗುತ್ತಿತ್ತು. ದೊಡ್ಡ ಮಾಧವರಾಯನ ತರುವಾಯ ಈ ವಿಧದ ಸ್ಥಿತಿಯು ನಷ್ಟವಾಗಿ ಅಧಿಕಾರ ಸೂತ್ರಗಳು ಫಡಣವೀಸನ ಕೈಯಲ್ಲಿ ಬರಲು, ಮಧ್ಯವರ್ತೀ ಸತ್ತೆಯು ಮತ್ತೊಂದು ಮೆಟ್ಟಲು ಅವನತಿ ಹೊಂದಿತು. ಸ್ವಾಮಿನಿಷ್ಠೆಯ ಭಾವನೆಯು ಶಾಹೂರಾಜನಲ್ಲಿದ್ದಂತೆ ಮಾಧವರಾಯನ ವಿಷಯವಾಗಿ ಉಳಿಯಲಿಲ್ಲ. ಮಾಧವರಾಯನಲ್ಲಿದ್ದ ಭಕ್ತಿ ವಿಶ್ವಾಸಗಳು ನಾನಾಫಡಣವೀಸನ ವಿಷಯವಾಗಿ ಉಳಿಯಲಿಲ್ಲ ಮಧ್ಯವರ್ತೀ ರಾಜ್ಯಘಟನೆಯು ತಪ್ಪಿ, ಅದಕ್ಕೆ ಅಸ್ಥಿರನಟ್ಟಿಗೆ ಒಂದು ಸಂಘಟಿತ ಸ್ವರೂಪವು

ಪ್ರಾಪ್ತವಾಯಿತು. ಮಧ್ಯವರ್ತೀ ರಾಜ್ಯಘಟನೆಯು ವ್ಯವಸ್ಥೆಯಿಲ್ಲದ ಮೂಲಕ ಮರಾಟರರಾಜ್ಯವು ನಾಶವಾಯಿತು. ಮರಾಟ ಶಾಹಿಯ ಕೊನೆಯ ದಿನಗಳಲ್ಲಿ ಪ್ರಬಲವಾದ ರಾಜಸತ್ತೆಯೂ ಇರಲಿಲ್ಲ; ಲೋಕಪ್ರತಿನಿಧಿ ಸತ್ತೆಯೂ ಇರಲಿಲ್ಲ. ಇವೆರಡರಲ್ಲಿ ಯಾವುದೊಂದು ಪ್ರಬಲ ಶಕ್ತಿಯಿದ್ದರೆ ಮರಾಟಶಾಹಿಯು ನಷ್ಟವಾಗುತ್ತಿದ್ದಿಲ್ಲ. ಈ ಸಂಗತಿಯ ವಿಷಯವಾಗಿ ಪೇಶವೆಯ ಕಡೆಗೆ ಎಷ್ಟು ದೋಷವೋ, ಅಷ್ಟೇ ದೋಷವು ಮರಾಟ ಸರದಾರರ ಕಡೆಗೂ ಇರುವದು. ಪೇಶವೆಯು ಮಾಡಿದ ತಪ್ಪನ್ನು ಸುಧಾರಿಸಲಿಕ್ಕೆ ಈ ಸರದಾರರಿಗೆ ಯಾವ ಅಡ್ಡಿಯಿತ್ತು? ಅವರು ಬೇಕಾದ ಹಾಗೆ ರಾಜ್ಯ ಕ್ರಾಂತಿ ಮಾಡಿ ಪೇಶವಾಯಿಯನ್ನು ಡಬ್ಬಿ ಹಾಕಿ, ಮರಾಟರ ಮಂತ್ರಿಮಂಡಲವನ್ನು ಸ್ಥಾಪಿಸಬೇಕಾಗಿತ್ತು; ಆದರೆ ಮರಾಟಶಾಹಿಯನ್ನು ಮುರಿಯುಗೊಡಬೇಕಾಗಿದ್ದಿಲ್ಲ. ಅವರಾದರೂ ಈ ಕೆಲಸವನ್ನು ಎಲ್ಲಿ ಮಾಡಿದರು?

## ಇಂಗ್ಲಿಷರು ರಾಜ್ಯವನ್ನು ಹೇಗೆ ದೊರೆಕಿಸಿದರು?

ಇಂಗ್ಲಿಷರು ಹಿಂದುಸ್ತಾನದಲ್ಲಿ ರಾಜ್ಯ ಸಂಪಾದನೆಯನ್ನು ಶಸ್ತ್ರಬಲದಿಂದ ಮಾಡಿದರೋ, ಇತರ ಸಾಧನಗಳಿಂದ ಮಾಡಿದರೋ ಎಂಬ ವಾದವು ಯಾವಾಗಲೂ ಮುಂಬೆ ಬರುತ್ತಿರುವದು. ಇಂಗ್ಲಿಷರು ಹಿಂದುಸ್ತಾನದೊಳಗಿನ ಜನರಿಗೆ ಸ್ವರಾಜ್ಯದ ಅಧಿಕಾರ ಕೊಡಬೇಕು, ಪ್ರಜೆಗಳಿಗೆ ಸ್ವಾತಂತ್ರ್ಯ ಕೊಡುವ ತಮ್ಮ ಶೀಲವನ್ನು ಹಿಂದುಸ್ತಾನದಲ್ಲಾದರೂ ಜಾಗೃತವಿರಿಸಬೇಕು, ಶಸ್ತ್ರಬಲದಿಂದ ಹಿಂದುಸ್ತಾನದ ರಾಜ್ಯವನ್ನು ಸ್ವಾಧೀನದಲ್ಲಿರಿಸಿಕೊಳ್ಳುವ ಇಚ್ಛೆ ಮಾಡಬಾರದು ಮುಂತಾಗಿ ಯಾರಿಗೆ ಪ್ರತಿಪಾದಿಸುವದಿರುವದೋ ಅವರು ಹಿಂದುಸ್ತಾನವನ್ನು ಇಂಗ್ಲಿಷರು ಶಸ್ತ್ರಬಲದಿಂದ ದೊರೆಕಿಸಿಲ್ಲವೆಂದು ಉತ್ತರವೀಯುತ್ತಿರುತ್ತಾರೆ. ಈ ಮತಕ್ಕೆ ಪ್ರೊ. ಸೀಲೀ ಪ್ರಭೃತಿ ಇತಿಹಾಸಕಾರರಿಂದಲೂ ಪುಷ್ಟಿಯು ದೊರತಿದೆ; ಆದರೆ ಈ ಮಾತು ನಮಗೆ ಹೆಚ್ಚಾಗಿ ಮಾನ್ಯವಿಲ್ಲ. ಯಾಕಂದರೆ, ಇಂಗ್ಲಿಷರ ರಾಜ್ಯವಿಸ್ತಾರದ ಇತಿಹಾಸವನ್ನು ನೋಡಿದರೆ ಯುದ್ಧಾನಂತರದಲ್ಲಾದ ಒಪ್ಪಂದಗಳಲ್ಲಿಯೇ ಇಂಗ್ಲಿಷರಿಗೆ ಅರ್ಧಕ್ಕಿಂತ ಹೆಚ್ಚು ರಾಜ್ಯವು ದೊರೆತಿದೆ. ಉಳಿದ ಅರ್ಧ ರಾಜ್ಯ ದೊರೆಕಿಸಲಿಕ್ಕೆ ಅವರು ಪ್ರತ್ಯಕ್ಷ ಶಸ್ತ್ರದ ಉಪಯೋಗವನ್ನು ಮಾಡದಿದ್ದರೂ, ಅವರ ಶಸ್ತ್ರದ ಭಯದಿಂದ ಆ ರಾಜ್ಯ ಸಂಪಾದನೆಯಾಯಿತೆಂಬ ಮಾತನ್ನು ಯಾರೂ ಅಲ್ಲಗಳೆಯಲಾರರು. ಮೊಗಲರಿಂದ ಸಂಪಾದಿಸಿದ ದಿವಾಣಗಿರಿಯ ಸನದಿನ ಬಲದಿಂದ ಅವರಿಗೆ ಪೂರ್ವದ ಕಡೆಯ ಪ್ರಾಂತಗಳು ಕಾರಭಾರ ಮಾಡಲಿಕ್ಕೆ ದೊರೆತವು. ಮುಂದೆ ಅವು ಅವರ ಬಾಧ್ಯತೆಯಲ್ಲಿಯೇ ಉಳಿದವೆಂಬ ಮಾತು ಬೇರೆ.

ಆದರೆ ಅವರು ಮೊಗಲರೊಡನೆ ಕಾದದಿದ್ದರೂ, ಮೊಗಲರ ನವಾಬರೊಡನೆ ಯುದ್ಧಮಾಡಬೇಕಾಯಿತೆಂಬ ಸಂಗತಿಯೇನೂ ಸುಳ್ಳಲ್ಲ. ಪ್ಲಾಸಿ, ಬಕ್ಸಾರ ಮೊದಲಾದ ಯುದ್ಧಗಳಲ್ಲಿ ಜಯಸಂಪಾದನೆ ಮಾಡದಿದ್ದರೆ ಬಂಗಾಲದ ಎಲ್ಲ ಪ್ರಾಂತವನ್ನು ಅವರಿಗೆ ಸ್ವಾಧೀನಮಾಡಿಕೊಳ್ಳಲಿಕ್ಕೆ ಬರುತ್ತಿದ್ದಿಲ್ಲ. ನಿಜಾಮನಿಂದ ಇಂಗ್ಲಿಷರಿಗೆ

ದೊರೆತ ಪ್ರದೇಶವು ಯುದ್ಧಮಾಡದೆ ದೊರೆಯಿತೆಂಬದು ನಿಜ. ನಿಜಾಮನೊಡನೆ ಯುದ್ಧಮಾಡದಿದ್ದರೂ ಅವನನ್ನು ಶತ್ರುಗಳಿಂದ ರಕ್ಷಿಸುವ ಶಸ್ತ್ರಬಲವು ತಮ್ಮಲ್ಲಿ ರುವದೆಂಬದನ್ನು ತೋರಿಸಲಿಕ್ಕೆ ಬಂದುದರಿಂದಲೇ ಅದು ದೊರೆಯಿತು. ನಿಜಾಮನು ಅದನ್ನು ಇಂಗ್ಲಿಷರಿಗೆ ಸ್ನೇಹಿತರೆಂದು ಪಾರಿತೋಷಕ ಕೊಡಲಿಲ್ಲ; ಅಥವಾ ಇಂಗ್ಲಿ ಷರು ಅವನ ಧರ್ಮಗುರುಗಳು ಅಥವಾ ಈಶ್ವರೀ ಲೀಲೆಯನ್ನು ತೋರಿಸುವ ಫಕೀ ರರು ಎಂದು ಆತನು ಅದನ್ನು ಧರ್ಮಾದಾಯವಾಗಿ ಕೊಡಲಿಲ್ಲ. ಲಾರ್ಡ ಡಲ ಹೌಸಿಯು ಆಳಿಕೆಯಲ್ಲಿ ಎಷ್ಟೋ ರಾಜ್ಯಗಳು ಔರಸ ಸಂತಾನಾಭಾವಕ್ಕಾಗಿ ಅಂಗ್ಲಾ ಧೀನವಾದವು; ಆದರೆ ಅಧಿರಾಜರು ಅಥವಾ ಸಾಮ್ರಾಜ್ಯದ ಧನಿಗಳು ಎಂಬ ಅಧಿ ಕಾರ ಹೇಳಲಿಕ್ಕೆ ಬಾರದಿದ್ದರೆ ಈ ರಾಜ್ಯಗಳು ಹೇಗೆ ಆಂಗ್ಲಾಧೀನವಾಗುತ್ತಿದ್ದವು? ಇಂಗ್ಲಿಷರೇನೂ ಸಾತಾರೆಯವರ ಔರಸ ಸಂತತಿಯವರಲ್ಲ. ಅಧಿರಾಜರು ಇಲ್ಲವೆ ಸಾಮ್ರಾಜ್ಯದ ಧನಿಗಳು ಎಂಬ ಹೆಸರನ್ನು ಶಸ್ತ್ರಬಲವಿಲ್ಲದೆ ಅವರು ಹೇಗೆ ದೊರೆಕಿ ಸುವರು? ಮೈಸೂರು, ಮಹಾರಾಷ್ಟ್ರ, ಉತ್ತರಹಿಂದುಸ್ತಾನ, ಬಂಗಾಲ ಮತ್ತು ಪಂಜಾ ಬ ಮೊದಲಾದ ಪ್ರಾಂತಗಳನ್ನು ಇಂಗ್ಲಿಷರು ಶಸ್ತ್ರಬಲದಿಂದಲೇ ತೆಗೆದುಕೊಂಡರೆಂಬ ದನ್ನು ಒಪ್ಪಿದ ಮೇಲೆ, ಉಳಿದವುಗಳನ್ನು ಶಾಂತತೆಯ ಸಾಧನಗಳಿಂದ ಅಂದರೆ, ಒಪ್ಪಂದದಿಂದಾಗಲಿ, ಕಟ್ಟಳೆಗಳಿಂದಾಗಲಿ. ಪ್ರತಿಫಲವೆಂದಾಗಲಿ, ಜಹಾಗೀರಿಯೆಂ ದಾಗಲಿ, ಸರಂಜಾಮುವೆಂದಾಗಲಿ. ಶೇಷಾಧಿಕಾರವೆಂದಾಗಲಿ, ಔರಸತನದಿಂದಾಗಲಿ, ಬಹಳವೇನು ಕಪಟಪ್ರಯೋಗದಿಂದಾಗಲಿ ತೆಗೆದುಕೊಂಡದ್ದು ಬಹಳೇ ಸ್ವಲ್ಪ ಪ್ರದೇಶವಿರುವದು. ಇಂಗ್ಲಿಷರು ಶಸ್ತ್ರಸಾಮರ್ಥ್ಯದಿಂದಲೇ ಹಿಂದುಸ್ತಾನದೊಳಗಿನ ರಾಜ್ಯಗಳನ್ನು ತೆಗೆದುಕೊಂಡರೆಂಬ ಉಪಪತ್ತಿಯು ಹೆಚ್ಚು ಸಯುಕ್ತಿಕವಿದೆ. ಪ್ರೊ. ಸೀಲೀ ಮೊದಲಾದವರ ಅಭಿಪ್ರಾಯದ ಅರ್ಥವನ್ನು ಲಕ್ಷ್ಯದಲ್ಲಿ ತೆಗೆದು ಕೊಳ್ಳದೆ ನಾವು ಎಷ್ಟೋ ಸಾರೆ ಆದರ ಅನುವಾದ ಮಾಡುತ್ತಿರುತ್ತೇವೆ. ಪ್ರೊ. ಸೀಲೀ ಇವರ ಅಭಿಪ್ರಾಯವೇನಂದರೆ, ಇತರ ದೇಶಗಳಲ್ಲಿಯ ಪ್ರಾಂತಗಳನ್ನು ಗೆದೆಯುವಾಗ ವಿಜಿಗೀಷು ರಾಜರಿಗೆ ಎಷ್ಟು ಕಾದಬೇಕಾಗುತ್ತಿದೆಯೋ, ಅಷ್ಟು ಕಾದಾಟವನ್ನು ಕೂಡ ಹಿಂದುಸ್ತಾನದಲ್ಲಿ ಮಾಡಲಿಲ್ಲವೆಂಬದೇ ಅವರ ಆಶಯವು. ಇಂಗ್ಲಿಷರ ಕಾರ್ಯಭಾಗವು ಸ್ವಲ್ಪವೇ ಪ್ರಯಾಸದಿಂದ ಸಾಧಿಸಿತು; ಅದರಲ್ಲಿ ಸ್ವತಃ ಹಿಂದು ಜನರ ಉಪಯೋಗವೇ ಬಹಳವಾಯಿತು. ಇಂಗ್ಲಿಷರ ಮೇಲಿನ ಪ್ರೇಮದಿಂದಾಗಲಿ, ತಮ್ಮ ತಮ್ಮೊಳಗಿನ ಮೂರ್ಖತನದ ಸ್ಪರ್ಧೆಯಿಂದಾಗಲಿ ಯಾವುದರಿಂದಾದರೂ ಅವರಿಗೆ ಹಿಂದುಗಳ ಉಪಯೋಗವಾಯಿತು. ಇಂಗ್ಲಿಷರ ಸೈನ್ಯವು ಏತದ್ದೇಶೀಯ ಸೈನ್ಯಕ್ಕಿಂತ ಬಹಳೇ ಕಡಿಮೆಯಿತ್ತು; ಹಾಗು ಹಿಂದುಸ್ತಾನ ವನ್ನು ಗೆದೆಯುವುದಕ್ಕಾಗಿ ಅವರು ತಮ್ಮ ರಾಷ್ಟ್ರದ ದ್ರವ್ಯವನ್ನು ಇತ್ತ ತಂದು ವೆಚ್ಚಮಾಡಲಿಲ್ಲ; ಹಾಗು ಕಂಪನಿ ಸರಕಾರವು ರಾಜ್ಯತೆಗೆದುಕೊಳ್ಳುವ ತಮ್ಮ ವಿಚಾರವನ್ನು ಮೊದಲಲ್ಲಿ ಪ್ರಕಟಿಸಲಿಲ್ಲ. ಈ ಮಾತುಗಳ ಮೇಲೆ ಭಾರವಿರಿಸಿ

ಪ್ರೊಫೇಸರ ಸೀಲೀ ಇವರು ಜಗತ್ತಿನಲ್ಲಿಯ ಇತರ ಸ್ಥಳಗಳಲ್ಲಿ ಪ್ರಾಯಶಃ ಆಗುವ ರಾಜ್ಯಸಂಪಾದನೆಯ ಹಾಗು ಹಿಂದುಸ್ಥಾನದ ರಾಜ್ಯಸಂಪಾದನೆಯ ಭೇದವನ್ನು ಸೂಕ್ಷ್ಮದೃಷ್ಟಿಯಿಂದ ತೋರಿಸಿರುವರು. ಇಂಗ್ಲಿಷರು ಬ್ರಿಟಿಶ ಸೈನ್ಯವನ್ನು ಹಿಂದುಸ್ಥಾನಕ್ಕೆ ಸ್ವಲ್ಪವೇ ತಂದಿದ್ದರೂ, ಬಹಳವಾಗಿ ಏತದ್ದೇಶೀಯ ಸೈನ್ಯವನ್ನು ಕೈಯಲ್ಲಿಟ್ಟುಕೊಂಡಿದ್ದಿಲ್ಲವೆಂದು ಅರ್ಥವಾಗುವದಿಲ್ಲ. ರಾಜ್ಯಸಂಪಾದನೆಗಾಗಿ ಅವರು ವಿಲಾಯತಿಯಿಂದ ಹಣ ತರದಿದ್ದರೂ, ಹಿಂದುಸ್ಥಾನದಲ್ಲಿ ಗಳಿಸಿದ ದ್ರವ್ಯವನ್ನು ಅವರು ಆ ರಾಜ್ಯಸಂಪಾದನೆಗಾಗಿ ವೆಚ್ಚವಮಾಡಲಿಲ್ಲವೆಂದು ಅರ್ಥವಾಗುವದಿಲ್ಲ. ಈಸ್ಟ ಇಂಡಿಯಾ ಕಂಪನಿಯ ಉದ್ದೇಶವು ಮೊದಲಿಗೆ ರಾಜ್ಯಸಂಪಾದನೆ ಮಾಡಬೇಕೆಂದಿರದ್ದರೂ, ಹೇತುವಿಗಿಂತ ಕೃತಿಯಿಂದ ಸಿದ್ಧವಾದದ್ದನ್ನು ಮಾನ್ಯಮಾಡದೆ ಗತ್ಯಂತರವಿಲ್ಲ. ೬

ಮರಾಟರ ರಾಜ್ಯವನ್ನು ಇಂಗ್ಲಿಷರು ಗೆದ್ದು ತೆಗೆದುಕೊಂಡಿರದಿದ್ದರೆ, ಯಾರಾದರೂ ಅವರಿಗೆ ಆ ರಾಜ್ಯವನ್ನು ದಾನವೆಂದಾಗಲಿ ಪಾರಿತೋಷಕವೆಂದಾಗಲಿ ಕೊಟ್ಟರೋ? ಶಿಂದೆ, ಹೋಳಕರ, ನಾಗಪುರದ ಹಾಗು ಸಾತಾರೆಯ ಭೋಸಲೆ, ಪೇಶವೆ ಮೊದಲಾದವರ ಕೈಯಿಂದ ಕೆಲವರವು ಪೂರ್ಣವಾಗಿ, ಕೆಲವರವು ಅರ್ಧ, ಕೆಲವರವು ಮುಕ್ಕಾಲು ಪಾಲು ರಾಜ್ಯಗಳು ಬ್ರಿಟಿಶರ ಸ್ವಾಧೀನವಾಗಬೇಕಾದರೆ ಅವು ಸುಖಸಮಾಧಾನದಿಂದ ವಶವಾಗಲಿಲ್ಲೆಂಬ ಮಾತು ಸುಳ್ಳಲ್ಲ. ಆ ರಾಜ್ಯಗಳು ಹೋದಮೇಲೆ ಮನಸ್ಸಿನಲ್ಲಿ ಯತ್ಕಿಂಚಿತ್ತಾದರೂ ಅಸಂತೋಷವಿಲ್ಲದೆ ವೈರಾಗ್ಯವೃತ್ತಿಯಿಂದ ಕಳೆದ ನೂರು ವರ್ಷಗಳಲ್ಲಿ ಯಾರಾದರೂ ನಡೆದಿರುವರೆಂದು ಹೇಳಲಿಕ್ಕೆ ಬರುವದಿಲ್ಲ. ಮೈಸೂರು, ತಂಜಾವರಗಳ ಹೊರತು ಮಿಕ್ಕ ಯಾವ ರಾಜ್ಯಗಳನ್ನೂ ಇಂಗ್ಲಿಷರು ತಿರುಗಿ ಕೊಡಲಿಲ್ಲ. ಯಾರಿಗೆ ರಾಜ್ಯಗಳು ತಿರುಗಿ ದೊರೆತವೋ ಅವರು ತೆಗೆದುಕೊಂಡರು; ದೊರೆಯದಿದ್ದವರು ನಿರಾಶೆಯಿಂದ ಕುದಿಯುತ್ತ ಕುಳಿತರು. ಶಸ್ತ್ರಚಾಲನೆ ಮಾಡಿ ರಾಜ್ಯ ದೊರೆಕಿಸುವ ಆಶೆಯು ಯಾರಿಗಾದರೂ ಇದ್ದರೆ ಅವರು ಪ್ರಯತ್ನಮಾಡದೆ ಬಿಡುತ್ತಿದ್ದರೆಂದು ತೋರುವದಿಲ್ಲ. ಇಂಗ್ಲಿಷರು ಸೇನಾಬಲದಿಂದ ಅರ್ಥಾತ್ ಶಸ್ತ್ರಬಲದಿಂದ ರಾಜ್ಯ ಸಂಪಾದನೆ ಮಾಡಿಲ್ಲವೆಂಬ ಪ್ರಮೇಯವನ್ನು ಸಿದ್ಧಪಡಿಸಲಿಕ್ಕೆ ಆಧಾರಗಳೇ ದೊರೆಯುವದಿಲ್ಲ. ಇಂಗ್ಲಿಷರ ವ್ಯವಸ್ಥೆ, ಅಚ್ಚುಕಟ್ಟುತನ, ಜಾಣತನ ಮೊದಲಾದವುಗಳು ಜನರಿಗೆ ಸೇರಿದವೆಂಬ ಮಾತು ಕೆಲವಂಶದಿಂದ ಸರಿಯಾಗಿದ್ದರೂ, ಇಂಗ್ಲಿಷರು ಬಾಜೀರಾಯನಿಂದ ರಾಜ್ಯ ತೆಗೆದುಕೊಳ್ಳದಿದ್ದರೆ, ಮಹಾರಾಷ್ಟ್ರದೊಳಗಿನ ಜನರು ವಿನಂತಿಪತ್ರಿಕೆ ಕಳುಹಿ, ತಾವಾಗಿ ಅವರ ಸ್ವಾಧೀನವಾಗುತ್ತಿದ್ದರೆಂದು ತೋರುವದಿಲ್ಲ. ಇಷ್ಟೆಲ್ಲ ವಿಚಾರ ಮಾಡಿದರೆ, ಇಂಗ್ಲಿಷರು ಶಸ್ತ್ರಬಲದಿಂದ ರಾಜ್ಯ ಸಂಪಾದನೆ ಮಾಡಲಿಲ್ಲವೆಂಬದು ಸರಿಯಾಗಿ ಕಾಣುವದಿಲ್ಲ; ಆದರೆ ಅವರ ಶಸ್ತ್ರಕ್ಕೆ ನಮ್ಮ ಸಹಾಯವು ಬಹಳವಾಗಿ ದೊರೆಯಿತೆಂಬ ಮಾತು ಮಾತ್ರ ಸತ್ಯವಾದದ್ದಾಗಿದೆ..

ಇಂಗ್ಲಿಷರು ಬಹಳ ಪ್ರದೇಶಗಳನ್ನು ಶಸ್ತ್ರದಿಂದ ಇಲ್ಲವೆ ಶಸ್ತ್ರದ ಭಯದಿಂದ ಗೆದ್ದಿದ್ದರೂ, ಇತರ ಸಾಧನಗಳಿಂದ ಹಲವು ಪ್ರದೇಶಗಳನ್ನು ದೊರಕಿಸಲಿಲ್ಲವೆಂದು ಹೇಳಲಿಕ್ಕೆ ಬರುವದಿಲ್ಲ. ಪೇಶವೆ, ಹೋಳಕರ, ಶಿಂದೆ, ಭೋಸಲೆ ಮೊದಲಾದವರು ಇಂಗ್ಲಿಷರೊಡನೆ ಪ್ರತ್ಯಕ್ಷ ಯುದ್ಧವನ್ನೇ ಮಾಡಿದರು. ಆದ್ದರಿಂದ ಅವರ ಪ್ರದೇಶಗಳನ್ನು ತೆಗೆದುಕೊಂಡದ್ದಕ್ಕೆ ರಾಜ ನೀತಿಯ ರಾಜಮಾನ್ಯ ಆಧಾರವಿತ್ತು; ಆದರೆ ದತ್ತಕ ತೆಗೆದುಕೊಳ್ಳುವ ಒಪ್ಪಿಗೆಯಿಲ್ಲದ್ದರಿಂದಲೂ, ಔರಸತನವಿಲ್ಲದ್ದರಿಂದಲೂ ಯಾವ ಪ್ರಾಂತಗಳು ಆಂಗ್ಲಾಧೀನವಾದವೋ, ಅವುಗಳನ್ನು ಇಂಗ್ಲಿಷರು ನ್ಯಾಯದಿಂದ ದೊರಕಿಸಿದರೆಂದು ಅನ್ನಲಿಕ್ಕೆ ಬರುವದಿಲ್ಲ. ಅವುಗಳಲ್ಲಿ ಒಪ್ಪಂದದಿಂದ ಸ್ನೇಹಬದ್ಧವಾಗಿದ್ದ ಹಾಗು ಸರಿಸಮಾಸ್ಕಂಧತೆಯಿಂದ ನಡೆಯಿಸಿಕೊಂಡ ರಾಜ್ಯಗಳನ್ನು ಅನೌರಸವೆಂದು ಆಂಗ್ಲಾಧೀನ ಮಾಡಿದ್ದು ದೊಡ್ಡ ಅನ್ಯಾಯವೆಂಬ ಮಾತಿನಲ್ಲಿ ವಾದವಿಲ್ಲ. ಸಾತಾರೆಯ ರಾಜ್ಯವನ್ನು ತೆಗೆದುಕೊಂಡ ಬೊಬ್ಬಾಟವು ಪಾರ್ಲಮೆಂಟಿನವರೆಗೂ ಹೋಗಿತ್ತು. ಈ ವಿಷಯವಾಗಿ ಇಂಗ್ಲಿಷ-ಇಂಗ್ಲಿಷರಲ್ಲಿ ನಡೆದ ವಾದವಿವಾದವು ಜಗತ್ತಿಗೆ ಕೇಳಲಿಕ್ಕಾದರೂ ದೊರೆಯಿತು. ಬೊಬ್ಬಾಟವಾಗದೆ ಹಾಗು ಜಗತ್ತಿಗೆ ಸುದ್ದಿ ಹತ್ತದೆ ಇಂಥ ಎಷ್ಟೋ ರಾಜ್ಯಗಳು ಆಂಗ್ಲಾಧೀನವಾದವು! ಸಾತಾರೆಯ ರಾಜ್ಯವು ಮರಾಟಶಾಹಿಯಲ್ಲಿ ಅಗ್ರಗಣ್ಯವಾದ್ದರಿಂದ, ಅದರ ವಿಷಯವಾಗಿ ಸ್ವಲ್ಪ ವಿಸ್ತಾರಪೂರ್ವಕವಾಗಿ ಚರ್ಚೆ ಮಾಡಿದರೆ ಅಸ್ಥಾನವೆನಿಸಲಿಕ್ಕಿಲ್ಲ.

ಸಾತಾರೆಯ ಮಹಾರಾಜರ ಪ್ರತ್ಯಕ್ಷ ಅಧಿಕಾರವು ಶಾಹೂರಾಜನ ಕಾಲದಿಂದ ಕಡಿಮೆಯಾಗುತ್ತ ನಡೆಯಿತೆಂಬದು ಪ್ರಸಿದ್ಧವೇ ಇದೆ. ಎರಡನೆಯ ಬಾಜೀರಾಯನ ವೇಳೆಯಲ್ಲಿ ಸಾತಾರೆಯ ಮಹಾರಾಜರು ತೀರ ನಾಮಶೇಷರಾಗಿದ್ದರು. ಇಂಥ ಸ್ಥಿತಿಯಿಂದ ಅವರು ತಲೆಯೆತ್ತಬೇಕೆಂದು ಅವರ ಪರಿವಾರದ ಪ್ರಯತ್ನ ನಡೆದಿತ್ತು. ಖಡಕಿಯ ಯುದ್ಧಕ್ಕೆ ಮುಂಚಿತವಾಗಿ ನಾಲ್ಕೈದು ವರ್ಷ ಈ ಪ್ರಯತ್ನಕ್ಕೆ ಇಂಗ್ಲಿಷರಿಂದ ಉತ್ತೇಜನ ದೊರೆಯತೊಡಗಿತ್ತು. ಕೊನೆಗೆ ಅಷ್ಟೆಯ ಯುದ್ಧವಾಗಿ ಪೇಶವೆಯು ಪರಾಭವಹೊಂದಲು, ಅವನ ವಶದಲ್ಲಿದ್ದ ಸಾತಾರೆಯ ಮಹಾರಾಜನನ್ನು ಇಂಗ್ಲಿಷರು ಸಾತಾರೆಗೆ ಒಯ್ದು, ತಿರುಗಿ ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಬಾಜೀರಾಯನು ಪಲಾಯನಕ್ಕೆ ಪ್ರಾರಂಭಿಸಿದೊಡನೆಯೆ ಇಂಗ್ಲಿಷರು ಒಂದು ಪ್ರಕಟನೆಯನ್ನು ಪ್ರಸಿದ್ಧಿಸಿದರು. ಅದರಲ್ಲಿ "ಬಾಜೀರಾಯನು ಸಾತಾರೆಯ ಮಹಾರಾಜರನ್ನು ಸೆರೆಯಲ್ಲಿರಿಸಿ ಅವರ ಅನಾವಸ್ಥೆ ಮಾಡಿ ಅವರ ಅಧಿಕಾರವನ್ನು ಸೆಳೆದುಕೊಂಡನು." ಎಂಬ ಆರೋಪವು ಬಾಜೀರಾಯನ ಮೇಲೆ ಇಡಲ್ಪಟ್ಟು, ಎಲ್ಲ ಸರದಾರರಿಗೂ ಜಹಾಗೀರದಾರರಿಗೂ "ಬಾಜೀರಾಯನೊಡನೆ ನಾವು ಯುದ್ಧವನ್ನು ಆರಂಭಿಸಿದರೂ ಮರಾಟಶಾಹಿಯನ್ನು ಮುಳುಗಿಸುವ ವಿಚಾರವು ನಮ್ಮದಿಲ್ಲ. ಮರಾಟಶಾಹಿಯು ಸ್ಥಿರವಾಗಿ ಉಳಿಯುವದು" ಎಂಬ ಆಶ್ವಾಸನೆಯು ದೊರೆಯುತ್ತಿತ್ತು. ಈ ಪ್ರಕಟನೆಯಿಂದ ಎಷ್ಟೋ ಮಂದಿ ಮರಾಟ ಸರದಾರರು

ಸಮಾಧಾನಹೊಂದಿ ಯುದ್ಧದಿಂದ ನಿವೃತ್ತರಾಗಿ ತಮ್ಮ ತಮ್ಮ ಮನೆಗೆ ಹೋದರು. ಆನಂತರದಲ್ಲಿ ಮಹಾರಾಜನಿಗೂ ಇಂಗ್ಲಿಷರಿಗೂ ಒಪ್ಪಂದವಾಯಿತು. ಸುಮಾರು ಹದಿನೈದು ಲಕ್ಷ ಉತ್ಪನ್ನದ ಸೀಮೆಯು ಸಾತಾರೆಯ ಮಹಾರಾಜರ ವಂಶಪರಂಪರೆಯ ರಾಜ್ಯವೆಂದು ದೊರೆಯಿತು. ಮುಂದೆ ಇಪ್ಪತ್ತು ವರ್ಷಗಳ ತರುವಾಯ ಪ್ರತಾಪಸಿಂಹ ಮಹಾರಾಜನ ಮೇಲೆ ಕೆಲವು ದೋಷಾರೋಪಣೆಯಾಗಿ ಅವನು ಕಾಶಿಯಲ್ಲಿಡಲ್ಪಟ್ಟನು. ಅನಂತರದಲ್ಲಿ ಅವನ ಬಂಧುವಾದ ಶಹಾಜಿ ಉರ್ಫ್ ಅಪ್ಪಾಸಾಹೇಬನೊಡನೆ ಇಂಗ್ಲಿಷರು ಹೊಸ ಒಪ್ಪಂದಮಾಡಿಕೊಂಡು ಅವನನ್ನು ಪಟ್ಟಕ್ಕೆ ಕುಳ್ಳಿರಿಸಿದರು. ೧೮೪೮ರಲ್ಲಿ ಶಹಾಜಿಯು ಮರಣಹೊಂದುವದಕ್ಕಿಂತ ಮುಂಚಿತವಾಗಿ ವೆಂಕೋಜಿಮಹಾರಾಜನನ್ನು ದತ್ತಕ ತೆಗೆದುಕೊಂಡನು. ಈ ವೇಳೆಯಲ್ಲಿ ಪ್ರಸಿದ್ಧ ಮುತ್ಸದ್ದಿಯೂ ಭಾವೀ ಗವ್ಹರ್ನರನೂ ಆದ ಸರ ವಾರ್ಟಲ ಫ್ರೀಯರನು ಸಾತಾರೆಯ ರೆಸಿಡೆಂಟನಿದ್ದನು. ಅವನು ಒಡಂಬಡಿಕೆಗೆ ಸರಿಯಾಗಿ ರಾಜಪರಿವಾರವನ್ನು ಕರೆಯಿಸಿ ದರಬಾರ ಕೂಡಿಸಿ ವೆಂಕೋಜಿಯನ್ನು ಪಟ್ಟಕ್ಕೆ ಕುಳ್ಳಿರಿಸಿದನು; ಆದರೆ ಸರಕಾರದ ಒಪ್ಪಿಗೆ ಪಡೆಯದೆ ದತ್ತಕ ತೆಗೆದುಕೊಂಡದ್ದಕ್ಕಾಗಿ ಅದನ್ನು ನಿರಾಕರಿಸಿ, ಕಂಪನಿಯ ಕೋರ್ಟ ಆಫ್ ಡಾಯರೆಕ್ಟರರು ಸಾತಾರೆಯ ರಾಜ್ಯವನ್ನು ಆಂಗ್ಲಾಧೀನಪಡಿಸಿದರು! ಈ ತೀರ್ಮಾನವು ಸರ್ವಸ್ವೀಯಾಗಿ ಅನ್ಯಾಯದ್ದಾಗಿತ್ತು; ಯಾಕಂದರೆ, ಈ ರಾಜ್ಯವು ಸ್ವತಂತ್ರವಿತ್ತು. ಅದಕ್ಕೆ ದತ್ತಕದ ನಿರ್ಬಂಧವು ಹತ್ತುತ್ತಿದ್ದಿಲ್ಲ; ಆದರೆ ರಾಜ್ಯದ ಉತ್ಪನ್ನವು ೩೫-೩೬ ಲಕ್ಷದವರೆಗೆ ಬೆಳೆದುದರಿಂದ, ಅದನ್ನು ಕಂಪನಿಯವರಿಗೆ ಬಿಡಲಿಕ್ಕಾಗಲಿಲ್ಲ. ಬಾಜೀರಾಯನು ಯುದ್ಧಮಾಡಿದ್ದರಿಂದ ಅವನನ್ನು ಪದಚ್ಯುತಗೊಳಿಸಿ, ಅವನ ರಾಜ್ಯವನ್ನು ಸ್ವಾಧೀನಪಡಿಸಿಕೊಂಡದ್ದು ಒಳ್ಳೇದಾಯಿತು. ಸಾತಾರೆಯ ಮಹಾರಾಜನು ನಿಃಪುತ್ರಿಕನಾಗಿ ಸತ್ತದ್ದು ಅಪರಾಧವೆಂದು ತಿಳಿಯಲಿಕ್ಕೆ ಬರುವದಿಲ್ಲವಾದ್ದರಿಂದ, ಇಂಗ್ಲಿಷ ಸರಕಾರದವರು ಹೀಗೆ ನಿಮಿತ್ತ ತೆಗೆದು ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳುವದು ಯೋಗ್ಯವಲ್ಲೆಂದು ನೂರಾರು ಇಂಗ್ಲಿಷರು ಅಭಿಪ್ರಾಯಪಟ್ಟಿರುವರು. ಸಾತಾರೆಯ ಹಳೆಯ ಹಾಗು ಹೊಸ ರೆಸಿಡೆಂಟನಾದ ಸರ ವಾರ್ಟಲ ಫ್ರೀಯರ, ಜನರಲ ಬ್ರಿಗ್ಸ, ಮಾಂ. ಸ್ಟು, ಎಲಿಫಿನಸ್ಟನ್ ಮೊದಲಾದ ಜನರಿಗೆ ಈ ಕೃತ್ಯವು ಅನ್ಯಾಯದ್ದಾಗಿ ತೋರಿ ಅವರು ಬಹಳೇ ಬಡಿದಾಡಿದರು. ಬಾಜೀರಾಯನ ಆಳಿಕೆಯು ಕೆಟ್ಟದ್ದಂತೆ ಸಾತಾರೆಯ ಮಹಾರಾಜರ ಆಳಿಕೆಯು ಕೆಟದ್ದಲ್ಲವೆಂಬದಕ್ಕೆ ಪ್ರಮಾಣಗಳಿವೆ. ಅದ್ದರಿಂದ ಆ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ಕಾರಣವಿದ್ದಿಲ್ಲ. ಮರಾಟರ ರಾಜ್ಯವನ್ನು ಸ್ಥಿರವಾಗಿರಿಸುವೆವೆಂದು ಇಂಗ್ಲಿಷರು ವಚನಕೊಟ್ಟಿದ್ದರು. ಈ ವಚನವನ್ನು ಸತ್ಯಮಾಡಿಕೊಳ್ಳಬೇಕಾಗಿದ್ದರೆ, ಪೇಶವೆಯನ್ನು ಕಿತ್ತೊಗೆದು, ತಮ್ಮ ಯುದ್ಧದ ಖರ್ಚನ್ನಷ್ಟು ತೆಗೆದುಕೊಂಡು, ಅವರು ನಾಲ್ಕು ಕೋಟಿ ಉತ್ಪನ್ನದ ರಾಜ್ಯವನ್ನು ಸಾತಾರೆಯ ಮಹಾರಾಜರ ಕಡೆಗೆ ನಡೆಯಿ

-ಸುವದಕ್ಕೆ ಏನು ಅಡ್ಡಿಯಿತ್ತು?

ಯುದ್ಧ ಮಾಡುವದು, ಒಪ್ಪಂದ ಮಾಡಿಕೊಳ್ಳುವದು, ಅಷ್ಟಪ್ರಧಾನರನ್ನು ನಿಯಮಿಸುವದು, ವಸ್ತ್ರಗಳನ್ನು ಕೊಡುವದು, ರಾಜ ಮುದ್ರೆ ಕೊಡುವದು, ಸರದಾರರನ್ನು ದಾಳಿ ಮಾಡಲಿಕ್ಕೆ ಕಳಿಸುವದು, ಕಂದಾಯ ವಸೂಲಿಗೆ ಕಳಿಸುವದು ತಿರುಗಿ ಕರೆಯಿಸುವದು, ಪಾರಿತೋಷಕ, ಸಂಭಾವನೆ, ಮನ್ನಣೆ, ಸರಂಜಾಮು ಕೆಲಸಕ್ಕೆ ನಿಯಮಿಸುವದು, ಧರ್ಮಾದಾಯ, ಕಾಣಿಕೆ, ವಂಶಪರಂಪರಾಗತ ಕೆಲಸಗಳು ಮೊದಲಾದ ಎಲ್ಲ ಸಂಗತಿಗಳಲ್ಲಿ ಪೇಶವೆಯು ಸಾತಾರೆಯ ಮಹಾರಾಜರ ಅನುಮತಿಯನ್ನು ಹೊಂದುತ್ತಿದ್ದನು. ಮಹಾರಾಜರ ಬಳಿಯಲ್ಲಿ ಪೇಶವೆಯ ಒಬ್ಬ ಕಾರಭಾರಿಯಿರುತ್ತಿದ್ದರು. ಪೇಶವೆಯಿಂದ ಬಂದ ಕಾಗದ-ಪತ್ರಗಳು ಇವನ ಮುಖಾಂತರ ಮಹಾರಾಜರಿಗೆ ತಲುಪುತ್ತಿದ್ದವು. ಪೇಶವೆಯ ಸಲಹೆಯ ಮೇರೆಗೆ ಮಹಾರಾಜರು ಆಜ್ಞೆ ಕೊಡುತ್ತಿದ್ದನು ಒಂದು ವೇಳೆ ಮಹಾರಾಜರು ಯಾವದೊಂದು ಕೆಲಸಕ್ಕೆ ಅಡ್ಡಿ ಮಾಡಿದರೆ ಪೇಶವೆಯು ಆ ಆಜ್ಞೆಯನ್ನು ಮುರಿದ ದೃಷ್ಟಾಂತಗಳು ಕಂಡು ಬರುವದಿಲ್ಲ; ಹಾಗು ಬಲುವೆಯಿಂದ ಅವನು ರಾಜಮುದ್ರೆಯನ್ನು ಮಾಡಿಸಿಕೊಂಡ ಉದಾಹರಣೆಗಳೂ ಇಲ್ಲ. ಹೀಗೆ ಒತ್ತಾಯದಿಂದ ಕೆಲಸ ಮಾಡುವದು ಸಾಧ್ಯವಿದ್ದರೆ, ಸಾತಾರೆಯಿಂದ ರಾಜಮುದ್ರೆಯನ್ನು ಮಾಡಿಸಿ ತರಿಸುವ ಆವಶ್ಯಕತೆಯೇನಿತ್ತು? ಯಾವ ಸಂಗತಿಗಳನ್ನು ಪೇಶವೆಗೇ ಮಾಡುವದು ಸಾಧ್ಯವಿತ್ತೋ ಆ ಕೆಲಸಗಳನ್ನು ಅವನು ಏಕೆ ಮಾಡಲಿಲ್ಲ? ಬಾಜೀರಾಯನಿಗೆ ವಸ್ತ್ರಗಳು ಸಾತಾರೆಯಿಂದ ಬಂದಿದ್ದವು. ಇಷ್ಟೇ ಅಲ್ಲ, ೧೮೧೧ರಲ್ಲಿ ಸಾತಾರೆಯ ಮಹಾರಾಜನು ಪುಣೆಗೆ ಹೋದಾಗ ಪೇಶವೆಯು ಅವನಿಗೆ ತನ್ನ ಧನಿಯು ಹಾಗೆಯೇ ಮನ್ನಿಸಿ ಸತ್ಕಾರ ಮಾಡಿದನು. ಎಂಥ ಸಣ್ಣ ವಿಷಯದಲ್ಲಾದರೂ ಮಹಾರಾಜನ ಆಜ್ಞೆಯು ಬೇಕಾಗುತ್ತಿತ್ತು. ಯುದ್ಧ ಪ್ರಸಂಗ, ಒಡಂಬಡಿಕೆ ಮೊದಲಾದ ಎಲ್ಲ ವಿಷಯಗಳಲ್ಲಿಯೂ ಮಹಾರಾಜನ ಸಲಹೆಯೂ ಆಜ್ಞೆಯೂ ಬೇಕಾಗುತ್ತಿದ್ದವು. ಈ ಎಲ್ಲ ವಿಷಯಗಳ ಬಗ್ಗೆ ಆಧಾರಗಳು ಬೇಕಾದರೆ, ಸಾತಾರೆಯ ಮಹಾರಾಜ ಅಪ್ಪಾಸಾಹೇಬನ ರಾಣಿಯು ಸಾತಾರೆಯ ರಾಜ್ಯವು ತಿರುಗಿ ದೊರೆಯಬೇಕೆಂದು ವಿಲಾಯತಿಯ ರಾಣೀ ಸರಕಾರದ ಕಡೆಗೆ ಮಾಡಿದ ಅರ್ಜಿಯನ್ನು ದೊರೆಕಿಸಿ ನೋಡಿದರೆ ನಮ್ಮ ಮಾತುಗಳು ಪ್ರತ್ಯಯಕ್ಕೆ ಬರುವವು. ಪೇಶವೆಯು ತಾನು ರಾಜ್ಯದ ಧನಿಯೆಂದು ಅನಿಸಿಕೊಂಡ ಬಗ್ಗೆ ಆಧಾರಗಳು ಎಲ್ಲಿಯೂ ದೊರೆಯುವದಿಲ್ಲ. ರಾಜ್ಯದ ಉತ್ಪನ್ನದೊಳಗಿಂದ ವಿಲಾಯತಿಯ ಸಿವ್ಹಿಲ್ ಲೀಸ್ಟಿನಂತೆ ಮಹಾರಾಜರ ಸ್ವಂತದ ವೆಚ್ಚಕ್ಕಾಗಿ ನಿಶ್ಚಿತ ಹಣವು ದೊರೆಯುವ ನಿಯಮವಿದ್ದರೂ, ಅವಶ್ಯಬಿದ್ದಾಗ ಅವರ ಸ್ವಂತ ವೆಚ್ಚಕ್ಕಾಗಿ ಸ್ವತಂತ್ರ ಹಣವು ದೊರೆಯುವದಕ್ಕೆ ಮಹಾರಾಜರ ಆಜ್ಞೆಯಾಗುತ್ತಿತ್ತು. ಕಾರಭಾರದ ಪರಂಪರೆಯು ಪುಣೆಯಲ್ಲಿ ಶಾಹುವಿನ ವೇಳೆಯಿಂದಲೇ ನಡೆದು ಬಂದಿತ್ತು. ಶಾಹುವಿನ ಕಾಲದಿಂದ ಮಹಾರಾಜ ಮಂಡಲವು ಆಲಸ್ಯ ವ್ಯಸನಗಳಲ್ಲಿ ಕಾಲಹರಣ ಮಾಡಕೊಡಗಿದ್ದುದೆ

ಕ್ಕಾಗಿ ರಾಜಕಾರಣದ ಕಡೆಗೆ ದುರ್ಲಕ್ಷ್ಯವಾಗುತ್ತಿದ್ದುದರಿಂದ ಪುಣೆಯ ಛಾವಣಿ ಯಲ್ಲಿ ಪೇಶವೆಯವರ ಅಧಿಕಾರ ಪರಂಪರೆಯು ಬಲಗೊಳ್ಳುತ್ತ ನಡೆದದ್ದೇನೂ ಸುಳ್ಳಲ್ಲ; ಆದರೆ ಯಾವನೊಬ್ಬ ಮಹಾರಾಜನು ತನ್ನ ಕಾರಭಾರಿಯು ತಲೆಭಾರಾದ ನೆಂಬ ನಿಮಿತ್ತದಿಂದ ಸ್ವಾಭಿಮಾನಪೂರ್ವಕವಾಗಿ ಆವನ ಮೇಲೆ ಹರಿಹಾಯ್ದ ಉದಾಹರಣೆಗಳಿಲ್ಲ. ಶಿಂದೆ, ಹೋಳಕರ, ನಾಗಪುರದ ಭೋಸಲೆ ಮೊದಲಾದ ಸರದಾ ರರ ಕಡೆಗೆ ಗುಪ್ತರೀತಿಯಿಂದ ಪತ್ರವ್ಯವಹಾರ ನಡೆಸಿ, ಪೇಶವೆಯ ತೊಂದರೆಯನ್ನು ತಪ್ಪಿಸಿಕೊಳ್ಳುವದು ಮಹಾರಾಜ ಮಂಡಲಕ್ಕೆ ಸಾಧ್ಯವಿತ್ತು. ಮಹಾರಾಜ ಮಂ ಡಲವನ್ನು ಪೇಶವೆಯವರು ನಿಜವಾಗಿ ಕಾರಾಗೃಹದಲ್ಲಿರಿಸಿದ್ದರೆ, ಮರಾಟ ಸರದಾ ರರು ತಮ್ಮ ಜಾತಿಯ ಹಾಗು ಮೂಲ ಸಿಂಹಾಸನದ ಅಭಿಮಾನದಿಂದ ಅವರನ್ನು ಮುಕ್ತಗೊಳಿಸುತ್ತಿದ್ದರು; ಆದರೆ ಅವರು ಹಾಗೆ ಮಾಡದೆ ಇದ್ದುದಕ್ಕೆ ಕಾರಣವೇ ನಂದರೆ, ಮಹಾರಾಜ ವ್ಯಕ್ತಿಗಳ ಹೇಡಿತನ, ಪೇಶವೆಯವರು ಮುಕ್ಕಾಲು ಶತಕದ ವರೆಗೆ ಮರಾಟ ರಾಜ್ಯದ ವೈಭವವನ್ನು ಬೆಳೆಯಿಸಲಿಕ್ಕೆ ಮಾಡಿದ ಸಾಹಸ, ರಾಜ್ಯ ಕಾರಭಾರದ ಅಚ್ಚುಕಟ್ಟುತನ ಮೊದಲಾದವುಗಳನ್ನು ನೋಡಿ ಇದ್ದ ಸ್ಥಿತಿಯು ಅನುಚಿತವಲ್ಲವೆಂದೂ, ಈ ಸ್ಥಿತಿಯು ಅಭ್ಯಂತರಹೊಂದಲಿಕ್ಕೆ ಶಸ್ತ್ರ ಹಿಡಿಯುವ ಅವಶ್ಯಕತೆಯಿಲ್ಲವೆಂದೂ ಅವರು ತಿಳಿದುಕೊಂಡದ್ದೇ ಕಾರಣವಾಗಿದೆ. ಅದು ಹೇಗಿ ದ್ದರೂ, ಇಂಗ್ಲಿಷರಿಗೆ ಸಾತಾರೆಯ ಮಹಾರಾಜರ ಧನಿತನವು ಮಾನ್ಯವಿತ್ತು. ಪೇಶವೆ ಯನ್ನು ಅವರು ಸೇವಕರೆಂದು ಭಾವಿಸಿದ್ದರು. ಪೇಶವೆಯ ನಡತೆಗೆ ಅವರು ಅಧಿ ಕಾರಾತಿಕ್ರಮಣವೆಂದು ಹೆಸರು ಕೊಡುತ್ತಿದ್ದರು. ಹಾಗಿದ್ದರೆ ಸಾತಾರೆಯ ಮಹಾ ರಾಜನು ಬಾಜೀರಾಯನ ಕೈಯಿಂದ ಇಂಗ್ಲಿಷರ ಕೈಯಲ್ಲಿ ಉಪಕೃತ ಸ್ನೇಹಿಯೆಂದು ಹೋದ ಮೇಲೆ ಅವನನ್ನು ಅವರು ಸ್ವತಂತ್ರ ರಾಜನೆಂದು ತಿಳಿಯಲಿಕ್ಕೆ ಯಾವ ಅಡ್ಡಿ ಯಿತ್ತು? ಸಾತಾರೆಯವರನ್ನು ಸ್ವತಂತ್ರರೆಂದು ತಿಳಿದಿದ್ದರೆ ದತ್ತಕದ ನಿಮಿತ್ಯದಿಂದ ರಾಜ್ಯವನ್ನು ಆಂಗ್ಲಾಧೀನ ಮಾಡಲಿಕ್ಕೆ ಹೇಗೆ ಬರುತ್ತಿತ್ತು? ಎಲ್ಫಿನಸ್ಟನನು ೧೮೧೭ ರಲ್ಲಿ ಪ್ರಸಿದ್ಧಿಸಿದ ಪ್ರಕಟನೆಯಲ್ಲಿ ಕೆಳಗಿನ ಶಬ್ದಗಳಿವೆ:—

The Raja ot Satara Who is now a prisoner in Bajirao's hands will bereleased and placed at the head of an independent sovereignty of such an extent as may maintain the Rsja and his family in comfort and dignity.

ಮೇಲಿನ ಶಬ್ದಗಳಲ್ಲಿ ಮರಾಠೀ ರಾಜ್ಯವೆಲ್ಲ ಸಾತಾರೆಯ ರಾಜರ ಸ್ವಾಧೀನ ವಾಗುವದಿಲ್ಲ; ಕೆಲವು ಆಂಗ್ಲಾಧೀನವಾಗುವದು ಎಂಬ ಧ್ವನಿಯು ಹೊರಟಿದೆ. ಆದರೆ "independent sovereignty" ಈ ಶಬ್ದವನ್ನು ಸತ್ಯಮಾಡುವದಿ ದ್ದರೆ ಮುಂದೆ ಮಹಾರಾಜರೊಡನೆ ಆದ ಒಪ್ಪಂದದಲ್ಲಿ, ಅವರ ಸ್ವಾತಂತ್ರ್ಯಕ್ಕೆ ಬಾಧೆ ಬರುವಂಥ ಯಾವ ಕಟ್ಟಳೆಗಳನ್ನೂ ಹಾಕುವದು ಯೋಗ್ಯವಾಗಿರಲಿಲ್ಲ. ಕೊನೆಗೆ ಹಳೆಯ ಅನುಭವದ ಮೇಲಿಂದ ಪರರಾಜರೊಡನೆ ಪತ್ರವ್ಯವಹಾರ

ಸಂಬಂಧ, ಜಹಗೀರದಾರ ಸರದಾರರ ವ್ಯವಸ್ಥೆ ಮೊದಲಾದವುಗಳನ್ನು ಇಂಗ್ಲಿಷರ ಮುಖಾಂತರ ಮಾಡಬೇಕೆಂಬ ಕಟ್ಟಳೆ ಹಾಕುವದು ಅವಶ್ಯಕವೆಂದು ಭಾವಿಸಿದರೂ, ಅದರ ಯೋಗದಿಂದ ದತ್ತಕದ ಅನುಜ್ಞೆಯ ದಾಳಿಯನ್ನು ಮಹಾರಾಜರ ಹಿಂದೆ ಸ್ಥಿರವಾಗಿ ಹಚ್ಚಬೇಕಾಗಿದ್ದಿಲ್ಲ. ರಾಜ್ಯಕೊಡಬೇಕಾಗಿದ್ದರೇನೇ ಸ್ವಲ್ಪ ಕೊಟ್ಟರು. ನಾಲ್ಕು ಕೋಟಿ ಉತ್ಪನ್ನದ ರಾಜ್ಯದಲ್ಲಿ ಹದಿನೈದು ಲಕ್ಷದ ರಾಜ್ಯವೇನೂ ಬಹಳವಲ್ಲ. ಇಷ್ಟಾಗಿಯೂ ಒಡಕು-ವೈಮನಸ್ಸುಗಳನ್ನು ಉಂಟು ಮಾಡಬಾರದೆಂಬ ಬಗ್ಗೆ ಕಟ್ಟಳೆಯೂ ಆಗಿತ್ತು. ಇಷ್ಟು ಬಿಗಿಯಾದ ಮೇಲೆ ಮಹಾರಾಜನ ಹಿಂದೆ ಅವನ ಔರಸ ಸಂತತಿಯವರಾಗಲಿ, ದತ್ತಕಪುತ್ರನಾಗಲಿ ಹದಿನೈದು ಲಕ್ಷದ ಉತ್ಪನ್ನವನ್ನು ತಿಂದರೆ ಇಂಗ್ಲಿಷರಿಗೆ ವಿಷಾದವೇಕೆ ಆಗಬೇಕು? ಪ್ರಕಟನೆಯೊಳಗಿನ 'ಸ್ವತಂತ್ರ ರಾಜ' ಎಂಬ ಶಬ್ದವು ಪ್ರಕಟನೆಯಲ್ಲಿಯೇ ಉಳಿಯಿತು. ಒಪ್ಪಂದದಿಂದ ಮಹಾರಾಜರಿಗೆ 'Subordinate Ally' ಎಂಬ ಗೌಣ ತರಗತಿಯು ಬಂದು, ಮುಂದೆ ದತ್ತಕದ ಪ್ರಸಂಗದಲ್ಲಿ 'Dependent Ally' ಅಂದರೆ ಕೈಕೆಳಗಿನ ಸಂಸ್ಥಾನಿಕ ಎಂಬಂತೆ ನಡೆಯಿಸಿಕೊಂಡರು. ಚಮತ್ಕಾರವೇನಂದರೆ, ರಾಜ್ಯವನ್ನು ಆಂಗ್ಲಾಧೀನ ಮಾಡುವ ಪ್ರಸಂಗ ಬಂದಾಗ ಪೇಶವೆಯವರು ಮಹಾರಾಜರನ್ನು ಬಂಧನೆಯಲ್ಲಿರಿಸಿ ಪರತಂತ್ರಮಾಡಿದ್ದು ನಿಜವಾದ ರಾಜ್ಯಭ್ರಷ್ಟತೆಯೆಂದು ಗಣಿಸಿ, "ಪೇಶವೆಯ ವೇಳೆಯಲ್ಲಿಯೇ ನೀವು ಸ್ವತಂತ್ರ ರಾಜರಿಲ್ಲದಾಗ, ನಮ್ಮ ವರ್ಚಸ್ಸಿನ ಕೆಳಗೆ ನೀವು ಹೇಗೆ ಸ್ವತಂತ್ರರು?" ಎಂಬ ಯುಕ್ತಿವಾದವು ಆರಂಭವಾಯಿತು.

ಪೇಶವೆಯ ವೇಳೆಯ ಪಾರತಂತ್ರ್ಯವೇ ಇಂಗ್ಲಿಷರ ಸ್ನೇಹ ಸಂಬಂಧವಾದ ಮೇಲೆ ಸಾತಾರೆಯ ಮಹಾರಾಜರನ್ನು ಅಂಟಿಕೊಂಡರೆ ಇಂಗ್ಲಿಷರು ಮಹಾರಾಜರ ಮೇಲೆ ಯಾವ ಉಪಕಾರ ಮಾಡಿದಂತಾಯಿತು? ೧೮.೧೯ ಅಥವಾ ೧೮೩೯ ಈ ವರ್ಷಗಳ ಒಡಂಬಡಿಕೆಯ ಶಬ್ದಗಳಲ್ಲಿ ವಾಸ್ತವವಾಗಿ ಮಹಾರಾಜರು ಇಂಗ್ಲಿಷರ ಕೈಕೆಳಗೆ ಸರದಾರರೆಂಬ ಸಂಬಂಧವನ್ನು ಜೋಡಿಸುವ ಯಾವ ಶಬ್ದಗಳೂ ಇರಲಿಲ್ಲ. ಸತ್ತೆಯಿಂದ ಇಂಗ್ಲಿಷರು ಎಷ್ಟೇ ಶ್ರೇಷ್ಠರಾಗಿದ್ದರೂ ಅವರು ಇನ್ನೂ ರಾಜಾಧಿರಾಜರಾಗಿದ್ದಿಲ್ಲ. ಶಿವಾಜಿಯು ಮೊಗಲರಿಂದ ಸ್ವರಾಜ್ಯವನ್ನು ಗೆದ್ದುಕೊಂಡು ಸ್ವಂತ ರಾಜ್ಯಾಭಿಷೇಕ ಮಾಡಿಸಿಕೊಂಡಿದ್ದನು. ಅದೇ ಸ್ವತಂತ್ರರಾಜ್ಯದ ಔರಸ ಪುತ್ರನಾದ ಪ್ರತಾಪಸಿಂಹ ಮಹಾರಾಜನು ೧೮೧೯ರಲ್ಲಿ ಇದ್ದನು; ಮತ್ತು ಅದೇ ಸಂಬಂಧವು ೧೮೩೯ನೆಯ ವರ್ಷದ ವರೆಗೂ ಸಾಗಿತ್ತು. ಇದಕ್ಕೆ ವಿಪರೀತವಾಗಿ ಇಂಗ್ಲಿಷರ ಸತ್ತೆಯು ಮೊಗಲರ ದಿವಾಣ, ಕಾರಭಾರಿ, ಸೇನಾಪತಿ ಈ ಸಂಬಂಧದ್ದೇ ಇತ್ತು. ೧೮೩೯ನೇ ವರ್ಷದಲ್ಲಾದರೂ ಇಂಗ್ಲಿಷ ಸರಕಾರವು ವ್ಯಾಪಾರಿ ಕಂಪನಿಯೆಂದೇ ಅನ್ನಿಸಿಕೊಳ್ಳುತ್ತಿತ್ತು. ಎರಡೂ ಒಪ್ಪಂದಗಳಲ್ಲಿ ಇಂಗ್ಲಿಷರವೆಂದು ಯಾವ ಮುದ್ರೆಗಳಾದವೋ, ಅವುಗಳಲ್ಲಿ 'ವ್ಯಾಪಾರೀ ಕಂಪನಿ ಮತ್ತು ದಿಲ್ಲೀ ಬಾದಶಹನ ನೌಕರ' ಎಂಬ ಶಬ್ದಗಳೇ ಇದ್ದವು. ಅರ್ಥಾತ್ ಕಾಯದೆಯ ಭಾಷೆಯಿಂದ ಮಾತಾಡುವದಾದರೆ, ದಿಲ್ಲಿಯ

ಬಾದಶಹರ ಸಂಬಂಧದಲ್ಲಿ ಮಹಾರಾಜರ ನಾತೆಯು ಶ್ರೇಷ್ಠವೂ ಇಂಗ್ಲಿಷರದು ಕನಿಷ್ಠವೂ ಎಂದೆನ್ನಬೇಕಾಗುವದು. ಚೌಥಾಯಿ-ಸರದೇಶಮುಖಿಗಳ ಸನದುಗಳು ಬಾದಶಹನಿಂದ ಮರಾಟರಿಗೂ ದೊರೆತದ್ದನ್ನು ನಿರೀಕ್ಷಿಸಿದರೆ, ಮರಾಟರೂ-ಇಂಗ್ಲಿಷರೂ ಬಾದಶಹನ ಸನದೀ ನೌಕರರು; ಅಂದರೆ ಪರಸ್ಪರರು ಸಮಾನಸ್ಕಂಧರು ಎಂದು ಅನ್ನಲಿಕ್ಕೆ ಏನೂ ಪ್ರತ್ಯವಾಯುವಿಲ್ಲ.

ರಾಜನ ಅಧಿಕಾರವನ್ನು ಪ್ರಧಾನರು ಮರ್ಯಾದಿತಗೊಳಿಸುವರೆಂಬದು ಇಂಗ್ಲಂಡಕ್ಕೆ ಗೊತ್ತೇ ಇತ್ತು. ಖುದ್ದ ಇಂಗ್ಲಂಡದ ಅರಸನು ೧೮೧೮ನೆಯ ಇಸವಿಯಲ್ಲಿ ಸಾತಾರೆಯ ಮಹಾರಾಜರಿಗಿಂತ ಯಾವ ಹೆಚ್ಚಿನ ಅಧಿಕಾರ ನಡೆಯಿಸುತ್ತಿದ್ದನು? ಇಂಗ್ಲಂಡದಲ್ಲಾದರೂ ಪ್ರಧಾನರೇ ರಾಜನ ಹೆಸರಿನಿಂದ ಎಲ್ಲ ರಾಜ್ಯಕಾರಭಾರ ಮಾಡುತ್ತಿರುತ್ತಾರೆ. ಇಂಗ್ಲಂಡದ ರಾಜನು ಪ್ರಧಾನಿಗಳ ಅಭಿಪ್ರಾಯಗಳನ್ನು ಕಿತ್ತು ಹಾಕುವ ಧೈರ್ಯ ಮಾಡುತ್ತಾನೆಯೋ ಹೇಗೆ? ಅದರಂತೆ ಪೇಶವೆಯರ ಸಲಹೆಗಳನ್ನು ಸಾತಾರೆಯ ಮಹಾರಾಜರು ಅಲ್ಲಗಳೆಯುತ್ತಿರಲಿಕ್ಕಿಲ್ಲ. ಪೇಶವೆಯು ಮನಬಂದಂತೆ ಕಾರಭಾರ ಮಾಡುತ್ತಿದ್ದನೆಂದು ಸಾತಾರೆಯ ಮಹಾರಾಜನು ಪದಭ್ರಷ್ಟನಾಗಿದ್ದನೆಂದು ಹೇಳಲಿಕ್ಕೆ ಬರುವದಿಲ್ಲ. ಇಂಗ್ಲಿಷರಿಗೆ ತಿಳಿಸಿದ ಹೊರತು ಪರರಾಷ್ಟ್ರದೊಡನೆ ವ್ಯವಹಾರ ಮಾಡುವದಿಲ್ಲವೆಂದು ಸಾತಾರೆಯ ಮಹಾರಾಜರು ಒಪ್ಪಿದ ಮಾತ್ರಕ್ಕೆ ಅವರು ಸ್ವತಂತ್ರ ರಾಜರಲ್ಲವೆಂದು ಅನ್ನಲಿಕ್ಕೆ ಬರುವದಿಲ್ಲ ಒಬ್ಬ ರಾಜನು ಮತ್ತೊಬ್ಬ ರಾಜನನ್ನು ಪರಾಭವಗೊಳಿಸಿದರೆ, ಪರಾಭೂತ ರಾಜನು ವಿಜಯಿ ರಾಜನ ಕೆಲವು ಕಟ್ಟಳೆಗಳನ್ನು ಮಾನ್ಯ ಮಾಡಲೇಬೇಕಾಗುವದು; ಆದರೆ ಇಷ್ಟರಿಂದ ಪರಾಭೂತನ ಸ್ವಾತಂತ್ರ್ಯವು ನಷ್ಟವಾಯಿತೆಂದು ಅನ್ನಲಿಕ್ಕೆ ಬರುವುದಿಲ್ಲ. ಇಟಾಲಿಯು ಕಾರ್ಥೇಜವನ್ನು ಗೆದ್ದು ಅದರ ಮೇಲೆ ಅಳತೆಗೆಟ್ಟ ಕಟ್ಟಳೆಗಳನ್ನು ಹೇರಿತು; ಆದರೆ ಇಷ್ಟರಿಂದ ಕಾರ್ಥೇಜದ ರಾಜಕೀಯ ಸ್ವಾತಂತ್ರ್ಯವು ನಾಶವಾಯಿತೆಂದು ಕೇಳಬರುವದಿಲ್ಲ.

ಇಂಗ್ಲಿಷರ ಹಾಗು ಸಾತಾರೆಯ ಮಹಾರಾಜರ ನಡುವಿನ ಒಪ್ಪಂದವು ಒಬ್ಬರು ಮತ್ತೊಬ್ಬರನ್ನು ಕಾಳಗದಲ್ಲಿ ಜಯಿಸಿ ಮಾಡಲ್ಪಟ್ಟಂಥಾದ್ದಿರಲಿಲ್ಲ. ಉಭಯತರ ನಡುವೆ ಸ್ನೇಹದ ಒಪ್ಪಂದವಾಗಿತ್ತು. ಶ್ರೇಷ್ಠ ಹಾಗು ಕನಿಷ್ಠ ರಾಷ್ಟ್ರಗಳಲ್ಲಿ ಸ್ವಾತಂತ್ರ್ಯವನ್ನು ಕಾಯ್ದುಕೊಂಡು ವಿಶಿಷ್ಟ ಸಂಗತಿಗಳನ್ನು ಮಾಡಬೇಕು, ಅಥವಾ ಮಾಡಬಾರದು ಎಂಬ ಕಟ್ಟಳೆಯ ಒಪ್ಪಂದಗಳಾಗುವವು. ೧೮೦೯ನೆಯ ವರ್ಷ ಕಾಬೂಲದ ಅಮೀರನು 'ಫ್ರೆಂಚ ಮನುಷ್ಯನನ್ನು ನನ್ನ ರಾಜ್ಯದಲ್ಲಿ ತೆಗೆದುಕೊಳ್ಳುವದಿಲ್ಲ.' ಎಂದು ಇಂಗ್ಲಿಷರೊಡನೆ ಒಪ್ಪಿ ಒಪ್ಪಂದ ಮಾಡಿಕೊಂಡನು. ೧೮೫೫ರಲ್ಲಿ ನೇಪಾಳದ ರಾಜನು ಇಂಗ್ಲಿಷರೊಡನೆ ಒಪ್ಪಂದ ಮಾಡಿಕೊಂಡಾಗ, "ಸಿಕೀಮದ ರಾಜನೊಡನೆ ವಾದವು ಉಪಸ್ಥಿತವಾದರೆ ಅದನ್ನು ನಿಮ್ಮ ಮಧ್ಯಸ್ತಿಕೆಯಿಂದ ತೀರಿಸಿಕೊಂಡು ನಿಮ್ಮ ತೀರ್ಪನ್ನು ಮಾನ್ಯ ಮಾಡುವೆನು" ಎಂದು ಒಪ್ಪಿದನು. ಇಂಥ ಒಪ್ಪಂದಗಳ

ಯೋಗದಿಂದ ಕಾಬೂಲದ ಅಮೀರನ ಹಾಗು ನೇಪಾಳದ ರಾಜನ ಸ್ವಾತಂತ್ರ್ಯವು ನಷ್ಟವಾಯಿತೆಂದು ಯಾರೂ ಅನ್ನುವದಿಲ್ಲ. ಉಭಯ ರಾಜರ ದತ್ತಕದ ಕೆಲಸದಲ್ಲಿ ಅವರು ಇಂಗ್ಲಿಷರ ಒಪ್ಪಿಗೆ ತೆಗೆದುಕೊಳ್ಳಬೇಕಾಗುವದಿಲ್ಲ. ಇದೇ ಮಾತು ಸಾತಾರೆಯ ರಾಜರಿಗೆ ಸಂಬಂಧಿಸುವದು. ಸಾತಾರೆಯ ಮಹಾರಾಜರು ಎಷ್ಟೇ ದುರ್ಬಲರಾಗಿದ್ದರೂ, ಇಂಗ್ಲಿಷರು ಎಷ್ಟೇ ಪ್ರಬಲರಾಗಿದ್ದರೂ ೧೮.೧೭ನೆಯ ವರ್ಷದ ಪ್ರಸಿದ್ಧ ಪತ್ರಿಕೆಯಲ್ಲಿ "ಸ್ವತಂತ್ರ ರಾಜ" ಎಂಬ ಶಬ್ದವು ಉಪಯೋಗಿಸಲ್ಪಟ್ಟಿದ್ದು, 'ಜಹಾಗೀರದಾರ' ಎಂಬ ಶಬ್ದವು ಇದ್ದಿಲ್ಲವೆಂಬ ಮಾತು ಇಲ್ಲದಂತಾಗುವದಿಲ್ಲ. ಒಬ್ಬ ರಾಜನ ಪ್ರಾಂತವು ಎರಡನೆಯವನಿಗಿಂತ ಕಡಿಮೆಯಿದ್ದರೆ ಇಲ್ಲವೆ ಒಬ್ಬನ ಸೇನಾ ಸಾಮರ್ಥ್ಯವು ಎರಡನೆಯವನಿಗಿಂತ ಕಡಿಮೆಯಿದ್ದರೆ, ಅವನು ಎರಡನೆಯವನ ಸಹಾಯವನ್ನವಲಂಬಿಸಿದ್ದರೆ ಮೊದಲನೆಯ ರಾಜನು ಸ್ವತಂತ್ರನಲ್ಲವೆಂದು ಹೇಳಲಿಕ್ಕೆ ಬರುವದಿಲ್ಲ.

ಸದ್ಯಕ್ಕೆ ಯುರೋಪದಲ್ಲಿ ದುರ್ಬಲ ರಾಜ್ಯಗಳು ಸಹ ಸ್ವತಂತ್ರ ರಾಜ್ಯಗಳೆಂದು ಗಣಿಸಲ್ಪಡುವವೆಂಬ ಮಾತು ಸಿದ್ಧವಾಗಿದ್ದು, ಇಂಥ ದುರ್ಬಲ ರಾಷ್ಟ್ರಗಳು ಆತ್ಮರಕ್ಷಣೆ ಮಾಡಿಕೊಳ್ಳಲಿಕ್ಕೆ ಅಸಮರ್ಥವಿದ್ದುದರಿಂದ ಇಂಥ ರಾಜ್ಯಗಳ ರಾಜರ ಸ್ವಾತಂತ್ರವನ್ನು ಸಿದ್ಧಮಾಡುವದಕ್ಕಾಗಿ ಸದ್ಯದ ಮಹಾಯುದ್ಧದಲ್ಲಿ ಇಂಗ್ಲಂಡವು ಯುದ್ಧದಲ್ಲಿ ತೊಡಗಿದ್ದನ್ನು ತನ್ನ ಬಾಯಿಯಿಂದಲೇ ಒಪ್ಪಿದೆ. ಸನ್ ೧೮೧೯ನೆಯ ವರ್ಷದ ಒಪ್ಪಂದದಲ್ಲಿ ಉಭಯ ಪಕ್ಷದ ಸೌಕರ್ಯವೇ ಮುಖ್ಯವಾಗಿ ನೋಡಲ್ಪಟ್ಟಿತ್ತು. ಸಾತಾರೆಯ ಮಹಾರಾಜನಿಗೆ ಆತ್ಮರಕ್ಷಣೆ ಮಾಡಿಕೊಳ್ಳುವದಿತ್ತು; ಮರಾಟ ರಾಜರ ಹಾಗು ಸರದಾರರ ಮನಸ್ಸನ್ನು ಸಂತುಷ್ಟಗೊಳಿಸಿ ಭಾವೀ ಯುದ್ಧಗಳನ್ನು ತಪ್ಪಿಸಿ ಸ್ವಂತದ ವೆಚ್ಚವನ್ನೂ ರಾಜ್ಯವನ್ನೂ ಉಳಿಸಿಕೊಳ್ಳುವ ಉದ್ದೇಶವು ಇಂಗ್ಲಿಶರದಿತ್ತು. ಆದ್ದರಿಂದ ಪರಸ್ಪರರು ಸಂತೋಷದಿಂದ ಒಪ್ಪಂದ ಮಾಡಿಕೊಂಡರು. ದತ್ತಕ ತೆಗೆದುಕೊಳ್ಳಬೇಕಾದರೆ ಒಪ್ಪಿಗೆ ಪಡೆಯಬೇಕೆಂಬ ಬಂಧನ ಹಾಕುವದಿದ್ದರೆ ಇತರ ಕಟ್ಟಳೆಗಳೊಡನೆ ಅದನ್ನೂ ಏಕೆ ಹಾಕಲಿಲ್ಲ? ಸಾತಾರೆಯ ಮಹಾರಾಜರಿಗೆ ಅದೇ ವೇಳೆಯಲ್ಲಿ ಸ್ವತಂತ್ರ ರಾಜ್ಯವನ್ನು ಕೊಡದಿದ್ದರೆ, ಇಂಗ್ಲಿಷರ ಕೈ ಹಿಡಿಯುವವರು ಯಾರಿದ್ದರು? ಆದರೂ ಉದಾರ ಮನಸ್ಸಿನಿಂದಲೇ ಏಕಾಗಲೊಲ್ಲದು, ಒಮ್ಮೆ ಕೊಟ್ಟ ರಾಜ್ಯವನ್ನು ತಿರುಗಿ ತೆಗೆದುಕೊಳ್ಳುವ ಅಧಿಕಾರವು ಅವರಿಗಿದ್ದಿಲ್ಲ. ಕಾಯದೆ, ನ್ಯಾಯನೀತಿ ಮೊದಲಾದ ದೃಷ್ಟಿಯಿಂದ ಸಾತಾರೆಯ ರಾಜ್ಯವು ಆಂಗ್ಲಾಧೀನವಾದದ್ದು ಅತಿರೇಕವಾಯಿತು. ಹಿಂದುಸ್ತಾನದೊಳಗಿನ ಎಷ್ಟೋ ರಾಜ್ಯಗಳು ಶಸ್ತ್ರಬಲದಿಂದ ಇಂಗ್ಲಿಷರ ಅಧೀನವಾದವು; ಆದರೆ ಕೆಲವು ರಾಜ್ಯಗಳನ್ನು ಅವರು ನ್ಯಾಯ ನೀತಿಗಳ ಕಡೆಗೆ ಲಕ್ಷ್ಯಗೊಡದೆ ರಾಜ್ಯ ಸಂಪಾದನೆಯ ಭರದಲ್ಲಿ ದೊರಕಿಸಿದರೆಂಬ ಮಾತಾದರೂ ಸುಳ್ಳಲ್ಲವೆಂಬದನ್ನು ತೋರಿಸುವದಕ್ಕಾಗಿ ಸಾತಾರೆಯ ರಾಜ್ಯದ ಉದಾಹರಣೆಯನ್ನು ಇಷ್ಟು ವಿಸ್ತಾರಪೂರ್ವಕ ವರ್ಣಿಸಿದೆವು. ಲಾರ್ಡ ಡಲಹೌಸಿಯ ಆಳಿಕೆಯಲ್ಲಿ ಇಂಗ್ಲಿಷರ ರಾಜ್ಯಕ್ಕೆ

ಕೂಡಿದ ಪ್ರದೇಶಗಳಲ್ಲಿ ಬಹಳ ಪ್ರದೇಶಗಳಿಗೆ ಇದೇ ವಿಚಾರಸರಣಿಯು ಹತ್ತುವ ಸಂಭವಿದೆ; ಆದರೆ ಆ ವಿಷಯದ ಬಗ್ಗೆ ಹೆಚ್ಚಾಗಿ ವಿಸ್ತಾರ ಮಾಡುವದಕ್ಕೆ ನಾವು ಇಚ್ಛಿಸುವದಿಲ್ಲ.

ಮರಾಟಶಾಹಿಯ ನಾಶದ ಸತ್ಯಾಸತ್ಯ ಕಾರಣಗಳ ವಿವೇಚನವನ್ನು ಇನ್ನೂ ಅನೇಕ ದೃಷ್ಟಿಯಿಂದ ಮಾಡುವಂತಿದೆ; ಆದರೆ ವಿಸ್ತಾರಭಯಕ್ಕಾಗಿ ಕೊನೆಗೆ ಒಂದೇ ವಿಷಯದ ಬಗ್ಗೆ ಸ್ವಲ್ಪ ವಿಚಾರ ಮಾಡಿ ಈ ಪ್ರಕರಣವನ್ನು ಮುಗಿಸುವೆವು.

## ಜಾತಿಭೇದವೂ ರಾಜ್ಯನಾಶವೂ.

ಮರಾಟಶಾಹಿಯ ಅವನತಿಗೆ ಜಾತಿಭೇದವು ಕಾರಣವಾಯಿತೆಂದು ಎಷ್ಟೋ ಜನರು ಅನ್ನುತ್ತಾರೆ; ಆದರೆ ಜಾತಿಭೇದದ ಮೇಲೆ ಎಷ್ಟರಮಟ್ಟಿಗೆ ಭಾರ ಹಾಕಬೇಕೆಂಬ ಮಾತಿನ ಬಗ್ಗೆ ಬಹಳೇ ಅನುಮಾನ ತೋರುವದು. ಮಹಾರಾಷ್ಟ್ರದಲ್ಲಿ ಜಾತಿಭೇದವಿತ್ತೆಂಬುದೇನೋ ನಿಜ; ಆದರೆ ಅದು ಬಾಳಾಜಿ ವಿಶ್ವನಾಥನ ಕಾಲದಿಂದ ಮುಂದೆ ಮಹಾರಾಷ್ಟ್ರದಲ್ಲಿ ಹುಟ್ಟಿತೆಂಬ ಹಾಗೇನೂ ಇಲ್ಲ; ಹಾಗು ಅವನಿಗಿಂತ ಪೂರ್ವದಲ್ಲಿ ಇದ್ದಿಲ್ಲವೆಂಬಂತಿಲ್ಲ. ಜಾತಿಭೇದವು ಸನಾತನವಾದದ್ದು. ಅದು ಸಾವಿರಾರು ವರ್ಷಗಳಿಂದ ನಡೆಯುತ್ತ ಬಂದದ್ದು ಬರೇ ಮಹಾರಾಷ್ಟ್ರದ ಮಟ್ಟಿಗೆ ಅದು ನೆಲೆಗೊಂಡಿತ್ತೆಂಬಂತೇನೂ ಇಲ್ಲ; ಹಿಂದುಸ್ತಾನದ ಇತರ ಭಾಗಗಳಲ್ಲಾದರೂ ಜಾತಿಭೇದವು ಇದ್ದೇ ಇತ್ತು; ಆದರೆ ಅದು ಕೇವಲ ಮಹಾರಾಷ್ಟ್ರದಲ್ಲಿ, ಅದರೊಳಗೂ ಹದಿನೆಂಟನೆಯ ಶತಕದ ಕೊನೆಯ ಭಾಗದಲ್ಲಿ ದುಷ್ಪರಿಣಾಮಿಯಾಯಿತೆಂದು ಹೇಗೆ ಅನ್ನಬೇಕು? ಮೊದಲು ಮುಸಲ್ಮಾನರು ಮಹಾರಾಷ್ಟ್ರದೊಳಗಿನ ಎಷ್ಟೋ ಪ್ರಾಂತಗಳನ್ನು ತೆಗೆದುಕೊಂಡಾಗ ಜಾತಿಭೇದವಿತ್ತು. ಮುಂದೆ ಮೊಗಲರಿಂದ ಮರಾಟರು ತಮ್ಮ ರಾಜ್ಯವನ್ನು ಬಿಡಿಸಿಕೊಂಡಾಗಲೂ ಅದು ಇತ್ತು. ಶಿವಾಜಿಯು ತರುವಾಯ ಮೊಗಲರು ಸ್ವರಾಜ್ಯದೊಳಗಿನ ಸ್ಥಳಗಳನ್ನು ತೆಗೆದುಕೊಂಡಾಗ ಅದು ಇತ್ತು. ಮುಂದೆ ರಾಜಾರಾಮನ ಕಾಲದಲ್ಲಿ ಮರಾಟರು ಮೊಗಲರೊಡನೆ ಇಪ್ಪತ್ತು ವರ್ಷಗಳ ವರೆಗೆ ಬಡಿದಾಡಿದಾಗಲೂ ಜಾತಿಭೇದವು ಇತ್ತು. ಮುಂದೆ ಸವಾಯಿ ಮಾಧವರಾಯನ ಆಳಿಕೆಯಲ್ಲಿ ಮರಾಟಶಾಹಿಯ ತೇಜವು ಬೆಳೆದು ದಿಲ್ಲಿಯ ವರೆಗೆ ಮರಾಟರ ವರ್ಚಸ್ವವು ಪ್ರಸ್ಥಾಪಿತವಾದಾಗಲೂ ಅದು ಇತ್ತು. ಮುಂದೆ ಬಾಜೀರಾಯನ ಕಾಲದಲ್ಲಿ ಮರಾಟಶಾಹಿಯು ನಾಶಹೊಂದಿದಾಗಲೂ ಅದು ಇತ್ತು. ಸ್ವಲ್ಪದರಲ್ಲಿ ಹೇಳಬೇಕಾದರೆ, ಶಿವಾಜಿಗಿಂತ ಮೊದಲು, ಶಿವಾಜಿಯ ತರುವಾಯ ಎರಡು ನೂರು ವರ್ಷ ಜಾತಿಭೇದವು ಇದ್ದೇ ಇತ್ತು; ಆದರೆ ಮೊಗಲರೊಡನೆ ಕಾದಿ ಸ್ವರಾಜ್ಯಸ್ಥಾಪನೆ ಮಾಡಿದಾಗ ಅದು ಅಡ್ಡ ಬರಲಿಲ್ಲ. ಇಂಗ್ಲಿಷರೊಡನೆ ಯುದ್ಧ ಮಾಡುವಾಗ ಮಾತ್ರ ಅದು ಅಡ್ಡಾಯಿತೆಂಬದರ ಉಪಪತ್ತಿಯನ್ನು ಹೇಗೆ ಹೇಳಲಿಕ್ಕೆ ಬರುವದು?

ಶಿವಾಜಿಯ ಕಾಲದಲ್ಲಿ ಮರಾಟರೂ ಬ್ರಾಹ್ಮಣರೂ ಹೆಗಲಿಗೆ ಹೆಗಲು ಹಚ್ಚಿ ಯುದ್ಧ ಮಾಡುತ್ತಿದ್ದರು; ಆದರೆ ಅವರು ಮನಸ್ಸಿನಿಂದಾಗಲಿ ಕೃತಿಯಿಂದಾಗಲಿ

ಈಗಿನ ದೃಷ್ಟಿಯು ಸಮಾಜ ಸುಧಾರಕರಿದ್ದರೆಂದು ಅನ್ನಲಿಕ್ಕೆ ಬರುವದೇನು? ಯಾವ ವೇಳೆಯಲ್ಲಿ ಶಿವಾಜಿಯು ಮಹಾರಾಷ್ಟ್ರ ಮಂಡಳದ ಒಕ್ಕಟ್ಟು ಮಾಡಿ ಮುಸಲ್ಮಾನರಿಂದ ದೇಶವನ್ನು ಸಂರಕ್ಷಿಸುವ ಉಪಾಯವನ್ನು ಯೋಜಿಸಿದನೋ, ಆಗ ಅವನು ಜಾತಿಭೇದದ ವಿರುದ್ಧವಾಗಿ ವ್ಯಾಖ್ಯಾನಗಳನ್ನು ಕೊಡಲಿಲ್ಲ! ಅವನು ಗುಣಿಗಳನ್ನು ನೋಡಿ, ಯಾರಲ್ಲಿ ಕರ್ತೃತ್ವವಿರುವದೋ, ಅವರನ್ನು ಬಳಿಯಲ್ಲಿ ತೆಗೆದುಕೊಂಡನು; ಯಾರಲ್ಲಿ ಕರ್ತೃತ್ವವಿದ್ದಿಲ್ಲವೋ ಅವರನ್ನು ದೂರ ಸೂಕಿದನು. ಅವನು ಮರಾಟ, ಬ್ರಾಹ್ಮಣ ಎಂಬ ಜಾತಿಭೇದವನ್ನು ಮಾಡಲಿಲ್ಲ. ಆದರೂ ಅವನು ಸನಾತನ ಪದ್ಧತಿಯಂತೆ ಜಾತಿಭೇದವನ್ನು ಮನ್ನಿಸುವವನಾಗಿದ್ದನು. ಶಿವಾಜಿಯ ಕಾಲದಲ್ಲಿಯೂ ಪೇಶವೆಯವರ ಕಾಲದಲ್ಲಿಯೂ ಸನಾತನ ಜಾತಿಭೇಧವು ಮಾನ್ಯವಿತ್ತೆಂದು ಪ್ರತ್ಯಕ್ಷ ರಾಜಕಾರಣದಲ್ಲಿ ಮಾತ್ರ ಜ್ಞಾತಿನಿಷ್ಠತೆಗೆ ಪ್ರಾಧಾನ್ಯತೆಯಿರಲಿಲ್ಲ. ಬಾಳಾಜಿ ವಿಶ್ವನಾಥನು ಪೇಶವೆಯಾದ ಮೇಲೆ ಉದಯಕ್ಕೆಬಂದ ಮನೆತನಗಳಲ್ಲಿ ನೂರಕ್ಕೆ ತೊಂಬತ್ತು ಮನೆತನಗಳು ಬ್ರಾಹ್ಮಣೇತರರವೇ ಇದ್ದವು. ಆಗಿನ ವೇಳೆಯ ಸರಂಜಾಮದಾರರ ಪಟ್ಟಿಯನ್ನು ನೋಡಿದರೆ, ದೊಡ್ಡ ಸರಂಜಾಮಿನವರು ಬ್ರಾಹ್ಮಣೇತರರೇ ಹೆಚ್ಚಿದ್ದರೆಂಬದು ಕಂಡುಬರುವದು. ಪೇಶವೆಯರು ಕೊಂಕಣಸ್ಥ ಬ್ರಾಹ್ಮಣರದೇ ಕಲ್ಯಾಣ ಮಾಡಿದರೆಂಬ ವಿಶಿಷ್ಟ ಆರೋಪವು ಅವರ ಮೇಲೆ ಹೊರಿಸಲ್ಪಡುವದು; ಆದರೆ ಇದಕ್ಕಾದರೂ ವಿಶೇಷ ಆಧಾರಗಳಿಲ್ಲ. ಬೆಹರೆ, ಫಡಕೆ, ಮೆಹೆಂದಳೆ, ಪಟವರ್ಧನ, ರಾಸ್ತೆ ಇವರಲ್ಲದೆ ನಮಗೆ ಗೊತ್ತಿಲ್ಲದ ಒಂದೆರಡು ಮನೆತನದವರು ಇವರನ್ನು ಬಿಟ್ಟು ಕೊಂಕಣಸ್ಥ ಸರದಾರರಾದರೂ ಯಾರಿದ್ದರು? ಪೇಶವೆಯ ಹೊರತು ಎಲ್ಲ ಪ್ರಧಾನರೂ ಹಾಗು ವಿಂಚೂರಕರ, ಪಾನಸೆ, ಪುರಂದರೆ, ಮುಜುಮದಾರ, ಹಿಂಗಣೆ ಮೊದಲಾದ ಸರದಾರ ಮಂಡಲವೂ ದೇಶಸ್ಥರದಾಗಿತ್ತು. ಗೋವಿಂದಪಂತ ಬುಂದೇಲೆಯಂಥ ಕರ್ಹಾಡೆ ಸರದಾರರೂ ಕೆಲವರಿದ್ದರು. ಇದ್ದುಬಿದ್ದು ಕರಣಿಕ ಚರ್ಯದಲ್ಲಿ ಸ್ವಲ್ಪ ಹೆಚ್ಚು ಜನ ಕೊಂಕಣಸ್ಥರಿದ್ದರೆಂಬದು ನಿಜ. ಯಾವುದೊಂದು ವರಿಷ್ಠ ಜಾಗೆಯಲ್ಲಿ ಯಾವ ಜಾತಿಯು ಅಧಿಕಾರಿಯಿರುವನೋ, ಆ ಜಾತಿಯ ಜನರು ಆ ಆ ಸಂಸ್ಥೆಗಳಲ್ಲಿ ಹೆಚ್ಚಿಗೆ ತುಂಬಲ್ಪಡುವರೆಂಬ ಮಾತು ಸುಳ್ಳಲ್ಲ. ಈ ಮಾತು ಬರೇ ಕೊಂಕಣಸ್ಥರಿಗೆ ಹತ್ತುವದು, ಉಳಿದವರಿಗೆ ಈ ಮಾತಿನ ಸಂಬಂಧವಾಗುವದಿಲ್ಲ ಎಂಬಂತೇನೂ ಇಲ್ಲ. ಮುಸಲ್ಮಾನ, ಇಂಗ್ಲಿಷ, ಯುರೋಪೀಯ ಮೊದಲಾದ ಎಲ್ಲ ಜಾತಿಗಳಲ್ಲಿಯೂ ಮನುಷ್ಯಸ್ವಭಾವಕ್ಕನುಸಾರವಾಗಿ ಈ ವಿಧದ ಪರಿಪಾಠವು ಬಿದ್ದೇ ಬೀಳುವದು. ಹಿಂದುಸ್ತಾನದಲ್ಲಿ ಬ್ರಿಟಿಶರ ಆಳಿಕೆಯ ನೂರಾರು ವರ್ಷಗಳ ಇತಿಹಾಸವನ್ನು ನೋಡಿದರೆ, ಅದರಲ್ಲಿ ಅದೇ ಅದೇ ಅಡ್ಡ ಹೆಸರುಗಳು ಅಧಿಕಾರಿ ಪಟದಲ್ಲಿ ದೃಗ್ಗೋಚರವಾಗುವವು. ಪ್ರತ್ಯಕ್ಷ ವಿಲಾಯತಿಯಲ್ಲಿ ಅಥವಾ ಅಮೇರಿಕೆಯಲ್ಲಿ ಜಾತಿಭೇದವಿರದ್ದರೂ ಪಕ್ಷಭೇದವು ಅಷ್ಟೇ ತೀವ್ರ ಸ್ವರೂಪದಲ್ಲಿರುವ ಮೂಲಕ ಇಂಥ ದೃಶ್ಯಗಳು ಕಾಣುತ್ತವೆ. ಕೈಯಲ್ಲಿದ್ದ ಹಾಗು ಕಣ್ಣೆದುರಿಗಿದ್ದ, ಗೊತ್ತುವಳಿಯಲ್ಲಿದ್ದ ಇಲ್ಲವೆ

ಇತರ ರೀತಿಯಿಂದ ಹಿತಸಂಬಂಧವಿದ್ದ, ಕೊಟ್ಟ ಕೆಲಸವನ್ನು ನೆರವೇರಿಸುವ ತಮ್ಮ ಮನುಷ್ಯನನ್ನು ಬಿಟ್ಟು, ಪ್ರಯತ್ನಪೂರ್ವಕವಾಗಿ ದೂರದ ಮನುಷ್ಯನನ್ನು ಶೋಧಿಸಿ, ಹತ್ತಿರ ತೆಗೆದುಕೊಳ್ಳುವ ಲೋಕೋತ್ತರ ನಿಃಸ್ವಾರ್ಥೀತನವೂ, ನಿಃಪಕ್ಷಪಾತ ಬುದ್ಧಿಯೂ,ಪರೋಪಕಾರ ಬುದ್ಧಿಯೂ ಎಂದಾದರೂ ಯಾವ ರಾಷ್ಟ್ರದಲ್ಲಿಯೂ ತಲೆಯೆತ್ತಿರುವಂತೆ ಕಂಡುಬರುವದಿಲ್ಲ. ಇನ್ನೂ ಅನೇಕ ಕೊಂಕಣಸ್ಥ ಮನೆತನಗಳನ್ನು ಪೇಶವೆಯವರು ಉದಯಕ್ಕೆ ತಂದಿದ್ದರೂ ಮೇಲೆ ತೋರಿಸಿದ ಮನುಷ್ಯಸ್ವಭಾವಕ್ಕನುಸಾರವಾಗಿಯೇ ತಂದಂತಾಗುತ್ತಿತ್ತು; ಆದರೆ ಅವರಿಂದ ಈ ಕೃತ್ಯವು ಎಷ್ಟೂ ನೆರವೇಸಲಿಲ್ಲ.

ಇನ್ನು ಪೇಶವೆಯವರು ತಮ್ಮ ಸಲುವಾಗಿ ಅಧಿಕಾರದ ಅಭಿಲಾಷೆಯನ್ನು ಹಿಡಿದಿದ್ದರೆಂದು ಅವರ ಮೇಲೆ ದೋಷಾರೋಪಣೆ ಮಾಡಲ್ಪಡುವದು. ಈ ವಿಷಯದಲ್ಲಿ ನಾವು ಅವರ ಸಮರ್ಥನೆಯನ್ನು ಮಾಡಲಿಚ್ಛಿಸುವದಿಲ್ಲ; ಯಾಕಂದರೆ ಯಾವ ಮಾತು ಪೇಶವೆಯವರಿಗೆ ಹತ್ತುವದೋ ಅದೇ ಮಾತು ಬ್ರಾಹ್ಮಣೇತರ ಸರದಾರರಿಗಾದರೂ ಹತ್ತುವದು. ಅಷ್ಟಪ್ರಧಾನರ ಹಾಗು ಸರದಾರರ ವೈಭವವನ್ನು ವಂಶಪರಂಪರಾಗತವಾಗಿ ನಡೆಯಿಸುವ ರೂಢಿಯು ಶಿವಾಜಿಯ ಕಾಲದಲ್ಲಿದ್ದಿಲ್ಲವೆಂಬದಕ್ಕೆ ಕಾರಣವೇನಂದರೆ, ಹೊಸ ರಾಜ್ಯವ್ಯವಸ್ಥೆಯು ಆಗಲೆ ಪ್ರಾರಂಭವಾಗಿದ್ದುದೇ ಮುಖ್ಯ ಕಾರಣವಾಗಿತ್ತು. ಮುಂದೆ ವಂಶಪರಂಪರಾಗತ ನೌಕರಿಯ ಆಶೆಯು ದೃಢಮೂಲವಾಯಿತು. ಇಂಗ್ಲಂಡದಲ್ಲಿ ಸಹ ವಂಶಪರಂಪರಾಗತ ವತನದ ನಡತೆಯು ಇಂದಿನವರೆಗೂ ನೋಡಲಿಕ್ಕೆ ದೊರೆಯುವದು. ಅಲ್ಲಿ ದೇಶದ ಕಾಯದೆ-ಕಾನೂನುಗಳನ್ನು ಮಾಡುವ ಅಧಿಕಾರವನ್ನು ಉಪಭೋಗಿಸುವ ವರಿಷ್ಠ ಜನರ ನೂರಾರು ಮನೆತನಗಳಿರುವವು

ಜಾತಿಭೇದದಿಂದ ಮಹಾರಾಷ್ಟ್ರದಲ್ಲಿ ಒಡಕು ಇತ್ತೆಂಬ ಆಕ್ಷೇಪವುಂಟು; ಆದರೆ ಈ ಮಾತಿಗೆ ಬಹಳ ಮಟ್ಟಿಗೆ ಆಧಾರಗಳಿಲ್ಲ. ಜಾತಿಭೇದವು ಪ್ರಬಲವಿದ್ದಾಗ ಶಿವಾಜಿ ಮಹಾರಾಜನು ಚಂದ್ರರಾವ ಮೋರೆಯಂಥ ಮರಾಟ ಸರದಾರನನ್ನು ಕೊಂದನು. ಅವನು ಅನೇಕ ಪ್ರಭುಮನೆತನಗಳನ್ನು ಉದಯಕ್ಕೆ ತಂದನು. ರಾಮದಾಸರಂಥ ಬ್ರಾಹ್ಮಣರಿಗೆ ತನ್ನ ವಿಕ್ರಮಾರ್ಜಿತ ರಾಜ್ಯವನ್ನು ಅರ್ಪಿಸಲು ಅವನು ಸಿದ್ಧನಾಗಿದ್ದನು. ಇವು ಜಾತಿಭೇದದ ದುಷ್ಪರಿಣಾಮಗಳ ದ್ಯೋತಕಗಳೇನು? ಶಿಂದೆ ಹೋಳಕರರಿಬ್ಬರೂ ಬ್ರಾಹ್ಮಣೇತರರೇ. ಹೀಗಿದ್ದು ಅವರಲ್ಲಿ ಮೂರುತಲೆಗಟ್ಲೆ ವೈರವೇಕಿತ್ತು? ದೇಶಸ್ಥ-ಕೊಂಕಣಸ್ಥ ಭೇದವು ತಲೆಯೆತ್ತಿತ್ತೆನ್ನಬೇಕಾದರೆ, ಪೇಶವೆಯರೊಳಗಿನ ಮುಖ್ಯ ಕಲಹವು ಕೊಂಕಣಸ್ಥ-ಕೊಂಕಣಸ್ಥರೊಳಗಿನದೇ ಆಗಿತ್ತು; ಅದರಲ್ಲೂ ಅದು ಒಂದೇ ಮನೆತನದೊಳಗಿನದಾಗಿತ್ತು. ಈ ಒಡಕು ಜಾತಿಭೇದದಿಂದ ಉಂಟಾದದ್ದಿರಲಿಲ್ಲ. ಇಂತಹ ಜಗಳಗಳೂ ಒಡಕೂ ಶಿಂದೆ ಹೋಳಕರ ಗಾಯಕವಾಡ ಆಂಗ್ರೆ ಮೊದಲಾದ ಮನೆತನಗಳಲ್ಲಿಯೂ ಇತ್ತು. ಈ ಒಡಕುಗಳು ಜಾತಿಭೇದದವಲ್ಲ. ಮುಖ್ಯವಾಗಿ ವ್ಯಕ್ತಿಗಳಿಗೆ ಸಂಬಂಧವಾದವುಗಳಾಗಿದ್ದವು. ಜಾತಿಭೇದವು ಅದಕ್ಕೆ ಸ್ವಲ್ಪ ಏರಿಕೆಯ ಸ್ಥಿತಿಯನ್ನು ತಂದುಕೊಟ್ಟಿರಬಹುದು. ಜಗಳದ ಕಾರಣಗಳನ್ನು ಶೋಧಿಸತೊಡಗಿದರೆ,

ಅದು ಜಾತಿಭೇದಕ್ಕಿಂತ ಹಿಂದೆ ಮುಂದೆ ಹೋಗಲಾರದೆಂದು ಹೇಳಲಿಕ್ಕೆ ಬರುವದಿಲ್ಲ.

ದೇಶಸ್ಥರು ರಾಘೋಬನ ಪಕ್ಷವನ್ನು ಹಿಡಿದರು; ಕೊಂಕಣಸ್ಥರು ನಾನಾಫಡಣವೀಸನ ಪಕ್ಷವನ್ನು ಹಿಡಿದರು, ಎಂದು ನ್ಯಾಯಮೂರ್ತಿ ರಾನಡೆಯುವರು ಸಹ ಅಂದಿರುವರು; ಆದರೆ ದೇಶಸ್ಥರು ಯಾರ ಪಕ್ಷವನ್ನು ಹಿಡಿದಿದ್ದರೋ ಆ ರಾಘೋಬನೇ ಕೊಂಕಣಸ್ಥನಿದ್ದನು. ಇದರ ಗತಿಯೇನು? ಕೊಂಕಣಸ್ಥರ ಜಗಳದ ಲಾಭಹೊಂದಿ ದೇಶಸ್ಥರಾಗಲಿ ಮರಾಟರಾಗಲಿ ಯಾವನೊಬ್ಬ ಮರಾಟ ಪೇಶವೆಯನ್ನು ಮಾಡುವ ಕಾರಸ್ಥಾನವನ್ನು ನಡೆಯಿಸಿದ ಉದಾಹರಣೆ ಕಂಡುಬರುವದಿಲ್ಲ. ಮರಾಟಶಾಹಿಯಲ್ಲಿ ಅಂತಃಕಲವು ಅತಿರೇಕವಾಗಿತ್ತೆಂಬದರಲ್ಲಿ ವಾದವಿಲ್ಲ; ಆದರೆ ಈ ಕಲಹಕ್ಕೆ ಜಾತಿಯು ಅಥವಾ ಉಪಜಾತಿಯು ಕಾರಣವೆಂದು ಹೇಳಲಿಕ್ಕೆ ತಕ್ಕಷ್ಟು ಪ್ರಮಾಣಗಳಿಲ್ಲ ವ್ಯಕ್ತಿಸ್ವಾರ್ಥದ ಸಂದರ್ಭದಲ್ಲಿ ಜಾತಿ-ಉಪಜಾತಿಗಳು ಬೇರೆ ಕಡೆಗೇ ಉಳಿದು, ಪರಜಾತಿಯ ಅಥವಾ ಪರ-ಉಪಜಾತಿಯ ಮನುಷ್ಯನನ್ನು ವ್ಯಕ್ತಿಹಿತಾಪೇಕ್ಷಿಯು ತನ್ನ ಬಳಿಯಲ್ಲಿ ತೆಗೆದುಕೊಳ್ಳುವನು ಆ ವೇಳೆಯಲ್ಲಿಯು ಜಾತಿಭೇದದ ಸಂಬಂಧವಾಗಿ ನ್ಯಾಯಮೂರ್ತಿ ರಾನಡೆಯುವರು 'ಮರಾಟರ ಸತ್ತೆಯ ಉತ್ಕರ್ಷ' ಈ ವಿಷಯದ ತಮ್ಮ ಪುಸ್ತಕದ ಒಂದು ಪ್ರಕರಣದಲ್ಲಿ ಬರೆದಿರುವ ವಿಧಾನವು ನಮಗೆ ಹೆಚ್ಚುಗ್ರಾಹ್ಯವಾಗಿ ತೋರುವದು. "ಯಾವಾಗಲೂ ಹಿಂದುಸ್ತಾನದಲ್ಲಿ ಪರಕೀಯರ ಪ್ರವೇಶವು ಹಿಂದು ಜನರ ಸ್ವಕೀಯ ಒಡಕಿನಿಂದಲೇ ಆಗಿದೆ ವ್ಯವಸ್ಥಿತತನವು ಹೇಗಿರುವದೆಂಬದು ಈ ಜನರಿಗೆ ಗೊತ್ತಿಲ್ಲ ಒಕ್ಕಟ್ಟಿನಿಂದ ಕೆಲಸ ಮಾಡುವ ರೂಢಿಯು ಎಂದೂ ಇಲ್ಲ. ಕೆಲವು ವಿವಿಕ್ಷಿತ ನಿಯಮಗಳನ್ನು ಮಾಡಿ ಬೊಬ್ಬಾಟವಾಗದಂತೆ ಆ ನಿಯಮಗಳಿಗನುಸಾರವಾಗಿ ಕೆಲಸ ಮಾಡುವದು ಇವರಿಗೆ ಬೇಸರ. ಅಚ್ಚುಕಟ್ಟುತನ, ಕನಿಷ್ಠತರದ ಸಂಬಂಧವನ್ನು ಮಾನ್ಯಮಾಡುವ ಉಪದೇಶ ಇವು ಅವರಿಗೆ ಸೇರುವದಿಲ್ಲ. ಇಂಥ ದುರ್ಗುಣಗಳು ಹಿಂದುಗಳಲ್ಲಿದ್ದುದರಿಂದ ಸುವ್ಯವಸ್ಥಿತತನದಿಂದ ಸಿದ್ಧವಾದ ಸೈನ್ಯದೆದುರಿಗೆ ಇವರ ಸೈನ್ಯವು ತಡೆಯಲಿಲ್ಲ. ಹಿಂದುಗಳಲ್ಲಿಯ ಈ ದೋಷಗಳನ್ನು ಇಲ್ಲದಂತೆ ಮಾಡಿ, ಸಣ್ಣ ಪುಟ್ಟ ಸಂಗತಿಗಳಿಂದ ದೊಡ್ಡ ದೊಡ್ಡ ರಾಜಕಾರಸ್ಥಾನದ ವರೆಗೆ ಪ್ರತಿಯೊಂದು ವಿಷಯದಲ್ಲಿ ಸಮಾಜದ ಹಿತವೇ ವ್ಯಕ್ತಿಯ ಹಿತ, ಸಮಾಜದ ಉತ್ಕರ್ಷವೇ ವ್ಯಕ್ತಿಯ ಉತ್ಕರ್ಷ, ಸಮಾಜದ ಅಪಮಾನವೇ ವ್ಯಕ್ತಿಯ ಅಪಮಾನ ಮೊದಲಾದವುಗಳು ಪ್ರತಿಯೊಬ್ಬ ಮನುಷ್ಯನಿಗೆ ತಿಳಿಯಬೇಕೆಂದು ಶಿವಾಜಿಯು ಒಂದೇಸವನೆ ಪ್ರಯತ್ನ ಮಾಡುತ್ತಿದ್ದನು." ಹೀಗೆ ನ್ಯಾಯಮೂರ್ತಿ ರಾನಡೆಯವರು ಬರೆದ ವಿಧಾನವು ಸರಿಯಾಗಿದೆ; ಆದರೆ ಶಿವಾಜಿಯು ಯಾವ ಮಾರ್ಗದಿಂದ ಪ್ರಯತ್ನಿಸಿದನೆಂಬದನ್ನು ವಿಚಾರಿಸಿದರೆ, ಯಾವ ಜಾತಿಭೇದಕ್ಕೆ ಯಾವ ದೃಷ್ಟಿಯಿಂದ ಈಗ ಹೆಸರಿಡಲಾಗುವದೋ, ಯಾವ ಜಾತಿಭೇದವು ಮರಾಟಶಾಹಿಯ ಅವನತಿಗೆ ಕಾರಣವಾಯಿತೆಂದು ಪ್ರತಿಪಾದಿಸಲ್ಪಡುವದೋ ಆ ಜಾತಿಭೇದವನ್ನು ಶಿವಾಜಿಯು ಮಾಡಿದನೆಂಬ ಬಗ್ಗೆ ಎಲ್ಲಿಯೂ ಆಧಾರ ದೊರಕುವದಿಲ್ಲ

ಶಿವಾಜಿಯಲ್ಲಿ ಹಿಂದುಧರ್ಮಾಭಿಮಾನವು ಪೂರ್ಣವಾಗಿ ಬಿಂಬಿಸಿತ್ತು. ಈ ಧರ್ಮಾಭಿಮಾನದಿಂದಲೇ ಅವನು ಇಡೀ ದೇಶವನ್ನು ಬಡಿದೆಬ್ಬಿಸಿದನು ಅವನಲ್ಲಿ ಸನಾತನ ಹಿಂದುಧರ್ಮದ ವಿಷಯವಾಗಿಯೇ ಅಭಿಮಾನವು ವಾಸಿಸಿದ್ದಿಲ್ಲವೆ? ಯಾವ ಧರ್ಮದ ಅಧಿಷ್ಠಾನವು ಚಾತುರ್ವರ್ಣ್ಯವಾಗಿರುವದೋ, ಆ ಧರ್ಮದ ಆಚಾರದ ಒಂದು ಪ್ರಮುಖ ಅಂಗನೆಂದರೆ, ಜಾತಿಭೇದವಲ್ಲವೆಂದು ಪ್ರಾಮಾಣಿಕತನದಿಂದ ಅನ್ನಲಿಕ್ಕೆ ಯಾರಿಗೆ ತಾನೇ ಸಾಧ್ಯವಿದೆ? ಶಿವಾಜಿಯು ಜಾತಿಭೇದವನ್ನು ಮುರಿಯಲಿಕ್ಕೆ ಪ್ರಯತ್ನ ಮಾಡಲಿಲ್ಲವೆಂಬದಿಷ್ಟೇ ಅಲ್ಲ; ಜಾತಿಭೇದವೆಂಬ ಸಂಸ್ಥೆಯು ಅಥವಾ ವ್ಯವಸ್ಥೆಯು ರಾಷ್ಟ್ರಹಿತ ದೃಷ್ಟಿಯಿಂದ ಬಹಳೇ ಘಾತುಕತನದ್ದಿರುವದು; ರಾಜಕೀಯ ಪ್ರಗತಿಗೆ ಆತಂಕವನ್ನುಂಟು ಮಾಡುವದು ಮೊದಲಾಗಿ ಶಿವಾಜಿಯಲ್ಲಿ ಭಾವನೆಗಳಿದ್ದವೆಂಬದಕ್ಕೆ ಆಧಾರಗಳೇ ದೊರೆಯುವದಿಲ್ಲ. ಅವನು ತನ್ನ ಹೆಸರಿನ ಮುಂದೆ 'ಗೋಬ್ರಾಹ್ಮಣ ಪ್ರತಿಪಾಲಕ' ಎಂಬ ಶಬ್ದವನ್ನು ಸುವರ್ಣಾಕ್ಷರದಿಂದ ಬರೆದಿಟ್ಟಿದ್ದನು. ಈ ಶಬ್ದವನ್ನು ಅವನು ಬ್ರಾಹ್ಮಣರ ದಾಕ್ಷಿಣ್ಯಕ್ಕೊಳಗಾಗಿ ಇಲ್ಲವೆ ಧೂರ್ತತನದಿಂದ ಎರಡನೆಯವರನ್ನು ಮೋಸಗೊಳಿಸುವದಕ್ಕಾಗಿ ಬರೆದಿರಲಿಲ್ಲ. ಅವನು ಜಾತಿಭೇದದ ವಿಷಯವಾಗಿ ಒಂದು ಬಗೆಯ ಶ್ರದ್ಧೆಯನ್ನೇ ಇಟ್ಟಿದ್ದನೆಂದು ಹೇಳಬಹುದು. ಹೀಗಿದ್ದು ಜಾತಿಭೇದ ವಿಶಿಷ್ಟ ಧರ್ಮಾಭಿಮಾನವನ್ನು ಪ್ರದೀಪ್ತಗೊಳಿಸಿ ಬ್ರಾಹ್ಮಣರೊಡನೆ ಮರಾಟರನ್ನು ಮರಾಟರೊಡನೆ ಬ್ರಾಹ್ಮಣರನ್ನೂ ಹೆಗಲಿಗೆ ಹೆಗಲು ಹಚ್ಚಿಕೊಂಡು ಜೀವದ ಮೇಲೆ ಉದಾರರಾಗಿ ಯುದ್ಧ ಮಾಡಲಿಕ್ಕೆ ಅವನು ಸಿದ್ಧಮಾಡಿದ್ದನು. ಜಾತಿಭೇದಾತೀತವಾದ ಅವಶಿಷ್ಟ ಹಿಂದೂ ಧರ್ಮದ ಮಹತ್ವವು ಅವನಿಗೂ ಇತರರಿಗೂ ತೋರಿದ್ದರಿಂದಲೂ ಅದರ ಮಹತ್ವವು ಬಿಂಬಿಸಿದ್ದರಿಂದಲೂ ಜಾತಿಭೇದವು ಅಥವಾ ಜಾತಿದ್ವೇಷವು ಅಡ್ಡಬರುತ್ತಿದ್ದಿಲ್ಲ. ಅದರಲ್ಲಿಯೂ ವಿವೇಕಪೂರ್ವಕವಾಗಿ ಹೇಳುವುದಾದರೆ, ತನ್ನ ನೆರೆಹೊರೆಯ ಜನರಿಗೆ ವ್ಯಕ್ತಿಹಿತ ಮರೆತು ಸಮಾಜಹಿತವನ್ನು ಸಾಧಿಸುವದಕ್ಕೆ ಸಿದ್ಧ ಮಾಡಿದ್ದು ಅವನೊಬ್ಬ ಸಮಾಜ ಸುಧಾರಕನೆಂದಲ್ಲ; ಇಲ್ಲವೆ ಸನಾತನ ಧರ್ಮದ ದಿವ್ಯ ಉಪದೇಶಕನೆಂದಲ್ಲ; ಅವನು ಎದೆಗಾರ ಬುದ್ಧಿಮಾನ್ ಮುಂದಾಳುವೂ ದೊಡ್ಡ ರಾಷ್ಟ್ರಭಕ್ತನೂ ಇದ್ದುದರಿಂದ ಹಾಗೆ ಮಾಡಿದನು. ಜಾತಿಭೇದವು ಶಿವಾಜಿಯ ಪೂರ್ವದ ಅವನತಿಗೆ ಕಾರಣೀಭೂತವಾಯಿತೆಂದು ಅನ್ನಲಿಕ್ಕೆ ಬರುವುದಿಲ್ಲ; ಶಿವಾಜಿಯ ಕಾಲದ ಜಾತಿಭೇದ ಬುದ್ಧಿಯ ಹ್ರಾಸವೇ ಅವನ ಕಾಲದ ಉನ್ನತಿಗೆ ಕಾರಣವಾಯಿತೆಂದು ಹೇಳಲಿಕ್ಕೆ ಬರುವಂತಿಲ್ಲ.

ಶಹಾಜಿ ಶಿವಾಜಿ ಸಂಭಾಜಿ ಈ ಮೂರು ತಲೆಗಳಲ್ಲಿಯ ಸ್ಥಿತ್ಯಂತರದ ಕಾರಣಗಳನ್ನು ನೋಡಿದರೆ, ಧಾರ್ಮಿಕ ವಿಚಾರ ಅಥವಾ ಆಚಾರಗಳಲ್ಲಿ ಆ ಕಾರಣಗಳು ತೋರದೆ ವ್ಯಕ್ತಿನಿಷ್ಠವಾದ ಲೋಕೋತ್ತರ ಗುಣಾವಗುಣಗಳಲ್ಲಿ ಅವು ತೋರುವವು. ಮಹಾದಾಜಿ ಸಿಂದೆ-ನಾನಾಫಡಣವೀಸ ಇವರ ತರುವಾಯ ಯೋಗ್ಯ ಮುಂದಾಳುಗಳು ರಾಜ್ಯಕ್ಕೆ ದೊರೆತಿದ್ದರೆ ಜಾತಿಭೇದದಿಂದ ಮಹಾರಾಷ್ಟ್ರಶಾಹಿಯು ಅಳಿದು,

ಶುಷ್ಕ ವಾದಮಾಡುತ್ತ ಕುಳಿತುಕೊಳ್ಳುವ ಕಾರಣವು ಬೀಳುತ್ತಿದ್ದಿಲ್ಲ. ಮಹದಾಜಿ ದೌಲತರಾವ ದೊಡ್ಡ ಮಾಧವರಾವ ಎರಡನೆಯ ಬಾಜೀರಾವ ಇವರ ಕಾಲದ ಸ್ಥಿತ್ಯಂತರಕ್ಕೆ ಸಮಾಜ ಪರಿಸ್ಥಿತಿಯು ಕಾರಣವಾಗಿರದೆ, ಲೋಕೋತ್ತರ ವಿಭೂತಿಗಳ ಅಭಾವವೇ ಮುಖ್ಯ ಕಾರಣವಾಗಿದೆ. ವಿಭೂತಿಯ ಜನ್ಮವು ಸಮಾಜಸ್ಥಿತಿಯನ್ನು ಅವಲಂಬಿಸಿ ಆಗುತ್ತಿರುವದಿಲ್ಲ. ಸಾಮಾಜಿಕ ಸ್ಥಿತಿಯು ವಿಶೇಷ ಅನುಕೂಲವಿದ್ದರೆ ಹಾಲಲ್ಲಿ ಸಕ್ಕರೆ ಹಾಕಿದಂತೆ ಆಗಿ, ವಿಭೂತಿಯ ತೇಜವು ಮತ್ತಿಷ್ಟು ವೃದ್ಧಿಂಗತವಾಗುವದು. ಮನುಷ್ಯನ ವ್ಯಕ್ತಿನಿಷ್ಠ ಸ್ವಾರ್ಥವನ್ನು ಮರೆಯಬೇಕಾದರೆ ಕಣ್ಣೆದುರಿಗೆ ವಿಭೂತಿಯು ಬೇಕಾಗುವದು; ಇಲ್ಲವೆ ಸಂಕೀರ್ಣ ರಾಷ್ಟ್ರಪ್ರೇಮಭಾವನೆಯಾದರೂ ಅವನಲ್ಲಿ ಉದಯವಾಗಬೇಕಾಗುವದು. ವ್ಯಕ್ತಿನಿಷ್ಠ ಸ್ವಾರ್ಥವನ್ನು ಮರೆಯುವ ಪಾತ್ರತೆಯು ಮಹಾರಾಷ್ಟ್ರೀಯರಲ್ಲಿರುವದೆಂಬ ಮಾತು ಅನೇಕ ಸಾರೆ ಸಿದ್ಧವಾಗಿದೆ. ಈ ಪಾತ್ರತೆಗೆ ಉದ್ದೀಪನಕಾರಣವು ವಿಭೂತಿಪೂಜನವಾಗಿದ್ದು, ರಾಷ್ಟ್ರೀಯ ಪ್ರೇಮಬುದ್ಧಿಯು ಬಹುಮಟ್ಟಿಗೆ ಕಾರಣವಾಗಿಲ್ಲ. ಜಾತಿಭೇದ ನಾಶದಲ್ಲಿಯೇ ರಾಷ್ಟ್ರಪ್ರೇಮಬುದ್ಧಿಯು ಉದಯವಾಗುವದೆಂದು ಹೇಳಲಿಕ್ಕೆ ಬರುವದಿಲ್ಲ. ಸಾಮುದಾಯಿಕ ಹಿತಕ್ಕಾಗಿ ಸುವ್ಯವಸ್ಥೆಯಿಂದಿರುವದು, ನಿಶ್ಚಿತನಿಯಮಗಳನ್ನು ಉಲ್ಲಂಘಿಸದಿರುವದು, ರಾಷ್ಟ್ರಹಿತಶತ್ರುವಿನ ವಿರುದ್ಧವಾಗಿ ಯಾವಾಗಲೂ ತಮ್ಮೊಳಗೆ ಪರಸ್ಪರರ ಅಭಿಮಾನಹಿಡಿಯುವದು ಮೊದಲಾದವುಗಳು ಜಾತಿಭೇದವಿದ್ದರೂ ಘಟಿಸುವವು. ಜಾತಿಭೇದವಿದ್ದರೂ ಸಾಮುದಾಯಿಕ ರಾಷ್ಟ್ರಹಿತಬುದ್ಧಿಯು ಉತ್ಪನ್ನವಾಗುವದೆಂಬ ಉತ್ತರವನ್ನು ಕೊಡಲಿಕ್ಕೆ ಸಾಧ್ಯವಿದೆ. ಹೇಗೆ ಜಾತಿಭೇದವೋ ಹಾಗೆಯೇ ಧರ್ಮಭೇದ. ಯುರೋಪದಲ್ಲಿ ಧರ್ಮಪಂಥಗಳು ಪ್ರಬಲವಿದ್ದರೂ ಅನೇಕ ಧರ್ಮದ ಜನರು ಒಂದೇ ರಾಷ್ಟ್ರದ ಅಭಿಮಾನಿಗಳಾದದ್ದು ಕಂಡುಬರುವದು. ಸ್ಪೇನದ ರೋಮನ್ ಕ್ಯಾಥೋಲಿಕ ರಾಜನು ಧರ್ಮಪಂಥಾಭಿಮಾನದಿಂದ ಪ್ರಚಂಡ ಹಡಗುಪಡೆಯನ್ನು ತೆಗೆದುಕೊಂಡು ಇಂಗ್ಲಂಡದ ಮೇಲೆ ದಾಳಿಮಾಡಿದಾಗ ಇಂಗ್ಲಂಡದೊಳಗಿನ ಪ್ರೊಟೆಸ್ಟಂಟ ಜನರಂತೆ ರೋಮನ್ ಕ್ಯಾಥೋಲಿಕ ಜನರಾದರೂ ಈ ಹಡಗುಪಡೆಯನ್ನು ಪರಾಭವಗೊಳಿಸಲಿಕ್ಕೆ ಸಿದ್ಧತೆ ಮಾಡಿದ್ದರು. ಯುರೋಪದ ಮಹಾಯುದ್ಧದಲ್ಲಿ ಪ್ರೊಟೆಸ್ಟಂಟ ಇಂಗ್ಲಂಡ, ಕ್ಯಾಥೋಲಿಕ್ ಫ್ರಾನ್ಸ, ರೋಮನ್ ಕ್ಯಾಥೋಲಿಕ್ ಇಟಾಲಿ ದೇಶಗಳು ಹೆಗಲಿಗೆ ಹೆಗಲು ಹಚ್ಚಿ, ಪ್ರೊಟೆಸ್ಟಂಟ ಜರ್ಮನಿ, ಕ್ಯಾಥೋಲಿಕ್ ಆಸ್ಟ್ರಿಯಾಗಳೊಡನೆ ಕಾದಿದವೆಂಬದೂ ಈಗಲೂ ಕಾದುತ್ತಿರುವುದೂ ಪ್ರಸಿದ್ಧವಿರುವದು. ಆಗ ಮುಸಲ್ಮಾನ ಧರ್ಮದ ಅರಬರು ಇಂಗ್ಲಂಡದ ಪಕ್ಷವನ್ನು ಹಿಡಿದಿದ್ದರೆ, ಮುಸಲ್ಮಾನ ತುರ್ಕರುಜರ್ಮನಿಯ ಪಕ್ಷಪಾತಿಗಳಾಗಿದ್ದರು.

ಜಾತಿಭೇದವು ಇರಬೇಕೋ ಇರಬಾರದೋ ಎಂಬ ಮಾತಿನ ತಾತ್ವಿಕ ಉತ್ತರವು ಏನೇ ಇರಲಿ, ಪ್ರಸ್ತುತ ಲೇಖಕನು ಜಾತಿಭೇದವಿರಬಾರದೆಂದು ಅನ್ನುವವರಲ್ಲಿ ಒಬ್ಬನಾಗಿರುವನು. ತಾತ್ವಿಕ ನ್ಯಾಯಬುದ್ಧಿ ಮತ್ತು ವ್ಯವಹಾರ ಈ ಎರಡು

ದೃಷ್ಟಿಗಳಿಂದ ಜಾತಿಭೇದದ ಪ್ರಶ್ನದ ವಿಚಾರ ಮಾಡಬೇಕಾಗುವದು. ನ್ಯಾಯ ಬುದ್ಧಿಯ ದೃಷ್ಟಿಯಿಂದ ನೋಡಿದರೆ, ಜನ್ಮಸಿದ್ಧವಾದ ಶ್ರೇಷ್ಠ ಅಧಿಕಾರದ ಗುತ್ತಿಗೆಯು ಯಾವುದೊಂದು ವಿಶಿಷ್ಟ ಜಾತಿಗೆ ನಿರಂತರವಾಗಿ ಇರಬೇಕು; ಇತರ ಜಾತಿಗಳು ನಿರಂತರ ಕನಿಷ್ಠ ತರಗತಿಯಲ್ಲಿರಬೇಕು, ಎಂದು ಹೇಳುವದು ಈಶ್ವರನ ನ್ಯಾಯ ಬುದ್ಧಿಯ ಉಪಹಾಸ ಮಾಡಿದಂತಾಗುವದು. ಒಬ್ಬ ಉತ್ಕೃಷ್ಟ ರಾಜನ ಆಳಿಕೆಯಂತೆ ಈಶ್ವರನ ಆಳಿಕೆಯಲ್ಲಿ ಎಲ್ಲ ಭೂತಮಾತ್ರಗಳ ಉತ್ಕ್ರಾಂತಿಯಾಗುವದರ ಸಲುವಾಗಿ ಕನಿಷ್ಠಕ್ಷಪಕ್ಕೆ ಸಮಾನ ಸಂಧಿಯಾದರೂ ಇರಲಿಕ್ಕೆಬೇಕು ಹೀಗೆ ಆಶಿಮಾಡದಿದ್ದರೆ ಈಶ್ವರನು ಮನುಷ್ಯನಿಗಿಂತ ಅನ್ಯಾಯಿಯಿರುವನೆಂದು ಹೇಳಬೇಕಾಗುವದು. ಬರೇ ವ್ಯವಹಾರ ದೃಷ್ಟಿಯಿಂದ ನೋಡಿದರೂ, ಯಾರಿಗೆ ರಾಜಕೀಯ ಸ್ವಾತಂತ್ರ್ಯವು ಬೇಕಾಗಿರುವದೋ ಅವರಿಗೆ ಜಾತಿಬಂಧನವನ್ನು ಶಿಥಿಲಮಾಡುವದೆಂದರೆ, ನಾವು ರಾಜಕೀಯ ಯುದ್ಧದಲ್ಲಿ ಇಂದಿನವರೆಗೆ ಉಪಯೋಗಕ್ಕೆ ತಾರದೆ ಇದ್ದಂತಹ ಶಸ್ತ್ರವು ಎಂದು ಗ್ರಾಹ್ಯವಾಗಲಿಕ್ಕೆ ಅಡ್ಡಿಯಿಲ್ಲ. ಯಾವದೊಂದು ರಾಷ್ಟ್ರದಲ್ಲಿ ಮೂರ್ಧಾಭಿಷಿಕ್ತ ಅಥವಾ ಸರ್ವಂಕಷವಾದ ಯಾವುದೊಂದು ಭಾವನೆಯು ಇದ್ದೇಇರುವದು. ಶಿವಾಜಿಯ ವೇಳೆಯಲ್ಲಿ ಸಹ ಮಹಾರಾಷ್ಟ್ರದಲ್ಲಿ ರಾಷ್ಟ್ರೀಯ ಭಾವನೆಯು ಧರ್ಮಕ್ಕಿಂತ ರಾಜಕಾರಣದ ಮೇಲೆಯೆ ಹೆಚ್ಚಾಗಿ ಅಧಿಷ್ಠಿತವಾಗಿತ್ತೆಂದು ನಮಗೆ ತೋರುವದು. ಸದ್ಯದ ಇಪ್ಪತ್ತನೆಯ ಶತಮಾನದಲ್ಲಿ ನಮ್ಮ ರಾಷ್ಟ್ರದ ದೃಷ್ಟಿಯು ಧರ್ಮಕ್ಕಿಂತ ರಾಜಕಾರಣದ ಮೇಲೆಯೆ ಹೆಚ್ಚಾಗಿ ನೆಲಿಸಿರುವದೆಂಬ ಮಾತನ್ನು ಯಾರೂ ಅಲ್ಲಗಳೆಯಲಾರರು. ಸದ್ಯದ ಸ್ಥಿತಿಗೆ ಅನುಷಂಗವಾಗಿ ಸಾಧನಗಳನ್ನು ಉಪಯೋಗಿಸುವದರಲ್ಲಿ ಜಾಣತನವಿದೆ. ರಾಷ್ಟ್ರಭಕ್ತಿಯ ಔಷಧವನ್ನು ಕೇವಲ ಧರ್ಮಕಲ್ಪನೆಯ ಅನುಪಾನದಲ್ಲಿ ಕೊಡುತ್ತಿದ್ದರೆ, ಈಗ ಸನಾತನ ಧರ್ಮಕಲ್ಪನೆಯನ್ನು ಹೆಚ್ಚು ಉದಾರ ಮಾಡಿ ಕೊಡಲಿಕ್ಕೆ ಬೇಕು. ಈ ವಿವೇಚನೆಯು ಸದ್ಯದ ಕಾಲವನ್ನನುಲಕ್ಷಿಸಿದ್ದಾಗಿದೆ. ಜಗತ್ತಿನೊಳಗಿನ ಸಾಮ್ರಾಜ್ಯಗಳಿಗೆ ಸಂಬಂಧವಿದ್ದ ಸದ್ಯದ ಸ್ಥಿತಿಯನ್ನು ಮನಸ್ಸಿನಿಂದ ಪೂರ್ವಕಾಲಕ್ಕೆ ಸಾಂಕ್ರಮಿಕ ಮಾಡಿ ಈಗಿನ ತೊಂದರೆಗಳು ಆಗಾದರೂ ಇದ್ದವೆಂಬ ಭ್ರಾಮಕ ಕಲ್ಪನೆ ಮಾಡಿಕೊಂಡು ಜಾತಿಭೇದದಿಂದಲೇ ರಾಷ್ಟ್ರನಾಶವಾಯಿತೆಂದು ಅನ್ನುವದು ಯೋಗ್ಯವಾಗುವದಿಲ್ಲ.

---

## ೪ ಮರಾಟಶಾಹಿಯ ರಾಜ್ಯವ್ಯವಸ್ಥೆ

ಮರಾಟರಿಗೆ 'ಕಳ್ಳರು, ಸುಲಿಗೆಗಾರರು' ಎಂಬ ಹೆಸರಿಟ್ಟ ಹೊರತು ಇಂಗ್ಲಿಷ ಗ್ರಂಥಕಾರರು ಬಹುಮಟ್ಟಿಗೆ ಉಲ್ಲೇಖಿಸಿಲ್ಲ; ಆದರೂ ಹಿಂದುಸ್ತಾನದಲ್ಲಿ ಮರಾಟರೇ ಅವರಿಗೆ ಸರಿಯಾದ ಪ್ರತಿಸ್ಪರ್ಧಿಗಳು ಕೂಡಿದರೆಂಬ ಮಾತನ್ನು ಲಕ್ಷ್ಯಕ್ಕೆ ತೆಗೆದುಕೊಂಡರೆ, ಇಂಗ್ಲಿಷ ಗ್ರಂಥಕಾರರು ಹಾಗೆ ಉದ್ಗಾರ ತೆಗೆದದ್ದು ಯೋಗ್ಯವೇ ಇದೆ.

ಶತ್ರುಗಳ ವಿಷಯವಾಗಿ ಯಾರಾದರೂ ಒಳ್ಳೇ ಉದ್ಗಾರವನ್ನು ಎಂದೂ ತೆಗೆಯುವದಿಲ್ಲ. ಮರಾಟರಿಗಿಂತ ಇಂಗ್ಲಿಷರು ಹೆಚ್ಚಿನ ಲೇಖನ ಚತುರರಿದ್ದು, ಇತಿಹಾಸ ಪ್ರಬಂಧ ದಿನಚರಿ ವಿವೇಚನ ಕೈಫಿಯತು ವರ್ಣನೆ ಮೊದಲಾದವುಗಳನ್ನು ಬರೆಯುವ ಹವ್ಯಾಸವು ಅವರಿಗೆ ಬಹಳವಾಗಿತ್ತು. ಆದ್ದರಿಂದ ಮರಾಟರ ವಿಷಯವಾಗಿ ಇಂಗ್ಲಿಷರು ಎಷ್ಟು ಬರೆದಿಟ್ಟಿರುವರೋ ಅಷ್ಟು ಸಂಗತಿಗಳನ್ನು ಮರಾಟರು ಇಂಗ್ಲಿಷರ ವಿಷಯವಾಗಿ ಬರೆದಿಲ್ಲ. ಮರಾಟ ಬಖರಕಾರರೂ ಮುತ್ಸದ್ದಿಗಳೂ ಇಂಗ್ಲಿಷರ ವಿಷಯವಾಗಿ ಪ್ರಸಂಗವಶಾತ್ ತೀರ ತ್ರೋಟಕವಾಗಿ ಉಲ್ಲೇಖಿಸಿರುವರು. ಸಧ್ಯಕ್ಕೆ ಇಂಗ್ಲಿಷ ರಾಜ್ಯವಾಗಿರುವದರಿಂದ ಇಂಗ್ಲಿಷ ಗ್ರಂಥಗಳು ಮುದ್ರಣವಾಗಿ ಇಂಗ್ಲಿಷರು ಬರೆದ ಐತಿಹಾಸಿಕ ವಾಙ್ಮಯವು ನಮ್ಮಲ್ಲಿಯ ಸುಶಿಕ್ಷಿತ ತರುಣ ಪೀಳಿಗೆಗೆ ದೊರೆಯುತ್ತಲಿದೆ. ನಿತ್ಯವೂ ಒಂದೇ ವಿಧದ ವಾಙ್ಮಯವನ್ನು ಓದುವದರಿಂದ ಮನುಷ್ಯನ ಬುದ್ಧಿಭ್ರಂಶವಾಗುವದು; ಆದರೆ ಇತ್ತೀಚೆಗೆ ಇತಿಹಾಸಭಕ್ತರ ಸಂಶೋಧನದಿಂದ ಮರಾಟರ ವಿಷಯದ ನಿಜವಾದ ಕಾಗದ-ಪತ್ರಗಳು ವಿಪುಲವಾಗಿ ಉಪಲಬ್ಧವಾದುದರಿಂದ ಮರಾಟರ ವಿಷಯದ ಯಥಾತಥ್ಯ ಸಂಗತಿಗಳು ತಿಳಿದಿವೆ. ಮರಾಟರ ಇತಿಹಾಸವನ್ನು ನೋಡಿದರೆ, ಮರಾಟರು ಹುಂಬರಿದ್ದರು; ಸುಲಿಗೆಯ ಹೊರತು ಬೇರೊಂದನ್ನೇನೂ ಅವರು ಮಾಡಲಿಲ್ಲ; ಅವರಿಗೆ ಸುಖ-ಶಾಂತಿಗಳು ಗೊತ್ತಿದ್ದಿಲ್ಲ; ಸಂಘಟಿತ ರಾಜ್ಯಪದ್ಧತಿಯ ತತ್ವಗಳನ್ನು ಅವರು ಗುರುತಿಸಿರಲಿಲ್ಲ, ಮೊದಲಾದ ಆರೋಪಣೆಗಳು ಎಂದೂ ನಿಜವೆಂದು ತೋರುವದಿಲ್ಲ.

ಗ್ರಾಂಟ ಡಫರಂಥ ಇಂಗ್ಲಿಷ ಇತಿಹಾಸಕಾರರು ಮರಾಟಶಾಹಿಯ ವಿಷಯವಾಗಿ ತೆಗೆದ ಉದ್ಗಾರಗಳು ಅನುಚಿತವಾಗಿವೆ. “ಇಂಥ ಇತಿಹಾಸಕಾರರಿಗೆ ಮರಾಟರ ಇತಿಹಾಸದ ಮರ್ಮವೇ ತಿಳಿದಿಲ್ಲ. ಕೇವಲ ಸುಲಿಗೆಗಾರರ ಕೈಯಿಂದ ವಂಶಪರಂಪರವಾಗಿ ಸ್ಥಿರವಾಗುವಂತಹ ಪಾತಶಾಹಿಯ ಸ್ಥಾಪನೆಯಾಗುತ್ತಿರುವದಿಲ್ಲ. ಇಂಥ ಕಾರ್ಯಗಳಾಗಬೇಕಾದರೆ ಮನುಷ್ಯನಲ್ಲಿ ಕರ್ತೃತ್ವವಿರಬೇಕಾಗುವದು” ಮೊದಲಾದ ಸಮರ್ಪಕ ಉತ್ತರಗಳನ್ನು ಹೇಳಿ ನ್ಯಾಯಮೂರ್ತಿ ರಾನಡೆಯವರು ಅಂಥ ಇತಿಹಾಸಕಾರರ ಬರೆಹಗಳನ್ನು ಖಂಡನಪೂರ್ವಕವಾಗಿ ನಿಷೇಧಿಸಿರುವರು. ಕ್ಲೈವ ವಾರನ್‌ಹೆಸ್ಟಿಂಗ್ಸರಂಥ ಎದೆಗಾರ ಇಂಗ್ಲಿಷರ ಕೈಯಿಂದ ಬ್ರಿಟಿಶರಾಜ್ಯ ಸಂಸ್ಥೆಯು ಹಿಂದುಸ್ತಾನದಲ್ಲಿ ನಿರ್ಮಾಣವಾಗಲಿಕ್ಕೆ ಅವರ ಹಿಂದೆ ಇದ್ದ ಶ್ರೀಮಾನ್ ಬಲಾಢ್ಯ ನಿಶ್ಚಯವುಳ್ಳ, ಆದರೆ ಅಮೂರ್ತವಿದ್ದಂಥ ಬ್ರಿಟಿಶ ರಾಜ್ಯದ ಬುದ್ಧಿಶಕ್ತಿಗಳು ಹೇಗೆ ಕಾರಣೀಭೂತವಾದಾವೋ, ಅದರಂತೆ ವ್ಯಕ್ತಿಶಃ ಮರಾಟರು ಎಷ್ಟೇ ಎದೆಗಾರರೂ ಶೂರರೂ ಇದ್ದರೂ ಅವರ ಮನಸ್ಸಿನಲ್ಲಿ ರಾಷ್ಟ್ರಪ್ರೇಮವಿರದಿದ್ದರೆ, ಮರಾಟ ರಾಷ್ಟ್ರವೆಂಬುದು ಮೊದಲೇ ಇರದಿದ್ದರೆ ಅವರಿಂದ ಮರಾಟಪದಪಾತಶಾಹಿಯ ಸ್ಥಾಪನೆಯು ಎಂದೂ ಆಗುತ್ತಿದ್ದಿಲ್ಲ. ಮಹಾರಾಷ್ಟ್ರದಲ್ಲಿ ವೀರರಂತೆ ಮುತ್ಸದ್ದಿಗಳ ಪರಂಪರೆಯಾದರೂ ಅಬಾಧಿತವಾಗಿ ನೂರು ವರ್ಷ ನಡೆದಿತ್ತು. ಈ ಪರಂಪರೆಯು

ಉಳಿಯಲಿಕ್ಕೆ ಮರಾಟ ರಾಷ್ಟ್ರದ ಅಮೂರ್ತ ಕಲ್ಪನೆಯೇ ಉಪಯೋಗವಾಯಿತು. ಅಹಿರಾವಣ-ಮಹಿರಾವಣರ ರಕ್ತಬಿಂದುವಿನಿಂದ ನೂರಾರು ಅಹಿರಾವಣ-ಮಹಿರಾವಣರು ಹುಟ್ಟುವಂತೆ, ರಾಜಕಾರ್ಯಧುರಂಧರರು ವ್ಯಕ್ತಿನಿಷ್ಠ ಮಹತ್ವಾಕಾಂಕ್ಷೆಯ ಭೂಮಿಯಲ್ಲಿ ಉತ್ಪನ್ನವಾಗುವದಿಲ್ಲ. ಮರಾಟರು ಇಂಗ್ಲಿಷರಿಂದ ಪರಾಭೂತರಾದ್ದರಿಂದ ಇಂಗ್ಲಿಷರು ಒಂದು ವೇಳೆ ಮರಾಟರಿಗಿಂತ ಸಂಸ್ಕೃತಿ, ರಾಷ್ಟ್ರಾಭಿಮಾನ, ಉದ್ಯೋಗ, ಜಿಗಟುತನ, ಭೌತಿಕ-ನೈತಿಕ ಸಾಮರ್ಥ್ಯ ಮೊದಲಾದವುಗಳಲ್ಲಿ ಹೆಚ್ಚು ಶ್ರೇಷ್ಠರಿದ್ದರೆಂದು ಅನ್ನಬಹುದು; ಆದರೆ ಒಬ್ಬನು ಮತ್ತೊಬ್ಬನನ್ನು ಪರಾಭವಗೊಳಿಸಿದಮಾತ್ರದಿಂದ ಜಯಶಾಲಿಯು ಸರ್ವಗುಣಸಂಪನ್ನನೆಂದೂ ಪರಾಭೂತನು ಹೇಡಿಯೆಂದೂ ಹೆಸರಿಡಲಿಕ್ಕೆ ಬರುವದಿಲ್ಲ.

ಹಿಂದುಸ್ತಾನದಲ್ಲಿ ಅನೇಕ ಜಾತಿಗಳಿದ್ದರೂ, ಉಳಿದವರಿಂದ ಯಾವ ಮಾತು ಸಾಧ್ಯವಾಗಲಿಲ್ಲವೋ ಅದನ್ನು ಮರಾಟರು ಸಾಧ್ಯಗೊಳಿಸಿದರು. ಮೊಗಲರ ವಿರುದ್ಧ ಚಲನವಲನ ಮಾಡಿ ಇತರರಿಂದ ಸಾಧ್ಯವಾಗದಂತಹ ಯಶವನ್ನು ಮರಾಟರು ಸಾಧ್ಯ ಮಾಡಿಕೊಂಡರು. ಹಿಂದುಸ್ತಾನದ ತುಂಬ ಸ್ವರಾಜ್ಯವನ್ನು ವಿಸ್ತರಿಸುವ ಕಲೆಯು ಇತರರಿಗೆ ಸಾಧಿಸಲಿಲ್ಲ. ಅದನ್ನು ಮರಾಟರೇ ಸಾಧಿಸಿದರು. ಇದೊಂದೇ ಮಾತಿನಿಂದ ಮರಾಟರ ವೈಶಿಷ್ಟ್ಯವು ಸಿದ್ಧವಾಗುವದು. ಯಾವಾಗ ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿ ರಾಷ್ಟ್ರೀಯ ಭಾವನೆಯ ಬೀಜವು ಬಿತ್ತಲ್ಪಡುವದೋ ಅಥವಾ ರಾಷ್ಟ್ರೀಯ ಸ್ವಾಭಿಮಾನದ ಗಟ್ಟಿಮುಟ್ಟಾದ ತಳಹದಿಯು ರಚಿಸಲ್ಪಡುವದೋ ಆಗಲೆ ಅಲೌಕಿಕ ಪರಾಕ್ರಮವು ಘಟಿಸುವದು. ರಾಷ್ಟ್ರೀಯ ರಾಜಕಾರಣದ ವಿಲಕ್ಷಣ ವೃತ್ತಪರಂಪರೆಯು ಘಟಿಸಿದ್ದರಿಂದಲೇ ಮರಾಟಶಾಹಿಯ ಸ್ಥಾಪನೆಯಾಯಿತು. ಒಂದು ಧರ್ಮ, ಒಂದು ಭಾಷೆ, ಒಂದು ರಾಜಕೀಯ ವಿಚಾರಸರಣಿ, ಒಂದು ಸಾಮುದಾಯಿಕ ಮಹತ್ವಾಕಾಂಕ್ಷೆ, ಒಂದು ಧ್ಯೇಯ ಮೊದಲಾದ ಅಂತಸ್ಥ ಐಕ್ಯಹೇತುಗಳಿಗೆ ಒಬ್ಬ ಶತ್ರು, ಒಂದು ಪರಿಸ್ಥಿತಿ, ಒಂದು ಸಂಕಟ ಮೊದಲಾದ ಬಾಹ್ಯ ಐಕ್ಯಹೇತುಗಳ ಜೊತೆಯು ಕೂಡಿದ್ದರಿಂದ ಮರಾಟರಲ್ಲಿ ಐಕ್ಯವು ಬೇಗನೆ ಉಂಟಾಯಿತು.

## ಮರಾಟರ ಸೈನ್ಯವ್ಯವಸ್ಥೆ.

ಯಾವುದೊಂದು ರಾಷ್ಟ್ರದ ಇತಿಹಾಸವನ್ನು ಅಭ್ಯಾಸ ಮಾಡುವದಾದರೆ, ಮೊದಲು ಆ ರಾಷ್ಟ್ರದೊಳಗಿನ ಸೈನ್ಯಸಾಮರ್ಥ್ಯದ ಮತ್ತು ಸೈನ್ಯದ ಪರಾಕ್ರಮದ ಕಡೆಗೆ ಲಕ್ಷ್ಯಹೊರಳಿಸುವದು ಸಹಜವಿರುವದು. ಯಾಕಂದರೆ ರಾಜ್ಯವನ್ನು ದೊರಕಿಸುವ ಹಾಗು ಕಾಯ್ದುಕೊಳ್ಳುವ ಕೆಲಸದಲ್ಲಿ ಯಾವ ಸಾಧನಗಳು ಉಪಯೋಗವಾಗುವವೋ ಅವುಗಳಲ್ಲಿ ಸೈನ್ಯಸಾಮರ್ಥ್ಯದ ತರಗತಿಯು ಹೆಚ್ಚಿನದಾಗಿರುತ್ತದೆಂಬ ಮಾತಿನಲ್ಲಿ ಸಂದೇಹವಿಲ್ಲ. ರಾಜಕಾರಣದಲ್ಲಿ ಆಟಗಳಂತೆ ನಿಯಮಗಳೂ ಪಾಲಿಸಲ್ಪಡುವವು; ಆದರೆ ಪ್ರಸಂಗವು ಮೈ ಮೇಲೆ ಬಂದಿತೆಂದರೆ ಎಲ್ಲ ನಿಯಮಗಳೂ ನಿರುಪಯೋಗಿ ಆಗುವವು; ಅರ್ಥಾತ್ ಯಾರ ಶಸ್ತ್ರವು ಬಲಶಾಲಿಯೋ ಅವರದೇ ರಾಜ್ಯವು!

ನಾನಾಫಡಣವೀಸನ ಶಸ್ತ್ರವು ಕೇವಲ ಮುತ್ಸದ್ದಿತನದ್ದು. ಅದಕ್ಕೆ ನಿಜವಾದ ಖಡ್ಗವು ಗಂಟುಬಿದ್ದ ಕೂಡಲೆ ಅದು ತಲೆಬಾಗಿಸಬೇಕಾಯಿತು. ಶಿವಾಜಿಯು ಮುತ್ಸದ್ದಿಯಿದ್ದನು; ಆದರೆ ಆತನಲ್ಲಿ ಖಡ್ಗಬಲವಿಲ್ಲದಿದ್ದರೆ ಸ್ವರಾಜ್ಯಸ್ಥಾಪನೆಗೆ ಆತನ ಆ ಮುತ್ಸದ್ದಿತನದ ಉಪಯೋಗವಾಗುತ್ತಿದ್ದಿಲ್ಲ.

ಪೇಶವೆಯರ ಸ್ವಂತ ಸೈನ್ಯವು ತೀರ ಸ್ವಲ್ಪವೇ ಇತ್ತು. ಸರಂಜಾಮೀ ಸೈನ್ಯವು ಬಹಳವಿತ್ತು. ಮರಾಟಶಾಹಿಯ ಮುಖ್ಯ ಧನಿಗಳಾದ ಸಾತಾರೆಯ ಮಹಾರಾಜರಲ್ಲಿ ಸಹ ಸಾವಿರೆರಡು ಸಾವಿರಕ್ಕಿಂತ ಹೆಚ್ಚು ಸೈನ್ಯವಿತ್ತೋ ಇಲ್ಲವೋ ಎಂಬ ಬಗ್ಗೆ ಸಂದೇಹವೇ ಇದೆ. ಮರ್ಯಾದೆಯಿಂದ ಅವರ ಕೆಳಗೆ ಪೇಶವೆಯುವರು. ಅವರಲ್ಲಿ ಸಹ ಹತ್ತೆಂಟು ಸಾವಿರಕ್ಕಿಂತ ಹೆಚ್ಚಿಗೆ ಸೈನ್ಯವಿದ್ದಿಲ್ಲ. ಈ ಸೈನ್ಯದ ಮೇಲಧಿಕಾರವು ಪೇಶವೆಯು ನಿಯಮಿಸಿದ ಅವರ ಬಬ್ಬ ಪ್ರೀತಿಯ ಸರದಾರನ ಕಡೆಗೆ ಇರುತ್ತಿತ್ತು. ಪೇಶವೆಯ ಕೈಕೆಳಗಿನ ಸಿಂದೆ ಹೋಳಕರ ಭೋಸಲೆ ಗಾಯಕವಾಡ ದಾಭಾಡೆ ಪಟವರ್ಧನ ರಾಸ್ತೆ ಆಂಗ್ರೆ ಮೊದಲಾದ ಸರಂಜಾಮೀ ಸರದಾರರ ಕಡೆಗೆ ಹೇರಳವಾದ ಸೈನ್ಯವಿರುತ್ತಿತ್ತು.

ಸ್ವಂತ ಛತ್ರಪತಿಮಹಾರಾಜರು ಸೇನಾಪತಿಗಳಾಗಿ ದಂಡಿನೊಡನೆ ಹೋಗುವ ಪರಿಪಾಠವು ಶಿವಾಜಿ ಸಂಭಾಜಿಯರ ಸಂಗಡವೇ ಮುಳುಗಿತು. ಪೇಶವೆಯವರು ಮಾತ್ರ ಸೈನ್ಯದೊಡನೆ ಹೋಗುತ್ತಿದ್ದರು. ಈ ಪದ್ಧತಿಯು ಸವಾಯಿ ಮಾಧವರಾಯನ ವರೆಗೆ ರೂಢವಾಗಿತ್ತು. ಖರ್ಡೆಯ ಯುದ್ಧಕ್ಕೆ ಸವಾಯಿ ಮಾಧವರಾಯನು ಸ್ವಂತ ಹೋಗಿದ್ದನು. ಎರಡನೆಯ ಬಾಜೀರಾಯನು ಮಾತ್ರ ಯುದ್ಧವನ್ನು ನೋಡಿದನು; ಆದರೆ ಅದನ್ನು ದೂರದಿಂದಲೇ ನೋಡಿದನು; ಅದೂ ಓಡಿಹೋಗುವ ಹವಣಿಕೆಯಲ್ಲಿದ್ದಾಗ! ನಾನಾಪಡಣವೀಸನಂತಹ ಮುತ್ಸದ್ದಿಯೂ ಕೂಡ ಒಮ್ಮೊಮ್ಮೆ ಸೈನ್ಯದೊಡನೆ ಹೋಗುತ್ತಿದ್ದನು. ಇದು ಬ್ರಾಹ್ಮಣರ ಮಾತಾಯಿತು. ಮರಾಟರ ವಿಷಯದಲ್ಲಿ ಮಾತಾಡಲಿಕ್ಕೇಬೇಡ. ಚಿಕ್ಕಂದಿನಲ್ಲಿಯೇ ಇವರಿಗೆ ರಣಾಂಗಣದ ಗುಟ್ಟಿಯನ್ನೇ ಕುಡಿಸುತ್ತಿರಬಹುದು! ಮರಾಟರ ಸೈನ್ಯದಲ್ಲಿ ಕಾಲಾಳುಗಳಿಗಿಂತ ರಾವುತರ ಸಂಖ್ಯೆಯೇ ಹೆಚ್ಚು. ಇವರಿಗೆ ಅಶ್ವಾರೋಹಿ ಸೈನಿಕರ ಉಪಯೋಗವೇ ಹೆಚ್ಚು. ಬೀಡುಬಿಟ್ಟುಕೊಂಡು ಕಂದಕಗಳನ್ನು ಅಗಿದು ಸ್ಥೈರ್ಯದಿಂದ ಯುದ್ಧ ಮಾಡುವದು ಇವರಿಗೆ ಗೊತ್ತೇ ಇದ್ದಿಲ್ಲ. ಹಾಗೆ ಮಾಡಲಿಕ್ಕೆ ಅವರ ಗುರುವೇ ಅವರಿಗೆ ಕಲಿಸಿದ್ದಿಲ್ಲ. ಶತ್ರುಗಳನ್ನು ಆಯಕಟ್ಟಿನಲ್ಲಿ ತಂದು ಆಕಸ್ಮಿಕವಾಗಿ ಅವರ ಮೇಲೆ ದಾಳೀಮಾಡಿ, ಒಂದೇ ಹೊಡತದಲ್ಲಿ ಆದಷ್ಟು ತುಂಡುಮಾಡುವದು; ಮತ್ತೆ ನುಸುಳಿ ಹೋಗುವದು, ಇದೇ ಇವರ ಯುದ್ಧಪದ್ಧತಿಯು. ಶತ್ರುಗಳು ಬಲಶಾಲಿಗಳಿದ್ದರೆ ಅವರ ನೆರಳಿಗೆ ಸಹ ಹೋಗದೆ ದೂರವಿರುವದು; ಅವರ ಸುತ್ತುಮುತ್ತು ತಿರುಗುತ್ತ ಅವರ ಕಾಳು-ಕಡಿ-ಹಣ ಮೊದಲಾದವುಗಳನ್ನು ಸುಲಿಯುವದು; ಬಿಕ್ಕಟ್ಟಿನ ಪ್ರಸಂಗ ಒದಗಿದರೆ ಯಾವುದೊಂದು ಅಭೇದ್ಯವಾದ ದುರ್ಗವನ್ನು ಆಶ್ರಯಿಸಿ ಕುಳಿತು

ಕೊಳ್ಳುವದು ಮೊದಲಾದವುಗಳು ಮರಾಟ ಸೈನ್ಯದ ನಡೆವಳಿಕೆಗಳಾಗಿದ್ದವು. ಈ ಬಗೆಯ ತಂತ್ರಯುದ್ಧಕ್ಕೆ ಮರಾಟರಿಗೆ ಕಾಲಾಳುಗಳಿಗಿಂತ ರಾವುತರ ಉಪಯೋಗವೇ ಬಹಳವಾಗುತ್ತಿತ್ತು.

ಮೊಗಲಾಯಿ ಇರುವವರೆಗೆ ಈ ಪದ್ಧತಿಯು ಅವರಿಗೆ ಉಪಯೋಗವಾಯಿತು; ಆದರೆ ಇಂಗ್ಲಿಷರೊಡನೆ ಯುದ್ಧಪ್ರಸಂಗವೊದಗಿದಾಗ ಅವರಿಗೆ ಕಾಲಾಳುಗಳ ಅವಶ್ಯಕತೆಯೆನಿಸತೊಡಗಿತು. ಮೊದಲಿನ ಪದ್ಧತಿಯ ಯುದ್ಧದಲ್ಲಿ ತೋಫುಗಳ ಅವಶ್ಯಕತೆಯು ಅವರಿಗಿರಲಿಲ್ಲ; ಆದರೆ ಯುರೋಪೀಯರೊಡನೆ ಸಂಬಂಧ ಉಂಟಾದಂದಿನಿಂದ ತೋಫುಗಳ ಕಡೆಗೆ ಅವರು ಲಕ್ಷ್ಯಗೊಡಬೇಕಾಯಿತು. ಕುದುರೆಯ ಪಾಗೆಯಲ್ಲಿ ಖಾಸಪಾಗೆ ಶಿಲೇದಾರ ಹೀಗೆ ಎರಡು ಭಾಗಗಳಿದ್ದವು. ಖಾಸಪಾಗೆಯೊಳಗಿನ ಸ್ವಾರರಿಗೆ ಕುದುರೆಗಳೂ ಹಾಗು ಯುದ್ಧದ ಸರಂಜಾಮವೂ ಸರಕಾರದಿಂದ ದೊರೆಯುತ್ತಿದ್ದವು. ಈ ಸ್ವಾರರಿಗೆ ಬಾರಾಗೀರರೆಂಬ ಹೆಸರಿತ್ತು. ಶಿಲೇದಾರರು ಸ್ವಂತ ಕುದುರೆಯನ್ನಿಟ್ಟು ಸೇವೆ ಮಾಡುತ್ತಿದ್ದರು. ಶಿಲೇದಾರರು ಸರಕಾರದವರಿಗೆ ಬೇಕಾದಾಗ ಇಂತಿಷ್ಟು ಕುದುರೆಗಳ ವರೆಗೆ ಪೂರೈಸಿಕೊಡುವೆವೆಂಬ ಕಟ್ಟಳೆಯಿಂದ ವೇತನ ನಿಶ್ಚಯಿಸಿಕೊಳ್ಳುತ್ತಿದರು. ಖಾಸಪಾಗೆಯ ಬಾರಾಗೀರರಿಗೆ ಪೋಟಗಿಯೆಂದು ೮-೧೦ ರೂಪಾಯಿ ವೇತನದೊರೆಯುತ್ತಿತ್ತು. ಶಿಲೇದಾರರಿಗೆ ಪೋಟಗೆ ಹಾಗು ಕುದುರೆಯ ವೆಚ್ಚ ಸಹಿತವಾಗಿ ೩೫ ರೂಪಾಯಿ ದೊರೆಯುತ್ತಿದ್ದವು ದಂಡು ಕಾಳಗಕ್ಕೆ ಹೊರಟಿತೆಂದರೆ, ಯುದ್ಧವು ಸಾರಲ್ಪಟ್ಟಿತೆಂದರೆ, ಕೆಲವು ಉತ್ಸಾಹೀ ತರುಣರು ತಮ್ಮ ತಮ್ಮ ಕುದುರೆಗಳನ್ನು ತೆಗೆದುಕೊಂಡು ಬಂದು ಪಡೆಯಲ್ಲಿ ಸೇರ್ಪಡೆಯಾಗುತ್ತಿದ್ದರು. ಇವರ ಯೋಗ್ಯತೆಯು ಹೆಚ್ಚಿನದಿರುತ್ತಿದ್ದು, ಇಂಥವರಿಗೆ ೪೫ ರೂಪಾಯಿಗಳ ವರೆಗೆ ಪಗಾರ ದೊರೆಯುತ್ತಿತ್ತು. ಪೆಂಡಾರಿಗಳು ಕುದುರೆಯ ಸ್ವಾರರಾಗಿರುತ್ತಿದ್ದರು. ಇವರಿಗೆ ನಿಶ್ಚಿತ ವೇತನವಿದ್ದಿಲ್ಲ. ಇವರು ಸುಲಿಗೆಯ ಮೇಲಿಂದಲೇ ಪ್ರಾಯಶಃ ತಮ್ಮ ಚರಿತಾರ್ಥ ಸಾಗಿಸುತ್ತಿದ್ದರು. ಪೆಂಡಾರಿಗಳು ಕೇವಲ ಹೊಟ್ಟೆಬಾಕರಾಗಿರುತ್ತಿದ್ದರು. ದಂಡಿನ ನೌಕರಿಯ ಅಭಿಮಾನವು ಇವರಿಗೆ ಇರುತ್ತಿದ್ದಿಲ್ಲ. ಯುದ್ಧವು ಮುಗಿದ ಮೇಲೆ ಸುಲಿಗೆ ಮಾಡುವದಕ್ಕೆ ಅಪ್ಪಣೆದೊರೆಯಿತೆಂದರೆ, ದೊರೆತ ಸುಲಿಗೆಯೊಳಗಿನ ಕೆಲವಂಶವನ್ನು ಅವರು ಸರಕಾರಕ್ಕೆ ಕೊಡಬೇಕಾಗುತ್ತಿತ್ತು. ಈ ಪೆಂಡಾರಿಗಳು ಯಾರಿಗೂ ಪ್ರಿಯರಾಗಿರುತ್ತಿದ್ದಿಲ್ಲ. ಪ್ರಸಂಗವಶಾತ್ ಅವರು ತಮ್ಮ ಪಕ್ಷದ ಕಡೆಯ ಸಾಮುಗ್ರಿಗಳನ್ನೇ ಸುಲಿದುಕೊಳ್ಳುತ್ತಿದ್ದರು. ಆದ್ದರಿಂದ ಹೋಳಕರ ಮೊದಲಾದ ಒಂದೆರಡು ಸರದಾರರ ಹೊರತು ಇವರನ್ನು ಯಾರೂ ಸೈನ್ಯದಲ್ಲಿ ತೆಗೆದುಕೊಳ್ಳುತ್ತಿದ್ದಿಲ್ಲ.

ಸಿದ್ಧಸೈನ್ಯವು ಹನ್ನೆರಡು ತಿಂಗಳು ಸೇವೆಯಲ್ಲಿರುತ್ತಿತ್ತು; ಆದರೆ ಶಿಲೇದಾರ ಮೊದಲಾದ ಇತರ ಸೈನ್ಯವು ತಾತ್ಪೂರ್ತಿಕವಾಗಿದ್ದು, ಆದಕ್ಕೆ ನೌಕರಿಯ ಅವಧಿಯಿದ್ದಿಲ್ಲ. ಮುಖ್ಯ ಸೈನ್ಯವು ದಂಡಯಾತ್ರೆಗೆ ಹೊರಟಿತೆಂದರೆ, ಈ ಶಿಲೇದಾರೀ

ಸೈನ್ಯವು ದಾರಿಯಲ್ಲಿ ಹೋಗಿ ಕೂಡಿದರೂ ಕೂಡುತ್ತಿತ್ತು; ಬೇಕಾದಾಗ ತಿರುಗಿ ಹೋಗುತ್ತಿತ್ತು. ದೂರದ ಪ್ರಾಂತಗಳ ಮೇಲಿನ ದಾಳಿಗಳಲ್ಲಿ ಒಬ್ಬೊಬ್ಬರು ಶಿಲೇದಾರರು ತಿರುಗಿ ಸ್ವಸ್ಥಳಕ್ಕೆ ಹೋಗಲಿಕ್ಕೆ ಸಾಧ್ಯವಿರುತ್ತಿದ್ದಿಲ್ಲ. ಸೈನ್ಯವು ದಂಡಯಾತ್ರೆಯಿಂದ ತಿರುಗಿತೆಂದರೆ, ತಳವನ್ನು ಬಿಟ್ಟು ಹಿಂದೆ ಉಳಿಯಬಾರದು, ಮುಂದೆ ಹೋಗಬಾರದು ಮೊದಲಾದ ವಿಧಿ-ನಿಷೇಧಗಳು ಶಿಲೇದಾರ ಸೈನ್ಯಕ್ಕಿದ್ದಿಲ್ಲ. ನಿರಂತರ ಸೈನ್ಯದ ಹಾಜರಿಯು ತೆಗೆದುಕೊಳ್ಳಲ್ಪಡುತ್ತಿತ್ತು. ಉಳಿದ ಸೈನ್ಯದ ಹಾಜರಿಯೆಂದರೆ ಹೆಸರಿನ ಹಾಜರಿಯೇ! ನನ್ನ ವಶದಲ್ಲಿಯ ಸ್ವಾರರೆಂದು ಕುದುರೆ ಮನುಷ್ಯರನ್ನು ಒಡವೆಗೆ ಒಡವೆ ತೋರಿಸಿದರೆ ಹಾಜರಿಯವನ ಕೆಲಸ ತೀರಿತು. ವೇಳೆಗೆ ಸರಿಯಾಗಿ ಕುದುರೆಯನ್ನು ತೋರಿಸಲಿಕ್ಕೆ ಸಾಧ್ಯವಾಗದಿದ್ದರೆ ತಂಗು-ತೋಬರಿಗಳನ್ನು ತೋರಿಸಿದರೂ ಸಾಗುತ್ತಿತ್ತು. ಶಿಲೇದಾರ ಮೊದಲಾದವರಿಗೆ ಕಾಳಗದ ಕೆಲಸದ ಹೊರತು ಉಳಿದ ಸರಕಾರೀ ಕೆಲಸಗಳಿರುತ್ತಿದ್ದಿಲ್ಲ. ಉಳಿದ ವೇಳೆಯಲ್ಲಿ ಅವರು ಸ್ವತಂತ್ರರಿರುತ್ತಿದ್ದರು. ದಂಡಿನೊಳಗಿನ ಎಲ್ಲ ಜನರಿಗೆ ಸೇನಾಪತಿಯ ಕೈಯಲ್ಲಿ ನೌಕರಿಯನ್ನು ಮಾಡಬೇಕಾಗುತ್ತಿತ್ತು. ದೊಡ್ಡ ದೊಡ್ಡ ಸರದಾರರ ವರೆಗೂ ಈ ನೌಕರಿ ಮಾಡುವ ಬಾರಿಯು ಬರುತ್ತಿತ್ತು. ಬರ್ಚಿ ಖಡ್ಗ ಬಂದೂಕ ಮೊದಲಾದ ಶಸ್ತ್ರಾಸ್ತ್ರ ಕಲೆಗಳ ಅಭ್ಯಾಸಕ್ಕಾಗಿ ಶಾಲೆಗಳಿದ್ದಿಲ್ಲ. ಇವೆಲ್ಲ ವಿದ್ಯೆಗಳು ಮರಾಟರ ಹುಟ್ಟುಗುಣಗಳಾಗಿದ್ದವೆಂದರೂ ನಡೆಯುವದು. ದಂಡಿನ ಶಿಕ್ಷಣದ ಶಾಲೆಗಳು ಇಲ್ಲದ್ದರಿಂದಲೂ, ವ್ಯವಸ್ಥಿತ ಕವಾಯತು ಇಲ್ಲದ್ದರಿಂದಲೂ ಸೈನ್ಯದ ಯೋಗ್ಯತೆಯು ಕಡಿಮೆ ತರಗತಿಯದಾಗಿರುವದೆಂಬ ಸಂಗತಿಯು ಮರಾಟರಿಗೆ ಹಿಂದಿನಿಂದ ತಿಳಿಯಹತ್ತಿತು. ಸೈನ್ಯಕ್ಕೆ ಮನುಷ್ಯರೂ ಕುದುರೆಗಳೂ ಎಂದೂ ಕಡಿಮೆ ಬೀಳುತ್ತಿದ್ದಿಲ್ಲ. ಸುಗ್ಗಿಯ ದಿವಸಗಳಲ್ಲಿ ಸಾಧಾರಣ ಕುದುರೆಗಳನ್ನು ಅಡವಿಯಲ್ಲಿ ಮೇಯಲಿಕ್ಕೆ ಬಿಡುವದೂ ಜಾತಿವಂತ ಕುದುರೆಗಳನ್ನು ಮನೆಯಲ್ಲಿ ಕಟ್ಟಿ ಮೇಯಿಸಿ ಪಾಗೆಯನ್ನು ಸಿದ್ಧಪಡಿಸುವದೂ ಶಿಲೇದಾರರ ಕೆಲಸವಾಗಿತ್ತು. ಎಲ್ಲ ಕಡೆಯಲ್ಲಿ ಕುದುರೆಗಳ ಕೆಲಸವೇ ಇದ್ದುದರಿಂದ, ಬಡವರಿಂದ ಶ್ರೀಮಂತರ ವರೆಗೆ ಆಗ ಕುದುರೆ ಸಾಕುವದೊಂದು ದೊಡ್ಡ ಪ್ರವೃತ್ತಿಯೇ ಆಗಿತ್ತು. ಬಾಗಿಲಲ್ಲಿ ಕುದುರೆಯಿಲ್ಲದ ಮನೆಗಳಿಲ್ಲ; ಕುದುರೆ ಹತ್ತಲಿಕ್ಕೆ ಬಾರದ ಮನುಷ್ಯರಿಲ್ಲ, ಎಂಬಂತೆ ಒಂದಾನೊಂದು ಕಾಲದಲ್ಲಿ ಮಹಾರಾಷ್ಟ್ರದ ಸ್ಥಿತಿಯಾಗಿತ್ತು. ಭೀಮಾ-ಗೋದಾವರಿ ನದಿಗಳ ತೀರಗಳ ಕುದುರೆಗಳು ಒಳ್ಳೇ ಬಲಿಷ್ಠವಿರುತ್ತಿದ್ದು, ಅವು ಬಹು ದೂರ ಪ್ರಯಾಣ ಮಾಡುತ್ತಿದ್ದವು; ಆದರೆ ನೋಟಕ್ಕೆ ಅಂದವಾದ ಹಾಗು ಬಲಿಷ್ಠವಾದ ಕುದುರೆಗಳು ಮಹಾರಾಷ್ಟ್ರದಲ್ಲಿ ಉತ್ಪನ್ನವಾಗುತ್ತಿದ್ದಿಲ್ಲ. ಈ ನ್ಯೂನತೆಯನ್ನು ಸೌದಾಗರರು ತುಂಬಿ ಕೊಡುತ್ತಿದ್ದರು. ಕಾಬೂಲಿ, ಕಾಠೇವಾಡಿ, ಅರಬಿ, ತಿಬೇಟಿ, ಅಫಗಾಣಿ ಮೊದಲಾದ ಜಾತಿವಂತ ಕುದುರೆಗಳನ್ನು ಜಾತಿವಂತ ಕುದುರೆಗಳ ವ್ಯಾಪಾರಿಗಳು ತಂದು ಮಾರುತ್ತಿದ್ದರು. ಅದ್ದರಿಂದ ಪ್ರತಿಯೊಂದು ಪಾಗೆಯಲ್ಲಿ ಕನಿಷ್ಠಕ್ಕೆ ಒಂದಾದರೂ ಜಾತಿವಂತ ಕುದುರೆಯು ನೋಡಲಿಕ್ಕೆ ದೊರೆಯುತ್ತಿತ್ತು.

ಕಾಲಾಳುಸೈನ್ಯದಲ್ಲಿ ಮರಾಟರಿಗಿಂತ ಇತರರ ಪೂರೈಕೆಯೇ ಹೆಚ್ಚಿರುತ್ತಿತ್ತು. ಮರಾಟರ ಸೈನ್ಯದಲ್ಲಿ ಮುಸಲ್ಮಾನ ಸೈನಿಕರು ನೌಕರಿಗೆ ಇರುತ್ತಿದ್ದರು. ಇಷ್ಟಲ್ಲದೆ ಮುಸಲ್ಮಾನರಿಗೆ ದೊಡ್ಡ ದೊಡ್ಡ ಅಧಿಕಾರಗಳಾದರೂ ದೊರೆಯುತ್ತಿದ್ದವು. ಸದ್ಯದ ಇಂಗ್ಲಿಷ ರಾಜ್ಯದಲ್ಲಿಯ ತೋಫುಖಾನೆಯಲ್ಲಿ ಮರೆತು ಸಹ ಹಿಂದುಗಳ ಪ್ರವೇಶ ವಾಗುತ್ತಿರುವದಿಲ್ಲ. ಮರಾಟರ ರಾಜ್ಯದಲ್ಲಿ ಒಂದಾನೊಂದು ಕಾಲದಲ್ಲಿ ಎಲ್ಲ ತೋಫುಖಾನೆಗಳು ಮುಸಲ್ಮಾನರ ವಶದಲ್ಲಿದ್ದವು. ಮುಸಲ್ಮಾನರಲ್ಲದೆ ಅರಬೀ, ಹಿಂದುಸ್ತಾನಿ ಅಂದರೆ ಪರದೇಶೀ ಪುರಭಯ್ಯಾ ಮೊದಲಾದ ಜನರು ಕಾಲಾಳು ಸೈನ್ಯದಲ್ಲಿ ತುಂಬಿರುತ್ತಿದ್ದರು. ದಕ್ಷಿಣದೊಳಗಿನ ಮರಾಟರು ಉತ್ತರದ ಯಾವ ರಾಜನಲ್ಲಿಯೂ ದಂಡಿನ ನೌಕರಿಗೆ ನಿಂತ ಬಗ್ಗೆ ಉಲ್ಲೇಖವಿಲ್ಲ. ಮಹದಾಜಿ ಶಿಂದೆಯು ನರ್ಮದೆಯ ಉತ್ತರದಲ್ಲಿ ಸ್ಥಿರವಾಗಿ ವಾಸಮಾಡಿದ ಮೇಲೆ ಅವನ ನೌಕರಿಗಾಗಿ ಸಾಕಷ್ಟು ಮರಾಟ ಸೈನಿಕರು ದೊರೆಯುಲಿಲ್ಲ. ಆದ್ದರಿಂದ ಅವನು ಹಿಂದುಸ್ತಾನೀ ಜನರನ್ನೇ ಸೈನ್ಯದಲ್ಲಿ ತುಂಬಿದನು. ಮರಾಟರಿಗೆ ಸಂಗ್ರಾಮ ವ್ಯವಸಾಯದ ಸಲು ವಾಗಿ ಅರಬೀ ಪುರಭಯ್ಯಾ ಗೋಸಾವಿ ಮೊದಲಾದ ಜನರ ಕೊರತೆ ಬೀಳಲಿಲ್ಲ. ಸೈನ್ಯದ ನೌಕರಿಯಲ್ಲಿ ಮರಾಟರಿಗಿಂತ ಈ ಜನರ ಉಪಯೋಗವೇ ಹೆಚ್ಚಾಗುತ್ತಿತ್ತು. ಮರಾಟರು ಪ್ರಾಮಾಣಿಕರಿದ್ದರೂ ಹಿಂದುಸ್ತಾನೀ ದಂಡಾಳುಗಳಂತೆ ಗಟ್ಟಿಗರೂ ಕೋಪಿಷ್ಟರೂ ಅವಿಚಾರಿಗಳೂ ಇರುತ್ತಿದ್ದಿಲ್ಲ. ನಿರಾತಂಕವಾಗಿ ಖಡ್ಗಚಾಲನ ಮಾಡುವ ದಿದ್ದಲ್ಲಿ ಮರಾಟರಿಗಿಂತ ಈ ಜನರ ಪ್ರಯೋಜನ ಹೆಚ್ಚು. ಆದ್ದರಿಂದ ಆಗಿನ ಸರದಾರರೂ ಶ್ರೀಮಂತ ಸಾವುಕಾರರೂ ಶರೀರ ಸಂರಕ್ಷಣಾರ್ಥವಾಗಿ-ಬೊಕ್ಕಸದ ರಕ್ಷಣೆಗಾಗಿಯೂ ಆ ಜನರನ್ನು ಹಾಗು ಅರಬರನ್ನು ಇಲ್ಲವೆ ಪರದೇಶಿಗಳನ್ನು ಇಟ್ಟು ಕೊಳ್ಳುತ್ತಿದ್ದರು. ಈ ಜನರು ತಮ್ಮ ಮನೆ-ಮಾರುಬಿಟ್ಟು ದೂರದಿಂದ ಬಂದವರಾದುದರಿಂದ ಹಾಗು ಅವರ ಋಣಾನುಬಂಧವು ಇತ್ತ ಕಡೆಗಿರದ್ದರಿಂದ ಎಂಟು ಪ್ರಹರವೂ ನೌಕರಿಯ ಹೊರತು ಅವರಿಗೆ ಇತರ ವ್ಯವಧಾನಗಳಿರುತ್ತಿದ್ದಿಲ್ಲ. ಮರಾಟ ಸೈನಿಕರೆಂದರೆ, ಅವರ ಹಿಂದೆ ಮನೆ-ಮಾರು, ಕುಟುಂಬ, ದನ-ಕರು ಮೊದಲಾದವುಗಳ ವ್ಯಾಪವು ಇದ್ದಂಥವರು. ಆದ್ದರಿಂದ ಅವರು ಎಷ್ಟೇ ಪ್ರಾಮಾಣಿಕರಿದ್ದರೂ ಅವರಿಂದ ನೌಕರಿಗೆ ಅಲ್ಪಸ್ವಲ್ಪವಾದರೂ ಅಂತರವು ಬೀಳತಕ್ಕದ್ದೇ. ಮರಾಟ ಸೈನಿಕರು ವಿಚಾರಿಗಳೂ ದಯಾಳುಗಳೂ ಇರುತ್ತಿದ್ದುದರಿಂದ ಅವರ ಭಯವು ಶತ್ರುಗಳಿಗೆ ಇರತಕ್ಕಷ್ಟು ಇರುತ್ತಿದ್ದಿಲ್ಲ. ಪರದೇಶೀಯರನ್ನು ನೌಕರಿಗೆ ಇಟ್ಟುಕೊಳ್ಳುವ ಪರಿಪಾಠವು ಪ್ರಬಲವಾಗಿ, ಬರಬರುತ್ತ ಮರಾಟಾ ಸೈನಿಕರು ಕಾಣದಂತಾದರು. ಪ್ರತಿಯೊಬ್ಬ ಶ್ರೀಮಂತನ ದಿಡ್ಡಿಯ ಬಾಗಿಲ-ತಲೆಬಾಗಿಲುಗಳ ಮೇಲೆ ಅರಬರ ಕಾವಲು. ಬಾಜೀರಾಯ ಶಾಹಿಯಲ್ಲಿ ನಾನಾಫಡಣವೀಸನು ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ಮಹಾಡಕ್ಕೆ ಓಡಿ ಹೋದದ್ದು ಅರಬರ ಬೆದರಿಕೆಯಿಂದಲೇ. ಬಡೋದೆಯಲ್ಲಿ ಅರಬರ ಅಟ್ಟಹಾಸ ಮಿತಿಮೀರಿತ್ತು. ಅವರ ಬಂಡಾಯವನ್ನು ಮುರಿದು

ಗಾಯಕವಾಡನನ್ನು ಮುಕ್ತಗೊಳಿಸಲಿಕ್ಕೆ ಇಂಗ್ಲಿಷರಿಗೆ ಬಹಳೇ ಶ್ರಮಪಡಬೇಕಾಯಿತು. ಗಾಯಕವಾಡ ಸರಕಾರಕ್ಕೆ ಸಾಲವಾದಾಗ ಸಂಸ್ಥಾನದ ಉತ್ಪನ್ನದ ಹೊಣೆಯು ಸಾಕಾಗುತ್ತಿದ್ದಿಲ್ಲ; ಆದರೆ ಅರಬ ಸರದಾರರ ಶಬ್ದದ ಹೊಣೆಗಾರಿಕೆಯು ಸಾಕಾಗುತ್ತಿತ್ತು. ಎರಡನೇ ಬಾಜೀರಾಯನು ಓಡಿ ಹೋಗುತ್ತಿರುವಾಗ ಅವನ ಬಳಿಯಲ್ಲಿ ಉಳಿದ ಸೈನ್ಯದಲ್ಲಿ ಅರಬರೇ ಪ್ರಮುಖರಾಗಿದ್ದರು. ಬಾಜೀರಾಯನು ಇಂಗ್ಲಿಷರ ಸ್ವಾಧೀನವಾದಾಗ ಅರಬರು ತಮ್ಮ ನಿಂತ ವೇತನದ ಬಗ್ಗೆ ಬಂಡಾಯ ಮಾಡಿದರು. ಆಗ ಜನರಲ್ ಸ್ಮಿತ್ಥನು ಮಧ್ಯಸ್ಥಿಕೆ ಮಾಡದಿದ್ದರೆ ಬಾಜಿಯ ಪ್ರಾಣವು ಕೂಡ ಉಳಿಯುತ್ತಿದ್ದಿಲ್ಲ. ನಾಗಪುರದ ಅಪ್ಪಾಸಾಹೇಬ ಭೋಸಲೆಯನ್ನು ಪದಚ್ಯುತಗೊಳಿಸಿದ ಮೇಲೆ ಶಾಂತತೆಯನ್ನು ಸ್ಥಾಪಿಸುವ ಕಾಲದಲ್ಲಿ ಅಲ್ಲಿಯ ಅರಬ ಸೈನ್ಯವನ್ನು ತೆಗೆದುಹಾಕುವದೇ ಒಂದು ದೊಡ್ಡ ಕಠಿಣ ಕಾರ್ಯವಾಯಿತು. ಸದ್ಯದಲ್ಲಾದರೂ ದಕ್ಷಿಣ ಹೈದ್ರಾಬಾದ ಸಂಸ್ಥಾನದಲ್ಲಿ ಅರಬರ ಪ್ರಾಬಲ್ಯವೇ ಸೈನಿಕ ಸಂಸ್ಥೆಯಲ್ಲಿ ಹೆಚ್ಚಾಗಿ ಕಾಣುವದು. ಅದರಂತೆಯೇ ಪುರಭಯ್ಯಾ ಜನರದು. ಅವರು ಸಂಕಾಪಿಗಳಿರುವ ಮೂಲಕ ಧನಿಯ ಮೇಲೆ ತಿರುಗಿ ಬೀಳಲಿಕ್ಕೆ ವೇಳೆ ಹಿಡಿಯುವದಿಲ್ಲ; ಅವರು ಪ್ರಾಮಾಣಿಕತನವನ್ನು ಯಾವಾಗ ನಷ್ಟಗೊಳಿಸುವರೆಂಬದರ ನಿಯಮವಿಲ್ಲ. ಗಾರದಿಗಳಲ್ಲಿ ಪರದೇಶಿಗಳ ಭರತಿಯೇ ಹೆಚ್ಚಾಗಿತ್ತು. ಸುಮೇರಸಿಂಗ, ಖರಕಸಿಂಗ ಮೊದಲಾದವರು-ನಾರಾಯಣರಾವ ಪೇಶವೆಯ ಕೊಲೆಗಡಕರು-ಗಾರದಿಗಳೊಳಗಿನವರೇ ಆಗಿದ್ದರು. ಈಗ ಇಂಗ್ಲಿಷ ಸರಕಾರವು ಸೈನ್ಯದಲ್ಲಿ ವಿದೇಶೀಯರ ಭರತಿಯನ್ನು ಹೆಚ್ಚಾಗಿ ಮಾಡುತ್ತಿರುವದೆಂಬ ಆಕ್ಷೇಪಣೆಯುಂಟು. ಈ ಬಗೆಯ ಆಕ್ಷೇಪಣೆಯು ಮರಾಟಶಾಹಿಯಲ್ಲಿದ್ದಿಲ್ಲವೆಂಬಂತೇನೂ ಇಲ್ಲ; ಆದರೆ ಇದಕ್ಕೆ ಎರಡನೆಯ ಪಕ್ಷವಿರುಹವು. ಅದು ಯಾವುದೆಂದರೆ, ವರಿಷ್ಠ ಸ್ಥಳದ ಮೇಲೆ ಈಗ ಹಿಂದುಗಳ ಸಮಾವೇಶವಾಗುತ್ತಿರುವದಿಲ್ಲ ಆಗ ಹೀಗಾಗುತ್ತಿದ್ದಿಲ್ಲ. ಮರಾಟ ಸೈನಿಕರನ್ನು ತೆಗೆದುಕೊಂಡು, ಅವರಿಂದಾಗದ ವಿಶಿಷ್ಟ ಪ್ರಕಾರದ ಕೆಲಸಗಳ ಮೇಲೆ ಪರದೇಶೀಯ ಜನರನ್ನು ನಿಯಮಿಸುವ ಪರಿಪಾಠವು ಆಗ ಇತ್ತು. ಕೇವಲ ನೌಕರರೆಂದು ಪರದೇಶೀಯ ಜನರನ್ನು ಹೇರಳವಾಗಿ ತೆಗೆದುಕೊಳ್ಳುವ ಪರಿಪಾಠವು ಆಗ ಇರುತ್ತಿತ್ತು. ಒಂದು ಅರ್ಥದಿಂದ ಅದು ತಪ್ಪುಗಾರಿಕೆಯೆಂದು ಹೇಳಬಹುದು.

ಕವಾಯತಿನ ಸೈನ್ಯದ ಹಾಗು ತೋಫುಗಳ ಉಪಯೋಗವು ಭಾವೂಸಾಹೇಬ ಪೇಶವೆಯ ಸರದಾರಿಕೆಯಲ್ಲಿ ದೊಡ್ಡ ಪ್ರಮಾಣದಿಂದಾಯಿತು. ತಂತ್ರಯುದ್ಧದ ಧೋರಣವನ್ನು ಮರಾಟರು ಪಾಣಿಪತ್ತದ ಸಂಗ್ರಾಮದಲ್ಲೇ ಪ್ರಥಮತಃ ಬದಿಗಿರಿಸಿದರು. ಪಾನಿಪತ್ತದ ಸಂಗ್ರಾಮದಲ್ಲಿ ಎದೆಗೊಟ್ಟು ಕಾದುವ ಬುದ್ಧಿಯು ಸದಾಶಿವರಾವ ಭಾವೂಸಾಹೇಬನಲ್ಲಿ ಹುಟ್ಟಿದ್ದರಿಂದ ಅಪಜಯವೊದಗಿತೆಂದು ಒಂದು ಪ್ರವಾದವಿದೆ. ಆದರೂ ಆ ಯುದ್ಧದಲ್ಲಿ ಇಬ್ರಾಹಿಮಖಾನ ಗಾರದಿಯ ದಳವು ಚನ್ನಾಗಿ ಕಾರ್ಯ ಮಾಡಿತೆಂಬದರಲ್ಲೇನೂ ಸಂದೇಹವಿಲ್ಲ. ಮುಂದೆ ಕವಾಯತೀ ಸೈನ್ಯ

ಪದ್ಧತಿಯನ್ನು ಮಹದಾಜಿ ಶಿಂದೆಯು ಒಳ್ಳೇ ಯಶಸ್ವೀಯನ್ನಾಗಿ ಮಾಡಿತೋರಿಸಿದನು. ಕವಾಯತೀ ಸೈನ್ಯದಲ್ಲಿರುವ ವ್ಯವಸ್ಥೆಯು ಮರಾಟರಿಗೆ ಸರಿದೋರದ್ದರಿಂದ ಆ ಆ ಸೈನ್ಯದಲ್ಲಿ ಮರಾಟೇತರರ ಭರತಿಯೇ ಹೆಚ್ಚಾಗಿತ್ತು. ದಂಡಿನಲ್ಲಿ ಯಾರೇ ಇದ್ದರೂ ಸುಧಾರಿಸಿದ ಪದ್ಧತಿಯ ಮೂಲಕ ಮಹದಾಜಿಯ ಕಾಲು ಸ್ಥಿರವಾಗಿ, ವರ್ಚಸ್ಸು ನೆಲೆಗೊಂಡಿತು. ಮಹದಾಜಿಯು ಈ ವಿದ್ಯೆಯನ್ನು ಯುರೋಪೀಯರಿಂದ ಎತ್ತಿಕೊಂಡನು. ಅವನು ಉತ್ತರ ಹಿಂದುಸ್ತಾನದಲ್ಲಿದ್ದುದರಿಂದ ಕಂಪನಿ ಸರಕಾರದ ಕೈಕೆಳಗಿನ ಸೈನ್ಯದ ಕರಾಮತನ್ನು ನೋಡುವ ಪ್ರಸಂಗಗಳು ಅವನಿಗೆ ಬರುತ್ತಿದ್ದವು. ಅವನು ಮಹತ್ವಾಕಾಂಕ್ಷಿಯಿದ್ದುದರಿಂದ ಸೇನಾಸಾಮರ್ಥ್ಯದ ಈ ಸಾಧನವನ್ನು ಬೇಗನೆ ಉಪಯೋಗಿಸಿಕೊಂಡನು. ಸುದೈವದಿಂದ ಅವನಿಗೆ ಫ್ರೆಂಚಸೈನಿಕರ ಹಾಗು ಮುತ್ಸದ್ದಿಯಾದ ಡಿಬಾಯಿನನ ನೆರವು ದೊರೆತದ್ದರಿಂದ, ಮಹದಾಜಿಯ ಕಾರ್ಯಭಾಗವು ಅವನ ಮನಸ್ಸಿನಂತೆ ನೆರವೇರಿತು. ಅವನು ಹತ್ತು-ಹನ್ನೆರಡು ವರ್ಷಗಳ ಅವಧಿಯಲ್ಲಿ ಡಿಬಾಯಿನನ ನೆರವಿನಿಂದ ಕವಾಯತಿನ ಸೈನ್ಯವನ್ನು ಸಿದ್ಧಪಡಿಸಿ ಸಣ್ಣ ದೊಡ್ಡ ಶಸ್ತ್ರಾಸ್ತ್ರಗಳ ಹಾಗು ತೋಫುಗಳ ಕಾರ್ಯಾಲಯಗಳನ್ನು ಆಗ್ರಾದಲ್ಲಿ ಸ್ಥಾಪಿಸಿದನು. ವಡಗಾಂವ ಖರ್ಡೆಗಳ ಕಾಳಗದಲ್ಲಿ ಶಿಂದೆಯ ಕವಾಯತಿನ ಸೈನ್ಯದ ಹಾಗು ತೋಫುಗಳ ಉಪಯೋಗವು ಬಹಳವಾಯಿತು. ಮಹದಾಜಿಯ ತರುವಾಯ ಈ ವಿದ್ಯೆಯನ್ನು ಹೋಳಕರನು ಎತ್ತಿಕೊಂಡನು. ಯಶವಂತರಾವ ಹೋಳಕರನ ಕೊನೆಯ ದಿವಸಗಳು, ಅಂದರೆ ಅವನಿಗೆ ಹುಚ್ಚು ಹಿಡಿಯುವದಕ್ಕಿಂತ ಮೊದಲಿನ ದಿವಸಗಳು ಕವಾಯತಿನ ಸೈನ್ಯವನ್ನು ಸಿದ್ಧಪಡಿಸುವ ಹಾಗು ತೋಫುಗಳ ಕಾರ್ಯಾಲಯಗಳನ್ನು ಸ್ಥಾಪಿಸುವ ಕೆಲಸಗಳಲ್ಲಿ ಹೋದವು. ಇಂಗ್ಲಿಷರಂತೆ ಫ್ರೆಂಚರಾಧರೂ ಕವಾಯತೀ ಸೈನ್ಯದ ಮೇಲೆ ಪ್ರೀತಿಯುಳ್ಳವರಾಗಿದ್ದುದರಿಂದ ದಕ್ಷಿಣದಲ್ಲಿ ನಿಜಾಮ ಮೊದಲಾದವರ ಸೈನ್ಯದಲ್ಲಿ ಕವಾಯತಿನ ಸೈನ್ಯದ ಭರತಿಯಿರುತ್ತಿತ್ತು. ಟೀಪುವಾದರೂ ಈ ವಿದ್ಯೆಯನ್ನು ಅನುಕರಿಸಿದ್ದನು. ೧೭೭೩ನೇ ಇಸ್ವಿಯ ಮೊದಲು ಇಂಗ್ಲಿಷ ಫ್ರೆಂಚರಲ್ಲಿ ಸ್ಪರ್ಧೆಯೂ ಯುದ್ಧವೂ ಪ್ರಾರಂಭವಾಗಿದ್ದವು. ಅವು ಏತದ್ದೇಶೀಯ ರಾಜ-ಮಹಾರಾಜರ ನೆರವಿನಿಂದಲೇ ನಡೆದಿದ್ದವು. ಆ ಕಾಲದ ತರುವಾಯ ಫ್ರೆಂಚರ ರಾಜ್ಯಸ್ಥಾಪನೆಯ ಮನೋರಥವು ಕುಸಿಬಿದ್ದ ಮೇಲಾದರೂ ಏತದ್ದೇಶೀಯ ರಾಜ-ಮಹಾರಾಜರಿಂದ ಇಂಗ್ಲಿಷರ ಮೇಲಿನ ಸೇಡನ್ನು ತೀರಿಸಿಕೊಳ್ಳಬೇಕೆಂಬ ಮನೋದಯವು ಅವರದಿದ್ದುದರಿಂದ, ಕವಾಯತಿನ ಸೈನ್ಯವನ್ನು ಕೈಕೆಳಗಿರಿಸಿಕೊಳ್ಳುವ ದಿವಸಗಳು ಮುಗಿದುಹೋದ ಮೇಲೆ ಸಹ ಫ್ರೆಂಚರು ಸರದಾರರ ಸೈನ್ಯದಲ್ಲಿ ಸೇರಿ ಅವರ ಸೈನ್ಯವನ್ನು ಪೂರ್ಣಡೆಮಾಡುವ ಇಚ್ಛೆಯು ಅವರಲ್ಲಿ ಸ್ಥಿರವಾಗಿ ಉಳಿದಿತ್ತು. ಡಿಬಾಯಿನನ ಸಹಾಯದಿಂದ ಶಿಂದೆಯು ೨೦ ಸಾವಿರ ಕಾಲಾಳುಗಳನ್ನೂ ೧೦ ಸಾವಿರ ತುಬಾಕಿಯ ಸೈನ್ಯವನ್ನೂ ೩ ಸಾವಿರ ತುರ್ಕೀಸ್ವಾರರನ್ನೂ ಬಹು ದೊಡ್ಡ ತೋಫುಖಾನೆಯನ್ನೂ ಸಿದ್ಧಪಡಿಸಿಕೊಂಡನು. ಪೇಶವೆಯವರ ಕೈಕೆಳಗಿನ ಶಿಲೇದಾರರ ತಪ್ಪುಗಳನ್ನು

ನೋಡಿ, ತನ್ನ ಕೈಕೆಳಗಿನ ಸೈನಿಕರಿಗೆ ನಿಯಮಿತ ವೇಳೆಗೆ ವೇತನವು ದೊರೆಯು ವಂತೆ ವ್ಯವಸ್ಥೆ ಮಾಡಿದನು. ಈ ಎಲ್ಲ ಕಾರಣಗಳ ಮೂಲಕ ಮರಾಟಶಾಹಿಯಲ್ಲಿ ಮಹದಾಜಿಯ ವರ್ಚಸ್ಸು ಹೆಚ್ಚಾಗಿ ನೆಲೆಗೊಂಡಿತು. ಶಿಂದೆಯ ಸೈನ್ಯಸಂಸ್ಥೆಯ ವೆಚ್ಚವು ಮುಂದೆ ಪ್ರಮಾಣದ ಹೊರಗೆ ಹೋಯಿತೆಂಬ ಮಾತು ಬೇರೆ. ಬಾಜೀ ರಾಯನನ್ನು ಪಟ್ಟಕ್ಕೆ ಕುಳ್ಳಿರಿಸುವ ಗೊಂದಲದ ವೇಳೆಯಲ್ಲಿ ದಕ್ಷಿಣದಲ್ಲಿದ್ದ ಶಿಂದೆಯ ಸೈನ್ಯದ ತಿಂಗಳ ವೆಚ್ಚವು ೨೫ ಲಕ್ಷರೂಪಾಯಿಯಿತ್ತು! ಮುಖ್ಯವಾಗಿ ಈ ವೆಚ್ಚವನ್ನು ನಡೆಸುವದಕ್ಕಾಗಿಯೇ ಆಗ ಪುಣೆಯ ನಾಗರಿಕರನ್ನು ಬಹಳ ಛಲನೆಪಡಿಸಿದರೆಂಬದು ಪ್ರಸಿದ್ಧವೇ ಇರುವದು.

ಕುದುರೆಯ ದಳಕ್ಕಿಂತ ಕಾಲಾಳು ದಳದ ವೆಚ್ಚವು ಕಡಿಮೆಯಿರುತ್ತದೆ. ಕುದು ರೆಯ ದಳವು ಹಿಂದೆ ಬಿದ್ದು ಕಾಲಾಳುಗಳ ಉಪಯೋಗವು ಹೆಚ್ಚುತ್ತ ನಡೆದಂತೆ ಮರಾಟರಿಗೆ ತುಬಾಕಿಗಳ ಉಪಯೋಗವು ಹೆಚ್ಚೆಂದು ತಿಳಿಯಹತ್ತಿತು; ಆದರೆ ಮರಾ ಟರ ಸೈನಿಕರಿಗೆ ಪೂರೈಸುವಷ್ಟು ತುಬಾಕಿಗಳು ಮರಾಟರ ಕಾರ್ಯಾಲಯುಗಳಲ್ಲಿ ಸಿದ್ಧವಾಗುವದು ಅಸಂಭವವಾಗಿತ್ತು. ಮರಾಟರ ಹಾಗು ಇಂಗ್ಲಿಷರ ಸಂಬಂಧವಾ ದಂದಿನಿಂದ ಇತರ ಪದಾರ್ಥಗಳೊಡನೆ ತುಬಾಕಿಗಳನ್ನೂ ಅವರು ಕಂಪನಿಯ ಕಡೆ ಯಿಂದ ಕೊಳ್ಳತೊಡಗಿದರು. ಕಂಪನಿಯಾದರೂ ವ್ಯಾಪಾರೀ ದೃಷ್ಟಿಯಿಂದ ಅವು ಗಳನ್ನು ಪೂರೈಸತೊಡಗಿತು. ಮುಂದೆ ಮರಾಟರು ಹಾಗು ಇಂಗ್ಲಿಷರಲ್ಲಿ ಯುದ್ಧಪ್ರಸಂ ಗವು ಉದ್ಭವಿಸಿದ ಮೇಲೆ ಕಂಪನಿಯು ತುಬಾಕಿಗಳನ್ನು ಮರಾಟರಿಗೆ ಮಾರುವ ಬಗ್ಗೆ ಸಹಜವಾಗಿಯೇ ಕೈ ಬಿಗಿ ಹಿಡಿಯಿತು. ತಮ್ಮ ಸೈನ್ಯದೊಳಗಿನ ತುಬಾಕಿಗಳು ಕೆಲ ಸಕ್ಕೆ ಬಾರದೆ ತಿರುಗಿ ಬಂದವೆಂದರೆ, ಅವುಗಳನ್ನು ಮರಾಟರಿಗೆ ಮಾರದೆ, ಅವುಗಳ ನಲಿಕೆಗಳನ್ನು ಕಡಿದು ವಿಲಾಯತಿಗೆ ಕಳಿಸಬೇಕೆಂಬ ನಿಯಮವು ಬಳಿಕೆಯಲ್ಲಿ ಬಂತು; ಯಾಕಂದರೆ ಕಂಪನಿಯ ತುಬಾಕಿಗಳ ಕಾರ್ಯಾಲಯಗಳು ಹಿಂದುಸ್ತಾನದಲ್ಲಿದ್ದಿಲ್ಲ; ಶಸ್ತ್ರಾಸ್ತ್ರಗಳ ಪೂರೈಕೆಯು ವಿಲಾಯತಿಯಿಂದಲೇ ಆಗುತ್ತಿತ್ತು; ಆದರೆ ಕಂಪನಿಯ ಕೆಲವು ಅಧಿಕಾರಿಗಳಿಗೆ ಈ ಪದ್ಧತಿಯು ಎಷ್ಟೂ ಸರಿದೋರಲಿಲ್ಲ ಅವರು ಅನ್ನುತ್ತಿದ್ದು ದೇನಂದರೆ:—"ಕಂಪನಿಯವರು ತುಬಾಕಿ ಮಾರುವದನ್ನು ನಿಲ್ಲಿಸಿದರೆ, ಆವಶ್ಯಕತೆಯ ಮೂಲಕ ಮರಾಟರಲ್ಲಿ ಸ್ವಂತದ ಶಸ್ತ್ರಾಸ್ತ್ರಗಳ ಕಾರ್ಯಾಲಯಗಳನ್ನು ಸ್ಥಾಪಿಸುವ ಬುದ್ಧಿಯು ಹುಟ್ಟುವದು. ಶಿಂದೆಯು ಹೀಗೆ ಕಾರ್ಯಾಲಯಗಳನ್ನು ಸ್ಥಾಪಿಸಿ ಉದಾ ಹರಣೆ ಹಾಕಿ ಕೊಟ್ಟಿರುವನು. ಕಂಪನಿಯವರು ನಿಯಮ ಮಾಡಿದರೂ ಎಷ್ಟೋ ತುಬಾಕಿಗಳು ಕಳವಿನಿಂದಾದರೂ ಮಾರಿ ಹೋಗತಕ್ಕವುಗಳೇ. ಬೆಲೆ ಚನ್ನಾಗಿ ಬಂದ ಮೇಲೆ ಯಾರು ಬಿಡುತ್ತಾರೆ? ಕಳವಿನಿಂದ ಮಾರಾಟವಾಗಿ ವ್ಯಕ್ತಿಗಳ ಲಾಭವಾಗುವ ದಕ್ಕಿಂತ, ಕಂಪನಿಯು ಹೆಚ್ಚಿನ ದರದಿಂದ ಮಾರಿ ತನ್ನ ಲಾಭ ಮಾಡಿಕೊಳ್ಳಬಾರ ದೇಕೆ? ಅಲ್ಲದೆ ನಿರುಪಯುಕ್ತ ತುಬಾಕಿಗಳನ್ನು ತೆಗೆದುಕೊಂಡು ಮರಾಟರು ಯುದ್ಧ ಮಾಡತೊಡಗಿದರೆಂದರೆ, ಕಂಪನಿಯವರಿಗೆ ಒಳಿತೇ ಆಗುವದು; ಯಾಕಂದರೆ ಕಂಪ

ನಿಯ ಸೈನಿಕರ ಕೈಯಲ್ಲಿ ಹೊಸ ತುಬಾಕಿಗಳಿರುವ ಮೂಲಕವಾಗಿಯೂ ಮರಾಟರ ಸೈನಿಕರ ಕೈಯಲ್ಲಿ ಹಳೆಯ ನಿರುಪಯುಕ್ತ ತುಬಾಕಿಗಳಿರುವ ಮೂಲಕವಾಗಿಯೂ ಯುದ್ಧದ ವೇಳೆಯಲ್ಲಿ ಕಂಪನಿಯ ಸೈನಿಕರಿಗೆ ದೂರದಿಂದ ಗುರಿ ಹೊಡೆಯಲಿಕ್ಕೆ ಸಾಧಿಸುವದು; ಮರಾಟರ ಗುರಿಗಳು ದೂರ ಹೋಗದ ಮೂಲಕವಾಗಿ ಕಂಪನಿಯ ಸೈನಿಕರನ್ನು ಹೊಡೆಯಲು ಸಾಧಿಸುವದಿಲ್ಲ. ನಿರುಪಯುಕ್ತ ತುಬಾಕಿಗಳನ್ನು ಹಡಗದಲ್ಲಿ ತುಂಬದೆ ಬಿಟ್ಟರೆ ಆ ಸ್ಥಳದಲ್ಲಿ ಹಿಂದುಸ್ತಾನದೊಳಗಿನ ಬೇರೆ ಪದಾರ್ಥಗಳನ್ನು ವಿಲಾಯತಿಗೆ ಒಯ್ಯಲಿಕ್ಕೆ ಅನುಕೂಲವಾಗುವದು; ಹಾಗು ಮರಾಟರು ಹಳೆಯ ತುಬಾಕಿಗಳನ್ನು ತೆಗೆದುಕೊಂಡು ಕೊಡ್ರುವರು. ಹೀಗೆ ಅನಾಯಾಸವಾಗಿ ಎರಡೂ ಬಗೆಯಿಂದ ಕಾರ್ಯ ಸಾಧನೆಯಾಗುವದು. ತುಬಾಕಿಗಳು ಕೈಯಲ್ಲಿ ಬರತೊಡಗಿದವೆಂದರೆ, ಮರಾಟರು ಕಾಲಾಳುಗಳ ಸಂಖ್ಯೆಯನ್ನು ಹೆಚ್ಚು ಮಾಡುವರು. ಇದರಿಂದ ಕುದುರೆಯ ಸೈನಿಕರ ಸಂಖ್ಯೆಯು ಕಡಿಮೆಯಾಗುವದು. ಮರಾಟರ ಕುದುರೆಯ ದಳವು ಸುವ್ಯವಸ್ಥಿತವಿರದಿದ್ದರೂ ಒಳ್ಳೆಯ ತ್ರಾಸದಾಯಕವಿರುತ್ತದೆ. ಕುದುರೆ ದಳದೊಡನೆ ಯುದ್ಧ ಮಾಡಬೇಕಾದರೆ, ಎದೆಗೊಟ್ಟು ಎದರಾಎದರು ಯುದ್ಧಗಳಾಗದೆ, ನಿಷ್ಕಾರಣವಾಗಿ ಕಾಳಗದ ಅವಧಿಯು ಬೆಳೆಯುತ್ತದೆ. ಕಾಲಾಳುಗಳೊಡನೆ ಯುದ್ಧವು ನಡೆದರೆ ದೂರದ ಗುರಿಯ ತುಬಾಕಿಗಳ ಮೂಲಕ ಕಂಪನಿಗೇ ಜಯ ದೊರೆಯುವ ಸಂಭವ ಹೆಚ್ಚು. ಯುರೋಪದಲ್ಲಿ ಒಡಂಬಡಿಕೆಯಾದ ವೇಳೆಯಲ್ಲಿ ಹಿಂದುಸ್ತಾನಕ್ಕೆ ಇತರ ಯುರೋಪೀಯ ರಾಷ್ಟ್ರಗಳಿಂದ ಬೇಕಾದಷ್ಟು ತುಬಾಕಿಗಳು ದೊರೆಯುವವು. ಟೀಪೂಸುಲತಾನನು ತುಬಾಕಿಗಳನ್ನು ಯಾವಾಗಲೂ ತರಿಸುತ್ತಿರುತ್ತಾನೆ. ಇತರ ರಾಷ್ಟ್ರಗಳು ಈ ವ್ಯಾಪಾರವನ್ನು ಕಟ್ಟು ಮಾಡುವದಿಲ್ಲ; ಆದರೆ ಇಂಗ್ಲಂಡವು ತನ್ನ ವ್ಯಾಪಾರವನ್ನು ಮುಳುಗಿಸಿಕೊಳ್ಳುವದೇಕೆ?'' ಕಂಪನಿಯ ಹಿತದ ದೃಷ್ಟಿಯಿಂದ ಮೇಲಿನ ಯುಕ್ತಿವಾದದಲ್ಲಿ ಎಷ್ಟೋ ಸತ್ಯವಿತ್ತು. ಅದು ಹೇಗೆಯೇ ಇರಲಿ. ತುಬಾಕಿಗಳ ವಿಷಯದಲ್ಲಿ ಮರಾಟರು ಬಹಳವಾಗಿ ಪರಾವಲಂಬಿಗಳಿದ್ದರೆಂಬ ಸಂಗತಿಯು ನಿರ್ವಿವಾದವಾಗಿದೆ.

ತುಬಾಕಿಗಳಂತೆ ಮರಾಟರ ಕಾರ್ಯಾಲಯಗಳಲ್ಲಿ ಕೆಲಮಟ್ಟಿಗೆ ಮದ್ದು-ಗುಂಡುಗಳಾದರೂ ಸಿದ್ಧವಾಗುತ್ತಿದ್ದವು. ತುಬಾಕಿಯ ಮದ್ದಿನ ಹದವು ಉತ್ತಮವಿರುತ್ತಿತ್ತು; ಆದರೆ ಅದನ್ನು ಮಿಶ್ರ ಮಾಡುವ ಪ್ರಮಾಣವು ಸಶಾಸ್ತ್ರವಿರದ ಮೂಲಕ ಮದ್ದು ಆಗತಕ್ಕಂತೆ ಆಗುತ್ತಿದ್ದಿಲ್ಲ. ತೋಫುಗಳು ಚನ್ನಾಗಿರುತ್ತಿದ್ದವು; ಅವುಗಳ ಬಂಡಿಗಳು ಬೇಗನೆ ಲಿಕಿಲಿಕಿಯಾಗುತ್ತಿದ್ದವು ಗಾಲಿಗಳು ಮಣಿದು ಸೊಟ್ಟ-ಡೊಂಕ ಆಗುತ್ತಿದ್ದವು ಗುಂಡಿನ ಪ್ರಮಾಣದಿಂದ ತೋಫುಗಳನ್ನು ಹೊಯ್ಯದೆ, ತೋಫುಗಳ ಬಾಯಿಯ ಅಳತೆಯ ಗುಂಡುಗಳನ್ನು ಮಾಡುತ್ತಿದ್ದರು. ಗುಂಡುಗಳು ಹೊಯ್ದಂಥವುಗಳಾಗಿರದೆ, ಬಡಿದು ಮಾಡಿದಂಥವುಗಳಿರುತ್ತಿದ್ದವು. ಸುತ್ತಿಗೆಯಿಂದ ಬಡಿದು ಬೇಕಾದ ಆಕಾರವನ್ನು ಹೊಂದಿಸಿದ ಗುಂಡುಗಳ ಮೇಲೆ ಪೆಟ್ಟು,

ತಿಗ್ಗುಗಳು ಉಳಿಯುತ್ತಿದ್ದುದರಿಂದ ತೋಫುಗಳ ಬಾಯಿಗಳು ಬೇಗನೆ ಕೆಡುತ್ತಿದ್ದವು. ದಂಡಯಾತ್ರೆಯಲ್ಲಿ ತೋಫುಗಳಿರುತ್ತಿದ್ದವು; ಆದರೆ ಅವುಗಳ ಮೇಲೆಯೇ ಎಲ್ಲ ಭಾರ ವಿರುತ್ತಿದ್ದಿಲ್ಲ. ಬಾಣಗಳ ಉಪಯೋಗವನ್ನಾದರೂ ಮರಾಟರು ಮಾಡುತ್ತಿದ್ದರು. ತುಬಾಕಿಯು ಬಾಗನೇಟದ ಉಪಯೋಗವು ಮೊದಲು ಶಿಂದೆಯ ದಂಡಿನಲ್ಲೇ ಆಗ ತೊಡಗಿತು. ಬರ್ಚಿ-ಖಡ್ಗಗಳು ಮರಾಟರ ಮುಖ್ಯ ಶಸ್ತ್ರಾಸ್ತ್ರಗಳಾಗಿದ್ದವು.

ಮರಾಟರ ಪಾಳ್ಯವು ಬೀಡುಬಿಟ್ಟಿತೆಂದರೆ, ಬಳಿಯಲ್ಲಿಯೇ ಪೇಟೆ ಕಲೆಯುತ್ತಿತ್ತು. ಮುಂದಿನ ವಸತಿಯು ಬಗ್ಗೆ ಕಹಳೆಯವನು ಪೇಟೆಯಲ್ಲಿ ಕೂಗಿ ತಿಳಿಸಿದನೆಂದರೆ, ಅದು ಸೈನ್ಯಕ್ಕೆ ತಿಳಿಯಿತೆಂಬ ತಿಳುವಳಿಕೆಯಿತ್ತು. ದಂಡಿನೊಡನೆ ಧನಿಯು ಇರುತ್ತಿದ್ದರೆ ಹೆಚ್ಚಾದ ವೈಭವವಿರುತ್ತಿತ್ತು. ಅಂಬಾರಿಯು ಆನೆಗಳೂ ಕುದುರೆಯ ಕೊತವಾಲರೂ ಮೇಣೆ ಪಲ್ಲಕ್ಕಿಗಳೂ ಜೊತೆಯಲ್ಲಿರತಕ್ಕವುಗಳೇ. ಧನಿಯು ಹಾಗು ಸರದಾರರ ಡೇರೆಗಳು ಚಂದ ಕಾಣುತ್ತಿದ್ದವು. ಮುಖ್ಯ ಸರದಾರನ ಡೇರೆಯಲ್ಲಿ ಸಂಜೆಗೆ ಸಭೆ ನೆರೆದು, ಸರಕಾರೀ ಕೆಲಸ ಬೊಗಸೆಗಳು ಸುವ್ಯವಸ್ಥೆಯಿಂದ ಸಾಗುತ್ತಿದ್ದವು. ಬೇಕಾದ ಮನುಷ್ಯನು ಸರದಾರರಿಗೆ ಭೆಟ್ಟಿಯಾಗಿ ಮಾತಾಡಲಿಕ್ಕೆ ನಿರ್ಬಂಧಗಳಿದ್ದಿಲ್ಲ. ಮರಾಟರ ಈ ಸಾದಾ ವೈಭವವನ್ನು ನೋಡಿ ಇಂಗ್ಲಿಷರು ಆಶ್ಚರ್ಯಗೊಳ್ಳುತ್ತಿದ್ದರು. ವಿಲಾಸಿಗಳಾದ ಮೊಗಲರಿಗೆ ಮರಾಟರ ಈ ವೈಭವವು ಸಾಮಾನ್ಯತರದ್ದಾಗಿ ತೋರುತ್ತಿತ್ತು. ಈ ಸಾದಾ ರೀತಿಯು ಇರುವಿಕೆಯಿಂದ ಬೇಕಾದಾಗ ತಳ ಕಿತ್ತಿ ದೂರ ದೂರ ಪ್ರವಾಸ ಮಾಡುವದು ಮರಾಟರಿಗೆ ಸುಲಭವಾಗುತ್ತಿತ್ತು. ಹವೆ, ತಿನಿಸು-ಉಣಿಸುಗಳು ಹೇಗೋ ಇರಲಿ, ಊಟಕೂಡ ದೊರೆಯದೆ ಹೋಗಲಿ, ಅಂಗೈಯ ಮೇಲೆ ಜೋಳದ ಬೆಳಸಿಗಳನ್ನು ಉದ್ದಿ ತಿಂದು ತಮ್ಮ ಪ್ರವಾಸವನ್ನು ಅವರು ಮುಗಿಸುತ್ತಿದ್ದರು. ಜೊತೆಯಲ್ಲಿ ತೋಫುಖಾನೆಗಳಿದ್ದರೂ ಕುದುರೆಯ ಸೈನಿಕರಿರುತ್ತಿದ್ದರು. ಅವರು ಮುಂದೆ ಹೋಗಿ ತೋಫುಗಳನ್ನು ಎಳೆಯುವದಕ್ಕಾಗಿ ಊರೊಳಗಿನ ಎತ್ತುಗಳನ್ನು ತರುತ್ತಿದ್ದರು ದಿನಾಲು ಹನ್ನೆರಡು ಮೈಲಿಗಿಂತ ಹೆಚ್ಚಾದ ದಾರಿಯು ಮೇಲೆ ವಸತಿಯಾಗುತ್ತಿತ್ತು ಮರಾಟರ ಸೈನ್ಯದ ಜೊತೆಯಲ್ಲಿ ಸರಕಾರೀ ಉಗ್ರಾಣವು ಎಂದೂ ಇರುತ್ತಿದ್ದಿಲ್ಲ ವೈಶ್ಯರೂ ಉದ್ಯಮಿದಾರರೂ ತಮ್ಮ ಆಳುಗಳನ್ನು ಕಳಿಸಿ, ಗ್ರಾಮಗಳಿಂದ ಕಾಳುಕಡಿ ತರಿಸುತ್ತಿದ್ದರು. ಊರ ದರಕ್ಕಿಂತ ಒಂದೂ ಕಾಲು ಪಟ್ಟು ದರವು ದಂಡಿನ ಪೇಟೆಯಲ್ಲಿ ಇರುತ್ತಿತ್ತು.

ಮರಾಟರು ಕವಾಯತೀ ಸೈನ್ಯದ ಪದ್ಧತಿಯನ್ನು ಸ್ವೀಕರಿಸಿದ್ದರಿಂದ ಅವರು ಯುರೋಪೀಯ ಅಧಿಕಾರಿಗಳನ್ನೂ ತೆಗೆದುಕೊಳ್ಳಬೇಕಾಯಿತು. ಈ ಅಧಿಕಾರಿಗಳ ವೇತನವು ಹೆಚ್ಚಾಗಿ ಇರುತ್ತಿತ್ತು. ಶಿಂದೆಯ ಕೈಕೆಳಗಿದ್ದ ಡಿಬಾಯಿನನು ಜಹಾಗೀರದಾರನೇ ಆಗಿದ್ದನು. ಅವನ ಹಿಂದಿನಿಂದ ಬಂದ ಸೇನಾಪತಿಯಾದ ಕರ್ನಲ್ ಪೆರನನಿಗೆ ಪ್ರತಿ ತಿಂಗಳಿಗೆ ಐದು ಸಾವಿರ ರೂಪಾಯಿಗಳ ವೇತನವಿತ್ತು! ಒಂದರಿಂದ ಮೂವತ್ತುಸಾವಿರ ರೂಪಾಯಿಗಳ ವರೆಗೆ ವೇತನದ ಕೆಲವು ಮಂದಿ ಶ್ವೇತವರ್ಣೀಯ ಅಧಿಕಾರಿಗಳಿದ್ದರು.

ವೇತನದ ಹೊರತು ಈ ಜನರಿಗೆ ಬೇರೆ ಉತ್ಪನ್ನವೂ ಇರುತ್ತಿತ್ತು. ಹೋಳಕರನ ಕೈ ಕೆಳಗಿನ ಯುರೋಪೀಯ ಅಧಿಕಾರಿಗೆ ಹಾಗು ಬಾಜೀರಾಯನ ಕೈಕೆಳಗಿನ ಯುರೋಪೀಯ ಅಧಿಕಾರಿಗೆ ಪ್ರತಿತಿಂಗಳು ಮೂರು-ಮೂರು ಸಾವಿರದ ವೇತನವಿತ್ತು. ನಿಜಾಮನ ಕೈಕೆಳಗಿನ ಸೇನಾಪತಿಯಾದ ಮ್ಯಾ. ರೆಮಂಡ ಇವನಿಗೆ ಸೈನ್ಯದ ವೆಚ್ಚಕ್ಕಾಗಿ ಮೂವತ್ತು ಲಕ್ಷದ ಜಹಗೀರಿಯು ಇತ್ತು. ಸನ್ ೧೭೯೬ರ ಸಮಯದಲ್ಲಿ ಎಲ್ಲ ಹಿಂದು-ಮುಸಲ್ಮಾನರ ಕೈಕೆಳಗೆ ೩೦೦ ಕ್ಕಿಂತ ಹೆಚ್ಚು ಯುರೋಪೀಯ ನೌಕರರು ಇದ್ದರೆಂಬ ಅನುಮಾನವಿದೆ. ಇವರಲ್ಲಿ ಏಳೆಂಟು ಜನರು ದೊಡ್ಡ ಅಧಿಕಾರದ ಮೇಲೆ, ಇತರರಲ್ಲಿ ೬೦ ಜನರು ಮಧ್ಯಮತರಗತಿಯ ಅಧಿಕಾರಿಗಳಲ್ಲಿ, ಉಳಿದವರು ಸಾರ್ಜಂಟ, ಗೋಲಂದಾಜ ಮೊದಲಾದ ಕೆಲಸಗಳಲ್ಲಿ ಇದ್ದರು. ಇವರಲ್ಲಿ ಬಹುತರವಾಗಿ ಫ್ರೆಂಚರೇ ಹೆಚ್ಚು ಜನರಿದ್ದರು. ಇಂಗ್ಲಿಷ ಕಂಪನಿಯ ದಂಡಿನಿಂದ ಓಡಿ ಬಂದವರೂ ಹಡಗದಲ್ಲಿಯ ಕೆಲಸ ಬಿಟ್ಟು ಬಂದವರೂ ಅನೇಕರಿದ್ದರು. ಇಂಥ ಜನರಿಗೆ ಮೂವತ್ತರಿಂದ ಅರವತ್ತರ ವರೆಗೆ ವೇತನವಿರುತ್ತಿತ್ತು. ಈ ಮನುಷ್ಯರೆಂದರೆ ಕೀಳು ತರಗತಿಯವರೇ ಇರುತ್ತಿದ್ದರು; ಆದರೆ ಸೈನ್ಯದ ಕೆಲಸಕ್ಕೆ ಇಂಥ ಜನರೇ ಹೆಚ್ಚು ಉಪಯೋಗವಾಗುತ್ತಿದ್ದರು. ಕವಾಯತಿನ ಸೈನ್ಯದ ಕಡೆಗೆ ಮರಾಟರು ಲಕ್ಷ್ಯಗೊಟ್ಟಾಗಿನಿಂದ ಯುರೋಪೀಯ ಜನರಿಗೆ ಹೆಚ್ಚಿನ ಸೌಕರ್ಯಗಳು ದೊರೆಯಹತ್ತಿದವು. ಗೌರ ಜನರಿಗಾಗಿ ಯುರೋಪಿನಿಂದ ಬರುವ ಪದಾರ್ಥಗಳ ಮೇಲಿನ ಸುಂಕವು ಸೂಟ ಮಾಡಲ್ಪಡುತ್ತಿತ್ತು. ಓಲಗದಲ್ಲಿ ಧನಿಯ ಹೊರತು ಇತರರಿಗೆ ಪಲ್ಲಕ್ಕಿಯ ಮಾನವಿರುತ್ತಿದ್ದಿಲ್ಲ; ಆದರೆ ಗೌರ ಜನರಿಗೆ ಈ ಮಾನವು ದೊರೆಯಹತ್ತಿತು. ನಿಜಾಮನ ಓಲಗದಲ್ಲಿ ಹಳದೀ ಅಂಬಾರಿಯನ್ನು ಆನೆಯ ಮೇಲೆ ಯಾರೂ ಹೇರಕೂಡದೆಂಬ ನಿರ್ಬಂಧವಿತ್ತು; ಆದರೆ ಗೌರ ಜನರಿಗೆ ಈ ನಿಯಮವು ಸಂಬಂಧವಿಲ್ಲದಂತಾಯಿತು. ಈ ಜನರ ವಸ್ತು-ಒಡವೆಗಳನ್ನು ಒಯ್ಯಲಿಕ್ಕೆ ಬಿಟ್ಟಿಗಳು ನಿರ್ವಿವಾದವಾಗಿ ದೊರೆಯತೊಡಗಿದರು.

ಶಿಂದೆಯಂಥ ಪ್ರಮುಖ ಮತ್ತು ಪ್ರಬಲ ಮರಾಟ ಸೇನಾಪತಿಯು ಯುರೋಪೀಯ ಜನರ ಸೈನ್ಯಪದ್ಧತಿಯನ್ನು ಸ್ವೀಕರಿಸಿದನು; ಮತ್ತು ಅದಕ್ಕಾಗಿ ತನ್ನ ಕೈಯಲ್ಲಿ ದೊಡ್ಡ ವೇತನದ ಯುರೋಪೀಯ ಅಧಿಕಾರಿಯನ್ನು ಇಟ್ಟುಕೊಂಡನು. ಇದರಿಂದ ಆ ಜನರಲ್ಲಿ ಅನುಕರಣೀಯ ಹಾಗು ಸ್ತುತಿಪಾತ್ರ ಗುಣಗಳಿರುವವೆಂಟ ಗರ್ಭಿತ ಸಮ್ಮತಿಯನ್ನು ಅವನು ಕೊಟ್ಟಂತಾಯಿತು. ಯಾವ ಮನುಷ್ಯನು ಇತರರ ಸ್ತುತಿ ಮಾಡುವನೋ ಅವರೊಡನೆ ವ್ಯವಹಾರಮಾಡುವಾಗ ಆತನು ಸ್ವಲ್ಪ ಹುದುಗಿ ನಡೆಯುತ್ತಾನೆ. ಮಹದಾಜಿಯು ಎಲ್ಲ ಶತ್ರುಗಳಲ್ಲಿ ಇಂಗ್ಲಿಷರೊಡನೆ ಸ್ವಲ್ಪ ಹುದುಗಿ ನಡೆಯುತ್ತಿದ್ದನು. ರಜಪುತ ಮುಸಲ್ಮಾನ ರೋಹಿಲ ಮೊದಲಾದ ಜನರ ಪರಿವೆಯನ್ನು ಅವನೆಂದೂ ಮಾಡಲಿಲ್ಲ. ಫ್ರೆಂಚರ ಸಹಾಯದಿಂದ ತನ್ನ ಸೈನ್ಯದೊಳಗಿನ ನ್ಯೂನತೆಯನ್ನು ತುಂಬಿಕೊಂಡು, ಇಂಗ್ಲಿಷರೊಡನೆ ಕೈಕೊಡುವ ವಿಚಾರವು ಅವನದಿತ್ತು.

ಈ ಉಪಕ್ರಮದಲ್ಲಿ ಅವನಿಗೆ ಅಲ್ಪಸ್ವಲ್ಪ ಯಶವೂ ದೊರೆಯತೊಡಗಿತ್ತು. ಮೊದಲು ಇಂಗ್ಲಿಷರಿಗೂ ಶಿಂದೆಗೂ ಅಲ್ಪಸ್ವಲ್ಪ ಯುದ್ಧಗಳು ನಡೆದವು. ಅವುಗಳಲ್ಲಿ ಒಟ್ಟಿನ ಮೇಲೆ ಪರಸ್ಪರರು ತುಲ್ಯಬಲರೆಂದು ನಿಶ್ಚಿತವಾಯಿತು. ಆದ್ದರಿಂದ ಇಂಗ್ಲಿಷರು ಮಹದಾಜಿ ಶಿಂದೆಯು ಇರುವ ವರೆಗೆ ಉತ್ತರ ಹಿಂದುಸ್ತಾನದ ಸತ್ತೆಯನ್ನು ಗ್ರಾಸಿಸುವ ಪ್ರಯತ್ನ ಮಾಡಲಿಲ್ಲ. ಮಹದಾಜಿ ಶಿಂದೆಯು ಮಡಿದ ಮೇಲೆ ಅವರಿಗೆ ಎಲ್ಲ ಕಡೆಗೂ ಬೈಲಾಯಿತು. ದೌಲತರಾವ ಶಿಂದೆಯು ಪುಣೆಯ ಅಧಿಕಾರವನ್ನು ತನ್ನ ಕೈಯಲ್ಲಿ ಇಟ್ಟುಕೊಳ್ಳಬೇಕೆಂದು ಅಲ್ಲಿ ತಳವೂರಿದನು. ಕುಳಿತಲ್ಲಿಯೇ ಅವನು ದುಷ್ಪಸಲಹೆಗಾರರ ಮತದಿಂದ ಇಲ್ಲದ ನೆವತೆಗೆಯತೊಡಗಿದನು. ಅವನ ಪ್ರತಿಸ್ಪರ್ಧಿಯಾದ ಹೋಳಕರನು ಅದೇ ಅಭಿನಿವೇಶದಿಂದ ಪುಣೆಗೆ ಬಂದನು. ಈ ಎರಡು ಕಾರಣಗಳಲ್ಲಿ ಬಾಜೀರಾಯನ ಕಲಿಮೂರ್ತಿಯು ಕೂಡಿ, ಕೊನೆಗೆ ಮರಾಟ ಶಾಹಿಗೆ ತ್ರಿದೋಷವು ಬಾಧಿಸಿತು. ಈ ಆಪತ್ತಿನ ವೇಳೆಯಲ್ಲಿ ಮರಾಟ ಸರದಾರರ ಸೈನ್ಯವು ಇಂಗ್ಲಿಷರ ಸೈನ್ಯಕ್ಕಿಂತ ಹೆಚ್ಚಾಗಿತ್ತು. ಒಬ್ಬ ಇಂಗ್ಲಿಷ ಗ್ರಂಥಕಾರನು ಪೇಶವೆ, ಶಿಂದೆ, ಹೋಳಕರ, ಭೋಸಲೆ (ನಾಗಪುರ), ಗಾಯಕವಾಡ ಮೊದಲಾದವರ ಕಾಲಾಳು ಹಾಗು ಕುದುರೆಯ ಸೈನ್ಯವು ಒಟ್ಟು ಎರಡು ಲಕ್ಷ ಎಪ್ಪತ್ತುನಾಲ್ಕು ಸಾವಿರ ವಿತ್ತೆಂದು ಅನುಮಾನಮಾಡಿರುವನು. ಈ ಲೆಕ್ಕದಿಂದ ಇಂಗ್ಲಿಷರ ಸೈನ್ಯವು ಇದಕ್ಕಿಂತ ಬಹಳೇ ಕಡಿಮೆಯಿತ್ತೆಂದು ಹೇಳಬಹುದು.

ಹದಿನೆಂಟನೆಯ ಶತಕದಲ್ಲಿ ಹಿಂದುಸ್ತಾನದೊಳಗೆ ಕರೇ ಗಾರದಿಗಳಂತೆ ಗೌರಗಾರದಿಗಳ ಸುಳಿದಾಟವೂ ಆಗಿತ್ತು. ಕೈಯಲ್ಲಿ ಖಡ್ಗವೂ ಎದೆಯಲ್ಲಿ ಎದೆಗಾರಿಕೆಯೂ ಇದ್ದರೆ, ಹಣ-ನೆಲಗಳನ್ನೂ ಕೀರ್ತಿಯನ್ನೂ ಗಳಿಸುವದು ಆ ಅಸ್ವಸ್ಥತೆಯ ಕಾಲದಲ್ಲಿ ಅಸಾಧ್ಯವಿದ್ದಿಲ್ಲ. ಯಾವನು ಮನೆ-ಮಾರುಗಳನ್ನು ಬಿಟ್ಟು ಸಾವಿರಾರು ಹರದಾರಿ ದೂರ ಬಂದಿರುವನೋ, ಅವನು ತನ್ನ ಅನುಭವದ ಉಪಯೋಗ ಮಾಡಿಕೊಳ್ಳಲಿಕ್ಕೆ ಸಿದ್ಧನಾಗಿರುತ್ತಾನೆ. ಇಂಥ ಸ್ಥಿತಿಯಲ್ಲಿ ಅಪಯಶವುಂಟಾಗಿ ಗುರುತುಗಾಣದೆ ಎಷ್ಟೋ ಜನರು ಹೋಗಿರುವ ಸಂಭವವೂ ಉಂಟು. ಕೇವಲ ಎದೆಗಾರಿಕೆಯಿಂದ ಕೈಗೊಟ್ಟವರು ಕರೇಗಾರದಿಗಳಂತೆ ಬಿಳೇಗಾರದಿಗಳಲ್ಲಾದರೂ ಇದ್ದರು. ಇಂಥ ಜನರ ಪರಂಪರೆಯ ಉಗಮವು ಮೊದಲು ದಕ್ಷಿಣಹಿಂದುಸ್ತಾನದಲ್ಲಾದಂತೆ ಕಂಡುಬರುವದು. ಇಡೀ ಹಿಂದುಸ್ತಾನದಲ್ಲಿ ಯುರೋಪೀಯ ಗಾರದಿಗಳನ್ನು ಮೊದಲು ಕೈಕೆಳಗೆ ತೆಗೆದುಕೊಂಡ ಮಾನವು ಹೈದರನಿಗೆ ಸಲ್ಲುವದು. ಅವನ ಮಗನಾದ ಟೀಪುವು ಈ ನೂತನ ಸಾಧನವನ್ನು ಪರಮಾವಧಿಗೆ ಒಯ್ದು ಮುಟ್ಟಿಸಿದನು. ಅವನ ನೆರೆಯ ನಿಜಾಮನಾದರೂ ಈ ಸಾಧನವನ್ನು ಬೇಗನೆ ಅಂಗೀಕರಿಸಿದನು. ಅದನ್ನು ನೋಡಿ ಸದಾಶಿವರಾವ ಭಾವೂ ಪೇಶವೆಯಾದರೂ ಗಾರದಿ ಸೈನ್ಯದ ಕಲ್ಪನೆಯನ್ನು ಎತ್ತಿಕೊಂಡನು. ಉತ್ತರದಲ್ಲಿ ಇಂಗ್ಲಿಷ ಹಾಗು ಫ್ರೆಂಚರ ಉದಾಹರಣೆಗಳಿಂದ ಅನೇಕ ರಾಜಮಹಾರಾಜರು ತಮ್ಮ ಕೈಯಲ್ಲಿ ಗೌರಗಾರದಿಗಳನ್ನು ಇಟ್ಟುಕೊಳ್ಳುವ ಉಪಕ್ರಮ ನಡೆಯಿಸಿ

ದ್ದರು. ಶಿಂದೆಯು ಡಿಬಾಯಿನನನ್ನು ಕೆಲಸಕ್ಕೆ ಇಟ್ಟುಕೊಳ್ಳುವ ಪೂರ್ವದಲ್ಲಿ ಗೋಹದದ ರಾಣಾನು ಮೇಡೋ ಎಂಬ ಫ್ರೆಂಚ ಸೈನಿಕನ ಸಹಾಯದಿಂದ ಕವಾಯತಿನ ಸೈನ್ಯದ ಒಂದು ಪಥಕವನ್ನು ಸಿದ್ಧಪಡಿಸಿದ್ದನು. ಈ ಪಥಕದ ಮೇಲೆ ಸ್ಯಕ್ಸ್ಟರ ಎಂಬ ಹೆಸರಿನ ಸ್ಕಾಚ ಮನುಷ್ಯನು ಮುಖ್ಯಾಧಿಕಾರಿಯಾಗಿದ್ದು, ಟ್ಯಾವ್ಸಲೇಗ ಎಂಬ ಹೆಸರಿನ ಆಯರಿಶನು ದ್ವಿತೀಯಾಧಿಕಾರಿಯಾಗಿದ್ದನು; ಆದರೆ ಈ ನೂತನ ಸಾಧನವನ್ನು ಪೂರ್ಣತೆಗೆ ತಲುಪಿಸಿದ ಮಾನವು ಶಿಂದೆಗೇ ದೊರೆಯಿತು.

ಡಿಬಾಯಿನನು ಅನೇಕ ಯುರೋಪೀಯ ರಾಷ್ಟ್ರಗಳ ಸೈನ್ಯಗಳಲ್ಲಿ ಕೆಲಸ ಮಾಡಿ ಏಟು ತಿಂದು ಕೇವಲ ದೈವ ತೆರೆಯಿಸಿಕೊಳ್ಳುವ ಉದ್ದೇಶದಿಂದ ಇಂಥ ಕಾರ್ಯಗಳಲ್ಲಿ ಹಿಂದುಸ್ತಾನದ ಕೀರ್ತಿಯನ್ನು ಕೇಳಿ ಇಲ್ಲಿಗೆ ಬಂದಿದ್ದನು. ಕಂಪನಿ ಸರಕಾರದ ಮದ್ರಾಸದಲ್ಲಿಯ ಸೈನ್ಯದಲ್ಲಿಯ ಕೆಲಸದಿಂದ ನಿವೃತ್ತನಾಗಿ ಅವನು ೧೭೮೩ರಲ್ಲಿ ಕಲಕತ್ತೆಯಲ್ಲಿದ್ದ ವಾರನ್ ಹೆಸ್ಟಿಂಗ್ಸನ ಕಡೆಗೆ ಬಂದನು. ಶಹಾ ಆಲಮ ಬಾದಶಹನ ಓಲಗದಲ್ಲಿ ಮರಾಟರ ವರ್ಚಸ್ಸು ಎಷ್ಟರ ಮಟ್ಟಿಗೆ ನೆಲೆಗೊಂಡಿದೆ, ಅಲ್ಲಿ ಪ್ರವೇಶಿಸಲಿಕ್ಕೆ ಸ್ಥಳ ದೊರೆಯುವದೋ ಹೇಗೆ? ಮೊದಲಾದವುಗಳ ಬಗ್ಗೆ ಗುಪ್ತ ಶೋಧ ಮಾಡುವದಕ್ಕಾಗಿ ಹೆಸ್ಟಿಂಗ್ಸನು ಕಳುಹಿಸಿದ ಮೇಜರ ಜೇಮ್ಸ ಬ್ರಾಜನನೆಂಬ ವಕೀಲನೊಡನೆ ಈ ಡಿಬಾಯಿನನೂ ದಿಲ್ಲಿಗೆ ಹೋದನು; ಅನಂತರದಲ್ಲಿ ಆಗ್ರಾಕ್ಕೆ ಹೋದನು. ತನ್ನ ಸುತ್ತುಮುತ್ತು ಸುಳಿಯುವ ಗೌರ ಉಡಾಳಜನರ ಮೇಲೆ ಮಹದಾಜಿ ಶಿಂದೆಯ ಸೂಕ್ಷ್ಮ ಲಕ್ಷ್ಯವಿತ್ತು. ಈ ಡಿಬಾಯಿನನು ಹೆಸ್ಟಿಂಗ್ಸನಿಂದ ಬಂದಿರುವನೆಂಬದು ತಿಳಿದದ್ದರಿಂದ ಮಹದಾಜಿಯು ಅವನ ಒಡವೆಗಳನ್ನೂ ಕಾಗದ ಪತ್ರಗಳನ್ನೂ ತುಡುಗು ಮಾಡಿಸಿ ಎತ್ತಿಹಾಕಿದನೆಂದು ಅನ್ನುತ್ತಾರೆ. ಮಹದಾಜಿಯ ಹಾಗು ಗೋಹದದ ರಾಣಾನ ನಡುವೆ ಯುದ್ಧವು ಪ್ರಾರಂಭವಿತ್ತು. ಮಹದಾಜಿಯ ಓಲಗದಲ್ಲಿದ್ದ ಇಂಗ್ಲಿಷ ವಕೀಲನಾದ ಅಂಡರಸನನ ಸಲಹೆಯಿಂದ ಡಿಬಾಯಿನನು ರಾಣಾನಲ್ಲಿ ದಂಡಿನ ನೌಕರಿ ಬೇಡುವದಕ್ಕಾಗಿ ಹೋದನೆಂಬ ಮಾತು ಲಕ್ಷ್ಯದಲ್ಲಿಡುವಂಥದಾಗಿದೆ. ಡಿಬಾಯಿನನು ಐದು ಸಾವಿರ ಸೈನ್ಯದ ಸಿದ್ಧತೆಯಿಡುವದಕ್ಕಾಗಿ ಮುಂಗಡ ಒಂದು ಲಕ್ಷ ರೂಪಾಯಿ ಕೇಳಿದನು; ಆದರೆ ರಾಣಾನು ಈ ಮಾತಿಗೆ ಒಪ್ಪದ್ದರಿಂದ ಅವನು ಶಿಂದೆಯ ಎರಡನೆಯ ಶತ್ರುವಾದ ಜಯಪುರದ ರಾಜನ ಕೈಕೆಳಗೆ ಎರಡು ಸಾವಿರ ರೂಪಾಯಿಗಳ ವೇತನ ಗೊತ್ತುಮಾಡಿಕೊಂಡು ನಿಂತನು. ಸಾಲಬಾಯಿಯ ಒಪ್ಪಂದದಿಂದ ಉತ್ತರ ಹಿಂದುಸ್ತಾನದಲ್ಲಿ ಬಡಿದಾಡುವ ರಾಜ-ಮಹಾರಾಜರಿಗಾದರೂ ತಾತ್ಪೂರ್ತಿಕ ವಿಶ್ರಾಂತಿ ದೊರೆತದ್ದರಿಂದ, ಜಯಪುರದ ರಾಜನು ಡಿಬಾಯಿನನಿಗೆ ಹತ್ತು ಸಾವಿರ ರೂಪಾಯಿಗಳ ಕಾಣಿಕೆಯನ್ನರ್ಪಿಸಿ ಕೆಲಸದಿಂದ ಕಡಿಮೆ ಮಾಡಿದನು. ಇಷ್ಟರಲ್ಲಿ ಶಿಂದೆಯು ಡಿಬಾಯಿನನ ವಿಷಯಕ್ಕೆ ಸುಮನಸ್ಕನಾಗಿದ್ದನು. ಅವನು ಈ ಡಿಬಾಯಿನನಿಗೆ ಒಂದು ಸಾವಿರದ ವೇತನ ಗೊತ್ತುಪಡಿಸಿ, ಕಂಪನಿ ಸರಕಾರದ ಸೈನ್ಯದಂತೆ ತನ್ನ ಸೈನ್ಯವನ್ನು ಸಿದ್ಧಪಡಿಸುವ ಕೆಲಸವನ್ನು ಒಪ್ಪಿಸಿದನು. ಡಿಬಾಯಿನನು ಸೈನ್ಯ ಕೂಡಿಸಿದನು.

ಸ್ಪ್ಯಾಚ ಡಚ್ಚ ಫ್ರೆಂಚ ಮೊದಲಾದ ಯುರೋಪೀಯರನ್ನು ಕರೆಯಿಸಿ ತನ್ನ ಕೈಕೆಳಗಿನ ಅಧಿಕಾರಿಗಳನ್ನಾಗಿ ನಿಯಮಿಸಿಕೊಂಡನು. ರಾಣಾನ ಕೈ ಕೆಳಗಿನ ಸ್ಯಕ್ಸ್ಟರನನ್ನು ತನ್ನ ಕಡೆಗೆ ಕರೆಯಿಸಿಕೊಂಡು, ಅವನಿಂದ ಆಗ್ರಾದಲ್ಲಿ ತೋಫು ತುಬಾಕಿಗಳ ಕಾರ್ಯಾಲಯುವನ್ನು ನಡೆಯಿಸಿದನು. ಶಿಂದೆಯು ಸರದಾರನಾದ ಅಪ್ಪಾ ಖಂಡೇರಾಯನ ಕೈ ಕೆಳಗೆ ಡಿಬಾಯಿನನು ನಿಯಮಿಸಲ್ಪಟ್ಟಿದ್ದನು. ಮುಂದಿನ ಮೂರು ವರ್ಷಗಳಲ್ಲಿ ಡಿಬಾಯಿನನ ಸೈನ್ಯವು ಕಲಿಂಜರ ಲಾಲಸೋಟ ಆಗ್ರಾ ಚಕಸಾಣಾ ಮೊದಲಾದ ಯುದ್ಧಗಳಲ್ಲಿ ತೋರಿಸಿದ ಪರಾಕ್ರಮದಿಂದ ಶಿಂದೆಯು ಸಮಾಧಾನಗೊಂಡನು. ಡಿಬಾಯಿನನು ಕವಾಯತೀ ಸೈನ್ಯವನ್ನು ಹೆಚ್ಚುಮಾಡುವದಕ್ಕಾಗಿ ಶಿಂದೆಗೆ ತಿಳಿಸಿದನು; ಆದರೆ ಅದಕ್ಕೆ ಶಿಂದೆಯು ಒಪ್ಪದ್ದರಿಂದ ಅವನು ಕೆಲಸದಿಂದ ನಿವೃತ್ತನಾದನು!

ಆದರೆ ಗೆದ್ದ ರಾಜ್ಯವನ್ನು ರಕ್ಷಣೆ ಮಾಡಲಿಕ್ಕೆ ಶಿಂದೆಗೆ ಮರಾಟರ ಸೈನ್ಯವು ಸಾಕಷ್ಟು ದೊರೆಯದ್ದರಿಂದ ಅವನು ಹೊಸ ಸೈನ್ಯವನ್ನಿರಿಸಬೇಕಾಯಿತು. ಆಗ ಲಖನೌದಲ್ಲಿ ವ್ಯಾಪಾರೀ ನೌಕರಿಯಲ್ಲಿ ತೊಡಗಿದ್ದ ಡಿಬಾಯ್ನಿನನನ್ನು ಅವನು ಮತ್ತೆ ಕರೆಯಿಸಿಕೊಂಡು ತನ್ನಲ್ಲಿ ನೌಕರಿಗೆ ಇರಿಸಿದನು. ಆ ಮೇಲೆ ಡಿಬಾಯಿನನು ಹತ್ತು ಕಾಲಾಳುಗಳ ಪಥಕಗಳನ್ನೂ ತೋಫುಗಳನ್ನೂ ಯುರೋಪೀಯ ಪದ್ಧತಿಯಿಂದ ಸಿದ್ಧಪಡಿಸಿ, ಅದರ ಮೇಲೆ ಯುರೋಪೀಯ ಅಧಿಕಾರಿಗಳನ್ನೇ ನಿಯಮಿಸಿದನು. ಶಿಂದೆಯ ಸೈನ್ಯದಲ್ಲಿ ಆಗ ಹದಿನೆಂಟು ಜಾತಿಯ ಯುರೋಪೀಯರಿದ್ದರು. ಆಗ್ರಾದೊಳಗಿನ ತೋಫು-ತುಬಾಕಿಗಳ ಲಷ್ಕರೀ ಸರಂಜಾಮು ಸಿದ್ಧವಾಯಿತು. ಅಲ್ಲಿ ತುಬಾಕಿಗಳಾದರೂ ಉತ್ತಮವಾಗಿ ಸಿದ್ಧವಾಗುತ್ತಿದ್ದವು. ಕೇವಲ ಹತ್ತೇರೂಪಾಯಿಗಳಲ್ಲಿ ವಿಲಾಯತಿಯ ತುಬಾಕಿಗಳಿಗೆ ಸರಿಯಾದ ತುಬಾಕಿಗಳು ಸಿದ್ಧವಾಗತೊಡಗಿದವು. ಸೈನಿಕರ ಉಡುವುಗಳು ಹೊಸ ಪದ್ಧತಿಯವು ಕೊಡಲ್ಪಟ್ಟವು. ಡಿಬಾಯಿನನ ಹೊಸ ವ್ಯವಸ್ಥೆಯಿಂದ ಅವನ ವೇತನವು ಹತ್ತುಸಾವಿರದ ವರೆಗೆ ಬೆಳೆಯಿತು! ಇಂಗ್ಲಿಷರ ವಿರುದ್ಧವಾಗಿ ಯುದ್ಧ ಮಾಡುವದಿಲ್ಲವೆಂಬ ಕಟ್ಟಳೆಯನ್ನು ಅವನು ಮಾಡಿಕೊಂಡಿದ್ದನೆಂದು ಅನ್ನುವರು! ಆದರೆ ಈ ಕಟ್ಟಳೆಯನ್ನು ಶಿಂದೆಯು ಮಾನ್ಯ ಮಾಡಿದ್ದರೆ ಮಾತ್ರ ಆಶ್ಚರ್ಯವು! ಸೈನ್ಯದ ವೆಚ್ಚಕ್ಕಾಗಿ ಶಿಂದೆಯು ಡಿಬಾಯಿನನಿಗೆ ಹದಿನಾರು ಲಕ್ಷದ ಜಹಾಗೀರಿಯನ್ನು ಕೊಟ್ಟನು. ಮುಂದೆ ಅದರ ಪ್ರಾಪ್ತಿಯು ಮೂವತ್ತೆರಡು ಲಕ್ಷದ ವರೆಗೆ ಹೆಚ್ಚಿತು. ಜಹಾಗೀರಿಯ ವ್ಯವಸ್ಥೆಯಿಂದ ಡಿಬಾಯಿನನಿಗೆ ಎರಡೂ ಕಡೆಯ ಲಾಭವು ದೊರೆಯಿತು. ತೆರಿಗೆಯನ್ನು ನಿಯಮಿತವಾಗಿ ಗೊತ್ತುಪಡಿಸಿ, ವೇಳೆ ವೇಳೆಗೆ ಸೈನಿಕರ ವೇತನ ಕೊಡುವದು ಅವನ ಸ್ವಾಧೀನದಲ್ಲುಳಿಯಿತು; ಮತ್ತು ತೆರಿಗೆಯ ಎತ್ತುವಿಕೆಗಾಗಿ ನೂರಕ್ಕೆ ಎರಡರಂತೆ ಅವನಿಗೆ ದಲ್ಲಾಲಿ ದೊರೆಯುತ್ತಿತ್ತು. ಹೀಗಾಗಿ ಅವನು ಶ್ರೀಮಂತನಾದನು. ಶಿಂದೆಯ ಸೈನ್ಯದಲ್ಲಿ ಕವಾಯತೀ ಹಾಗು ಬಿನ್ ಕವಾಯತೀ ಸೈನ್ಯಗಳು ಒಂದೇ ವೇಳೆಯಲ್ಲಿ ಸಿದ್ಧವಾದವು. ೧೭೯೦ರಲ್ಲಿ ಈ ಕವಾಯತೀ ಸೈನ್ಯವು ಪಾಟಣಾದ ಯುದ್ಧದಲ್ಲಿ ವಿಜಯ ಹೊಂದಿತು. ಶಿಂದೆಯ ಸುವ್ಯವಸ್ಥಿತ ಸೈನ್ಯದೆದುರಿಗೆ

ರಜಪುತರ ಶೌರ್ಯವು ಕೈಯೂರಬೇಕಾಯಿತು. ಇದೇ ಸೈನ್ಯದ ಬಲದಿಂದ ಶಿಂದೆಯು ಇಸ್ಮಾಯಿಲ ಬೇಗನನ್ನು ಪರಾಭವಗೊಳಿಸಿದನು. ಮರ್ಟಾದ ಸಂಗ್ರಾಮದಲ್ಲಿ ಇದೇ ಸಾಧನದಿಂದ ಅವನು ಜಯಶಾಲಿಯಾದನು. ೧೭೯೧-೯೩ ರಲ್ಲಿ ಶಿಂದೆಯು ಮತ್ತೆ ಎರಡು ಪಥಕಗಳನ್ನು ಸಿದ್ಧಪಸಿದನು. ಈ ಸೈನ್ಯವು ೩೦ ಸಾವಿರದವರೆಗೆ ಬೆಳೆಯಿತು ೧೨೦೦ರಿಂದ ೧೪೦೦ ರೂಪಾಯಿಗಳ ವರೆಗಿನ ವೇತನದ ಯುರೋಪೀಯ ಸುಮಾರು ೧೭-೧೮ ಸಣ್ಣ ಅಧಿಕಾರಿಗಳು ಇದಕ್ಕಿಂತ ಮೊದಲೇ ಇದ್ದರು. ಇವರಲ್ಲದೆ ೩೦೦೦ದ ಕರ್ನಲನು ೨೦೦೦ ದ ಲೆಫ್ಟೆನೆಂಟ ಕರ್ನಲನು ಹನ್ನೆರಡು ನೂರು ರೂಪಾಯಿಗಳ ಮೇಜರನೂ ನಾಲ್ಕು ನೂರರ ಕ್ಯಾಪ್ಟನನು ಒಂದೂವರೆ ಎರಡು ನೂರರ ಲೆಫ್ಟೆನಂಟರು ಹೀಗೆ ಆ ಅಧಿಕಾರಿಗಳಿದ್ದರು.ಈ ಗೌರಕಾಯರನ್ನು ಚಂಬಳಾನದಿಯ ದಕ್ಷಿಣಕ್ಕೆ ಕಳಿಸಿದರೆ ಒಂದೂವರೆ ಪಟ್ಟು ಸಂಬಳವು ದೊರೆಯುತ್ತಿತ್ತು. ವೇತನದ ಹೊರತು ಇತರ ಹುಟ್ಟುವಳಿಯನ್ನು ಲಕ್ಷ್ಯಕ್ಕೆ ತೆಗೆದುಕೊಂಡರೆ ಗೌರ ಅಧಿಕಾರಿಗಳಿಗೆ ಹತ್ತು ಲಕ್ಷದ ವರೆಗೆ ಸಂಗ್ರಹ ಮಾಡಲಿಕ್ಕೆ ಕಠಿಣವಿದ್ದಿಲ್ಲ. ಸ್ವಂತ ಡಿಬಾಯಿನನು ನವಾಬನಾಗಿದ್ದನು. ಅವನು ಕೇವಲ ವಿಲಾಸೀ ನವಾಬನಾಗಿರದೆ, ಯೋಧನಾದ ನವಾಬನಾಗಿದ್ದನು. ಈ ಕವಾಯತೀ ಸೈನ್ಯದ ಬಗ್ಗೆ ಇತರ ಮರಾಟ ಸೈನ್ಯವು ವೈಷಮ್ಯ ಭಾವವನ್ನು ತಳೆಯಿತು. ಉತ್ತರ ಹಿಂದುಸ್ತಾನದಲ್ಲಿ ಶಿಂದೆ ಹೋಳಕರರಲ್ಲಿ ಶಿಂದೆಯ ಪಕ್ಷವು ಕಡಿಮೆತರಗತಿಯದಿತ್ತು; ಆದರೆ ಈ ಹೊಸ ಯೋಜನೆಯಿಂದ ಶಿಂದೆಯು ಹೋಳಕರನನ್ನು ಸರಿಗಟ್ಟಿದನು. ಇದನ್ನು ನೋಡಿ ತುಕೋಜಿರಾವ ಹೋಳಕರನು ಶೆವ್ಹಲಿಯರ ದುದ್ರೇಲನೆಂಬ ಫ್ರೆಂಚ ಸೈನಿಕನನ್ನು ತನ್ನ ಕೈಕೆಳಗೆ ನೌಕರಿಗೆ ಇಟ್ಟುಕೊಂಡು ಕವಾಯತೀ ಸೈನ್ಯದ ಒಂದು ಪಥಕವನ್ನು ಸಿದ್ಧಪಡಿಸತೊಡಗಿದನು. ಈ ವೇಳೆಯಲ್ಲಿ ಡಿಬಾಯಿನನ ಮೇಲೆ ಎಲ್ಲ ರಾಜ್ಯ ಭಾರವನ್ನು ಹಾಕಿ, ಉತ್ತರ ಹಿಂದುಸ್ತಾನವನ್ನು ಬಿಟ್ಟು ಪುಣೆಯ ಓಲಗದಲ್ಲಿ ತನ್ನ ವರ್ಚಸ್ವವನ್ನು ಗಟ್ಟಿ ಮಾಡುವದಕ್ಕಾಗಿ ಸ್ವಸ್ಥ ಮನಸ್ಸಿನಿಂದ ಇತ್ತಕಡೆಗೆ ಬರುವದು ಸಿಂದೆಗೆ ಸಾಧ್ಯವಾಯಿತು. ಮಹದಾಜಿಯು ಪುಣೆಯಲ್ಲಿದ್ದಾಗ ರಜಪುತರ ಕಪ್ಪ ಎತ್ತುವಬಗ್ಗೆ ಗೊಂದಲವಾಗಿ ೧೭೯೩ರಲ್ಲಿ ಲಾಖೇರಿಯಲ್ಲಿ ಡಿಬಾಯಿನನು ದುದ್ರೇಲನ ಕೈಕೆಳಗಿನ ಸೈನ್ಯವನ್ನು ಪರಾಭವಗೊಳಿಸಿದನು. ಆಗ ಹೋಳಕರನು ಮಾಳವದೊಳಗಿನ ತನ್ನ ಪ್ರಾಂತಗಳ ರಕ್ಷಣೆಮಾಡಿಕೊಳ್ಳುವದಕ್ಕಾಗಿ ತಿರುಗಿ ಹೋಗಬೇಕಾಯಿತು. ಶಿಂದೆಯು ಇಲ್ಲದಾಗ ದಿಲ್ಲಿಯಲ್ಲಿಯ ಅವನ ಅಧಿಕಾರವನ್ನು ಡಿಬಾಯಿನನೇ ನಡೆಯಿಸುತ್ತಿದ್ದನು. ೧೭೯೪ರಲ್ಲಿ ಮಹದಾಜಿಯು ಮಡಿದ ಮೇಲೆ ದೌಲತರಾವ ಶಿಂದೆಯ ಆಳಿಕೆಯು ಪ್ರಾರಂಭವಾಯಿತು. ಇದಕ್ಕಿಂತ ಮೊದಲು ದಕ್ಷಿಣಕ್ಕೆ ಬಂದ ಪೇರನನ ಕೈ ಕೆಳಗಿನ ಸೈನ್ಯದ ಬಲದಿಂದ ಪೇಶವೆಯು ಖರ್ಡೆಯ ಸಂಗ್ರಾಮದಲ್ಲಿ ವಿಜಯಿಯಾಗಿದ್ದನು. ವ್ಯವಸ್ಥೆಯ ಗುಣವು ಸಂಸರ್ಗಜನ್ಯವಿದ್ದುದರಿಂದ ಹೋಳಕರನಾದರೂ ಕವಾಯತಿಯ ಸೈನ್ಯವನ್ನು ಬಹಳೇ ಹೆಚ್ಚು ಮಾಡಿದನು. ಪ್ಲಿಮೇಟ ಹಾಗು ಗಾರ್ಡನರ ಇವರು ಹೋಳಕರನ ಸರದಾರರಿದ್ದರು. ಶಿಂದೆಯ ಉಪಸೇನಾಪತಿಗಳಾದರೂ

ತಮ್ಮ ತಮ್ಮ ಕೈ ಕೆಳಗೆ ಯುರೋಪೀಯ ಅಧಿಕಾರಿಗಳನ್ನಿರಿಸಿಕೊಂಡರು ಕ್ಯಾಪ್ಟನ್ ಬಟರಫೀಲ್ಡನು ಲಖಬಾದಾದಾನ ಕಡೆಗೆ ಉಳಿದನು. ಶೆಫರ್ಡನೂ ಬೆಲಾಸಿಸನೂ ಅಂಬಾಜಿ ಇಂಗಳೆಯ ಕಡೆಗೆ ಇದ್ದರು ಅಪ್ಪಾ ಖಂಡೇರಾಯನು ಜಾರ್ಜ ಟಾಮಸನನ್ನು ನೌಕರನನ್ನಾಗಿ ನಿಯಮಿಸಿಕೊಂಡನು. ಬುಂದೇಲಖಂಡದ ಅಲೀ ಬಹಾದ್ದರನೂ ವರ್ಹಾಡದ ರಘೂಜಿ ಭೋಸಲೆಯೂ ಇದೇ ಕ್ರಮವನ್ನಿರಿಸಿದರು. ಸ್ವಂತ ಬಾಜೀರಾಯ ಪೇಶವೆಯು ಮೇಜರ ಟೋನ ಮತ್ತು ಮೇಜರ ಬಾಯಿಡ ಇವರನ್ನು ನೌಕರಿಗೆ ಇಟ್ಟುಕೊಂಡು ತನ್ನ ಕೈಕೆಳಗಿನ ಸರದಾರರ ಅನುಕರಣ ಮಾಡಿದನು.

ಮರಾಟರು ತಮ್ಮ ತಂತ್ರಯುದ್ಧ ಪದ್ಧತಿಯನ್ನು ಬಿಟ್ಟು ಕವಾಯತಿನ ಪದ್ಧತಿಯನ್ನು ಸ್ವೀಕರಿಸಿದ್ದು ಲಾಭದಾಯಕವಾಗಲಿಲ್ಲೆಂದು ಬಹು ಜನರ ಮತವಿದೆ. "ಮರಾಟರ ಕೆಳಗಿನ ಕುದುರೆಯು ಎಂದು ಹೋಯಿತೋ ಅಂದೇ ಅವರ ರಾಜ್ಯವು ಹೋಯಿತು." ಎಂದು ಒಬ್ಬರು ಅಂದಿರುವರು! ದೌಲತರಾವ ಶಿಂದೆ, ಅವನ ಸರದಾರ ಗೋಪಾಳರಾಯ ಇವರೊಳಗೆ ತುಂಬಿದ ಸಭೆಯಲ್ಲಿ ವಾದವಿವಾದವಾಯಿತು. ಮೊದಲಿನ ಪದ್ಧತಿಯನ್ನು ಬಿಟ್ಟು ಹೊಸ ಪದ್ಧತಿಯನ್ನು ಸ್ವಿಕಾರ ಮಾಡಿದ್ದರಿಂದ ನಿಮ್ಮ ನಾಶವಾಗುವದೆಂದು ಗೋಪಾಳರಾಯನು ಶಿಂದೆಗೆ ಸ್ಪಷ್ಟವಾಗಿ ಹೇಳಿದನು. ತೋಫುಗಳಿರುವವರೆಗೆ ನಾವು ಹೆದರುವದಿಲ್ಲೆಂದು ಶಿಂದೆಯು ನುಡಿಯಲು, ತೋಫುಗಳೇ ನಿಮ್ಮ ನಾಶಕ್ಕೆ ಕಾರಣವಾಗುವವೆಂದು ಗೋಪಾಳರಾಯನು ಹೇಳಿದನು. "ಮರಾಟರು ಕವಾಯತು ಕಲಿಯುತೊಡಗಿದರು; ತೋಫುಗಳನ್ನು ಸಿದ್ಧಪಡಿಸತೊಡಗಿದರು. ಅವರು ಸಂಗ್ರಾಮದಲ್ಲಿ ಹಳೆಯ ಪದ್ಧತಿಯನ್ನು ಬಿಟ್ಟು ಹೂಸ ಪದ್ಧತಿಯನ್ನು ಸ್ವೀಕರಿಸತೊಡಗಿದರು. ಪರದೇಶೀ ಪದ್ಧತಿಯು ಯಾರಿಗೂ ಸೇರುವದಿಲ್ಲ. ಇನ್ನು ಮೇಲೆ ನಾವು ಅವರನ್ನು ಸಹಜವಾಗಿ ಗೆಲ್ಲುವೆವು." ಎಂದು ಫಿಲಿಪ ಫ್ರಾನ್ಸಿಸನು ಪಾರ್ಲಿಮೆಂಟದಲ್ಲಿ ಮಾತಾಡಿ ತೋರಿಸಿದನು. ಡ್ಯೂಕ ಆಫ್ ವೇಲಿಂಗ್ಟನನ ಮತವಾದರೂ ಹೀಗೆಯೇ ಇತ್ತೆಂದು ಅನ್ನುತ್ತಾರೆ ಒಂದು ದೃಷ್ಟಿಯಿಂದ ಈ ಅಭಿಪ್ರಾಯವು ಸರಿಯಾದದ್ದೆಂದು ತೋರುತ್ತದೆ. ಕೇವಲ ಒಂದೇ ವರ್ಷದಲ್ಲಿ ಇಂಗ್ಲಿಷರು ದೌಲತರಾವ ಶಿಂದೆಯನ್ನು ಪೂರ್ಣವಾಗಿ ನಾಶಗೊಳಿಸಿದರು; ಆದರೆ ವ್ಯವಸ್ಥೆಹೀನ ಪೆಂಡಾರಿಗಳನ್ನು ಅಂಕೆಯಲ್ಲಿ ತರಬೇಕಾದರೆ ಅವರಿಗೆ ಏಳೆಂಟು ವರ್ಷಗಳು ಬೇಕಾದವು. ಆದರೂ ಮೇಲಿನ ಸಿದ್ಧಾಂತವೇ ಸರ್ವಸ್ವವಾಗಿ ನಿಜವೆಂದು ಹೇಳಲಾಗುವದಿಲ್ಲ. ಯಾಕಂದರೆ ಪೆಂಡಾರಿಗಳ ಪದ್ಧತಿಯೇ ಒಳಿತೆಂದು ಅನ್ನುವುದಾದರೆ, ಕೊನೆಗೆ ಅವರಿಗಾದರೂ ಯಶವು ಎಲ್ಲಿ ಬಂತು? ಮೊಗಲರೊಡನೆ ಕಾದುವಾಗ ಮರಾಟರಿಗೆ ತಂತ್ರಯುದ್ಧವು ಯಶಪ್ರದವಾಯಿತು; ಆದರೆ ಇಂಗ್ಲಿಷರ ವಿರುದ್ಧವಾಗಿ ಅದೇ ಸಾಧನವು ಸತತವಾಗಿ ಉಪಯೋಗವಾಗಿತ್ತೆಂದು ತಿಳಿಯಲಾಗುವದಿಲ್ಲ. ಮುತ್ತಿಗೆ ಹಾಕುವದು, ದಾಳಿ ಮಾಡಿ ಓಡಿ ಹೋಗುವದು ಇವು ಯುದ್ಧದ ಕರ್ಮದೊಳಗಿನ ಭಾಗಗಳೇನೋ ನಿಜ; ಆದರೆ ಇಷ್ಟರಿಂದಲೇ ಕಾರ್ಯಭಾಗವಾಗುವದಿಲ್ಲ; ಅಲ್ಲದೆ

ತಂತ್ರಯುದ್ಧದಲ್ಲಿ ಕೋಟೆ ದುರ್ಗಗಳು ಆಶ್ರಯಸ್ಥಾನಗಳಾಗಿರುತ್ತಿದ್ದವು; ಆದರೆ ಇಂಗ್ಲಿಷರ ತೋಫುಗಳ ಮೂಲಕ ಅವು ಬಹುಮಟ್ಟಿಗೆ ಕಾರ್ಯಕ್ಷಮವಿಲ್ಲದವುಗಳಾದವು. ೧೮೧೭-೧೮ರಲ್ಲಿ ಮರಾಟರಿಗೆ ಒಂದು ದುರ್ಗವನ್ನಾದರೂ ಇಂಗ್ಲಿಷರ ವಿರುದ್ಧವಾಗಿ ಹೋರಾಡಿಸಲಿಕ್ಕೆ ಉಪಯೋಗವಾಗಲಿಲ್ಲೆಂಬದಕ್ಕೆ ಇಂಗ್ಲಿಷರ ತೋಫುಗಳೇ ಕಾರಣವಾಗಿದ್ದವು. ಅರ್ಥಾತ್ ಶತ್ರುಗಳ ಯುದ್ಧ ಸಾಧನಗಳನ್ನು ಅನುಕರಿಸುವದರಿಂದ ಅಪಯಶವು ಬಂತೆಂದು ಅನ್ನಲಿಕ್ಕೆ ಬರುವದಿಲ್ಲ. ಸೈನ್ಯದಲ್ಲಿ ವ್ಯವಸ್ಥೆ ಪ್ರಾರಂಭವಾದುದರಿಂದ ಮರಾಟರು ಮೋಸ ಹೋಗಲಿಲ್ಲ; ಮರಾಟರ ಸರದಾರರಲ್ಲಿಯ ವ್ಯವಸ್ಥೆ ಮುರಿದು ಹೋದುದಕ್ಕಾಗಿ ಅವರು ಮೋಸ ಹೋದರು. ಚತುರಂಗ ದಳವಿದ್ದರೆ ಸೈನ್ಯವು ಸಿದ್ಧವಾದಂತಾಯಿತೆಂದು ಪೂರ್ವಾಪರ ಮತವಿದೆ. ಸೈನ್ಯದಲ್ಲಿ ಕವಾಯತಿನ ಕಾಲಾಳುಗಳಿದ್ದರೆ, ಚಪಲವಾದ ಕುದುರೆಗಳ ಅಶ್ವದಳವಿರಬಾರದೆಂದು ಯಾರು ಅನ್ನುವರು? ಟೀಪುವಿನಲ್ಲಿ ಕವಾಯತಿನ ಸೈನ್ಯವಿದ್ದರೂ ಅವನು ದಾಳಿಮಾಡುವ ವಿದ್ಯೆಯನ್ನು ಮರೆಯಲಿಲ್ಲ. ಶತ್ರುಗಳ ಸಂಘವಾಗಿ ಒಮ್ಮೆಲೆ ದಾಳಿಯಾದದ್ದೇ ಅವನ ಪರಾಭವಕ್ಕೆ ಕಾರಣವು. ಮೈಸೂರಿನ ಎರಡನೆಯ ಮೂರನೆಯ ಯುದ್ಧಗಳಲ್ಲಿ ಅವನ ಪರಾಭವವಾಗುವದಕ್ಕೆ ಅನೇಕ ಶತ್ರುಗಳ ಸಂಘವಾದದ್ದೇ ಕಾರಣವಾಗಿದೆ. ಮರಾಟರು ಕವಾಯತಿನ ಸೈನ್ಯವನ್ನೂ ತೋಫುಗಳನ್ನೂ ಇರಿಸಿಕೊಂಡದ್ದರಿಂದ, ಅವರ ನಾಶವಾಯಿತೆಂದು ಅನ್ನಲಿಕ್ಕೆ ಬರುವದಿಲ್ಲ. ಯುದ್ಧಸಾಧನಗಳಲ್ಲಿ ತಪ್ಪಿದ್ದಿಲ್ಲ; ಆ ತಪ್ಪು ಸರದಾರರಲ್ಲಿತ್ತು. ಮಹದಾಜಿ ಶಿಂದೆಯು ಕೈಕೆಳಗಿದ್ದ ಡಿಬಾಯಿನನ ತೇಜವೂ ಅವನ ಉಪಯೋಗವೂ ದೌಲತರಾಯನ ಆಳಿಕೆಯಲ್ಲಿ ಉಳಿಯಲಿಲ್ಲ. ಟಾಮಸ ಬ್ರಾವುನನು ದೌಲತರಾವ ಶಿಂದೆಯ ವೇಳೆಯಲ್ಲಿ ೧೮೦೯ರಲ್ಲಿ ಮರಾಟರ ಛಾವಣಿಯಿಂದ ಬರೆದ ಪತ್ರಗಳನ್ನು ಓದಿದರೆ, ಅಪಯಶದ ನಿಜವಾದ ಕಾರಣಗಳಾವವೆಂಬುದು ಸಹಜವಾಗಿ ತಿಳಿಯುವದು.

## ಮರಾಟರ ಹಡಗುಪಡೆ.

ಮುಂಬಯಿಯ ದಕ್ಷಿಣದಲ್ಲಿ ಕೊಂಕಣ ಪ್ರಾಂತದೊಳಗೆ ಪೇಶವಾಯಿಯು ನಷ್ಟವಾಗುವವರೆಗೆ ಇಂಗ್ಲಿಷರ ವರ್ಚಸ್ಸು ನೆಲೆಗೊಂಡಿದ್ದಿಲ್ಲ. ಪೇಶವಾಯಿಗಿಂತ ಮೊದಲು ಮೊಗಲರ ವರ್ಚಸ್ಸು ಕೊಂಕಣ ಪಟ್ಟಿಯಲ್ಲಿತ್ತು. ಕೊಂಕಣದಲ್ಲಿ ಸ್ವತಂತ್ರ ರಾಜರು ಎಂದೂ ಆಗಿ ಹೋದಂತೆ ಕಾಣುವದಿಲ್ಲ. ದೇಶದೊಳಗಿನ ಒಬ್ಬರ ಇಲ್ಲವೆ ಅನೇಕರ ರಾಜ್ಯಗಳಲ್ಲಿ ಕೊಂಕಣದೊಳಗಿನ ಅಧಿಕಾರಿಗಳು ದೇಶದೊಳಗಿನ ಅಧಿಕಾರಿಗಳಿಗಿಂತ ಎಷ್ಟೋ ಪಟ್ಟು ಸ್ವತಂತ್ರರಿರುತ್ತಿದ್ದರು. ಯಾಕಂದರೆ ಅವರ ಅಧಿಕಾರವು ಹಡಗುಪಡೆಗೆ ಸಂಬಂಧಿಸಿದ್ದಿರುತ್ತಿತ್ತು. ಆದ್ದರಿಂದ ಆ ಕೆಲಸದ ಬಗ್ಗೆ ಅವರಿಗೆ ಗುತ್ತಿಗೆಯೇ ಇದ್ದಂತಾಗುತ್ತಿತ್ತು. ಸೈನ್ಯದ ಅಧಿಕಾರವನ್ನು ಒಂದು ವ್ಯಕ್ತಿಯಿಂದ ಅಥವಾ ಮನೆತನದಿಂದ ಕಿತ್ತುಕೊಂಡು, ಬೇರೆ ವ್ಯಕ್ತಿಗೆ ಅಥವಾ ಮನೆತನಕ್ಕೆ ಕೊಡುವದು ಸುಲಭವಾಗುತ್ತದೆ; ಆದರೆ ಹಡಗುಪಡೆಯ ಸ್ಥಿತಿಯು ಹಾಗಲ್ಲ. ಶಿಪಾಯಿಗಳಂತೆ ಅಂಬಿ

ಗಳು ಬೇಗನೆ ಕಲಿತು ಸಿದ್ಧರಾಗುವದಿಲ್ಲ. ಎರಡನೆಯ ಕಾರಣವೇನಂದರೆ, ಕೊಂಕಣ ಪಟ್ಟಿಯ ಠಾಣ್ಯಗಳು ಗುಡ್ಡಗಾಡು ಅಥವಾ ಸಮುದ್ರತೀರದವು ಇರುತ್ತಿದುದ್ದರಿಂದ, ಅವುಗಳನ್ನು ಕೈವಶ ಮಾಡಿಕೊಂಡು ಬಂಡುಗಾರ ಅಧಿಕಾರಿಗಳನ್ನು ಅಂಕೆಯಲ್ಲಿ ತರುವದು ಒಳ್ಳೆಯ ಪರಿಶ್ರಮದ ಕೆಲಸವಾಗಿತ್ತು. ಮೂರನೆಯ ಕಾರಣವೇನಂದರೆ, ಕೊಂಕಣ ಪಟ್ಟಿಯು ಹೆಚ್ಚಿನ ಉತ್ಪನ್ನದ ಜನಪದವಿದ್ದಿಲ್ಲ. ಫಡಣವೀಸಿಯ ದಪ್ತರದಲ್ಲಿ ಅದಕ್ಕೆ ಬಹಳ ಮಹತ್ವವಿರಲಿಲ್ಲ. ಹಿತ್ತಲಬಾಗಿಲವನ್ನು ಭದ್ರಪಡಿಸುತ್ತಿರುವಂತೆ ಕೊಂಕಣದ ಬಿಗಿ ಮಾಡುವದು ದೇಶದೊಳಗಿನ ರಾಜರಿಗೆ ಅವಶ್ಯಕವಿತ್ತು. ಇದೇಕಾರಣಕ್ಕಾಗಿ ಕೊಂಕಣದೊಳಗಿನ ಅಧಿಕಾರಿಗಳಾದರೂ ವಿಶೇಷ ಮಹತ್ವಾಕಾಂಕ್ಷಿಗಳಾಗಿದ್ದಿಲ್ಲ. ಪ್ರಾಯಶಃ ಸ್ವತಂತ್ರರಾಗಿದ್ದರೆ ಹಾಗು ಸಮುದ್ರ ಸುಲಿಗೆಗಾರಿಕೆಯ ಕೆಲಸ ನಡೆಯುತ್ತಿದ್ದರೆ ಅವರು ಸಂತುಷ್ಟರಾಗುತ್ತಿದ್ದರು. ತಮ್ಮ ಕಾರ್ಯಕ್ಷೇತ್ರದಲ್ಲಿ ಮಾತ್ರ ಅವರು ಬಲಿಷ್ಠರಾಗಿರುತ್ತಿದ್ದರು. ದೇಶದೊಳಗಿನ ದೊಡ್ಡ ದೊಡ್ಡ ಯುದ್ಧಗಳಂತೆ ಕೊಂಕಣದೊಳಗಿನ ಯುದ್ಧಗಳನ್ನು ವರ್ಣಿಸಲು ಸಾಧನಗಳಿರದಿದ್ದರೂ, ಸಮುದ್ರದ ಯುದ್ಧದಲ್ಲಿ ಕೊಂಕಣೀ ಖಲಾಶಿಗಳೂ ಹಡಗುಪಡೆಯ ಸರದಾರರೂ ತೋರಿಸಿದ ಶೌರ್ಯ ಸಾಹಸಗಳು ಕಡಿಮೆ ತರಗತಿಯವಿದ್ದವೆಂದು ಅನುಮಾನಿಸಲು ಕಾರಣವಿಲ್ಲ. ಸಮುದ್ರ ಸುಲಿಗೆಯ ಸಾಹಸದ ಕಥಾನಕಗಳು ಎಲ್ಲ ದೇಶಗಳಲ್ಲಿ ಚಿತ್ತಾಕರ್ಷಕವಿರುತ್ತವೆ. ಕೊಂಕಣದ ವೀರರ ಚರಿತ್ರಗಳನ್ನು ಬರೆಯುವ ಹಾಗು ಗೀತಗಳನ್ನು ರಚಿಸುವ ಸಹೃದಯ ಗ್ರಂಥಕಾರರೂ ಕವಿಗಳೂ ದೊರೆತರೆ, ಮರಾಟರ ಇತಿಹಾಸವು ಮತ್ತಿಷ್ಟು ಮನೋವೇಧಕವಾಗುವದು.

ಇಂಗ್ಲಿಷರು ಹದಿನೇಳನೆಯ ಶತಕದ ಆರಂಭದಿಂದಲೇ ಕೊಂಕಣ ಪಟ್ಟಿಯೊಡನೆ ವ್ಯಾಪಾರ ಮಾಡತೊಡಗಿದ್ದರು; ಆದರೆ ಕೊಂಕಣದ ದಂಡೆಯಲ್ಲಿ ತಮ್ಮ ಹಡಗುಪಡೆಯ ಠಾಣ್ಯವನ್ನು ನೆಲೆಗೊಳಿಸುವ ಪ್ರಯತ್ನವು ಎಂದೂ ಸಫಲವಾಗಲಿಲ್ಲ ಮುಂಬಯಿಯ ದಕ್ಷಿಣದ ಪಶ್ಚಿಮ ಕರಾವಳಿಯನ್ನು ಆಂಗ್ರೆ, ಧುಳಪ, ಕೊಲ್ಹಾಪುರ ಭೋಸಲೆ, ಸಾವಂತ ಮೊದಲಾದವರು ಕ್ರಮವಾಗಿ ಆಕ್ರಮಿಸಿದ್ದರು. ಸಮುದ್ರತೀರದ ಈ ಮರಾಟರು ಬಲಿಷ್ಠರಾಗಿದ್ದರು. ಈ ಎಲ್ಲ ಜನರಲ್ಲಿ ಆಂಗ್ರೆಯು ಪ್ರಮುಖನಿದ್ದು, ಅವನ ವರ್ಚಸ್ಸವು ಕೊಂಕಣಪಟ್ಟಿಯ ಬಳಿಯಲ್ಲಿ ತಿರುಗುವ ಜಲಗಾಮಿ ವ್ಯಾಪಾರಿಗಳಿಗೆ ಚನ್ನಾಗಿ ಭಾಸವಾಗುತ್ತಿತ್ತು. ಕಾನ್ಹೋಜಿ ಆಂಗ್ರೆಯು ಅನೇಕ ಜಲ ಯುದ್ಧಗಳಲ್ಲಿ ಇಂಗ್ಲಿಷರನ್ನು ಪರಾಭವಗೊಳಿಸಿ, ಅವರ ಅನೇಕ ನೌಕೆಗಳನ್ನು ಹಿಡಿದಿದ್ದನು; ಹಾಗು ಅನೇಕ ನೌಕೆಗಳನ್ನು ಮುಳುಗಿಸಿದ್ದನು. ಇಂಗ್ಲಿಷರು ೧೬೩೮ರಲ್ಲಿ ರಾಜಾಪುರದಲ್ಲಿ ವಖಾರನ್ನು ಸ್ಥಾಪಿಸಿದರು; ಆದರೆ ಅವರು ಅದನ್ನು ಬೇಗನೆ ಮುರಿಯಬೇಕಾಯಿತು. ಶಿವಾಜಿಯು ಈ ವಖಾರನ್ನು ಸುಲಿದಂದಿನಿಂದ ಇಂಗ್ಲಿಷರಿಗೆ ಭೀತಿಯುಂಟಾಯಿತು. ಶಿವಾಜಿಯ ಪರಾಕ್ರಮದಿಂದ ಕೊಂಕಣದಲ್ಲಿ ಮುಸಲ್ಮಾನರ ವರ್ಚಸು ಕಡಿಮೆಯಾಗತೊಡಗಿದ್ದನ್ನು ನೋಡಿ, ಸುರತವೊಂದನ್ನು ಜತನ ಮಾಡಿಕೊಂಡರೆ

ಸಾಕೆಂದು ಇಂಗ್ಲಿಷರಿಗೆ ತೋರತೊಡಗಿತು. ಶಿವಾಜಿಯ ಮರಣೋತ್ತರದಲ್ಲಿ ಮುಸಲ್ಮಾನರ ವರ್ಚಸ್ಸು ಕೊಂಕಣದಲ್ಲಿ ಅಲ್ಪಸ್ವಲ್ಪ ಪ್ರಸ್ಥಾಪಿತವಾಗತೊಡಗಿತು. ಆದರೂ ಪ್ರತ್ಯಕ್ಷ ಅಧಿಕಾರಗಳು ಮೊಗಲರ ಪರವಾಗಿ ಹಬಸಿ ಶಾಮಲ ಇವನ ಕಡೆಗೆ, ಹಾಗು ಮರಾಟರ ಪರವಾಗಿ ಆಂಗ್ರೆ ಧುಳಪ ಇವರ ಕಡೆಗೆ ಇದ್ದವು. ಔರಂಗಜೇಬನ ಮೃತ್ಯುವಿನ ತರುವಾಯ ಕೊಂಕಣದಲ್ಲಿಯ ಮೊಗಲರ ವರ್ಚಸ್ಸು ಸಂಪೂರ್ಣ ಇಲ್ಲದಂತಾಯಿತು. ಶಿದ್ದಿ ಹಾಗು ಹಬಸಿ ಇವರು ಮರಾಟರಿಗೆ ತೊಂದರೆ ಕೊಡುತ್ತಿದ್ದರೂ, ಅವರು ಮುಸಲ್ಮಾನರ ಸಲುವಾಗಿ ಕಾದುತ್ತಿರದೆ, ಸ್ವತಂತ್ರ ರಾಜರೆಂದು ಕಾದುತ್ತಿದ್ದರು. ಇಂಗ್ಲಿಷರಿಗೆ ಈ ಬಡಿದಾಟದಿಂದ ಕೆಲಮಟ್ಟಿಗೆ ಲಾಭವಾಯಿತು. ಅವರು ನಡುನಡುವೆ ಮರಾಟರ ಸಹಾಯದಿಂದ ಪೋರ್ತುಗೀಜರೊಡನೆಯೂ, ಶಿದ್ದಿಯ ಸಹಾಯದಿಂದ ಮರಾಟರೊಡನೆಯೂ ಯುದ್ಧ ಮಾಡುತ್ತ, ಯಾರಿಂದಲಾದರೂ ಸ್ವಸಂರಕ್ಷಣೆಯ ಉಪಾಯ ಯೋಜನೆ ಮಾಡುತ್ತಿದ್ದರು.

ಮರಾಟರ ಹಡಗುಪಡೆಯ ಸಂಸ್ಥಾಪನೆಯು ಸರಕಾರೀ ರೀತಿಯಿಂದ ಶಿವಾಜಿ ಮಹಾರಾಜನ ಆಳಿಕೆಯಲ್ಲಾಯಿತು. ೧೬೬೧ರಲ್ಲಿ ಜಂಜೀರೆಯು ಕೈವಶವಾಗಲಿಲ್ಲೆಂದು ಸಮುದ್ರದ ಕಡೆಯಿಂದ ದಾಳಿ ಇಕ್ಕಬೇಕೆಂದು ಶಿವಾಜಿಯು ಯೋಚಿಸಿದನು. ಈ ಪ್ರಸಂಗದಲ್ಲಿ ಹಬಶಿಯ ಬಳಿಯಲ್ಲಿ ಹಡಗುಗಳಿದ್ದುದರಿಂದ, ಅವನಿಗೆ ಸಮುದ್ರದ ಮಾರ್ಗವಾಗಿ ಅನ್ನ ಸಾಮಗ್ರಿಯನ್ನು ತರಿಸಿಕೊಳ್ಳುವದು ಸಾಧ್ಯವಾಗುತ್ತಿತ್ತು. ಅದನ್ನು ಕಟ್ಟು ಮಾಡುವ ಉದ್ದೇಶದಿಂದ ಶಿವಾಜಿ ಮಹಾರಾಜನು ಸ್ವತಂತ್ರ ಹಡಗುಪಡೆಯನ್ನು ಸಿದ್ಧಪಡಿಸುವದಕ್ಕೆ ಆಜ್ಞೆ ಮಾಡಿದನು.

ಹಡಗುಪಡೆಯು ಸಿದ್ಧವಾದ ಮೇಲೆ ಶಿವಾಜಿ ಮಹಾರಾಜನು ಸಮುದ್ರದ ದಂಡೆಯ ಬಂದರಗಳನ್ನು ಮೆಲ್ಲಮೆಲ್ಲನೆ ಕೈವಶಮಾಡಿಕೊಳ್ಳಲಾರಂಭಿಸಿದನು. ಸಮುದ್ರದ ದಂಡೆಯನ್ನು ಚನ್ನಾಗಿ ನಿರೀಕ್ಷಿಸಿ, ದಾಳಿ ಮಾಡಲಿಕ್ಕೆ ಬಂಧುರವಾದ ಸ್ಥಳಗಳನ್ನು ಶೋಧಿಸಿ, ಜಂಜೀರೆ ಅಂದರೆ ನೀರಿನೊಳಗಿನ ದುರ್ಗವನ್ನು ಕಟ್ಟಿಸಲಿಕ್ಕೆ ಪ್ರಾರಂಭಿಸಿದನು. ೧೬೬೩ರಲ್ಲಿ ವಾಡಿಯ ಸಾವಂತನ ಮೇಲೆ ದಾಳೀ ಮಾಡಿ ಅವನ ವಶದಲ್ಲಿಯ ಅನೇಕ ಪ್ರಾಂತಗಳನ್ನು ಶಿವಾಜಿಯು ಕೈವಶ ಮಾಡಿಕೊಂಡನು. ಅದೇ ವೇಳೆಯಲ್ಲಿ ರಾಮ ದಳವಿ ಮತ್ತು ತಾನಾಜಿ ಸಾವಂತ ಎಂಬ ಸಾವಂತನ ಸಮುದ್ರ ತೀರದ ಸರದಾರರಿಬ್ಬರು ಶಿವಾಜಿಯನ್ನು ಕೂಡಿದರು. ಅವನು ಅವರನ್ನು ತನ್ನ ಹಡಗುಪಡೆಯ ಸುಭೇದಾರರನ್ನಾಗಿ ನಿಯಮಿಸಿದನು. ಮಾಲವಣದ ಸಿಂಧುದುರ್ಗ ಕೋಟೆಯು ಶಿವಾಜಿಯಿಂದ ಇ. ಸ. ೧೬೬೪-೬೫ರಲ್ಲಿ ಕಟ್ಟಿಸಲ್ಪಟ್ಟಿತು. ಅದನ್ನು ಅವನು ತನ್ನ ಹಡಗುಪಡೆಯ ಠಾಣ್ಯವನ್ನು ಮಾಡಬೇಕೆಂದು ಯೋಚನೆ ಮಾಡಿದನು. ಕುಲಾಬಾ, ಸುವರ್ಣದುರ್ಗ, ಸಿಂಧುದುರ್ಗ ಈ ಕೋಟೆಗಳನ್ನು ಸುಧಾರಿಸಿ ಸರಿ ಮಾಡಿದನು. ಅಲ್ಲಿ ಹಡಗು ಕಟ್ಟುವ ಕೆಲಸ ನಡೆಯಿತು. ಈ ಎಲ್ಲ ಕೋಟೆಗಳು ಮರಾಟರ ಹಡಗುಪಡೆಯ ನಿವಾಸಗಳಾಗಿದ್ದವು

ಮರಾಟರ ಹಡಗುಪಡೆಯು ಸಿದ್ಧತೆಯಾದ ಮೇಲೆ ೧೬೬೪ರಿಂದ ಕೊಂಕಣದ ದಂಡೆಯ ಮೇಲೆ ಮರಾಟರಿಗೂ ಪರರಾಷ್ಟ್ರಗಳ ಜನರಿಗೂ ಯುದ್ಧವು ಆರಂಭವಾಯಿತು. ಈ ಹಡಗುಪಡೆಯ ಶಕ್ತಿಯನ್ನು ನೋಡಿ ಪೋರ್ತುಗೀಜರಿಗೂ ಶಿದ್ದಿಗೂ ಇಂಗ್ಲಿಷರಿಗೂ ಭೀತಿಯುತ್ಪನ್ನವಾಯಿತು. ಶಿವಾಜಿಯು ೧೬೬೫ರಲ್ಲಿ ತನ್ನ ಹಡಗುಪಡೆಯನ್ನು ತೆಗೆದುಕೊಂಡು ಕಾರವಾರದ ವರೆಗೆ ದಾಳೀ ಮಾಡಿದನು. ಈ ದಾಳಿಯಿಂದ ಕಾರವಾರದ ವರೆಗಿನ ಸಮುದ್ರ ತೀರದ ಪ್ರದೇಶವು ಶಿವಾಜಿಯ ವಶವಾಯಿತು. ಶಿವಾಜಿಯ ಈ ದಾಳಿಯಲ್ಲಿ ಸೈನ್ಯವಿತ್ತು. ೩೦ರಿಂದ ೧೫೦ ಟನ್ನು ತೂಕದ ೮೫ ಸಣ್ಣ ಹಡಗುಗಳಿದ್ದವು; ಮೂರು ದೊಡ್ಡ ಹಡಗುಗಳಿದ್ದವು. ಎಂಬ ಸಂಗತಿಯನ್ನು ಕಾರವಾರದ ಇಂಗ್ಲಿಷ ವ್ಯಾಪಾರಿಗಳು ಬರೆದಿರುವರು. ೧೬೭೦ರಲ್ಲಿ ಶಿವಾಜಿಯು ಜಂಜೀರೆಯ ಮೇಲೆ ನಿಕರದ ದಾಳೀ ಮಾಡಿ, ಹಬಶಿಯ ಬಂಡಾಯ ಮುರಿಯುವ ನಿಶ್ಚಯ ಮಾಡಿದಾಗ, ಅವನ ಬಳಿಯಲ್ಲಿಯ ಹಡಗುಪಡೆಯ ವಿಸ್ತಾರವಾಗುತ್ತ ನಡೆದದ್ದು ೧೬೦ ಹಡಗುಗಳಿದ್ದವು. ಅದೇ ವರ್ಷ ಪೋರ್ತುಗೀಜರಿಗೂ ಶಿವಾಜಿಗೂ ಹಡಗುಪಡೆಯ ದೊಡ್ಡ ಕಾಳಗವಾಗಿ, ಪೋರ್ತುಗೀಜರು ಶಿವಾಜಿಯ ಕಡೆಯ ಹಡಗುಪಡೆಯಲ್ಲಿಯ ಹನ್ನೆರಡು ಸಣ್ಣ ನೌಕೆಗಳನ್ನು ಹಸ್ತಗತ ಮಾಡಿಕೊಂಡರು. ಆಗ ಮರಾಟರು ಹಡಗುಪಡೆಯ ಯುದ್ಧ ಮಾಡಿ ದಮಣದ ಹತ್ತರ ಪೋರ್ತುಗೀಜರನ್ನು ಪರಾಭವಗೊಳಿಸಿ, ಅವರ ಒಂದು ದೊಡ್ಡ ಹಡಗವನ್ನು ಗೆದ್ದುಕೊಂಡರು.

೧೬೭೮ರಲ್ಲಿ ಶಿವಾಜಿ ಮಹಾರಾಜನು ಹಡಗುಪಡೆಯ ಸೇನಾಪತಿಯಾದ ದೌಲತಖಾನನಿಂದ ಖಾಂದೇರಿ ನಡುಗಡ್ಡೆಯ ಮೇಲೆ ದಾಳಿ ಮಾಡಿಸಿ ಅದನ್ನು ಕೈ-ವಶ ಮಾಡಿಕೊಂಡನು. ಈ ನಡುಗಡ್ಡೆಯ ಮೇಲೆ ಇಂಗ್ಲಿಷರ ಹಾಗು ಪೋರ್ತುಗೀಜರ ಕಣ್ಣು ಇದ್ದುದರಿಂದ, ಶಿವಾಜಿಯ ಹಡಗುಪಡೆಯು ಜಂಜೀರೆಗೆ ಹೋಗುವಾಗ ಅವರು ಅದನ್ನು ತಡೆದರು ಇಂಗ್ಲಿಷರ ರಿವ್ಹೇಜ ಎಂಬ ಹೆಸರಿನ ಹದಿನಾರು ತೋಫಿನ ನೌಕೆಯ ಹಾಗು ಮರಾಟರ ಹಡಗುಪಡೆಯ ನಡುವೆ ಒಳ್ಳೇ ಬಡಿದಾಟವಾಯಿತು. ಅರ್ಮ ಎಂಬ ಇತಿಹಾಸಕಾರನು ಆ ವೇಳೆಯ ಮರಾಟರ ನೌಕಾ ರಚನೆಯೂ ಹುಟ್ಟುಗಳೂ ಇಂಗ್ಲಿಷರ ಹಡಗಕ್ಕಿಂತ ಶ್ರೇಷ್ಠವಾದವುಗಳಿದ್ದವೆಂದು ಬರೆದಿರುವನು. ಕೊಂಕಣದ ದಂಡೆಯನ್ನು ಕೈವಶಮಾಡಿಕೊಂಡು, ಅದನ್ನು ಪರಶತ್ರುಗಳಿಂದ ರಕ್ಷಿಸಿಕೊಳ್ಳುವುದೇ ಶಿವಾಜಿಯ ಹಡಗುಪಡೆಯ ಉದ್ದೇಶವಾಗಿತ್ತು. ಜಂಜೀರೆಯ ಸೀಮೆಯ ಹೊರತು ಉಳಿದ ಕಡೆಯ ಶತ್ರುಗಳೆಲ್ಲ ಶಿವಾಜಿಯ ವಶವಾಗಿ ಅವನ ಉದ್ದೇಶವು ಸಫಲವಾಯಿತು.

ಕೊಂಕಣ ಪಟ್ಟಿಯೆಲ್ಲ ಕೈವಶವಾದಮೇಲೆ ಹಡಗುಪಡೆಯ ಅನುಕೂಲತೆಗಾಗಿ ಶಿವಾಜಿಯು ಕುಲಾಬಾ ಉಂದೇರಿ ಅಂಜನವೇಲ ಮೊದಲಾದ ಹದಿಮೂರು ಜಲದುರ್ಗಗಳನ್ನು ಕಟ್ಟಿಸಿದ್ದನು. ಮರಾಟರ ಹಡಗುಪಡೆಯ ಸಾಮರ್ಥ್ಯವು ಬೆಳೆದು, ಸಮುದ್ರ

ತೀರದ ಆಯಕಟ್ಟಿನ ಸ್ಥಳಗಳು ಭದ್ರವಾಗಬೇಕೆಂಬ ಉದ್ದೇಶದಿಂದ ಈ ಜಲದುರ್ಗ ಗಳು ಕಟ್ಟಲ್ಪಟ್ಟಿದ್ದವು. ಶಿವಾಜಿಯು ಕಟ್ಟಿಸಿದ ಸಿಂಧುದುರ್ಗ ಕೋಟೆಯು ಅವನ ಆಳಿಕೆಯೊಳಗಿನ ಹಡಗುಪಡೆಯ ಮುಖ್ಯ ಸ್ಥಳವಾಗಿತ್ತು. ಮಾಲವಣದ ಬಳಿಯಲ್ಲಿಯ ಪದ್ಮದುರ್ಗದಲ್ಲಿ ಹಡಗ ಕಟ್ಟುವ ಕಾರ್ಯಾಲಯವಿತ್ತು. ಕುಲಾಬಾ-ವಿಜಯ ದುರ್ಗಗಳು ಯುದ್ಧದ ಹಡಗಗಳೊಳಗಿನ ತೋಫು-ಗುಂಡುಗಳನ್ನಿಡುವ ಸ್ಥಳಗಳಾಗಿದ್ದವು. ಸಮುದ್ರತೀರದಲ್ಲಿದ್ದ ಕೋಳಿ, ಭಂಡಾರಿ ಮೊದಲಾದ ಸಮುದ್ರತೀರದ ಜನರನ್ನು ಶಿವಾಜಿಯು ವಶಪಡಿಸಿಕೊಂಡು ತನ್ನ ಹಡಗುಪಡೆಯಲ್ಲಿ ಸೇರಿಸಿದನು. 'ಶಿವಾಜಿಯು ಸ್ವತಃ ಖಲಾಶಿಯಾಗಿರಲಿಲ್ಲವಾದ್ದರಿಂದ ಒಳಿತಾಯಿತು. ಇಲ್ಲದಿದ್ದರೆ ಭೂಮಿಯ ಪೃಷ್ಠಭಾಗವನ್ನು ಸರಿಪಡಿಸಿದಂತೆ, ಅಂದರೆ ನಿಃಶತ್ರು ಮಾಡಿದಂತೆ ಸಮುದ್ರದಲ್ಲಾದರೂ ಮಾಡುತ್ತಿದ್ದನು.' ಎಂದು ಡಗಲಸ ಸಾಹೇಬನು ಬರೆದಿರುವನು. ನೇರ್ನ ಸಾಹೇಬನು ಕೊಂಕಣದ ಇತಿಹಾಸದಲ್ಲಿ "ಸಮುದ್ರತೀರದ ಮೇಲೆ ರಾಜ್ಯವಾಳುವ ತತ್ಕಾಲೀನ ಮುಸಲ್ಮಾನ ಅಥವಾ ಕ್ರಿಸ್ತ ಸತ್ತಾಧಾರಿಗಳಿಗಿಂತ ಶಿವಾಜಿ ಮಹಾರಾಜನು ಕಡಮೆ ಪ್ರತಿಯ ರಾಜ್ಯಕರ್ತನಿದ್ದಿಲ್ಲ" ಈ ಮೇರೆಗೆ ಪ್ರಾಂಜಲತನದಿಂದ ಒಪ್ಪಿರುವನು.

ಜಂಜಿರೆಯ ಶಿದ್ದಿಯು ಉನ್ಮತ್ತನಾಗಿ ಶಿವಾಜಿ ಮಹಾರಾಜನ ಆಳಿಕೆಯಲ್ಲಿ ಮರಾಟರಿಗೆ ಸೊಪ್ಪುಹಾಕಲಿಲ್ಲ. ಅವನಿಗೆ ಇಂಗ್ಲಿಷರ ಹಾಗು ಪೋರ್ತುಗೀಜರ ಗುಪ್ತ ಸಹಾಯವಿತ್ತು. ಆದ್ದರಿಂದ ಜಂಜೀರೆಯ ಮೇಲೆ ದಾಳಿಮಾಡಿ, ಅದನ್ನು ಕೈವಶ ಪಡಿಸಿಕೊಳ್ಳಬೇಕೆಂದು ಸಂಭಾಜಿಯು ಸಂಕಲ್ಪ ಮಾಡಿದನು; ಆದರೆ ಅವನಿಗೆ ಅದರಲ್ಲಿ ಯಶವು ದೊರೆಯಲಿಲ್ಲ. ರಾಜಾಪುರದಲ್ಲಿದ್ದ ಮರಾಟರ ಹಡಗುಪಡೆಯು ಪೋರ್ತುಗೀಜ ಜನರ ಮೇಲೆ ಚನ್ನಾಗಿ ವರ್ಚಸ್ವ ಕುಳ್ಳಿರಿಸಿ, ಅವರ ಕೈಯೊಳಗಿನ ಕಾರಂಜೆ ಮೊದಲಾದ ಸ್ಥಳಗಳನ್ನು ಹಿಡಿದುಕೊಂಡಿತು. "ರಾಜಾಪುರದಲ್ಲಿದ್ದ ಮರಾಟರ ಒಂದೇ ಹಡಗುಪಡೆಯು ಗೋವೆಯ ಪೋರ್ತುಗೀಜರ ಹಡಗುಪಡೆಗೆ ಮಿಗಿಲಾಗಿತ್ತು." ಎಂದು ಆರ್ಮನೆಂಬ ಇತಿಹಾಸಕಾರನು ಬರೆದಿರುವನು. ಸಂಭಾಜಿಯ ಆಳಿಕೆಯಲ್ಲಿ ಹಬಸಿ-ಫಿರಂಗಿಗಳೊಡನೆ ಆದ ಸಮುದ್ರಯುದ್ಧದಲ್ಲಿ ಮರಾಟರ ಹಡಗುಪಡೆಯ ತೇಜವು ಚನ್ನಾಗಿ ಪ್ರಕಾಶಿತವಾಗಲಿಲ್ಲ. ಸಂಭಾಜಿಯ ತರುವಾಯ ಮರಾಟರ ರಾಜ್ಯದ ಮೇಲೆ ಬಂದ ಅನಿಷ್ಟನಿವಾರಣೆಗಾಗಿ ಧನಾಜಿ ಜಾಧವ, ಸಂತಾಜಿ ಘೋರಪಡೆ ಮೊದಲಾದ ವೀರರು ಪ್ರಯತ್ನ ಮಾಡಿ ಸ್ವರಾಜ್ಯವನ್ನು ಯವನರ ವಶದಿಂದ ಹೇಗೆ ಬಿಡಿಸಿಕೊಂಡರೋ, ಹಾಗೆಯೆ ಸಮುದ್ರದ ದಂಡೆಯಲ್ಲಿ ಸ್ವಸತ್ತೆಯನ್ನು ಸ್ಥಾಪಿಸತೊಡಗಿದ ಇಂಗ್ಲಿಷ ಫಿರಂಗಿ ಡಚ್ಚ ಶಿದ್ದಿ ಮೊದಲಾದ ಮಹತ್ವಾಕಾಂಕ್ಷಿಗಳಾದ ಪರಕೀಯ ಜನರನ್ನು ಪರಾಭವಗೊಳಿಸುವದಕ್ಕಾಗಿ ಮರಾಟರ ಹಡಗುಪಡೆಯನ್ನು ಪುನಃ ಸಿದ್ಧಪಡಿಸಿ ಸಮುದ್ರ ಯುದ್ಧದೊಳಗಿನ ಮರಾಟರ ಅಲೌಕಿಕ ಶೌರ್ಯವನ್ನು ತೋರಿಸಿ ವಿಕ್ರಮ ತೇಜದಿಂದ ಎಲ್ಲರ ಕಣ್ಣು ಕುಕ್ಕುವಂತೆ ಮಾಡಿದ ಕಾನ್ಹೋಜಿ ಆಂಗ್ರೆಯ ಹೆಸರು ಮರಾಟರ ಇತಿಹಾಸದಲ್ಲ ಕೀರ್ತಿರೂಪದಿಂದ ಚಿರಕಾಲ ಬೆಳಗುತ್ತ ಉಳಿಯುವದೆಂಬ

ಮಾತಿನಲ್ಲಿ ಸಂಶಯವಿಲ್ಲ. ಶಿವಾಜಿಯ ತರುವಾಯ ಕೊಂಕಣ ದಂಡೆಯ ಮೇಲೆ ಪರದ್ವೀಪಸ್ಥ ಜನರು ಕಾಲುಮೆಟ್ಟದಂತೆ ಮಾಡುವ-ಪರಾಕಾಷ್ಠೆಯ ಪ್ರಯತ್ನವನ್ನು ಯಾರಾದರೂ ಮಾಡಿದ್ದರೆ, ಕಾನ್ಹೋಜಿ ಆಂಗ್ರೆಯೇ ಸರಿ, ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು!

ಕಾನ್ಹೋಜಿ ಆಂಗ್ರೆಯನ್ನು ಸುಲಿಗೆಗಾರ ಜನರ ನಾಯಕ ಮೊದಲಾದ ನಿಂದಾಸ್ಪದ ವಿಶೇಷಣದಿಂದ ಪರದೇಶೀಯ ಇತಿಹಾಸಕಾರರು ಸಂಬೋಧಿಸಿರುವರು; ಆದರೆ ನಿಜವಾಗಿ ಹೇಳಬೇಕಾದರೆ, ಅವನು ಸುಲಿಗೆಗಾರ ಜನರ ನಾಯಕನಾಗಿರದೆ, ಮರಾಟರ ಹಡಗುಪಡೆಯ ಪುನರುದ್ಧಾರಕನಾಗಿದ್ದನೆನ್ನಬಹುದು. ಸಮುದ್ರ ಯುದ್ಧದಲ್ಲಿ ನಿಪುಣನೂ, ಅದ್ವಿತೀಯ ಸಾಹಸಿಯೂ, ಪ್ರತಾಪಶಾಲಿಯೂ ಆದ ಆ ನರಪುಂಗವನು ರಾಜಾರಾಮನ ಆಳಿಕೆಯ ಕಠಿಣ ರಾಜಕಾರಣ ಪ್ರಸಂಗದಲ್ಲಿ ನಿರ್ಮಾಣವಾಗದಿದ್ದರೆ, ಪಶ್ಚಿಮಸಮುದ್ರ ತೀರವೆಲ್ಲ ಮರಾಟರ ಕೈ ಬಿಡುತ್ತಿತ್ತೆಂಬ ಮಾತಿನಲ್ಲಿ ತಿಲಮಾತ್ರವೂ ಸಂದೇಹವಿಲ್ಲ.

ಕಾನ್ಹೋಜಿಯು ಮರಾಟರ ಹಡಗುಪಡೆಯನ್ನು ಚನ್ನಾಗಿ ಸುಧಾರಿಸಿ ಬಲವಂತಪಡಿಸಿದನು. ಶಿವಾಜಿಯ ಆಳಿಕೆಯಲ್ಲಿದ್ದ ಹಡಗುಪಡೆಗಿಂತ ಕಾನ್ಹೋಜಿಯ ಹಡಗುಪಡೆಯು ಹೆಚ್ಚು ಪ್ರಬಲವೂ ಹೆಚ್ಚು ಅಜಿಂಕ್ಯವೂ ಆಗಿತ್ತು. ಸಮುದ್ರಮಾರ್ಗದಲ್ಲಿಯೂ ದೇಶದಲ್ಲಿಯೂ ಕೂಡಿಯೇ ವರ್ಚಸ್ಸು ಬಳಯಿಸುವ ಕಾರ್ಯವು ಶಿವಾಜಿಯದಾಗಿತ್ತು; ಆದರೆ ಆಂಗ್ರೆಯು ಸಮುದ್ರತೀರದಲ್ಲಿಯೇ ಎಲ್ಲ ಲಕ್ಷ್ಯ ಹಾಕುವದಿದ್ದುದರಿಂದ, ಹಡಗುಪಡೆಯ ಸುಧಾರಣೆಯೂ ಹಾಗು ಅಭಿವೃದ್ಧಿಯೂ ಆಯಿತು. ಅವನು ಸ್ವಲ್ಪಕಾಲದಲ್ಲಿ ಮರಾಟರ ಹಡಗುಪಡೆಯನ್ನು ಚನ್ನಾಗಿ ಬೆಳೆಯಿಸಿದನು; ಹಡಗದೊಳಗಿನ ಸೈನಿಕರಿಗೂ ಹಡಗ ನಡೆಯಿಸುವವರಿಗೂ ಚನ್ನಾಗಿ ಶಿಕ್ಷಣ ಕೊಟ್ಟು, ಸಮುದ್ರಯುದ್ಧದಲ್ಲಿ ನಿಷ್ಣಾತರನ್ನಾಗಿ ಮಾಡಿದನು. ಸನ್ ೧೬೯೦ ರಿಂದ ೧೭೨೯ ವರೆಗೆ ಮರಾಟರ ಹಡಗುಪಡೆಯು ಆಂಗ್ರೆಯವರ ವಶದಲ್ಲಿಯೇ ಇತ್ತು.

೧೭೧೯ರಲ್ಲಿ ಶಿದ್ದಿ, ಫಿರಂಗಿ, ಮೊಗಲ ಮೊದಲಾದವರು ಕೂಡಿ ಪ್ರಬಲನಾಗಿ ಕುಳಿತ ಕಾನ್ಹೋಜಿಯ ಹೆಮ್ಮೆಯನ್ನು ಮುರಿಯುವ ಪ್ರಯತ್ನ ಮಾಡಿದರು; ಆದರೆ ಕಾನ್ಹೋಜಿಯು ಆ ಎಲ್ಲರನ್ನು ತನ್ನ ಹಡಗುಪಡೆಯ ಬಲದಿಂದ ಹಿಂಜರಿಸಿ, ಅವರ ವಶದಲ್ಲಿದ್ದ ಪ್ರಾಂತಗಳನ್ನು ಒಂದೇಸವನೆ ಕೈವಶ ಮಾಡಿಕೊಳ್ಳತೊಡಗಿದನು. ಜಂಜೀರೆಯ ಸಿದ್ದಿಯೂ ಮೊಗಲರೂ ಆಂಗ್ರೆಗೆ ತೆರಿಗೆಯನ್ನು ಕೊಡಲಿಕ್ಕೆ ಒಪ್ಪಿದರು. ಈ ಮೇರೆಗೆ ಕಾನ್ಹೋಜಿಯು ಕೊಂಕಣದಲ್ಲಿ ಮರಾಟರ ಅಧಿಕಾರ-ವರ್ಚಸ್ವಗಳನ್ನು ಮತ್ತೆ ಪ್ರಸ್ಥಾಪಿಸಿದನು. ಅವನು ವಿಜಯದುರ್ಗವನ್ನು ಮರಾಟರ ಹಡಗುಪಡೆಯ ಮುಖ್ಯಸ್ಥಳವನ್ನು ಮಾಡಿದನು; ಮತ್ತು ಎಲ್ಲ ಬಂದರಗಳ ಕೋಟೆಗಳನ್ನು ಚೆನ್ನಾಗಿ ಭದ್ರಪಡಿಸಿ, ಅಲ್ಲಿಯ ಹಡಗುಪಡೆಯನ್ನು ಬಲವಂತಗೊಳಿಸಿದನು. ಮುಂಬಯಿಯಿಂದ ಗೋವೆಯ ವರೆಗಿನ ಸಮುದ್ರ ದಂಡೆಯ ಮೇಲಿನ ಒಂದಾದರೂ ಒತ್ತನ್ನು,

ಒಂದಾದರೂ ಬಂದರವನ್ನು, ಒಂದಾದರೂ ನದೀ ಮುಖವನ್ನು ಅವನು ಕೋಟೆ ಯಿಲ್ಲದೆ ಇಲ್ಲವೆ ಹಡಗುಪಡೆಯ ಠಾಣ್ಯವನ್ನು ಮಾಡದೆ ಇಡಲಿಲ್ಲ.

ಕಾನ್ಹೋಜಿಯ ಹಡಗುಪಡೆಯ ಬಗ್ಗೆ ಇಂಗ್ಲಿಷ ಗ್ರಂಥಕಾರರು ಕೊಟ್ಟ ಗೊತ್ತು ವಳಿಯಿಂದ ಅದು ಬಹಳೇ ದೊಡ್ಡದಿತ್ತೆಂದು ಕಂಡು ಬರುತ್ತದೆ. ದೊಡ್ಡ ಹಡಗು ಗಳಿಗೆ ಎರಡು-ಮೂರು ಏಣಿಗಳಿರುತ್ತಿದ್ದವು. ಮೂರು ಏಣಿಗಳಿದ್ದ ಹಡಗುಗಳು ಮೂರುನೂರು ಟನ್ನು ಭಾರವನ್ನು ಹೊರುತ್ತಿದ್ದವು. ಉಳಿದವುಗಳು ೧೫೦ರಿಂದ ೨೦೦ ಟನ್ನುಗಳ ವರೆಗೆ ಭಾರ ಹೊರುತ್ತಿದ್ದವು. ಭೂಮಧ್ಯ ಸಮುದ್ರದೊಳಗಿನ ಹಡಗುಗಳಂತೆ ಅವುಗಳ ನಲಿಕೆಯು ಮುಂದೆ ಚೂಪಾಗಿದ್ದು ಅದರ ಮೇಲೆ ಬಲ ವಂತವಾದ ಅಂತಸ್ತಗಳಿರುತ್ತಿದ್ದವು. ಹಡಗದಲ್ಲಿ ಆರರಿಂದ ಒಂಬತ್ತು ಪೌಂಡು ಗುಂಡು ಹೊಡೆಯುವ ತೋಫುಗಳಿರುತ್ತಿದ್ದವು. ೧೭೧೭ರಲ್ಲಿ ೩೨ ತೋಫುಗಳ ಒಂದು ದೊಡ್ಡ ಹಡಗವೂ ೨೦ರಿಂದ ೨೮ತೋಫುಗಳ ೪ ಬಂಡಿಗಳೂ ೫ರಿಂದ ೧೨ತೋಫಿನ ೨೦ನೌಕೆಗಳೂ ಇಂಗ್ಲಿಷರ ಹಡಗುಪಡೆಯಲ್ಲಿದ್ದು, ಇವೇ ಸಮಯಕ್ಕೆ ಕಾನ್ಹೋಜಿಯು ಹಡಗುಪಡೆಯೆಂದರೆ ೧೬ರಿಂದ ೩೦ ತೋಫುಗಳ ೧೦ ಬಂಡಿಗಳು, ೪ರಿಂದ ೧೦ ತೋಫುಗಳ ೫೦ ನೌಕೆಗಳು ಇಷ್ಟೇ ಇದ್ದವು. ಆದರೂ ಕಾನ್ಹೋಜಿಯು ೧೭೧೬ ರಲ್ಲಿ ಈಸ್ಟ ಇಂಡಿಯಾ ಕಂಪನಿಯ ಪ್ರೆಸಿಡೆಂಟ ಎಂಬ ಹೆಸರಿನ ಹಡಗದೊಡನೆ ಯುದ್ಧ ಮಾಡಿ ಅದನ್ನು ಪೂರ್ಣ ನಾಶಗೊಳಿಸಿದನು. ಅವನು ೧೭೧೭ರಲ್ಲಿ ಸಕ್ಸೆಸ್ ಎಂಬ ಹೆಸರಿನ ಹಡಗವನ್ನು ಯುದ್ಧ ಮಾಡಿ ತೆಗೆದುಕೊಂಡನು. ೧೭೨೨ ರಲ್ಲಿ ಇಂಗ್ಲಿಷರೂ ಪೋರ್ತುಗೀಜರೂ ಒಂದಾಗಿ ಕುಲಾಬದ ಮೇಲೆ ದಾಳೀ ಮಾಡಿದರು; ಆದರೆ ಅವರಿಗೆ ಯಶವು ದೊರೆಯಲಿಲ್ಲ. ಮುಂದೆ ಎರಡು ವರ್ಷಗಳ ಮೇಲೆ ಡಚ್ಚ ಜನರ ೩೦ರಿಂದ ೫೦ ತೋಫುಗಳುಳ್ಳ ಏಳು ಪ್ರಚಂಡ ಹಡಗುಗಳು ವಿಜಯದುರ್ಗದ ಮೇಲೆ ದಾಳಿ ಮಾಡಿದವು; ಆದರೆ ಅವುಗಳಾದರೂ ಛಿನ್ನ ವಿಚ್ಛಿನ್ನವಾಗಿ ತಿರುಗಿ ಹೋದವು. ಈ ಮೇರೆಗೆ ಆಂಗ್ರೆಯು ಹಡಗುಪಡೆಯ ಪರಾ ಕ್ರಮ ಶಕ್ತಿಯು ಪರರಾಷ್ಟ್ರೀಯರಿಗೆ ಚನ್ನಾಗಿ ವ್ಯಕ್ತವಾಗಿ ಅವರ ಒಂದಾದರೂ ವ್ಯಾಪಾರೀ ನೌಕೆಗಳು ಯುದ್ಧದ ಹಡಗುಗಳ ಸಹಾಯವಿಲ್ಲದೆ ತಿರುಗಾಡದಂತಾ ದವು. "ಭೂಮಧ್ಯ ಸಮುದ್ರದಲ್ಲಿ ಆಲ್ಜೆರಾಯನ್ಸ ಎಂಬ ಹೆಸರಿನ ಸುಲಿಗೆಗಾರನ ಹೆಸರು ಕೇಳಿದ ಕೂಡಲೆ ಅಲ್ಲಿಯ ಹಡಗದ ವ್ಯಾಪಾರಿಗಳು ಹೇಗೆ ಅಂಜಿ ನಡುಗು ತ್ತಿದ್ದರೋ, ಹಾಗೆಯೇ ಸಮುದ್ರ ತೀರದ ಈ ಮರಾಟವೀರನ ಹೆಸರು ಕೇಳಿದ ಕೂಡಲೆ ಇಂಗ್ಲಿಷ ಜನರು ನಡಗುತ್ತಿದ್ದರು" ಎಂದು ಲೋ ಎಂಬ ಹೆಸರಿನ ಇತಿಹಾಸ ಕಾರನು ಬರೆದಿಟ್ಟಿರುವನು. ಮುಂದೆ ೧೭೨೭-೨೮ರಲ್ಲಿ ಇಂಗ್ಲಿಷರ ಎರಡು ಹಡಗು ಗಳು ಮತ್ತೆ ಬಿದ್ದದರಿಂದ ಅವರು ಹಣ್ಣಾಗಿ ವಾಡಿಯ ಸಾವಂತನೊಡನೆ ಒಪ್ಪಂದ ಮಾಡಿಕೊಂಡು ಅವನ ಸಹಾಯ ತೆಗೆದುಕೊಳ್ಳುವದನ್ನು ನಿರ್ಧರಿಸಿದರು. ಸಾವಂತ ನಾದರೂ ಆಂಗ್ರೆಯಂತೆ ಸಮುದ್ರ ಯುದ್ಧದಲ್ಲಿ ನಿಷ್ಣಾತನಿದ್ದನು. ೧೭೨೮ರಲ್ಲಿ

ಕಾನ್ಹೋಜಿಯು ಮಾಡಿದನು. ಅದಕ್ಕಿಂತ ಮೊದಲು ಅಂಗ್ರೆಯೊಡನೆ ಸ್ನೇಹ ಬಳಸಿ ಕಾರ್ಯಭಾಗವನ್ನು ಸಾಧಿಸಬೇಕೆಂದು ಮುಂಬಯಿಯ ಚತುರನಾದ ಗವ್ಹರ್ನರನು ಯೋಚಿಸಿ, ಅವನ ಮನವೊಲಿಸುವ ಪ್ರಯತ್ನ ಮಾಡಿದನು. ಆಗ ಕಾನ್ಹೋಜಿಯು ಕೊಟ್ಟ ಉತ್ತರವನ್ನು ನೋಡಿದರೆ ಅವನು ವ್ಯವಹಾರ ಚತುರನೂ ಧೂರ್ತನೂ ಇದ್ದನೆಂದು ವ್ಯಕ್ತವಾಗುವದು. ಮುಂಬಯಿಯ ಗವ್ಹರ್ನರನು ತನ್ನ ಪತ್ರದಲ್ಲಿ ಬರೆದದ್ದೇನಂದರೆ:—"ನಮ್ಮ-ನಿಮ್ಮಲ್ಲಿ ಸೌಖ್ಯವಿಲ್ಲವೆಂಬುದಕ್ಕೆ ಕಾರಣರು ನೀವೇ. ನೀವು ಇತರರ ಒಡವೆಗಳನ್ನು ತೆಗೆದುಕೊಳ್ಳಲಿಚ್ಛಿಸುವದು ಅವಿಚಾರದ ಸಂಗತಿಯು. ಈ ಪ್ರಕಾರದ ಅಪರಾಧಗಳೆಂದರೆ, ಒಂದು ಬಗೆಯ ಸುಲಿಗೆಗಾರಿಕೆಯೇ ಸರಿ. ಈ ರೀತಿಯ ನಿಮ್ಮ ವರ್ತನವು ಬಹಳ ದಿವಸ ನಡೆಯುವದಿಲ್ಲ. ನೀವು ಮೊದಲಿನಿಂದ ವ್ಯಾಪಾರವನ್ನು ಬೆಳೆಯುಸಿದ್ದರೆ ಮತ್ತು ವ್ಯಾಪಾರಿಗಳ ಮೇಲೆ ಕೃಪಾದೃಷ್ಟಿಯನ್ನಿರಿಸಿದ್ದರೆ, ನಿಮ್ಮ ವಶದೊಳಗಿನ ಬಂದರಗಳು ಇಂದಿನ ಮಿತಿಗೆ ಪರಮೇಶ್ವರನ ಕೃಪೆಯಿಂದ ಉನ್ನತಾವಸ್ಥೆ ಹೊಂದಿ ಸುರತದೊಡನೆ ಸ್ಪರ್ಧೆ ಮಾಡುತ್ತಿದ್ದವು; ಹಾಗು ನಿಮ್ಮ ಲೌಕಿಕವು ಎಲ್ಲ ಕಡೆಗೂ ಹಬ್ಬುತ್ತಿತ್ತು. ಸರಳ ರೀತಿಯಿಂದ ವ್ಯಾಪಾರ ವೃದ್ಧಿ ಮಾಡಿದ ಹೊರತು ಈ ಕೆಲಸವಾಗುವದಿಲ್ಲ." ಎಂದು ಬರೆದು, ಒಡಂಬಡಿಕೆ ಮಾಡಿಕೊಳ್ಳಬೇಕೆಂಬ ತನ್ನ ಮನೋದಯವನ್ನು ವ್ಯಕ್ತಪಡಿಸಿದ್ದನು. ಕಾನ್ಹೋಜಿಯು ಆ ಪತ್ರಕ್ಕೆ ಒಳ್ಳೇ ಚಾತುರ್ಯದಿಂದ ಉತ್ತರ ಕೊಟ್ಟನು. ಅವನು ಬರೆದದ್ದೇನಂದರೆ:—"ನೀವು ಬರೆದದ್ದೆಲ್ಲ ಪ್ರಶಂಸನೀಯವು. ನಮ್ಮ-ನಿಮ್ಮೊಳಗಿನ ಭೇದಭಾವದ ಹಾಗು ವ್ಯಾಜ್ಯದ ಕಾರಣನು ನಾನಿರುವೆನೆಂದು ನಿಮ್ಮ ಮತವಿದೆ; ಆದರೆ ನೀವು ಎಂಡೂಕಡೆಯಿಂದ ವಿಚಾರ ಮಾಡಿದರೆ ಅದರಲ್ಲಿಯ ಸತ್ಯವು ನಿಮಗೆ ತಿಳಿಯುವದು. ಎರಡನೆಯವರ ಐಶ್ವರ್ಯವನ್ನು ಅಪಹರಿಸುವ ಇಚ್ಛೆಯು ನನ್ನಲ್ಲಿರುವದೆಂದು ನೀವು ಅನ್ನುತ್ತೀರಿ; ಆದರೆ ನಿಮ್ಮಂಥ ವ್ಯಾಪಾರಿಗಳು ಅಂಥ ಮಹತ್ವಾಕಾಂಕ್ಷೆಯಿಂದ ಅಲಿಪ್ತರಿರುವಿರೆಂದು ನನಗೆ ತೋರುವುದಿಲ್ಲ. ಯಾಕಂದರೆ, ಎಲ್ಲ ಜಗತ್ತಿನದೂ ಒಂದೇ ಮಾರ್ಗವದೆ. ಈಶ್ವರನು ತಾನಾಗಿ ಬಂದು ಯಾರಿಗೂ ಏನೂ ಕೊಡುತ್ತಿರುವದಿಲ್ಲ! ಅವನ ಸಂಪತ್ತು ಇವನಿಗೆ, ಇವನ ಸಂಪತ್ತು ಅವನಿಗೆ ಹೀಗೆಯೇ ದೊರೆಯುತ್ತಿರುತ್ತದ. ನಮ್ಮ ರಾಜ್ಯವು ಅತ್ಯಾಚಾರ, ಬಲಾತ್ಕಾರ, ಸುಲಿಗೆ ಮೊದಲಾದವುಗಳಿಂದ ನಡೆದಿರುವದಂದು ನುಡಿಯುವದು ನಿಮ್ಮಂಥ ವ್ಯಾಪಾರೀ ಜನರಿಗೆ ಶೋಭಿಸುವದಿಲ್ಲ. ಶಿವಾಜಿ ಮಹಾರಾಜರು ನಾಲ್ಕು ಮಂದಿ ಬಾದಶಹರೊಡನೆ ಯುದ್ಧ ಮಾಡಿದರು; ಮತ್ತು ಸ್ವಪರಾಕ್ರಮದಿಂದ ಸ್ವರಾಜ್ಯ ಸ್ಥಾಪನೆ ಮಾಡಿದರು. ಇದರಂತೆಯೇ ನಮ್ಮ ಅಧಿಕಾರವು ಪ್ರಾರಂಭವಾಗಿದೆ. ಇದೇ ಸಾಧನದ ಯೋಗದಿಂದ ನಮ್ಮ ರಾಜ್ಯವು ಸ್ಥಿರವಾಗಿದೆಯೆಂಬದು ನಿಮಗೆ ತಿಳದೇ ಇರುವದು. ಇದು ಚಿರಕಾಲಿಕವಿರುವದೋ ಇಲ್ಲವೋ ಎಂಬದನ್ನು ನೀವೇ ವಿಚಾರಿಸಿರಿ. ಜಗತ್ತಿನಲ್ಲಿ ಚಿರಕಾಲಿಕವೆಂಬದು ಯಾವುದೂ ಇಲ್ಲ. ಜಗತ್ತಿನ ಕ್ರಮವು ಎಲ್ಲರಿಗೂ ಸರಿಯಾಗಿ

ಯೇ ಗೊತ್ತಿದೆ."

ಕಾನ್ಹೋಜಿ ಆಂಗ್ರೆಯು ಮರಣ ಹೊಂದಿದ ಮೇಲೆ ಅವನ ಮನೆತನದಲ್ಲಿ ಗೃಹಕಲಹದ ಬೀಜಾರೋಪಣವಾಯಿತು. ಆದ್ದರಿಂದ ಸಮುದ್ರದ ದಂಡೆಯಲ್ಲಿ ಸ್ವಸತ್ತೆಯನ್ನು ಸ್ಥಾಪಿಸಬೇಕೆನ್ನುವ ಪರಕೀಯರಿಗೆ ತಮ್ಮ ಮನೋದಯವನ್ನು ಈಡೇರಿಸಿಕೊಳ್ಳಲಿಕ್ಕೆ ಅನಾಯಾಸವಾಗಿ ಸಂಧಿ ದೊರೆಯಿತು. ಕಾನ್ಹೋಜಿಯ ಮಕ್ಕಳಾದ ಮಾನಾಜಿ ಸಂಭಾಜಿ ಇವರಲ್ಲಿ ಜಗಳವು ನಡೆದು ತಮ್ಮ ತಮ್ಮೊಳಗೆ ಯುದ್ಧ ಮಾಡಿದರು. ಆ ಸಂಗ್ರಾಮಗಳಲ್ಲಿ ಸ್ವೋತ್ಕರ್ಷ ಸ್ವಾರ್ಥೇಚ್ಛೆಗಳ ಹೊರತು ರಾಷ್ಟ್ರಹಿತದ ಉಚ್ಚವೂ ಉದಾತ್ತವೂ ಆದ ವಿಚಾರಗಳಿದ್ದಿಲ್ಲ. ಅವರ ದಾಯಾದಿತನಕ್ಕೆ ಪೇಶವೆಯವರಾದರೂ ಅಡ್ಡಿ ಮಾಡಬೇಕಾಗಿತ್ತು; ಆದರೆ ಅವರಲ್ಲಿಯೂ ಸ್ವಾರ್ಥಬುದ್ಧಿಯೇ ವಾಸವಾಗಿದ್ದುದರಿಂದ ರಾಷ್ಟ್ರಕಲ್ಯಾಣವು ಒತ್ತಟ್ಟಿಗುಳಿದು, ಪೇಶವೆಯವರು ಆಂಗ್ರೆಯ ಪ್ರಾಂತಗಳನ್ನು ಕೈವಶ ಮಾಡಿಕೊಳ್ಳುವ ಕ್ರಮವನ್ನು ಆರಂಭಿಸಿದರು.

ಆಂಗ್ರೆಯವರಲ್ಲಿ ಜಗಳವಿದ್ದರೂ, ಅವರ ಹಡಗುಪಡೆಯು ತನ್ನ ವರ್ಚಸ್ವವನ್ನು ಪರಕೀಯರ ಮೇಲೆ ಚನ್ನಾಗಿ ಕುಳ್ಳಿರಿಸಿತ್ತು. ಮಾನಾಜಿಯು ಇಂಗ್ಲಿಷರ ಹಾಗು ಹಬಶಿಯರ ಹಡಗುಪಡೆಯೊಡನೆ ಎಷ್ಟೋ ವೇಳೆ ಯುದ್ಧಪ್ರಸಂಗ ಮಾಡಿ ಮುಂಬಯಿ ಬಂದರದವರೆಗೆ ತನ್ನ ಹಡಗುಪಡೆಯನ್ನು ಮುಟ್ಟಿಸಿದ್ದನು. ಸಂಭಾಜಿಯು ಇಂಗ್ಲಿಷ ಫಿರಂಗಿಗಳ ಮತ್ತು ಇತರ ಶತ್ರುಗಳ ಕೂಡ ಅನೇಕ ಸಾರೆ ಸಮುದ್ರಯುದ್ಧಮಾಡಿ ಅವರನ್ನು ಹಣ್ಣುಮಾಡಿದನು. ಮೊದಲು ಮರಾಟರ ಹಡಗುಪಡೆಯಲ್ಲಿ ೩೦೦ಟನ್ನು ತೂಕದ ಹಡಗಗಳಿದ್ದವು; ಆದರೆ ಸಂಭಾಜಿಯು ೪೦೦ ಟನ್ನುಗಳ ತೂಕದ ಹಡಗ ಮಾಡಿಸಿದನು. ಅವನಲ್ಲಿ ೪೦೦ಟನ್ನಿನ ಎಂಟು ಹಡಗಗಳಿದ್ದವು. ಅವನು ೧೭೪೨ರಲ್ಲಿ ಮೃತಿಹೊಂದಿದನು. ಅವನ ಹಿಂದಿನಿಂದ ಅವನ ತಮ್ಮನಾದ ತುಳಾಜಿ ಆಂಗ್ರೆಯು ಸುವರ್ಣದುರ್ಗದ ಹಡಗುಪಡೆಯ ಸುಭೇದಾರನಾದನು. ಅವನು ಸಮುದ್ರದಲ್ಲಿ ಭಯಂಕರ ಪ್ರಳಯ ಮಾಡಿ ಇಂಗ್ಲಿಷರಿಗೆ ತೊಂದರೆ ಕೊಟ್ಟನು; ಹಾಗು ಪೇಶವೆಯವರೊಡನೆಯೂ ಅವನು ವೈಮನಸ್ಸನ್ನುಂಟು ಮಾಡಿಕೊಂಡನು. ಆಗ ಎಲ್ಲರೂ ಕೂಡಿ ೧೭೫೬ರಲ್ಲಿ ವಿಜಯದುರ್ಗದ ಮೇಲೆ ದಾಳಿ ಮಾಡಿ ಅವನ ಹಾಗು ಅವನ ಪ್ರಬಲ ಹಡಗುಪಡೆಯ ನಾಶಮಾಡಿ, ಸಮುದ್ರದ ಮೇಲಿನ ಆಂಗ್ರೆಯವರ ಅಧಿಕಾರವನ್ನು ನಷ್ಟಪಡಿಸಿದರು.

ಕಾನ್ಹೋಜಿಯ ಹಾಗು ಅವನ ವಂಶಜರ ಸಲುವಾಗಿ ಡಗಲಸ ಸಾಹೇಬರು ವರ್ಣನೆ ಮಾಡಿರುವದೇನಂದರೆ:—"ಹಿಂದೀ ಮಹಾಸಾಗರದೊಳಗಿನ ಮೂರೂ ಯುರೋಪಿಯನ್ ರಾಷ್ಟ್ರಗಳನ್ನು (ಇಂಗ್ಲಿಷ ಫಿರಂಗಿ ವಲಂದೇಜ) ಪರಾಕ್ರಮದ ಕೆಲಸದಲ್ಲಿ ಆಂಗ್ರೆಯರು ಕೆಳಗೆ ಮೋರೆ ಮಾಡಿಸಿದರು; ಅವರನ್ನು ಸರಿಗಟ್ಟಲು ಯಾರೂ ಸಮರ್ಥರೆನಿಸಲಿಲ್ಲ." ಹೀಗೆ ಮುಕ್ತ ಕಂಠದಿಂದ ಉದ್ಗಾರ ತೆಗೆದಿರುವನು.

೧೭೫೬ರಲ್ಲಿ ತುಳಾಜಿ ಆಂಗ್ರೆಯು ಸೆರೆ ಸಿಕ್ಕಮೇಲೆ ಪೇಶವೆಯವರು ಅವನ

ಹಡಗಗಳೊಳಗಿನ ಕೆಲವು ಹಡಗಗಳನ್ನು ತಮ್ಮ ಉಪಯೋಗಕ್ಕೆ ತೆಗೆದುಕೊಂಡು, ವಿಜಯದುರ್ಗವನ್ನು ಮರಾಟರ ಹಡಗುಪಡೆಯ ಮುಖ್ಯಸ್ಥಳವನ್ನಾಗಿ ಮಾಡಿದರು. ವಿಜಯದುರ್ಗವು ನೀರಿನೊಳಗಿನ ಕೋಟೆಯಾಗಿದ್ದು ಭದ್ರವೂ, ಹಡಗುಪಡೆಗೆ ಅನುಕೂಲವೂ ಆದ ಸ್ಥಳವಾಗಿತ್ತು. ಅದರ ನೈಸರ್ಗಿಕ ರಚನೆ, ಮರಾಟರು ಕಟ್ಟಿದ ಅಜಸ್ರ ಕೆಲಸ ಇವುಗಳ ಯೋಗದಿಂದ ಅದಕ್ಕೆ ಒಳ್ಳೆಯ ಮಹತ್ವವು ಪ್ರಾಪ್ತವಾಗಿತ್ತು.

ವಿಜಯದುರ್ಗದ ಹಡಗುಪಡೆಯಲ್ಲಿ ಎರಡು ಮೂರು ಸಾವಿರ ಯೋಧರಿದ್ದರು ಎಲ್ಲವುಗಳಿಗಿಂತ ದೊಡ್ಡದಾದ ಫತ್ತೇಜಂಗ ಹಡಗದಲ್ಲಿ ೨೧೬ ಸೈನಿಕರು, ೨೬ ಗೋಲಂದಾಜರು, ೧೩೨ ದರ್ಯಾವರ್ದಿಗಳು ಹೀಗೆ ಒಟ್ಟು ೩೭೪ ಜನರಿದ್ದರು. ತೀರ ಸಣ್ಣ ನೌಕೆಯಾದ ವಾವಡಿಯಲ್ಲಿ ೧೫ ಜನರು ಇರುತ್ತಿದ್ದರು. ಯುದ್ಧದ ಹಡಗುಪಡೆಯಲ್ಲಿ ಯುದ್ಧ ಸಾಮುಗ್ರಿಗಳು ಚನ್ನಾಗಿರುತ್ತಿದ್ದವು. ೧೭೮೩ ರಿಂದ ೧೭೮೬ ವರೆಗೆ ಹಡಗುಪಡೆಯಲ್ಲಿದ್ದ ಯುದ್ಧದ ತೋಫುಗಳು; ಸಣ್ಣದೊಡ್ಡವು ಕೂಡಿ ೨೭೫ ವರೆಗೆ ಇದ್ದವು. ಆ ವೇಳೆಯಲ್ಲಿ ನಾರಾಯಣಪಾಲವೆಂಬ ದೊಡ್ಡ ನೌಕೆಯಿತ್ತು. ಅದರ ಮೇಲೆ ೨೮ ತೋಫುಗಳೂ ೪ ಜಂಬುರಗಳೂ ಕೂಡಿ ೩೨ ಸರಕುಗಳಿದ್ದವು.

ಈ ಹಡಗುಪಡೆಯ ಮೇಲೆ ಒಬ್ಬ ಮುಖ್ಯ ಅಧಿಕಾರಿಯಿರುತ್ತಿದ್ದನು. ಅವನಿಗೆ 'ಸುಭೇದಾರ ನಿಸಬತ ಸುಭಾ ಆರಮಾರ' ಎಂಬ ಸಂಜ್ಞೆಯಿತ್ತು. ಈ ಹಡಗುಪಡೆಯ ಅಧಿಪತ್ಯವಿದ್ದವರಲ್ಲಿ ಆನಂದರಾವ ಧುಳಪನು ಸಮುದ್ರ ಯುದ್ಧದಲ್ಲಿ ನಾಮಾಂಕಿತನಾಗಿ ಹೋದನು. ಆನಂದರಾವ ಧುಳಪನೂ ಅವನ ಬಂಧುಗಳೂ ಮರಾಟರ ಹಡಗುಪಡೆಯಲ್ಲಿ ಪರಾಕ್ರಮದ ಎಷ್ಟೋ ಕೆಲಸ ಮಾಡಿದರು. ಅವುಗಳಲ್ಲಿ ೧೭೮೩ ರಲ್ಲಿ ಇಂಗ್ಲಿಷರ ಹಡಗುಪಡೆಗೂ ಧುಳಪನ ಹಡಗುಪಡೆಗೂ ನಿಕರದ ಯುದ್ಧವಾಗಿ ಅದರಲ್ಲಿ ಉಭಯ ಯೋಧರ ಪರಾಕ್ರಮವೂ ಚನ್ನಾಗಿ ವ್ಯಕ್ತವಾಯಿತು. ಆ ವೇಳೆಯ ಯುದ್ಧಪ್ರಸಂಗದ ಒಂದು ಪತ್ರವು ಉಪಲಬ್ಧವಿದೆ. ಅದನ್ನು ನೋಡಿದರೆ ಮರಾಟರ ಹಡಗುಪಡೆಯ ನಿಜವಾದ ಸ್ವರೂಪವು ಗೊತ್ತಾಗುವದು. ಯುದ್ಧದ ಪ್ರಸಂಗವನ್ನು ಧುಳಪನು ಪೇಶವೇ ಸರಕಾರಕ್ಕೆ ತಿಳಿಸಿದ ಮೇಲೆ, ಶ್ರೀಮಂತ ಮಾಧವರಾವ ಪೇಶವೆಯಿಂದ ಅವನಿಗೆ ಒಂದು ಉತ್ತರವು ಬರೆಯಲ್ಪಟ್ಟಿದೆ. ಅದರಲ್ಲಿ ಪೇಶವೆಯು ಧುಳಪನ ಶೌರ್ಯ ಸಾಹಸಗಳ ಬಗ್ಗೆ ಧನ್ಯೋದ್ಗಾರ ತೆಗೆದು, ಅವನಿಗೆ ಹಾಗು ಅವನ ಜನರಿಗೆ ಪಾರಿತೋಷಕ ಕೊಟ್ಟು ಸಂಭಾವನೆ ಮಾಡಿದ ಬಗ್ಗೆ ಉಲ್ಲೇಖವಿದೆ.

ಧುಳಪನಂತೆ ವಿಚಾರೇ ಸುರ್ವೆ ಕುವೇಸಕರ ಜಾವಕರ ಮೊದಲಾದ ಅನೇಕ ಸರದಾರರು ಸಮುದ್ರ ಯುದ್ಧದಲ್ಲಿ ಒಳ್ಳೇ ನಾಮಾಂಕಿತರಿದ್ದು, ಮರಾಟರ ಹಡಗುಪಡೆಯಲ್ಲಿ ಹೆಚ್ಚಿನ ಪರಾಕ್ರಮ ತೋರಿಸಿದರು. ಪೇಶವೆಯು ಹಡಗುಪಡೆಯ ಸುಭೆಯಲ್ಲಿ ದಿವಾಣವೀಸ ಮುಜುಮದಾರ ಹಶಮನೀಸ ಮೊದಲಾದ ಅಧಿಕಾರಿಗಳನ್ನು ನಿಯಮಿಸಿದ್ದನು. ಈ ಎಲ್ಲರ ವೇತನಗಳು ನಿಶ್ಚಿತವಿರುತ್ತಿದ್ದವು. ಹೊಸ ನೌಕೆ

ಗಳನ್ನು ಕಟ್ಟುವ ವೆಚ್ಚವು ಹತ್ತರಿಂದ ನಾಲ್ವತ್ತು ಸಾವಿರದವರೆಗಿದ್ದು, ಸರಿಪಡಿಸುವ ವೆಚ್ಚವು ಐದರಿಂದ ಹತ್ತು ಸಾವಿರ ರೂಪಾಯಿಗಳ ವರೆಗೆ ಇರುತ್ತಿತ್ತು. ರತ್ನಾಗಿರಿ-ಅಂಜನವೇಲಗಳಲ್ಲಿ ಹಡಗಗಳ ಸರಕಾರಿ ಹಾಗು ಸ್ವತಂತ್ರ ಕಾರ್ಯಾಲಯಗಳಿದ್ದವು. ಮರಾಟರ ಹಡಗುಪಡೆಯ ವೆಚ್ಚವು ಪ್ರತಿವರ್ಷ ಒಂದೂವರೆಯಿಂದ ಎರಡುಲಕ್ಷಗಳ ವರೆಗೆ ಇತ್ತು. ಹಡಗುಪಡೆಯ ಸುಭೆಯ ಕಡೆಗೆ ಒಂದು ಸ್ವತಂತ್ರ ಪ್ರಾಂತವು ಕೊಡಲ್ಪಟ್ಟಿತ್ತು. ಇದರ ಹೊರತು ಸರಕಾರದಿಂದ ಹಣವು ಚನ್ನಾಗಿ ದೊರೆಯುತ್ತಿತ್ತು. ಪರರಾಷ್ಟ್ರೀಯ ವ್ಯಾಪಾರೀ ಹಡಗಗಳ ಮೇಲೆ ಸುಂಕವಿರುತ್ತಿತ್ತು. ಅಲ್ಲದೆ ವ್ಯಾಪಾರಕ್ಕಾಗಿ ಯಾವ ಹಡಗಗಳು ಹೋಗುವವೋ, ಅವುಗಳಲ್ಲಿ ಪ್ರತಿಯೊಂದು 'ಪದಾರ್ಥ ತುಂಬಿ ಸ್ಥಳಸ್ಥಳಗಳಲ್ಲಿ ವ್ಯವಸಾಯ ಮಾಡುವದಕ್ಕಾಗಿ ಒಪ್ಪಿಗೆ ಕೊಡುವ ಬಗ್ಗೆ ಸ್ವತಂತ್ರ ತೆರಿಗೆಯು ತೆಗೆದುಕೊಳ್ಳಲ್ಪಡುತ್ತಿತ್ತು. ಈ ತೆರಿಗೆ-ಸುಂಕಗಳಿಂದ ಸರಕಾರಕ್ಕೆ ಪ್ರತಿಯೊಂದು ಹಡಗದ ಬಗ್ಗೆ ೪॥ ರೂಪಾಯಿಗಳು ದೊರೆಯುತ್ತಿದ್ದವು. ಇವುಗಳಲ್ಲದೆ "ಪೈದಾಸ" ಎಂಬ ಉತ್ಪನ್ನದ ವಿಷಯವೊಂದು ಇರುತ್ತಿತ್ತು. ಪರರಾಷ್ಟ್ರೀಯ ಸರಕಾರೀ ಹಡಗಗಳು ವ್ಯಾಪಾರದ ನಿಮಿತ್ತವಾಗಿ ಇಲ್ಲವೆ ರಾಜಕಾರಣದ ಸಲುವಾಗಿ ತೆರಿಗೆ ಕೊಡದೆ ಹೊರಟರೆ ಹಾಗು ಯುದ್ಧಪ್ರವೃತ್ತವಾದರೆ, ಅವುಗಳೊಡನೆ ಯುದ್ಧ ಮಾಡಿ ಅವುಗಳೊಳಗಿನ ಒಡವೆಗಳನ್ನು ಮರಾಟರು ಗೆಲ್ಲುತ್ತಿದ್ದರು. ಈ ಉತ್ಪನ್ನವು ದೊಡ್ಡದಿರುತ್ತಿತ್ತು. ಇದಕ್ಕೆ "ಪೈದಾಸ" ಎಂದು ಅನ್ನುತ್ತಿದ್ದರು. ಈ ಹುಟ್ಟುವಳಿಯು ಒಮ್ಮೊಮ್ಮೆ ೫೦ ಸಾವಿರದ ವರೆಗೂ ಇರುತ್ತಿತ್ತು. ವ್ಯಾಪಾರಮಾಡುವ ಸ್ವದೇಶೀಯ ಜನರಲ್ಲಿ ಪ್ರಾಮುಖ್ಯವಾಗಿ ಭಾಟೆ, ಸಾರಸ್ವತ, ಮುಸಲ್ಮಾನ ಈ ಜನರೇ ಇರುತ್ತಿದ್ದರು

ಮರಾಟರ ಹಡಗುಪಡೆಯಲ್ಲಿ ಹೋಕಾಯಂತ್ರ, ವಾಲುಕಾಯಂತ್ರ, ದುರ್ಬೀನು ಮೊದಲಾದವುಗಳಿರುತ್ತಿದ್ದವು, ಚಂದ್ರಜ್ಯೋತಿಯ ಸಹಾಯದಿಂದ ವಿದ್ಯುತ್ಪ್ರಕಾಶದ ಕೆಲಸವನ್ನು ಮಾಡಿಕೊಳ್ಳುತ್ತಿದ್ದರು. ಗುರುತಿಗಾಗಿ ಬೇರೆ ಬೇರೆ ಬಣ್ಣಗಳ ಪತಾಕೆಗಳನ್ನು ಹಡಗದ ಮೇಲೆ ಕಟ್ಟಿರುತ್ತಿದ್ದರು. ಹಡಗುಗಳ ಆಗಮನ-ಪ್ರಯಾಣಗಳನ್ನು ಈಗ ಉಗಿಯಿಂದ ಶಿಳ್ಳು ಹೊಡೆಯಿಸಿ ಸೂಚಿಸುತ್ತಿರುವಂತೆ ಆಗ ಕೋಡುಕಹಳೆಗಳಿಂದ ತಿಳಿಸುತ್ತಿದ್ದರು.

## ಮರಾಟರ ಮುಲ್ಕೀ ವ್ಯವಸ್ಥೆ.

ಪ್ರತಿಯೊಂದು ರಾಜ್ಯದಲ್ಲಿ ಸೇನಾಸಾಮರ್ಥ್ಯದ ಮರ್ಯಾದೆಯು ಮೊದಲನೆಯದಾಗಿದ್ದು, ಮುಲಕೀ ರಾಜ್ಯವ್ಯವಸ್ಥೆಯ ಮಾನವು ಎರಡನೆಯದಾಗಿದೆ. ಪರಾಕ್ರಮವು ಒಂದು ದಿವಸದ್ದಾಗಿರುತ್ತದೆ; ರಾಜ್ಯ ವ್ಯವಸ್ಥೆಯು ನಿರಂತರವಾದದ್ದಾಗಿದೆ. ಆದ್ದರಿಂದ ರಾಷ್ಟ್ರದ ದೊಡ್ಡಿಸ್ತಿಕೆಯ, ಅದರ ಸ್ಥಾಯೀಭಾವದ, ಅದರ ನೈತಿಕ ಗುಣದ ಪರೀಕ್ಷೆಯು ಅದರೊಳಗಿನ ರಾಜ್ಯವ್ಯವಸ್ಥೆಯಿಂದಾಗುವದು. ರಾಜ್ಯ ದೊರಕಿಸುವ ಗುಣಕ್ಕೆ ರಾಜ್ಯ ನಡೆಯಿಸುವ ಗುಣಗಳ ಹೊಂದಿಕೆಯಿರದಿದ್ದರೆ ರಾಜ್ಯ

ವು ಸ್ಥಿರಗೊಳ್ಳುವದಿಲ್ಲ; ಪ್ರಜೆಗಳು ಅಸಂತುಷ್ಟರಾಗುತ್ತಾರೆ; ಅರಾಜಕತೆಯುಂಟಾಗುತ್ತದೆ. ಒಂದೇ ದಿನದಲ್ಲಿ ದೊರೆತ ರಾಜ್ಯವು ಕೈಬಿಡಲಿಕ್ಕೆ ನಾಲ್ಕು ದಿನಗಳು ಹತ್ತಬಹುದು; ಆದರೆ ಅದು ಹೋಗುವದೇ ನಿಜ. ಖಡ್ಗ ಬಲದಿಂದ ರಾಜ್ಯ ಸಂಪಾದನೆಯಾಗಿದ್ದರೂ, ರಾಜ್ಯದೊಳಗಿನ ತೆರಿಗೆಯು ಎತ್ತುವಿಕೆಗೆ ಶಸ್ತ್ರದ ಉಪಯೋಗವಾಗುವದಿಲ್ಲ. ಚಲೋ ರಾಜ್ಯವ್ಯವಸ್ಥೆಯಿದ್ದರೆ ತೆರಿಗೆಯು ಕೈಸೇರುವದು. ರಾಜ್ಯ ದೊರಕಿಸಿದವನು ರಾಜನಾಗಿ ಕುಳಿತರೂ, ಆ ರಾಜನು ಸಹ ಯಾವುದೊಂದು ರಾಜ್ಯವನ್ನು ತನ್ನೊಬ್ಬನ ಸಲುವಾಗಿ ದೊರಕಿಸುತ್ತಿರುವದಿಲ್ಲ. ಅದನ್ನು ತನ್ನ ಜನರ ಸಲುವಾಗಿಯೂ ತನ್ನ ಸಮಾಜದ ಸಲುವಾಗಿಯೂ ದೊರಕಿಸಿರುತ್ತಾನೆ. ಸಮಾಜಕ್ಕೆ ರಾಜ್ಯದ ಉಪಯೋಗವು ಆ ರಾಜ್ಯದಲ್ಲಿಯ ರಾಜ್ಯಸಂಸ್ಥೆಯ ದ್ವಾರವಾಗಿ ಆಗುತ್ತದೆ. ಶಿವಾಜಿಯು ಶೂರನೂ ವೀರನೂ ಇದ್ದುದರಿಂದ ಅವನಿಗೆ ಆ ಗುಣಗಳ ಸಲುವಾಗಿ ದೊರೆಯುವ ಮಾನಕ್ಕಿಂತ ಅವನು ಸುರಾಜ್ಯ ಸಂಸ್ಥೆಯ ಸಂಸ್ಥಾಪಕನಾದುದರಿಂದ ದೊರೆಯುವ ಮಾನವು ಹೆಚ್ಚಿನದಾಗಿದೆ. ಮಹಾರಾಷ್ಟ್ರದಲ್ಲಿ ರಾಜ್ಯ ಸಂಸ್ಥೆಯ ಸ್ಥಾಪನೆಯಾದ ಮೇಲೆ ಅದನ್ನು ಪದ್ಧತಿಗೆ ಸರಿಯಾಗಿ ನಡೆಯಿಸುವ ಕೆಲಸವಾದರೂ ಜಾಣತನದ್ದೂ ಗಡಚಾದದ್ದೂ ಆಗಿತ್ತು. ಈ ಕಾರ್ಯದಲ್ಲಿ ಕ್ಷತ್ರಿಯರಿಗಿಂತ ವಿಶೇಷ ಅಧಿಕಾರವುಳ್ಳ ಹಾಗು ಪರಂಪರಾಗತ ಚಾತುರ್ಯವುಳ್ಳ ಬ್ರಾಹ್ಮಣರು ಹಾಗು ಕಾಯಸ್ಥರು ಶಿವಾಜಿಗೆ ದೊರೆತರು. ಹೀಗೆ ಶಸ್ತ್ರಕ್ಕೆ ಲೇಖನಿಯು ಜೊತೆಯಾದುದರಿಂದ ಶಿವಾಜಿಯು ದೊರಕಿಸಿದ ರಾಜ್ಯಕ್ಕೆ ಸುವ್ಯವಸ್ಥಿತ ಸ್ವರೂಪವು ಪ್ರಾಪ್ತವಾಯಿತು; ಹಾಗು ನೂರಿನ್ನೂರು ವರ್ಷಗಳಾದರೂ ಅದು ಸ್ಥಿರಗೊಳ್ಳಲಿಕ್ಕೆ ಸಮರ್ಥವಾಯಿತು. ಮರಾಟರಲ್ಲಿಯ ಕ್ಷಾತ್ರತೇಜವೂ ಬ್ರಾಹ್ಮಣ-ಕಾಯಸ್ಥರಲ್ಲಿಯ ಸುವ್ಯವಸ್ಥಿತತನವೂ ಬರಬರುತ್ತ ಕುಂದುತ್ತ ನಡೆದು, ಸ್ವಾರ್ಥಪರಾಯಣತೆಯು ಈ ಎರಡನ್ನೂ ನಷ್ಟ ಪಡಿಸಿತು. ಮರಾಟರಿಗಿಂತ ಹೆಚ್ಚಿನ ಸುವ್ಯವಸ್ಥೆಯ ಭೋಕ್ತಾರರೂ ಸೇನಾಸಾಮರ್ಥ್ಯದಿಂದ ಬಲಿಷ್ಠರೂ ಆದ ಇಂಗ್ಲಿಷರು ಮರಾಟರಿಗೆ ಗಂಟು ಬಿದ್ದ ಮೇಲೆ ಅವರು ಪರಾಜಯ ಹೊಂದಿ ರಾಜ್ಯವನ್ನು ಕಳೆದುಕೊಂಡರೆಂಬ ಮಾತು ಬೇರೆ; ಆದರೂ ಈ ಸಂಗತಿಯು ಘಟಿಸುವ ವರೆಗೆ ಮರಾಟರು ತಮ್ಮ ರಾಜ್ಯ ಸಂಸ್ಥೆಯನ್ನು ಸಾಗಿಸುವದರಲ್ಲಿ ಜಾಣತನವನ್ನು ಪ್ರಕಟಿಸಿದರೆಂಬ ಮಾತು ನಿರ್ವಿವಾದವು. ಮನುಷ್ಯನು ಮೃತ್ಯುವಶನಿದ್ದುದರಿಂದ, ಯಾವಾಗಲಾದರೂ ರೋಗವು ಪ್ರಬಲವಾಗಿ ಅವನು ಸಾಯತಕ್ಕವನೇ; ಆದರೆ ಅವನು ಸತ್ತನೆಂದು ಮರಣಕ್ಕಿಂತ ಮೊದಲು ತೇಜಸ್ವಿಯೂ ಸಾಮರ್ಥ್ಯಸಂಪನ್ನನೂ ಇದ್ದಿಲ್ಲವೆಂದು ಹೇಳಲಾಗುವದಿಲ್ಲ. ಹಳೆಯ ಮರಾಟಶಾಹಿಯು ನಷ್ಟವಾಗಿರುವದೆಂಬ ಮಾತು ನಮಗೆ ಮಾನ್ಯವಾಗಿರುವದೆಂಬದನ್ನು ಹೇಳಲಿಕ್ಕೆ ಬೇಡ; ಆದರೆ ಮೃತ ಮನುಷ್ಯನ ಪಿಂಡಪ್ರದಾನ ಮಾಡಿ ತಿಲಾಂಜಲಿ ಕೊಡುವಾಗ, ಭೂತಕಾಲೀನ ವ್ಯಕ್ತಿಯ ಗುಣಗಳ ಸ್ಮರಣೆಯಾದರೆ ಇಲ್ಲವೆ ಗುಣಗಾನ ಮಾಡಿದರೆ ವಿಸಂಗತವಾಗುವ

ಹೆಂದು ಯಾರೂ ಅನ್ನಲಾರರು. ಸರ ಆಲಫ್ರೇಡ ಲಾಯಲನು ಅನ್ನುವದೇನಂದರೆ, "ಮರಾಟರ ಸೈನ್ಯವು ಸುಲಿಗೆಗಾರಿಕೆಯುದಿರಬಹುದು, ಮರಾಟ ಸರದಾರರು ಹುಂಬರೂ ಅಶಿಕ್ಷಿತರೂ ಇರಬಹುದು; ಆದರೆ ಮರಾಟ ರಾಜ್ಯದ ಮುಲಕೀ ವ್ಯವಸ್ಥೆಯು ಬ್ರಾಹ್ಮಣರ ಕೈಯಲ್ಲಿತ್ತು. ಅವರು ಆ ಕಾಲದ ಎಲ್ಲ ಜನರಲ್ಲಿ ಅತ್ಯಂತ ಜಾಣರೂ ಕರ್ತೃತ್ವಶಾಲಿಗಳೂ ಆಗಿದ್ದರು."

## ಮರಾಟರ ರಾಜ್ಯವಿಸ್ತಾರ.

ಶಿವಾಜಿಯು ಕಾಲಕ್ಕಿಂತ ಎರಡನೆಯ ಬಾಜೀರಾಯನ ವೇಳೆಯಲ್ಲಿ ಮರಾಟರ ರಾಜ್ಯ ವಿಸ್ತಾರವು ಎಷ್ಟೋ ಪಟ್ಟು ಹೆಚ್ಚಿಗಿತ್ತು. ಶಿವಾಜಿಯ ವಶದಲ್ಲಿ ಕೆಳಗಿನ ಪ್ರಾಂತಗಳಿದ್ದವು. (೧) ಮಾಳವ ಮತ್ತು ಅದರೊಳಗಿನ ೧೮ ಕೋಟೆಗಳು, (೨) ವಾಯಿ-ಸಾತಾರೆ ಪ್ರಾಂತ ಅದರೊಳಗಿನ ೧೫ ಕೋಟೆಗಳು, (೩) ಪನ್ಹಾಳ ಪ್ರಾಂತ ಮತ್ತು ೧೩ ಕೋಟೆಗಳು, (೪) ದಕ್ಷಿಣ ಕೊಂಕಣ ಮತ್ತು ೫೮ ಕೋಟೆಗಳು, (೫) ಠಾಣೆ ಪ್ರಾಂತ ಮತ್ತು ೧೩ ಕೋಟೆಗಳು (೬) ತ್ರ್ಯಂಬಕ ಮತ್ತು ಬಾಗಲಾಣ ಪ್ರಾಂತ ಮತ್ತು ೬೨ ಕೋಟೆಗಳು, (೭) ವನಗಡ ಅಥವಾ ಧಾರವಾಡ ಪ್ರಾಂತ ೨೨ ಕೋಟೆಗಳು, (೮) ಬಿದನೂರಪ್ರಾಂತ (೯) ಕೊಲ್ಹಾಪುರಪ್ರಾಂತ (೧೦) ಶ್ರೀರಂಗಪಟ್ಟಣ(ಈ ಮೂರೂ ಪ್ರಾಂತಗಳಲ್ಲಿರುವ ಕೋಟೆಗಳು), (೧೧) ಕರ್ನಾಟಕ ಪ್ರಾಂತ ೧೨ ಕೋಟೆಗಳು, (೧೨) ವೇಲೂರ ಪ್ರಾಂತ ಮತ್ತು ೨೫ ಕೋಟೆಗಳು, (೧೩) ತಂಜಾವರಪ್ರಾಂತ ಮತ್ತು ೬ ಕೋಟೆಗಳು. ಇದರ ಮೇಲಿಂದ ಶಿವಾಜಿಯ ರಾಜ್ಯವು ಉತ್ತರಕ್ಕಿಂತ ದಕ್ಷಿಣದಲ್ಲಿ ಹೆಚ್ಚಿಗೆ ಪಸರಿಸಿದ್ದು ವ್ಯಕ್ತವಾಗುವದು. ಅವನ ರಾಜ್ಯದ ಪಶ್ಚಿಮ ಮೇರೆಯು ಅರಬೀ ಸಮುದ್ರ, ಉತ್ತರಮೇರೆ ಗೋದಾವರಿ, ಪೂರ್ವಮೇರೆಯು ಭೀಮಾನದಿ, ದಕ್ಷಿಣಮೇರೆ ಕಾವೇರಿ ಹೀಗೆ ಸ್ಥೂಲ ಮಾನದಿಂದ ಹೇಳಬಹುದು ಶಿವಾಜಿಯ ತರುವಾಯ ಮರಾಟರ ರಾಜ್ಯವು ದಕ್ಷಿಣಕ್ಕೆ ಬಹಳ ಬೆಳೆಯಲಿಲ್ಲ, ಇಷ್ಟೇ ಅಲ್ಲ; ಕಾಲಾಂತರದಿಂದ ಹೈದರ ಟೀಪೂ ಇಂಗ್ಲಿಷ ಮೊದಲಾದವರು ಪ್ರಬಲರಾದ ಮೇಲೆ ಅತ್ತ ಕಡೆಯ ರಾಜ್ಯವು ಸ್ವಲ್ಪ ಹಿಮ್ಮೆಟ್ಟಿತೆಂದೆನ್ನಬಹುದು; ಆದರೆ ಮುಂದಿನ ಕಾಲದಲ್ಲಿ ಪೂರ್ವಕ್ಕೂ ಉತ್ತರಕ್ಕೂ ರಾಜ್ಯವಿಸ್ತಾರವಾಯಿತು. ಅದರಲ್ಲಿ ಪೂರ್ವದಿಶೆಯಲ್ಲಿ ನಿಜಾಮನ ರಾಜ್ಯವು ಅದರ ವಿಸ್ತಾರವನ್ನು ಕುಂಠಿತಗೊಳಿಸಿತು; ಆದರೆ ಉತ್ತರಕ್ಕೆ ಪಂಜಾಬದ ವರೆಗೆ ರಾಜ್ಯವಿಸ್ತಾರವಾಯಿತು. ಉತ್ತರಹಿಂದುಸ್ಥಾನದಲ್ಲಿ ಈ ರಾಜ್ಯವು ಪೂರ್ವಕ್ಕೆ ಬಂಗಾಲದ ವರೆಗೂ ಪಶ್ಚಿಮಕ್ಕೆ ರಾಜಸ್ಥಾನದ ವರೆಗೂ ಪಸರಿಸಿತು.

ದಿಲ್ಲಿಯು ಮರಾಟರ ಕೈಯೊಳಗಿಂದ ಇಂಗ್ಲಿಷರ ಕೈಗೆ ಹೋಗುವವರೆಗೆ ಮರಾಟರ ಹಾಗು ಮೊಗಲರ ಸೀಮೆಗಳು ಹೊಂದುಗೂಡಿ ಹೋಗಿದ್ದವು. ಸ್ವರಾಜ್ಯದ ಸೀಮೆ, ಜಹಾಗೀರಿಯ ಸೀಮೆ, ಚೌಥಾಯಿ ಸರದೇಶಮುಖಿಗಳನ್ನೆತ್ತುವ ಸೀಮೆ, ವಿನೋದಕ್ಕೆ ಹೇಳುವದಾದರೆ ಕುದುರೆಯನ್ನು ಓಡಿಸಿ ಸುಲಿಗೆ ಮಾಡುವ ಸೀಮೆ

ಹೀಗೆ ಅನೇಕ ರೀತಿಯಿಂದ ಉತ್ತರದಲ್ಲಿ ಬಹಳೇ ಪ್ರಾಂತಗಳು ಮರಾಟರ ವಶದಲ್ಲಿದ್ದವು. ಮೊಗಲರ ಸೇನಾಪತಿ ಅಥವಾ ಕಮಾವೀಸದಾರ ಎಂಬ ಅಧಿಕಾರದಿಂದ ಉತ್ತರಹಿಂದುಸ್ತಾನದೊಳಗಿನ ಅನೇಕ ರಾಜ-ಮಹಾರಾಜರೊಡನೆ ಮರಾಟರ ರಾಜಕೀಯ ಸಂಬಂಧವು ಉತ್ಪನ್ನವಾಗಿತ್ತು. ಮೊಗಲರ ಹಾಗು ಮರಾಟರ ರಾಜ್ಯದಲ್ಲಿ ಒಟ್ಟು ೨೧ ಸುಭೆಗಳಿದ್ದು ಸುಮಾರು ೫೦||| ಕೋಟಿ ರೂಪಾಯಿಗಳ ಉತ್ಪನ್ನವಿತ್ತು. ಮೊಗಲಾಯಿ ದೌಲತ್ತಿನ ಉತ್ಪನ್ನವು ಸುಮಾರು ೩೩ ಕೋಟಿ ರೂಪಾಯಿಯಿತ್ತು. ೧೭೭೪ರಲ್ಲಿ ಕಂಪನಿಸರಕಾರದ ಉತ್ಪನ್ನ ಸುಮಾರು ೨|| ಕೋಟಿ ರೂಪಾಯಿ ಇತ್ತು.

ವೆಚ್ಚದ ವಿಷಯದಲ್ಲಿ ಸೈನ್ಯದ ವಿಷಯವು ದೊಡ್ಡದಾಗಿತ್ತು. ೧೭೭೪ರಲ್ಲಿ ಕಂಪನಿಯವರ ಕೈಯಲ್ಲಿ ೫೩ ಸಾವಿರ ಸೈನ್ಯವಿತ್ತು. ಅದರಲ್ಲಿ ೪೦ ಸಾವಿರ ಏತದ್ದೇಶಿಯ ಸೈನಿಕರಿದ್ದರು. ಈ ವೇಳೆಯಲ್ಲಿ ಕಂಪನಿ ಸರಕಾರದ ಕೈಯಲ್ಲಿ ಈ ದೇಶದಲ್ಲಿಯೂ ಇಂಗ್ಲಂಡದಲ್ಲಿಯೂ ಕೂಡಿ ೭೦-೭೧ ಸಾವಿರ ಟನ್ನು ತೂಕದ ೮೫ ಹಡಗುಗಳಿದ್ದವು. ಆಗ ಕಂಪನಿಯವರ ವ್ಯಾಪಾರವಾದರೂ ದೊಡ್ಡದಾಗಿತ್ತು. ಕಂಪನಿಯು ಪ್ರತಿವರ್ಷ ೭೫-೭೭ ಲಕ್ಷದ ವಸ್ತು-ಒಡವೆ, ಬಂಗಾರ-ಬೆಳ್ಳಿಗಳನ್ನು ಹೊರಗೆ ಕಳಿಸುತ್ತಿದ್ದು, ಹೊರಗಿಂದ ೧|| ಕೋಟಿ ರೂಪಾಯಿಗಳ ಸರಕನ್ನು ವಿಲಾಯತಿಗೆ ಒಯ್ಯುತ್ತಿತ್ತು. ವಿಲಾಯತಿಯಲ್ಲಿ ಕಂಪನಿಯು ಪ್ರತಿವರ್ಷ ಮೂರುವರೆ ಕೋಟಿ ರೂಪಾಯಿಗಳ ಸರಕನ್ನು ಮಾರಾಟ ಮಾಡುತ್ತಿತ್ತು.

## ಮರಾಟರ ರಾಜ್ಯದ ಸಾಂಪತ್ತಿಕ ಸ್ಥಿತಿ.

ಇದೇ ಸಮಯಕ್ಕೆ ಮರಾಟರ ರಾಜ್ಯದ ದ್ರವ್ಯಬಲವೂ ಮನುಷ್ಯಬಲವೂ ಎಷ್ಟಿತ್ತೆಂಬದದನ್ನು ನೋಡೋಣ. ಗ್ರ್ಯಾಂಡ ಡಫನ ಮತದಿಂದ ಅವರ ರಾಜ್ಯದ ಉತ್ಪನ್ನವು ೧೦ ಕೋಟಿ ರೂಪಾಯಿ ಇತ್ತು. ಇದರಲ್ಲಿ ಶಿಂದೆ, ಹೋಳಕರ, ಭೋ-ಸಲೆ, ಗಾಯಕವಾಡ ಇವರ ಜಹಾಗೀರುಗಳೂ, ಕಪ್ಪ-ಕಾಣಿಕೆಗಳೂ, ಭೂಮಿಯ ವಿಷಯವಲ್ಲದೆ ಇತರ ಕಿರುಕಳ ವಿಷಯಗಳೂ ಸಮಾವೇಶವಾಗಿದ್ದವು. ಎಲ್ಲ ಉತ್ಪನ್ನವು ಕೈಗೆ ಬಂದೇ ತೀರುತ್ತಿದ್ದಿಲ್ಲ. ಕೈಯಲ್ಲಿ ಬರುವ ಉತ್ಪನ್ನವು ಸವಮಾರು ೭|| ಕೋಟಿ ರೂಪಾಯಿಯಾಗಿತ್ತು. ಇದರಲ್ಲಿ ಪೇಶವೆಯ ಕೈಯಲ್ಲಿ ಬರುವ ಉತ್ಪನ್ನವು ೨||| ಕೋಟಿ ರೂಪಾಯಿಯಿತ್ತು. ನಾನಾಸಾಹೇಬ ಪೇಶವೆಯ ಆಳಿಕೆಯಲ್ಲಿ ೩|| ಕೋಟಿ ರೂಪಾಯಿ ಉತ್ಪನ್ನವಿತ್ತು. ಪೇಶವೆಯವರ ರಾಜಕಾರಣದಲ್ಲಿ ಇಂಗ್ಲಿಷರು ಪ್ರವೇಶಿಸಿದಾಗ ಕಂಪನಿ ಸರಕಾರದ ಉತ್ಪನ್ನವು ಪೇಶವೆಯವರಿಗಿಂತ ಹೆಚ್ಚಿತ್ತು; ಆದರೆ ಸರದಾರರ ಜಹಾಗೀರುಗಳ ಉತ್ಪನ್ನವನ್ನು ಹಿಡಿದರೆ ಮರಾಟರ ರಾಜ್ಯದ ಉತ್ಪನ್ನವು ಕಂಪನಿ ಸರಕಾರದ ಎರಡಷ್ಟು ಇತ್ತು. ಪೇಶವೆಯವರ ವೆಚ್ಚದ ಅಳತೆ ತಿಳಿಯುವದಿಲ್ಲ. ಆದರೂ ಉತ್ಪನ್ನದ ಮಾನದಿಂದ ಹಾಗು ಇಂಗ್ಲಿಷರ ವೆಚ್ಚದ ತುಲನೆಯಿಂದ ಪೇಶವೆಯವರ ವೆಚ್ಚವು ಹೆಚ್ಚಿಗಿತ್ತೆಂದು ಹೇಳಬಹುದು. ೧೭೭೪ನೇ ಇಸವಿಯ ಸುಮಾರಕ್ಕೆ ಕಂಪನಿ ಸರಕಾರಕ್ಕೆ

ಸಾಲವಿದ್ದಿಲ್ಲ; ಆದರೆ ಪೇಶವೆಯುವರಿಗೆ ಸಾಲವಿತ್ತು. ಇದಕ್ಕೆ ಕಾರಣವೇನಂದರೆ, ಇಂಗ್ಲಿಷರ ವೆಚ್ಚವು ನಿರ್ಬಂಧನೆಯದಿತ್ತು; ಆದರೆ ಪೇಶವೆಯುರ ವೆಚ್ಚಕ್ಕೆ ಬಂಧನೆಯಿದ್ದಿಲ್ಲ. ಕಂಪನಿಯು ಹಿಂದುಸ್ತಾನದೊಳಗಿನ ನೌಕರರ ವೆಚ್ಚಕ್ಕೆ ವಿಲಾಯತಿಯೊಳಗಿನ ಧನಿಯು, ಅಂದರೆ ಕಂಪನಿಯು ಭಾಗಿದಾರರ ಒಪ್ಪಿಗೆ ಬೇಕಾಗುತ್ತಿತ್ತು. ಕಂಪನಿಯು ನೌಕರರು ಲಂಚ, ಸ್ವಂತ ವ್ಯಾಪಾರ, ಸುಲಿಗೆ ಮೊದಲಾದ ಸಾಧನಗಳಿಂದ ಹೇರಳ ಹಣವನ್ನು ದೊರಕಿಸಿಕೊಂಡು ವಿಲಾಯತಿಗೆ ಹೋಗುತ್ತಿದ್ದರು; ಆದರೆ ಅವರ ವೇತನವು ನಿಯಮಿತವಿದ್ದು, ಕಂಪನಿಯ ಉತ್ಪನ್ನದೊಳಗಿಂದ ಬೇಕಾದ ಹಾಗೆ ವೆಚ್ಚಮಾಡಲಿಕ್ಕೆ ಮಾರ್ಗವಿದ್ದಿಲ್ಲ. ಪ್ರತಿ ಆರು ತಿಂಗಳುಗಳಿಗೊಮ್ಮೆ ಎಲ್ಲ ಲೆಕ್ಕವು ಕಂಪನಿಯು ಭಾಗಿದಾರರ ಸಭೆಯಲ್ಲಿ ಇಡಲ್ಪಡುತ್ತಿತ್ತು. ಲೆಕ್ಕವನ್ನು ಮೇಲಧಿಕಾರಿಯು ಪರಿಶೋಧಿಸುತ್ತಿದ್ದನು; ಆದರೆ ಪೇಶವೆಯುವರ ರಾಜ್ಯದಲ್ಲಿ ಪೇಶವೆಯುವರೇ ರಾಜ್ಯದ ಧನಿಗಳಿದ್ದುದರಿಂದ ಇಂಥ ವೆಚ್ಚವನ್ನು ಮಾಡಬೇಕು, ಇಂಥ ವೆಚ್ಚವನ್ನು ಮಾಡಬಾರದು ಎಂದು ಅನ್ನುವವರು ಯಾರೂ ಇದ್ದಿಲ್ಲ. ಸ್ವಂತ ವೆಚ್ಚವನ್ನೆಷ್ಟು ಮಾಡತಕ್ಕದ್ದು, ರಾಜಕೀಯ ವೆಚ್ಚವೆಷ್ಟು ಮೊದಲಾದವುಗಳ ಬಗ್ಗೆ ಕಟ್ಟಳೆಯಿದ್ದಿಲ್ಲ. ಹಿರಿಯ ಮಾಧವರಾಯನು ಮಡಿದಾಗ ಅವನ ಸ್ವಂತದ ಆಸ್ತಿಯು ಇಪ್ಪತ್ತುನಾಲ್ಕು ಲಕ್ಷ ರೂಪಾಯಿಗಳಷ್ಟಿತ್ತೆಂದು ಅನ್ನುತ್ತಾರೆ. ಎರಡನೆಯ ಬಾಜೀರಾಯನು ಬ್ರಹ್ಮಾವರ್ತಕ್ಕೆ ಹೊರಟಾಗ ಅವನ ಬಳಿಯಲ್ಲಿ ಒಂದು ಕೋಟಿ ರೂಪಾಯಿಗಳ ರತ್ನಗಳಿದ್ದವು! ಮಾಧವರಾಯನ ಬಳಿಯಲ್ಲಿ ಸ್ವಂತದ ಇಪ್ಪತ್ತುನಾಲ್ಕು ಲಕ್ಷ ರೂಪಾಯಿಗಳಿದ್ದವು. ಆದರೂ ರಾಜ್ಯಕ್ಕೆ ಬಹಳ ಸಾಲವಿದ್ದುದರಿಂದ ಮರಣ ಸಮಯದಲ್ಲಿ ಅವನಿಗೆ ದುಃಖವಾಯಿತು! ಇಂದಿಗೆ ಏತದ್ದೇಶೀಯ ಸಂಸ್ಥಾನಗಳಲ್ಲಿ ಸಂಸ್ಥಾನದ ಉತ್ಪನ್ನದಿಂದ ಸ್ವಂತದ ವೆಚ್ಚಕ್ಕೆ ಹಣವು ಕೊಡಲ್ಪಡುತ್ತದೆ; ಆದರೆ ಅದನ್ನು ಹೆಚ್ಚುಕಡಿಮೆ ಮಾಡುವದು ಸಂಸ್ಥಾನಾಧಿಪತಿಗಳ ಮನಸ್ಸಿನ ಮೇಲೆ ಅವಲಂಬಿಸಿರುತ್ತದೆ. ಇದೇ ಸಂಗತಿಯು ಪೇಶವಾಯಿಯಲ್ಲಾದರೂ ಇರಬಹುದೆಂದು ತೋರುವದು. ರಾಜ್ಯದ ಉತ್ಪನ್ನದಿಂದ ಪೇಶವೆಯುವರ ಸ್ವಂತಕ್ಕೆ ದೊರೆಯುವ ಉತ್ಪನ್ನದ ಹೊರತು, ಅವರಿಗೆ ಸ್ವತಂತ್ರ ಜಹಗೀರಿನ ಉತ್ಪನ್ನವಾದರೂ ಇತ್ತು. ಹಿರಿಯ ಮಾಧವರಾಯನ ಜಹಾಗೀರಿಯು ಮೂರು ಲಕ್ಷ ರೂ. ಗಳದಿತ್ತು. ಇಂಥ ಜಹಾಗೀರುಗಳು ಪರರಾಜ್ಯದಿಂದಲೂ ದೊರೆಯುತ್ತಿದ್ದವು. ಉದಯಗಿರಿಯ ಸಂಗ್ರಾಮವಾದ ಮೇಲೆ ಒಡಂಬಡಿಕೆಯಾದಾಗ ನಿಜಾಮನು ಸದಾಶಿವರಾವಭಾವೂನಿಗೆ ಎರಡು ಲಕ್ಷ ರೂಪಾಯಿಗಳ ಜಹಾಗೀರಿಯನ್ನು ಕೊಟ್ಟನು. ಪರಾಭವಹೊಂದಿ ಶರಣು ಬಂದ ರಘುನಾಥರಾಯನಿಗೆ ಪುರಂಧರದ ಒಪ್ಪಂದದಿಂದ ಹನ್ನೆರಡು ಲಕ್ಷಗಳ ಉತ್ಪನ್ನವು ನಿಶ್ಚಿತವಾಗಿತ್ತು; ಸಾಲಬಾಯಿಯ ಒಡಂಬಡಿಕೆಯಿಂದ ಆ ಉತ್ಪನ್ನವು ಕಡಿಮೆಯಾದರೂ ನಾಲ್ಕು ಲಕ್ಷಕ್ಕಿಂತ ಕಡಿಮೆಯಾಗಲಿಲ್ಲ. ಬಾಜೀರಾವಪೇಶವೆಯು ಇಂಗ್ಲಿಷರಿಗೆ ಶರಣು ಹೋದಾಗ ಎಂಟು ಲಕ್ಷದ ಜಹಾಗೀರಿಯು ದೊರೆಯಿತು. ಇದರ ಮೇಲಿಂದ ಪೇಶವೆಯುವರ ವಾರ್ಷಿಕ ವೆಚ್ಚದ ಕಲ್ಪನೆಯಾಗುವದು.

ಸಾಲವು ದೌಲತ್ತಿನ ಭೂಷಣವು; ಈ ಭೂಷಣವು ಮರಾಟ ಶಾಹಿಯಲ್ಲಿ ಪೇಶವೆಯವರಿಗೂ ಆವರ ಸರದಾರರಿಗೂ ಚನ್ನಾಗಿ ದೊರೆತಿತೆಂದು ತೋರುವದು. ಸರಂಜಾಮೀ ಪದ್ಧತಿಯಂತೆ ನಿರಂತರವಾಗಿ ಸೈನ್ಯವನ್ನು ಕಾಯ್ದುಕೊಳ್ಳಬೇಕಾಗುವದು; ಆದರೆ ಸೈನ್ಯದ ವೆಚ್ಚಕ್ಕಾಗಿ ಕೊಟ್ಟ ಸೀಮೆಯ ಉತ್ಪನ್ನವು ನಿಯಮಿತವಾಗಿ ಕೈಗೆ ಬರುತ್ತಿರಲಿಲ್ಲ. ಆದ್ದರಿಂದ ಸರಕಾರೀ ಬೊಕ್ಕಸದಿಂದ ತಿಂಗಳ ವೇತನವು ತಿಂಗಳಿಗೆ ದೊರೆಯುವ ಮಾತುಬೇರೆ! ಸಾವುಕಾರರ ಆಶ್ರಯದಲ್ಲಿಲ್ಲದಂಥ ಮರಾಟ ಸರದಾರರು ದೊರೆಯುವದೇ ಅಪರೂಪವಾಗಿತ್ತು. ಅವನು ಯಾವಾಗಲೂ ದೊಡ್ಡ ಸೈನ್ಯವನ್ನು ಇಟ್ಟುಕೊಂಡಿರುತ್ತಿದ್ದನು. ಆದ್ದರಿಂದ ಅವನಿಗೆ ಸಾಲವು ಬಹಳವಾಗಿ ಇರುತ್ತಿತ್ತು. ಬಾಜೀರಾಯನು ಬ್ರಹ್ಮೇಂದ್ರ ಸ್ವಾಮಿಗಳಿಗೆ ಬರೆದ ಪತ್ರಗಳೆಷ್ಟೋ ಪ್ರಸಿದ್ಧವಾಗಿವೆ. ಆ ಪತ್ರಗಳಲ್ಲಿ ಸಾಲದ ಬಗ್ಗೆ ತೋಡಿಕೊಂಡದ್ದನ್ನು ಓದಿ ಬೇಸರವುಂಟಾಗುವದು. ಒಂದು ಸ್ಥಳದಲ್ಲಿ ಅವನು ಬರೆದಿರುವವೇನಂದರೆ, "ಈಗ ನಾನು ಸಾಲದ ಬಾಧೆಯಲ್ಲಿ ಬಹಳವಾಗಿ ತೊಡಕಿದ್ದೇನೆ. ಇದರಿಂದ ನನ್ನ ಮನಸ್ಸು ಬಹಳವಾಗಿ ತೊಂದರೆಗೊಳಗಾಗಿದೆ. ಈ ಅವಸ್ಥೆಯು ನನಗೆ ನರಕಯಾತನೆಯಂತೆ ಭಾಸವಾಗುತ್ತದೆ. ಸಾವುಕಾರರ ಹಾಗು ಶಿಲೇದಾರರ ಕಾಲಿಗೆ ಬಿದ್ದುಬಿದ್ದು ನನ್ನ ಹಣೆಯ ತೊಗಲು ಹೋಗಿದೆ" ಹಿರಿಯ ಮಾಧವರಾಯನ ಆಳಿಕೆಯಲ್ಲಿ ಸಾಲದ ಅಳತೆಯು ಬಹಳವಾಗಿ ಬೆಳೆದದ್ದರಿಂದ ಮರಣ ಸಮಯದಲ್ಲಿ ಅವನಿಗೆ ಬಹಳ ದುಃಖವಾಯಿತು. ಆಗ ಅವನಿಗೆ ಸಮಾಧಾನವಾಗಬೇಕೆಂದು ರಾಮಚಂದ್ರ ನಾಯಕ ಪರಾಂಜಪೆಯು ಸಾವುಕಾರನನ್ನು ಕರೆಯಿಸಿ, ತನ್ನ ಹೆಸರಿನಿಂದ ಕಾಗದ ಬರೆದುಕೊಟ್ಟು ಮಾಧವರಾಯನನ್ನು ಸಾಲದ ತೊಡಕಿನಿಂದ ಮುಕ್ತಗೊಳಿಸಿದನು. ಪರಶುರಾಮ ಭಾವೂ ಹಾಗು ಹರಿಪಂತ ಫಡಕೆ ಇವರ ಪತ್ರಗಳಲ್ಲಾದರೂ ಸಾಲಗಾರಿಕೆಯ ಹುಯ್ಲು ಕಾಣುತ್ತದೆ. ಎರಡನೇ ಬಾಜೀರಾಯನ ಸರಸೇನಾಪತಿಯಾದ ಬಾಪೂ ಗೊಖಲೆಯು ಸಾಲದಲ್ಲಿ ತೊಡಕಿ ನಿರ್ವಿಣ್ಣನಾಗಿದ್ದನು. ಅವನು ತನ್ನ ಗುರುಗಳಾದ ಚಿದಂಬರ ದೀಕ್ಷಿತರಿಗೆ ಬರೆದ ಪತ್ರಗಳಲ್ಲಿ 'ಅಥ' ದಿಂದ 'ಇತಿ'ಯ ವರೆಗೆ ಇದೇ ವಿಷಯವು ಕಂಡು ಬರುತ್ತದೆ. ಸರದಾರರು ಸಾಲಗಾರರಾದರೆಂದರೆ ಸೈನಿಕರ ವೇತನವು ನಿಲ್ಲುವದು. ಹೀಗಾದರೆ ಸೇನಾಪತಿಯ ಗೌರವಕ್ಕೆ ಬಾಧೆಯುಂಟಾಗುವದು. ದೇಶದಲ್ಲಿ ಸುಲಿಗೆ ಮಾಡುವದೂ ಬಲುಮೆಯಿಂದ ಕಪ್ಪ ಎತ್ತುವದೂ ಮೊದಲಾದವುಗಳು ಆ ಸ್ಥಿತಿಯ ಸಾಧಾರಣ ಪರಿಣಾಮಗಳಾಗಿವೆ. ಮರಾಟರಿಗೆ ಸುಲಿಗೆಗಾರರೆಂಬ ಹೆಸರು ಉಂಟಾಗಲಿಕ್ಕೆ ಇದೊಂದು ಮುಖ್ಯ ಕಾರಣವಾಗಿದೆ; ಆದರೆ ಸಾವುಕಾರರಲ್ಲಿ ಹೇರಳವಾದ ಹಣವಿರುವದೆಂದು ಅವರನ್ನು ಸುಲಿದ ಉದಾಹರಣೆಗಳು ಮಾತ್ರ ಕಾಣುವದಿಲ್ಲ. ಈ ಸಾಲಗಾರಿಕೆಗೆ ಇನ್ನೊಂದು ಪಕ್ಷವೂ ಉಂಟು ಸಾಲದ ನಿಮಿತ್ತ ತೋರಿಸಿ, ಕಾಣಿಕೆಯ ಹಾಗು ತೆರಿಗೆಯ ಲೆಕ್ಕವನ್ನು ಮುಖ್ಯ ಸರಕಾರಕ್ಕೆ ಒಪ್ಪಿಸುವದನ್ನು ತಪ್ಪಿಸಲಿಕ್ಕೆ ಸಾಧ್ಯವಾಗುತ್ತಿತ್ತು. ಸಿಂದೆ-ನಾನಾಫಡಣವೀಸರಲ್ಲಿ ಲೆಕ್ಕದ ಬಗ್ಗೆ ಯಾವಾಗಲೂ ವಿವಾದವಿರು

ತ್ತಿತ್ತು. ಸರದಾರರ ಕರಣಿಕರು ಪುಣೆಯ ಓಲಗದಲ್ಲಿ ವರ್ಷಾನುವರ್ಷ ಇದ್ದು, ಲೆಕ್ಕವನ್ನೊಪ್ಪಿಸುತ್ತಿದ್ದರು. ಲೆಕ್ಕದ ಪರಿಷ್ಕಾರವು ಒಮ್ಮೊಮ್ಮೆ ಆಗುತ್ತಲೇ ಇರಲಿಲ್ಲ. ಲೆಕ್ಕದ ಬಗ್ಗೆ ಸಹಿ ತೆಗೆದುಕೊಳ್ಳುವ ಕರಣಿಕರು ಲಂಚ ತಿನ್ನುತ್ತಿದ್ದರು. ಆದ್ದರಿಂದ ಸರಕಾರದ ಹಾನಿಯು ಬಹಳವಾಗಿ ಆಗುತ್ತಿತ್ತು.

ಸರದಾರರು ಸಾಲಗಾರರಾಗಿರುತ್ತಿದ್ದರೂ ಅವರು ಮನೆಯಿಂದ ದರಿದ್ರರಿದ್ದರೆಂದು ಭಾವಿಸಲಾಗದು. ಪ್ರತಿಯೊಬ್ಬ ಸರದಾರರಿಗೆ ಸ್ವಂತದ ಉತ್ಪನ್ನವಿರುತ್ತಿತ್ತು. ಪರ ಓಲಗದ ಜನರು ಈ ಸರದಾರರಿಗೆ ಅವರ ಮಹತ್ವವನ್ನನುಲಕ್ಷಿಸಿ ಅಂತರಂಗವಾಗಿ ಹಣ ಕೊಡುತ್ತಿದ್ದರು. ದಾಳಿಯಲ್ಲಿ ವಿಜಯ ಲಾಭವಾಯಿತೆಂದರೆ ಸುಲಿಗೆಯಲ್ಲಿ ಪಾಲು ದೊರೆತು, ಗೆದ್ದ ಸೀಮೆಯಲ್ಲಿ ಸ್ವಂತಕ್ಕಾಗಿ ಜಹಾಗೀರಿಯನ್ನು ಇಟ್ಟುಕೊಳ್ಳಲಿಕ್ಕೆ ಅವರಿಗೆ ಮಾರ್ಗವಿತ್ತು. ಅಂತಸ್ಥ ಇಲ್ಲವೆ ಓಲಗದ ವೆಚ್ಚವು ಪ್ರಕಟವಾಗಿ ಉಲ್ಲೇಖಿಸುವಂಥ ವಿಷಯವಾಗಿತ್ತು. ಸರಕಾರೀ ಕೆಲಸಗಾರನು ತನ್ನ ಸ್ವಂತದ ಉತ್ಪನ್ನವನ್ನು ರಾಜಕಾರಣದಲ್ಲಿ ತೊಡಗಿಸಬಾರದೆಂಬ ಬಗ್ಗೆ ಕಟ್ಟಳೆಯು ಆಗ ಅಷ್ಟು ತೀಕ್ಷ್ಣವಿದ್ದಿಲ್ಲ. ಈ ಪದ್ಧತಿಯು ಮರಾಟರಲ್ಲಷ್ಟೇ ಅಲ್ಲ, ಆಗ ಇತ್ತ ಕಡೆಗಿದ್ದ ಇಂಗ್ಲಿಷರಲ್ಲಾದರೂ ಅದು ರೂಢವಾಗಿತ್ತು. ಕ್ಲೈವ, ಹೇಸ್ಟಿಂಗ್ಸ ಪ್ರಭೃತಿ ಕಂಪನಿಯ ಅಧಿಕಾರಿಗಳು ಲಕ್ಷಾವಧಿ ರೂಪಾಯಿ ಸ್ವಂತದ ಆಸ್ತಿಯನ್ನು ಮಾಡಿದ್ದರು. ಅವರ ಸಂಪತ್ತಿಯನ್ನು ನೋಡಿ ಇಂಗ್ಲಂಡದ ಜನರೂ ಈಸ್ಟ ಇಂಡಿಯಾ ಕಂಪನಿಯ ಪಾಲುಗಾರರೂ ಅಸೂಯೆಪಡುತ್ತಿದ್ದರು ಆದ್ದರಿಂದಲೇ ವಾರನ್ ಹೇಸ್ಟಿಂಗ್ಸನಂಥ ಶ್ರೀಮಂತ ಮನುಷ್ಯನ ಮೇಲೆ ಭಯಂಕರ ವಿವಾದವಾಯಿತು. ಕಂಪನಿಗೆ ದಿವಾಣಿ ಕೆಲಸದ ಸಲುವಾಗಿ ಒಂದು ದೊಡ್ಡ ಜಹಾಗೀರನ್ನು ತೆಗೆದುಕೊಂಡಿದ್ದನು. ಮುಂದೆ ಅದನ್ನು ಅವನು ಕಂಪನಿಯ ಹೆಸರಿನಿಂದ ಮಾಡಿಸಿಕೊಡುವ ಪ್ರಸಂಗವೊದಗಿತು. ಲಾರ್ಡಕಾರ್ನವಾಲೀಸನ ಅನೇಕ ಸುಧಾರಣೆಗಳಲ್ಲಿ ಕಂಪನಿಯ ನೌಕರರ ಸ್ವಂತದ ಉತ್ಪನ್ನವನ್ನು ಕಟ್ಟುಮಾಡುವದೊಂದಾಗಿತ್ತು. ಈ ಕಾರ್ಯವನ್ನು ಈಡೇರಿಸುವದಕ್ಕಾಗಿ ಅವನು ಕಂಪನಿಯ ಕೆಲಸಗಾರರ ವೇತನವನ್ನು ಚನ್ನಾಗಿ ಹೆಚ್ಚಿಸಿದನು. ಮರಾಟಶಾಹಿಯಲ್ಲಿ ವೇತನಕ್ಕಿಂತ ಇತರ ಉತ್ಪನ್ನದ ಮೇಲೆಯೇ ಹೆಚ್ಚಿನ ಭಾರವಿರುತ್ತಿತ್ತು. ನಾನಾಫಡಣವೀಸನ ವೇತನವು ಅವನ ಅಧಿಕಾರದ ಪರಿಮಾಣದಿಂದ ಬಹಳೇ ಕಡಿಮೆಯಾಗಿತ್ತು; ಆದರೆ ನಾನಾನ ಸಂಪತ್ತಿಯು ಬಹಳವಿತ್ತು. ಎರಡನೆಯ ಬಾಜೀರಾಯನ ಆಳಿಕೆಯಲ್ಲಿ ಅವನಿಗೆ ಪುಣೆಯನ್ನು ಬಿಡಬೇಕಾಗಿ ಬಂದ ಪ್ರಸಂಗದಲ್ಲಿ ಅವನ ಬಳಿಯಲ್ಲಿ ದೊಡ್ಡ ಸೇನಾಪತಿಯಂತೆ ಸ್ವಂತದ ಸೈನ್ಯವಿತ್ತು; ಅಲ್ಲದೆ ಲಕ್ಷಾವಧಿ ರೂಪಾಯಿಗಳನ್ನು ಪುಣೆಯ ಹೊರಗಿನ ಸಾವುಕಾರರಲ್ಲಿ ಅವನು ಇಡಿಗಂಟಾಗಿ ಇಟ್ಟಿದ್ದನು.

## ವಿದ್ಯಾಭಿವೃದ್ಧಿ ಮತ್ತು ಸುಧಾರಣೆ.

ವಿದ್ಯಾಭಿವೃದ್ಧಿಯನ್ನೂ ಭೌತಿಕ ಸುಧಾರಣೆಯನ್ನೂ ಮಾಡುವದು ರಾಷ್ಟ್ರದ ಕರ್ತವ್ಯವು. ತತ್ಕಾಲೀನ ಯುರೋಪೀಯ ರಾಷ್ಟ್ರಗಳಂತೆ ಮರಾಟರು ಈ ವಿಷಯದಲ್ಲಿ ಕೀರ್ತಿ ದೊರಕಿಸುವಂತೆ ಏನೊಂದನ್ನೂ ಮಾಡಲಿಲ್ಲವೆನ್ನಬೇಕಾಗುವದು. ಮರಾಟರ ಲಕ್ಷ್ಯವು ವಿದ್ಯೆಗಿಂತ ರಾಜಕಾರಣದಲ್ಲಿ ಹೆಚ್ಚು ರಮಮಾಣವಾಗಿತ್ತು. ಅವರಿಗೆ ಪೂರ್ಣ ಶಾಂತತೆಯ ಕಾಲವು ಲಭಿಸಲಿಲ್ಲ. ಈ ಎರಡು ಕಾರಣಗಳ ಸಲುವಾಗಿ ವಿದ್ಯಾಭಿವೃದ್ಧಿಯೂ ಭೌತಿಕ ಸುಧಾರಣೆಯೂ ಅವರಿಂದ ಬಹಳವಾಗಿ ಆಗಲಿಲ್ಲ. ಅವರ ಸಮಕಾಲೀನರಾದ ಇಂಗ್ಲಿಷರು ಮರಾಟರಿಗಿಂತ ಶಸ್ತ್ರಾಸ್ತ್ರ, ಕಲೆ, ಜಗತ್ತಿನ ಜ್ಞಾನ ಮೊದಲಾದ ವಿಷಯಗಳಲ್ಲಿ ಬಹಳೇ ಮುಂದಾಗಿದ್ದರು. ಹಾಗಿದ್ದ ಹೊರತು ಆರು ಸಾವಿರ ಮೈಲುಗಳಿಂದ ಅವರು ಇಲ್ಲಿಗೆ ಬರುತ್ತಿದ್ದಿಲ್ಲ. ಮರಾಟರು ಅತ್ತೀ ಹಣ್ಣಿನೊಳಗಿನ ಹುಳಗಳಂತಿದ್ದರೆಂದು ಅಂದರೂ ನಡೆಯುವದು. ಮಹಾರಾಷ್ಟ್ರ-ಕೊಂಕಣ ಪ್ರಾಂತಗಳು ಫಲವತ್ತಾದ ಪ್ರದೇಶಗಳಲ್ಲ. ಕೇವಲ ಅವುಗಳ ಉತ್ಪನ್ನದ ಮೇಲೆಯೆ ಕೈಯೂರಿದರೆ, ನಡೆಯುವದೆಂದು ಮರಾಟರು ತಿಳಿದಿದ್ದಿಲ್ಲ; ಆದರೆ ಶಾಸ್ತ್ರಜ್ಞಾನ ದೊರಕಿಸುವದು, ವಿದ್ಯೆ-ಕೈಗಾರಿಕೆಗಳನ್ನು ಕಲಿಯುವದು, ವ್ಯಾಪಾರ ಬೆಳೆಯಿಸುವದು ಮೊದಲಾದ ಕೆಲಸಗಳನ್ನು ಮಾತ್ರ ಅವರು ಮಾಡಲಿಲ್ಲ. ರಾಜಕಾರಣದಲ್ಲಿ ಅವರು ಮಹತ್ವಾಕಾಂಕ್ಷಿಗಳಿದ್ದರೂ, ಭೌತಿಕ ಸುಖದ ವಿಷಯವಾಗಿ ಅಲ್ಪ ಸಂತುಷ್ಟರಾಗಿದ್ದರು. ಮರಾಟರಿಗೆ ತಮ್ಮ ಕೆಲಸದ ಮಟ್ಟಿಗಾದರೂ ಶಾಸ್ತ್ರ-ಕಲೆಗಳ ಜ್ಞಾನವಿದ್ದಿತೆಂಬಂತೆಯೂ ಇಲ್ಲ. ಅವರ ಮುಖ್ಯ ಕೆಲಸವೆಂದರೆ ಯುದ್ಧವು; ಆದರೆ ತೋಫು-ತುಬಾಕಿಗಳ ಸಲುವಾಗಿ ಅವರು ಬಹುಮಟ್ಟಿಗೆ ಯುರೋಪೀಯರನ್ನು ಅವಲಂಬಿಸಬೇಕಾಗುತ್ತಿತ್ತು. ಹದಿನೆಂಟನೆಯ ಶತಮಾನದಲ್ಲಿ ಹಿಂದುಸ್ತಾನದ ಕಲಾಕೌಶಲ್ಯಗಳ ವಿಷಯವಾಗಿ ಲೌಕಿಕವಿದ್ದುದೇನೋ ನಿಜ; ಆದರೆ ಅದರಲ್ಲಿಯು ಸ್ವಲ್ಪ ಭಾಗವು ಮಾತ್ರ ಮರಾಟರ ಪಾಲಿಗೆ ಬರುವಂತೆ ಇತ್ತು. ಅವರ ಸಾಧಾರಣ ತರದ ಇರುವಿಕೆಯು ಒಂದು ಅರ್ಥದಿಂದ ಗುಣವೆಂಬಂತೆ ತೋರಿದರೂ, ಈ ಸಾಧಾರಣತೆಯ ಮೂಲಕವಾಗಿ ಕಣ್ದೆರೆದು ಜಗತ್ತಿನ ತುಂಬ ನೋಡುವ ಇಚ್ಛೆಯು ಅವರಿಗಾಗದ್ದರಿಂದ, ಅದಕ್ಕೆ ದೋಷವೆಂದೇ ಹೆಸರಿಡಬೇಕಾಗುವದು. ಮುಸಲ್ಮಾನರು ವಿಲಾಸಿಗಳೆಂದು ಒಂದ್ಸ್ ಅರ್ಥದಿಂದ ತೋರುತ್ತಿದ್ದರೂ, ಈ ವಿಲಾಸೇಚ್ಛೆಗೆ ಅನುಸರಿಸಿ ಅವರು ವ್ಯಾಪಾರೋದ್ಯೋಗಗಳ ಹಾಗು ಕಲಾಕೌಶಲ್ಯಗಳ ಪರಿಚಯ ಮಾಡಿಕೊಂಡಿದ್ದರು. ಮುಸಲ್ಮಾನರು ಇಷ್ಟು ದೇಶಗಳನ್ನು ಬಿಟ್ಟು ಹಿಂದುಸ್ತಾನಕ್ಕೆ ಬಂದದ್ದರ ಮೇಲಿಂದಲೇ ಅವರು ಮರಾಟರಿಗಿಂತ ಹೆಚ್ಚಿನ ಭೂಗೋಲಜ್ಞಾನವನ್ನು ಸಂಪಾದಿಸಿದ್ದರೆಂದು ಸಿದ್ಧವಾಗುವದು. ನಾನಾಫಡಣವೀಸನು ಚತುರನಿದ್ದನು; ಆದರೆ ಅವನ ದಪ್ತರಿನೊಳಗಿನ ಭೂಗೋಲವರ್ಣನೆಯ ಕಾಗದವನ್ನು ನೋಡಿದರೆ ನಗೆ ಬರುವಂತಿದೆ. ಗ್ರ್ಯಾಂಟಡಫನ ಇತಿಹಾಸಕ್ಕೆ ಇತರ ರೀತಿಯಿಂದ ಯಾರು ಎಷ್ಟೇ ಹೆಸರಿಟ್ಟರೂ, ಮರಾಟರ

ವಿಷಯವಾಗಿ ಅವನ ಜ್ಞಾನವು ಯಾವನಾದರೊಬ್ಬ ಮರಾಟೆಗನಿಗಿಂತಲೂ ನೂರು ಪಟ್ಟು ಹೆಚ್ಚಿಗಿತ್ತೆಂದು ಹೇಳಬಹುದು. ಮರಾಟರ ಬಹುತರ ಭೂಗೋಲ ವಿಷಯಕ ಜ್ಞಾನವು ದಂಡಕಾರಣ್ಯ ಮಹಾತ್ಮ್ಯದಿಂದ ತೆಗೆದುಕೊಂಡದ್ದಾಗಿದ್ದು, ಇತಿಹಾಸದ ಮುಖ್ಯ ಉಗಮಸ್ಥಾನವು ಭವಿಷ್ಯ ಪುರಾಣವಾಗಿತ್ತು! ಸದಾಶಿವರಾವಭಾವೂನು ದಿಲ್ಲಿಯ ತರುವಾಯ ರುಮಶಾಮಿಯ ಸಿಂಹಾಸನವನ್ನು ಹಸ್ತಗತ ಮಾಡಿಕೊಳ್ಳುವ ಬಗ್ಗೆ ಮಹತ್ವಾಕಾಂಕ್ಷೆಯನ್ನು ತಾಳಿ ಆಡಿತೋರಿಸಿದ ವರ್ಣನೆಯು ಬಖರಿನಲ್ಲಿದೆ; ಆದರೆ ರುಮಶಾಮಿಯು ಪಾತಶಾಹಿ ಈ ಶಬ್ದದ ಹೊರತು ಅವನಿಗೆ ಅದರ ವಿಷಯವಾಗಿ ಹೆಚ್ಚಿನ ಜ್ಞಾನವಿರಲಿಕ್ಕಿಲ್ಲ! ಫರಾಶಿ ಅಂದರೆ ಫ್ರೆಂಚರೆಂಬದು ಅವರಿಗೆ ಪ್ರತ್ಯಕ್ಷ ಗೊತ್ತಿತ್ತು; ಆದರೆ ಫ್ರಾನ್ಸ ದೇಶದ ಇತಿಹಾಸವೇನೆಂಬದರ ವಿಚಾರಣೆಯನ್ನು ಮರಾಟರು ಎಂದೂ ಮಾಡಿರಲಿಕ್ಕಿಲ್ಲ. ಟೀಪುವು ತನ್ನ ವಕೀಲನನ್ನು ಪಾರೀಸಕ್ಕೆ ಕಳುಹಿಸಿ, ಮುಸಲ್ಮಾನೀ ವಕಾಲತಿಯ ಪ್ರಾಕಾರದಲ್ಲಿ ತನ್ನ ಅರ್ಧಚಂದ್ರ ಚಿಹ್ನಿತ ಧ್ವಜವನ್ನು ಕೆಲವು ದಿವಸ ಉಡ್ಡಾಣ ಮಾಡಹಚ್ಚಿದ್ದನು. ಟೀಪುವಿಗೆ ಮರಾಟರಿಗಿಂತಹೆಚ್ಚು ಪರದೇಶ ವಿಷಯಕ ಜ್ಞಾನವಿರಲಿಕ್ಕೆಬೇಕು. ಬರ್ಕನ ವೇಳೆಯಲ್ಲಿ ಇಬ್ಬರು ಬ್ರಾಹ್ಮಣರು ವಿಲಾಯತಿಗೆ ಹೋಗಿದ್ದರೆಂದು ಹೇಳುತ್ತಾರೆ. ಅವರು ಇಂಗ್ಲಿಷರಿಂದಾದರೂ ಗೊತ್ತುವಳಿ ದೊರಕಿಸಿ ವಿಲಾಯತಿಯ ವಿಷಯವಾಗಿ ಬರೆದ ವರ್ಣನೆಯು ಪತ್ರಗಳು ಒಂದೆರಡು ಸಹ ಇತಿಹಾಸ ಸಂಶೋಧಕರಿಗೆ ದೊರೆತಿಲ್ಲ. “ಫರಾಶಿಯವರ ಪ್ರಜೆಗಳು ತಮ್ಮ ಅರಸನನ್ನು ಕೊಂದರು.” ಎಂಬ ವಾರ್ತೆಯ ಉಲ್ಲೇಖವು ಮಹಾರಾಷ್ಟ್ರದವರ ಕಾಗದ ಪತ್ರಗಳಲ್ಲಿ ದೊರೆಯುವದು; ಆದರೆ ಫ್ರೆಂಚರಾಜ್ಯಕ್ರಾಂತಿಯ ಬಗ್ಗೆ ತತ್ಕಾಲೀನರಿಗೆ ಉಪಲಬ್ಧವಿರತಕ್ಕಷ್ಟು ಗೊತ್ತುವಳಿಯು ಮರಾಟೆಗರಿಗೆ ಇದ್ದಿಲ್ಲವೆಂದು ವ್ಯಕ್ತವಾಗುವದು ಯುರೋಪದಲ್ಲಿ ತತ್ಕಾಲೀನ ಓಲಗದಲ್ಲಿ, ಅಂದರೆ ಹದಿನೈದನೆಯ ಲುಯಿ, ಹಿರಿಯ ಫೆಡರಿಕ, ಎರಡನೆಯ ಜಾರ್ಜ ಇವರ ಓಲಗದಲ್ಲಿ ಭೂಗೋಲ ಇತಿಹಾಸ ವಿಷಯಕವಾಗಿ ಆ ವೇಳೆಯಲ್ಲಿ ಯಾವ ಜ್ಞಾನವಿತ್ತೋ, ಅದಕ್ಕಿಂತ ಮರಾಟರ ಓಲಗದಲ್ಲಿಯ ಆ ವಿಷಯಗಳ ಜ್ಞಾನವು ತೀರ ಕ್ಷುದ್ರವಾಗಿತ್ತೆಂದು ಒಪ್ಪುವದು ಯೋಗ್ಯವು. ಪುರಾಣ ಮುನಿಪ್ರಣೀತ ಶಾಸ್ತ್ರಗಳ ವ್ಯತಿರಿಕ್ತವಾಗಿ ಯುರೋಪದಲ್ಲಿ ಗೊತ್ತಿದ್ದ ಶಾಸ್ತ್ರಗಳ ಗಂಧವು ಪೇಶವೆಯವರ ರಾಜ್ಯದಲ್ಲಿ ಯಾರಿಗೂ ಇದ್ದಿಲ್ಲ. ಪಾಠಶಾಲೆ, ವಿದ್ಯಾಪೀಠ, ವಿದ್ವತ್ಸಭೆ, ವಾದಸಭೆ, ಶೋಧಸಭೆ, ಪೃಥ್ವೀಪರ್ಯಟನ ಮೊದಲಾದ ಯುರೋಪೀಯ ಸಂಸ್ಥೆಗಳು ಪೇಶವೆಯವರ ರಾಜ್ಯದಲ್ಲಿದ್ದಿಲ್ಲವೆಂಬದಿಷ್ಟೇ ಅಲ್ಲ, ಅವು ಎಲ್ಲಿ ಇರುವವೆಂಬದು ಸಹ ಈ ರಾಜ್ಯದೊಳಗಿನ ಯಾರಿಗೂ ಗೊತ್ತಿದ್ದಿಲ್ಲ. ಈ ನಕಾರಾತ್ಮಕ ವಾಕ್ಯದ ಇತ್ಯರ್ಥವೇನಂದರೆ, ಹದಿನೆಂಟನೆಯ ಶತಕದ ಪೂರ್ವಾರ್ಧದಲ್ಲಿಯೂ ಉತ್ತರಾರ್ಧದಲ್ಲಿಯೂ ಮಹಾರಾಷ್ಟ್ರದ ಸಂಸ್ಕೃತಿಯು ಯುರೋಪೀಯ ಪ್ರಗತಿ ರಾಷ್ಟ್ರಗಳ ಸಂಸ್ಕೃತಿಗಿಂತ ಬಹಳ ಕಡಿಮೆ ತರಗತಿಯದಿತ್ತು. ಪೇಶವೆಯವರು ಮುದ್ರಣ ಕಲೆಯನ್ನು ಇಂಗ್ಲಿಷರಿಂದ ಎತ್ತಿಕೊಳ್ಳದ್ದನ್ನು ನೋಡಿ ಪ್ರೊ. ರಾಜವಾಡೆ

ಯವರು ಆಶ್ಚರ್ಯವನ್ನು ವ್ಯಕ್ತಗೊಳಿಸಿರುವರು. ಕೇವಲ ವೈದಿಕ ವಿದ್ಯೆಯಲ್ಲಿಯೇ ಎಲ್ಲ ವಿದ್ಯೆಗಳ ಪರಿಸಮಾಪ್ತಿಯೆಂದು ಎಲ್ಲಿ ಮನ್ನಿಸಲ್ಪಡುವದೋ, ಅಲ್ಲಿ ಮುದ್ರಣದ ಕೆಲಸವೇನು? ವೇದ ವಿದ್ಯೆಯು ಕೇವಲ ಅಧಿಕೃತ ಜನರಿಗೇ ದೊರೆಯತಕ್ಕದ್ದು; ವೇದ ಪಠಣವೇ ವೈದಿಕ ಕೆಲಸವು; ವೇದ ಭಾಷ್ಯದ ಅಭ್ಯಾಸವಿದ್ದರೆ ಅದು ಅಲ್ಪ ಮಟ್ಟಿಗೆ. ಇಂಥ ಪರಿಸ್ಥಿತಿಯಲ್ಲಿ ಜನರಿಗೆ ಮುದ್ರಣದ ಆವಶ್ಯಕತೆಯುಂಟಾಗಲಿಲ್ಲ. ಧರ್ಮಗ್ರಂಥಗಳ ಹೊರತು ಸ್ವತಂತ್ರ ವಾಙ್ಮಯವು ಇರುವ ಸಂಭವವಿಲ್ಲವೆಂಬದೇ ಮರಾಟಶಾಹಿಯ ಗ್ರಹಿಕೆ. ಮೋರೋಪಂತನ ಕವಿತೆಯನ್ನು ನಾವು ವಾಙ್ಮಯದ ಪರಿವಿಡಿಯಲ್ಲಿ ಸೇರಿಸುವೆವು; ಆದರೆ ಪೇಶವಾಯಿ ಕಾಲದ ಗ್ರಂಥ ಸೂಚಿಯಲ್ಲಿ ಅದು ಒಂದುವೇಳೆ ಧರ್ಮಗ್ರಂಥಗಳ ಸೂಚಿಯಲ್ಲಿ ಬಿದ್ದಿದ್ದರೂ ಬಿದ್ದಿರಬಹುದು. ಮೋರೋ ಪಂತನ ಗ್ರಂಥದಲ್ಲಿ ರಾಮಾಯಣ ಭಾರತ ಭಾಗವತಗಳ ವರ್ಣನೆ ಇರುವದರಿಂದಲೂ ಹಾಗು ಅವನ ಸ್ಫುಟ ಕವಿತೆಗಳು ಭಕ್ತಿ ರಸಪ್ರಧಾನವಿದ್ದುದರಿಂದಲೂ ಆ ವೇಳೆಯಲ್ಲಿ ಅವನ್ನು ಧರ್ಮ ಗ್ರಂಥಗಳ ಸೂಚಿಯಲ್ಲಿ ಹಾಕುವದೇ ಯೋಗ್ಯವೆಂದು ಕಾಣುತ್ತಿರಬಹುದು. ಮೋರೋಪಂತನ ಗ್ರಂಥವು ಪುಸ್ತಕರೂಪವಾಗಿ ಬರೆಯಲ್ಪಡುತ್ತಿತ್ತು; ಆದರೆ ಅಬ್ರಾಹ್ಮಣರ ಕೈಗೆ ಈ ಕಾರ್ಯವನ್ನು ಬ್ರಾಹ್ಮಣರು ಸಹಸಾ ಬೀಳಗೊಡುತ್ತಿದ್ದಿಲ್ಲವೆಂಬಂತೆ ತೋರುವದು. ಧರ್ಮವಿಚಾರದ ಈ ವಿಷಯವನ್ನು ಬಿಟ್ಟರೂ, ವ್ಯವಹಾರ ವಿಷಯಕ ಶಿಕ್ಷಣವಾದರೂ ಬಹಳವಾಗಿದ್ದಿಲ್ಲವೆಂದು ಕಂಡು ಬರುವದು. ಅಕ್ಷರ, ಸಾಧಾರಣ ಗಣಿತ, ಲೆಕ್ಕ, ಸಂಸ್ಕೃತಜ್ಞಾನ ಇವುಗಳಲ್ಲಿಯೇ ಉಚ್ಚ ಪ್ರತಿಯ ಗೃಹಸ್ಥನ ಶಿಕ್ಷಣದ ಪರಿಸಮಾಪ್ತಿಯಾಗುತ್ತಿತ್ತು.

ಭೌತಿಕ ಸುಧಾರಣೆಗೆ ವಾಙ್ಮಯ ಪ್ರಸಾರವು ಆವಶ್ಯಕವಿದ್ದಂತೆ ಪರದೇಶಗಮನವಾದರೂ ವ್ಯವಹಾರ ಚಾತುರ್ಯಕ್ಕೆ ಉಪಕಾರಕವಾಗಿರುತ್ತದೆ; ಆದರೆ ಪರದೇಶಗಮನವನ್ನು ಮರಾಟರು ವರ್ಜ್ಯಗೊಳಿಸಿದ್ದರು; ಹಾಗು ಸ್ವದೇಶದಲ್ಲಿ ತಿರುಗಾಡಿ ಸೃಷ್ಟಿ ನಿರೀಕ್ಷಣ ಮಾಡಿ ಬೇರೆಯವರ ಕಲಾಕೌಶಲ್ಯಗಳನ್ನು ಅರಿತುಕೊಳ್ಳುವ ಕೆಲಸವನ್ನಾದರೂ ಮರಾಟರು ಬಹಳವಾಗಿ ಮಾಡಲಿಲ್ಲ. ಆದುದರಿಂದ ಉಪಯುಕ್ತ ಪದಾರ್ಥಗಳ ವಿಷಯವಾಗಿ ಅವರು ಇತರರನ್ನು ಅವಲಂಬಿಸಬೇಕಾಗುತ್ತಿತ್ತು ಅವರು ರಾಜಸತ್ತೆಯ ಭರದಲ್ಲಿದ್ದುದರಿಂದ, ನಮ್ಮಂತೆ ಅವರಿಗೆ ಸ್ವದೇಶೀಯ ತತ್ವದ ಅಗತ್ಯವುಂಟಾಗಿರಲಿಕ್ಕಿಲ್ಲ. ಮುಂದೆ ಮುಂದೆ ಅವರ ಪರಾವಲಂಬಿತ್ವವು ಅವರಿಗೆ ಭಾಸವಾಗಹತ್ತಿರಬಹುದು. ದೂರದ ಗುರಿಯ ತೋಫು-ತುಬಾಕಿಗಳು, ನೀರುಳ್ಳ ಖಡ್ಗ-ಕತ್ತಿಗಳು, ಹೋಕಾಯಂತ್ರ, ದೂರದರ್ಶಕ ಕನ್ನಡಿ ಮೊದಲಾದ ಯುದ್ಧೋಪಯುಕ್ತ ಪದಾರ್ಥಗಳ ಹಾಗು ವೇಲಾಯಂತ್ರ, ಹಂಡೆ, ಜುಮರು, ಕನ್ನಡಿ, ರೇಶಿಮೆಯ ವಸ್ತ್ರ, ಚಿನಗು ನೂಲಿನ ಬಟ್ಟೆ ಮೊದಲಾದ ವ್ಯವಹಾರೋಪಯುಕ್ತ ಪದಾರ್ಥಗಳ ಸಲುವಾಗಿ ಅವರು ಇಂಗ್ಲಿಷ-ಚೀನೀ-ಮುಸಲ್ಮಾನ ಮೊದಲಾದ ಜನರ ಮೋರೆಯ ಕಡೆಗೆ ನೋಡಬೇಕಾಗುತ್ತಿತ್ತು. ವಿದೇಶೀಯ ವ್ಯಾಪಾರಿಗಳು ಮರಾಟಗ ಗ್ರಾಹಕರಿಂದ

ಬಲ್ಲಿದರಾಗಿ ಹೋಗುತ್ತಿದ್ದರು. ವಿಲಾಸದ ಹಾಗು ಉಪಯುಕ್ತ ಒಡವೆಗಳನ್ನು ಉಪಯೋಗಿಸುವ ಇಚ್ಛೆಯು ಮರಾಟರಲ್ಲಿದ್ದಿಲ್ಲವೆಂಬಂತಿಲ್ಲ; ಆದರೆ ಅಂಥ ಪದಾರ್ಥಗಳನ್ನು ಉತ್ಪನ್ನಮಾಡುವ ಇಚ್ಛೆಯು ಮಾತ್ರ ಅವರಲ್ಲಿ ಬಹಳವಾಗಿ ಹುಟ್ಟಿದಂತೆ ಕಂಡುಬರುವದಿಲ್ಲ.

ಮರಾಟಶಾಹಿಯಲ್ಲಿ ಶಿಕ್ಷಣ ಪದ್ಧತಿಯು ಈಗಿನಂತಿರಲಿಲ್ಲ. ಸಾರ್ವಜನಿಕ ಶಿಕ್ಷಣ ಸಂಸ್ಥೆಗಳಿದ್ದಿಲ್ಲವೆಂದರೂ ಸಾಗುವದು. ವ್ಯಾವಹಾರಿಕ ಶಿಕ್ಷಣದ ಸಲುವಾಗಿ ಅಯ್ಯನವರ ಶಾಲೆಗಳು ಹಾಗು ವೇದ ಶಾಸ್ತ್ರ ಶಿಕ್ಷಣಕ್ಕೆ ಶಾಸ್ತ್ರಿಗಳ ಮನೆಯ ಪಾಠಶಾಲೆಗಳು ಇರುತ್ತಿದ್ದವು. ಅಯ್ಯನವರಿಗೆ ಅಮಾವಾಸ್ಯ ಪೌರ್ಣಿಮೆಗಳಲ್ಲಿ ಹಾಗು ಹಬ್ಬಗಳಲ್ಲಿ ಕಾಣಿಕೆಗಳು ದೊರೆಯುತ್ತಿದ್ದವು; ಆದರೆ ಪಾಠಶಾಲೆಯಲ್ಲಿಯ ಶಿಕ್ಷಣವು ಧರ್ಮಾರ್ಥವಿರುತ್ತಿತ್ತು; ಇಷ್ಟಲ್ಲದೆ ಉಂಡುಟ್ಟು ಸುಖದಿಂದಿರುವ ಶಾಸ್ತ್ರಿಗಳ ಮನೆಯಲ್ಲಿಯೇ ವಿದ್ಯಾರ್ಥಿಗಳ ಊಟವೂ ಆಗುತ್ತಿತ್ತು! ವಿದ್ವಾಂಸರಾದ ಶಿಷ್ಯರು ಗುರುಗಳ ಹೆಸರನ್ನು ಅಭಿಮಾನದಿಂದ ಹೇಳುವದು, ಗುರುಮನೆತನದ ಪರಂಪರೆಯನ್ನು ಸ್ಮರಿಸುವದು ಇಷ್ಟೇ ಪ್ರತಿಫಲವು ಶಿಷ್ಯರಿಂದ ದೊರೆಯುತ್ತಿತ್ತು. ಸರಕಾರವು ಶಾಲೆಗಳನ್ನು ಸ್ಥಾಪಿಸದಿದ್ದರೂ ವಿದ್ವಾಂಸ ಶಾಸ್ತ್ರಿಗಳಿಗೆ ವಾರ್ಷಿಕ ದಕ್ಷಿಣೆಯು ಹೊರತು ಭೂಮಿಗಳನ್ನಾದರೂ ಪಾರಿತೋಷಕವಾಗಿ ಕೊಡುತ್ತಿತ್ತು. ಈ ಮೇರೆಗೆ ರಾಜ್ಯಭಾಂಡಾರದಿಂದ ಅಪ್ರತ್ಯಕ್ಷ ಸಹಾಯವು ಶಿಕ್ಷಣಕ್ಕೆ ದೊರೆಯುತ್ತಿತ್ತು. ಪೇಶವೆಯವರ ದಿನಚರಿಯಲ್ಲಿಯೂ ಇತರ ಸ್ಥಳಗಳಲ್ಲಿಯೂ ವೈದಿಕ ಶಾಸ್ತ್ರಿಗಳಿಗೆ ಭೂಮಿಗಳನ್ನು ಕಾಣಿಕೆ ಕೊಟ್ಟ ಬಗ್ಗೆ ಆಧಾರಗಳು ಇರುತ್ತವೆ. ಕೇವಲ ಸ್ನಾನ ಸಂಧ್ಯೆ ಮಾಡುತ್ತ ಸುಖರೂಪವಾಗಿದ್ದು, ರಾಜ್ಯದ ಅಭೀಷ್ಟ ಚಿಂತನೆ ಮಾಡುತ್ತ ಆಶೀರ್ವಾದವೀಯುವಂಥ ಶಾಸ್ತ್ರಿಗಳಿಗಾದರೂ ಕಾಣಿಕೆಯ ಭೂಮಿಗಳಿರುತ್ತಿದ್ದವು. ಕೇವಲ ಧರ್ಮಾಚರಣೆ ಮಾಡುವ ಹಾಗು ಸ್ನಾನ ಸಂಧ್ಯೆ ಪುಸ್ತಕ ಗ್ರಂಥ ಶಿಷ್ಯಮಂಡಲ ಮೊದಲಾದವುಗಳಲ್ಲಿಯೇ ಎಲ್ಲ ವೇಳೆ ಕಳೆಯುವ ದೊಡ್ಡ ವರ್ಗವು ಆಗ ಇರುತ್ತಿತ್ತು. ವೇದ ಶಾಸ್ತ್ರಗಳ ಅಧ್ಯಯನ ಅಧ್ಯಾಪನಗಳ ಹಾಗು ಪಾಂಡಿತ್ಯದ ಅಭ್ಯಾಸದ ಸಣ್ಣದೊಡ್ಡ ಪೀಠಗಳು ಮುಖ್ಯ ಕ್ಷೇತ್ರಗಳಲ್ಲಿದ್ದು, ಆದ್ಯಪೀಠವು ಶ್ರೀಕ್ಷೇತ್ರ ಕಾಶಿಯಲ್ಲಿತ್ತು. ಕರ್ಮ-ಧರ್ಮ ಸಂಯೋಗದಿಂದ ಕಾಶಿ ಪ್ರಯಾಗ ಗಯೆ ಮೊದಲಾದ ಕ್ಷೇತ್ರಗಳು ವಿಜಾತೀಯ ಜನರ ವಶದಲ್ಲಿ ಉಳಿದವು. ಮರಾಟರು ತಮ್ಮ ಅಭ್ಯುದಯಕಾಲದಲ್ಲಿ ಸತ್ತೆಯ ಬಲದಿಂದ ಅವುಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಸಾಹಸ ಮಾಡಿದರು; ಆದರೆ ಅವರ ಸಾಹಸವು ಸಫಲವಾಗಲಿಲ್ಲ. ಆದರೂ ಕಾಶಿ-ಮಹಾರಾಷ್ಟ್ರಗಳ ಸಂಬಂಧವು ಮೂರು ನಾಲ್ಕು ಶತಮಾನ ಅಬಾಧಿತವಾಗಿ ಉಳಿಯಿತು. ಕಾಶಿಯಲ್ಲಿ ಪ್ರಸಿದ್ಧರಾದ ಪಂಡಿತರಲ್ಲಿ ದಕ್ಷಿಣಾತ್ಯ ಪಂಡಿತರು ಪ್ರಖ್ಯಾತರಾಗಿದ್ದರು. ೧೯೧೧ರಲ್ಲಿ ಕೇಸರಿ ವೃತ್ತಪತ್ರದಲ್ಲಿ "ಸಂಸ್ಕೃತ ವಿದ್ಯೆಯ ಪುನರುಜ್ಜೀವನ" ಈ ಲೇಖಮಾಲೆಯಲ್ಲಿ 'ದಕ್ಷಿಣಾತ್ಯ ಪಂಡಿತರ ಮನೆತನಗಳು' ಈ ವಿಷಯದ ಮೇಲೆ ಶ್ರೀಮಾನ್ ನ. ಚಿ. ಕೇಳಕರ ಮಹಾಶಯರು ಬರೆದ ಲೇಖವನ್ನು

ಓದಿದರೆ ಈ ಬಗ್ಗೆ ಹೆಚ್ಚಿನ ಸಂಗತಿಗಳು ಗೊತ್ತಾಗುವವು.

ವೇದಶಾಸ್ತ್ರ ಶಿಕ್ಷಣವು ಸರ್ವಸ್ವವಾಗಿ ಬ್ರಾಹ್ಮಣರ ಕೈಯಲ್ಲಿಯೇ ಇತ್ತು. ಈ ಸಂಗತಿಯು ಶಿವಾಜಿಗೆ ಸಹ ಮಾನ್ಯವಿತ್ತು. ಇಂಗ್ಲಿಷ ವಿದ್ಯೆಯು, ಇಂಗ್ಲಿಷ ಜನರ ಪರಿಚಯವಾದ ಮೇಲೆ ಚಾತುರ್ವರ್ಣ್ಯ ವ್ಯವಸ್ಥೆಯನ್ನು ನಾವು ಮನ್ನಿಸುವದಿಲ್ಲ. ಜನ್ಮಸಿದ್ಧ ಚಾತುವರ್ಣ್ಯವನ್ನೂ ಅವುಗಳ ನಿಶ್ಚಿತ ಅಧಿಕಾರವನ್ನೂ ಇಂದಿನ ವಿದ್ವಾಂಸರಲ್ಲಿ ಸ್ವಲ್ಪ ಜನರು ಮಾತ್ರ ಮನ್ನಿಸುತ್ತಾರೆ. ಇಂದಿನ ಅವರ ಮತಗಳು ನಿಜವಾಗಿರುವವೆಂದು ಅವರ ಪ್ರಾಮಾಣಿಕ ಮತವಿರುವದು ಮತಗಳ ಸಂಬಂಧವಾದ ಸಂಗತಿಯು ತ್ರಿಕಾಲಾಬಾಧಿತವಲ್ಲ. ಮೇಲಿನಂತೆ ಅಭಿಪ್ರಾಯ ಪಡುವವರಲ್ಲಿ ಬಹುತರ ಜನರು ಮೊದಲು ಇದ್ದರೆ, ಅವರ ಮತವು ಈಗಿನಂತೆ ಇರುತ್ತಿದ್ದಿಲ್ಲ ನದಿಗಳ ಪ್ರವಾಹದಲ್ಲಿ ಸಿಲುಕಿದ ಬೆನಕಗಳಂತೆ ಕಾಲದ ಓಘದಲ್ಲಿ ಮತಗಳ ರೂಪಾಂತರವಾಗುತ್ತಿರುತ್ತದೆ. ಬ್ರಾಹ್ಮಣರನ್ನು ನಿಸ್ಸಂತಾನ ಮಾಡಬೇಕೆಂಬ ಮಹತ್ವಾಕಾಂಕ್ಷೆಯು ಶಿವಾಜಿಯಲ್ಲಿದ್ದರೆ ಅದು ಅವನಿಗೆ ಸಾಧ್ಯವಾಗುತ್ತಿತ್ತು. ರಾಮದಾಸರ ಕಡೆಗೆ ಹೋಗಿ, ಅವರನ್ನು ಗುರುಗಳನ್ನಾಗಿ ಮಾಡಿಕೊಳ್ಳಬೇಕೆಂದು ಅವನಿಗೆ ಯಾರೂ ಒತ್ತಾಯ ಮಾಡಿದ್ದಿಲ್ಲ. ಶಿವಾಜಿಯು ವೇದೋಕ್ತ ಕರ್ಮ ಮಾಡುವ ಅಭಿಲಾಷೆ ಹಿಡಿದು ರಾಜ್ಯಾಭಿಷೇಕದ ಮೊದಲು ಮೌಂಜೀಬಂಧನವನ್ನು ಸಹ ಮಾಡಿಸಿಕೊಂಡನು. ಇಂದಿನ ವಿಚಾರಸರಣಿಯಂತೆ ಈ ಕಾರ್ಯ ಮಾಡುವ ಅವಶ್ಯಕತೆಯಿದ್ದಿಲ್ಲ. ಆದರೂ ವೈದಿಕ ಸಂಸ್ಕೃತಿಯ ಪರಿಣಾಮವು ಅವನ ಮನಸ್ಸಿನ ಮೇಲೆ ಅನುವಂಶಿಕವಾಗಿದ್ದರಿಂದ, ರಾಜ್ಯಾರೋಹಣದ ಧಾರ್ಮಿಕ ಕೃತ್ಯವು ಸಶಾಸ್ತ್ರವಾಗಿ ನೆರವೇರಬೇಕೆಂದು ಅವನಿಗೆ ತೋಚಿದ್ದರೆ ಅದರಲ್ಲಿ ಆಶ್ಚರ್ಯವಿಲ್ಲ. ಒಂದು ಬಾಯಿಯಿಂದ ವೇದೋಕ್ತ ಅಭಿಲಾಷೆಯನ್ನು ವ್ಯಕ್ತಮಾಡುತ್ತ, ಎರಡನೇ ಬಾಯಿಂದ ಬ್ರಾಹ್ಮಣ ನಿಂದೆಯನ್ನು ಮಾಡುವ ಇಬ್ಬಾಯಿತನವು ಕೆಲವು ಕ್ಷತ್ರಿಯರಿಂದ ಸದ್ಯಕ್ಕೆ ಘಟಿಸುತ್ತಿರುವದು; ಆದರೆ ಶಿವಾಜಿಯು ಮಾತ್ರ ಹಾಗೆ ಮಾಡಲಿಲ್ಲ. ಕ್ಷತ್ರಿಯ-ಬ್ರಾಹ್ಮಣ ಈ ಶಬ್ದವು ಒಂದು ಪ್ರಕಾರದ ಅನುಯೋಗೀ ಸಂಬಂಧದಿಂದ ಗಟ್ಟಿಯಾಗಿರುವದು. ಚಾತುರ್ವರ್ಣ್ಯ ವ್ಯವಸ್ಥೆಯನ್ನೆಲ್ಲ ಅಮಾನ್ಯ ಮಾಡುವದು ಸಾಧ್ಯವಾದೀತು; ಆದರೆ ಅದರೊಳಗಿನ ಕೆಲವಂಶವನ್ನು ಮಾತ್ರ ತೆಗೆದುಕೊಂಡು, ಉಳಿದದ್ದನ್ನು ಕಿತ್ತೊಗೆಯುವದು ಮಾತ್ರ ಯಾರಿಗೂ ಸಾಧ್ಯವಿಲ್ಲ. ಕ್ಷತ್ರಿಯರ ಭೂಷಣವು ಯಾವ ವರ್ಣವ್ಯವಸ್ಥೆಯಲ್ಲಿರುವದೋ, ಅದರಲ್ಲಿಯೇ ಬ್ರಾಹ್ಮಣರಿಗೆ ವಿಶಿಷ್ಟಸ್ಥಾನವಿರುವದು. ಮರಾಟಶಾಹಿಯೊಳಗಿನ ಕ್ಷತ್ರಿಯನು ತಾನು ಕ್ಷತ್ರಿಯನೆನಿಸಿಕೊಂಡು ಬ್ರಾಹ್ಮಣರಿಗೆ ಯೋಗ್ಯಮಾನವನ್ನು ಕೊಡಬೇಕೆನ್ನುತ್ತಿದ್ದನು. ಅವನು ಬ್ರಾಹ್ಮಣರಿಗೆ ಗುರುತ್ವ ಕೊಟ್ಟು ಆ ಮಾನದ ಕಿರಣಗಳನ್ನು ಚಾತುರ್ವರ್ಣ್ಯ ವ್ಯವಸ್ಥೆಯ ಜನರಿಂದ ತನ್ನ ಕಡೆಗೆ ಪರಾವರ್ತಿತಗೊಳಿಸುತ್ತಿದ್ದನೆನ್ನಬಹುದು. ಮರಾಟಶಾಹಿಯಲ್ಲಿ ಕ್ಷತ್ರಿಯರೇ ಬ್ರಾಹ್ಮಣರ ಅಭಿಮಾನವನ್ನು ಹಿಡಿದ ಮೇಲೆ, ಬ್ರಾಹ್ಮಣರು ಸ್ವಾಭಿಮಾನಿಗಳಾದರೆ ಆಶ್ಚರ್ಯವಲ್ಲ.

ಈ ಎಲ್ಲ ವಿವೇಚನೆಯಿಂದ ಸಿದ್ಧವಾಗುವದೇನಂದರೆ, ಮರಾಟಶಾಹಿಯಲ್ಲಿ ಶಿಕ್ಷಣ ಹೊಂದುವ ಭಾರವು ಚಾತುರ್ವರ್ಣ್ಯ ವ್ಯವಸ್ಥೆಯ ಮೂಲಕ ಬ್ರಾಹ್ಮಣರ ಮೇಲೆಯೇ ಇತ್ತೆಂದು ತಿಳಿಯಲ್ಪಡುತ್ತಿತ್ತು. ಈ ಭಾರವನ್ನು ಅವರು ವಹಿಸುತ್ತಿದ್ದುದರಿಂದಲೇ ರಾಜಸಭೆಯು ಶಿಕ್ಷಣಪ್ರೀತ್ಯರ್ಥವಾಗಿ ಧರ್ಮಾದಾಯ ಕಾಣಿಕೆಗಳನ್ನು ಅವರಿಗೆ ಸಲ್ಲಿಸುತ್ತಿತ್ತು; ಆದರೂ ಈ ವಿಷಯದಲ್ಲಿ ಬ್ರಾಹ್ಮಣ-ಬ್ರಾಹ್ಮಣರೊಳಗಿನ ಒಳ ಭೇದಗಳ ಅಭಿಮಾನವನ್ನು ಪೇಶ್ವೆಯವರು ಹಿಡಿದಂತೆ ಬಹಳವಾಗಿ ವ್ಯಕ್ತವಾಗುವದಿಲ್ಲ. ಕಾಶಿಯಿಂದ ರಾಮೇಶ್ವರದ ವರೆಗೆ ಪೇಶವೆಯವರ ಧಾರ್ಮಿಕ ಕಾಣಿಕೆಗಳು ಮುಟ್ಟುತ್ತಿದ್ದವು. ಇಡಿ ಹಿಂದುಸ್ತಾನದೊಳಗಿನ ಪಂಚದ್ರಾವಿಡರೂ ಪಂಚಗೌಡರೂ ಶ್ರಾವಣ ಮಾಸದಲ್ಲಿ ಸನ್ಮಾನಿಸಲ್ಪಡುತ್ತಿದ್ದರು. ವೇದವಿದ್ಯೆಯ ಶಿಕ್ಷಣವನ್ನು ಹಿಂದೊಗೆದು ಮುಂದೆ ಹೋದರೆ ಜಾತಿಭೇದದ ಪ್ರಶ್ನವು ಉಳಿಯುವದಿಲ್ಲ. ಮರಾಟಶಾಹಿಯಲ್ಲಿ ಫಕೀರ, ಅವಲಿಯಾ ಮೊದಲಾದ ಮುಸಲ್ಮಾನೀ ಸಾಧು-ಸಂತರಿಗೆ ಅವರ ದೇವಸ್ಥಾನಗಳ ಸಲುವಾಗಿ ಇನಾಮುಗಳು ದೊರೆಯುತ್ತಿದ್ದವು. ಯಾರಾದರೂ ಧರ್ಮಾರ್ಥ ವೈದ್ಯಕವನ್ನಾಗಲಿ ಶಸ್ತ್ರಕ್ರಿಯೆಯನ್ನಾಗಲಿ ಮಾಡುತ್ತಿದ್ದರೆ, ಕೆರೆ-ಬಾವಿಗಳನ್ನು ಕಡಿಸಿದರೆ, ನೆರಳಿಗೆ ಗಿಡಗಳನ್ನು ಹಚ್ಚಿದರೆ, ಅರವಟ್ಟಿಗೆಗಳನ್ನಿರಿಸಿದರೆ ಅವರ ಜಾತಿಗಳ ಕಡೆಗೆ ಲಕ್ಷ್ಯಕೊಡದೆ ಅವರಿಗೆ ಇನಾಮು ದೊರೆಯುತ್ತಿದ್ದವು. ಶಾಹುವಿನ ದಿನಚರಿಯಲ್ಲಿ ಸಯ್ಯದ ದಾವುದ ಬಿನ್ ಸಯ್ಯದ ದಾವಲ ಹಕೀಮ ಶಸ್ತ್ರವೈದ್ಯ, ನಾನಾಸಾಹೇಬ ಪೇಶವೆಯ ದಿನಚರಿಯಲ್ಲಿ ರಣಛೋಡ ನಾಯಿಕ ವೈದ ವಸಯಿಕರ, ರಾಜೇ ಮಹಮ್ಮದ ಶಸ್ತ್ರ-ಹಕೀಮ, ನಾರೋರಾಮ ಬಿನ್ ನರಹರ ವೈದ್ಯ ಬಾಗಲಾಣ, ಭವಾನೀ ಶಂಕರ ವೈದ್ಯ ಗುಜರಾಥ, ಫೀರ ಮಾರತೀಗ ವೈದ್ಯ ರೇವದಂಡಾ, ವಿಠಾರ ಅಬೂ ತಲಬ ಸುರತ ಮೊದಲಾದವರ ಹೆಸರಿನಿಂದ ಇನಾಮು ಕೊಡಲ್ಪಟ್ಟಿದ್ದವು. ಈ ಸಂಗತಿಗಳ ಮೇಲಿಂದ ನೋಡಲಾಗಿ ಮೇಲಿನ ವಿಧಾನವು ಸತ್ಯವಾದದ್ದೆಂದು ವ್ಯಕ್ತವಾಗುವದು. ಇದರಂತೆ ವ್ಯವಹಾರದ ವಿಷಯದಲ್ಲಾದರೂ ಜಾತಿಭೇದದ ದೊಂಬೆಗಳಿದ್ದಿಲ್ಲ ಉದ್ಯೋಗಗಳು ಜಾತಿಗಳಿಗನುರೋಧವಾಗಿದುದರಿಂದ ಆ ಉದ್ಯೋಗಗಳಿಗೆ ಉತ್ತೇಜನ ದೊರೆತರೆ,ಆ ಆ ಜಾತಿಯ ಜನರಿಗೇ ದೊರೆಯುತ್ತಿತ್ತೆಂಬದು ತಾನೆ ಸಿದ್ಧವಾಗುವದು.

---

# ೫ ಮರಾಟರ ಪಾತಶಾಹೀ ಧೋರಣ.



"ಮರಾಟರ ಸಾಮ್ರಾಜ್ಯವು ದಿಲ್ಲೀಪತಿಯಸೇವೆ ಮಾಡಮಾಡುತ್ತಲೇ ಬೆಳೆಯಿತು."

—ರಾಜವಾಡೆ

ಯಾವದೊಂದು ರಾಷ್ಟ್ರದ ಕಾರ್ಯಪರಂಪರೆಯು ಹಿಂದೆ ಒಂದು ನಿಶ್ಚಿತ ಧೋರಣವು ಇದ್ದೇ ಇರುವದು. ಮರಾಟರ ಇತಿಹಾಸದ ಕಡೆಗೆ ನೋಡಿದರೆ ಅದರ ಬೇರೆ ಬೇರೆ ಭಾಗಗಳಲ್ಲಿ ಒಂದು ನಿಶ್ಚಿತ ಧೋರಣವು ಇದ್ದು, ಆ ಧೋರಣದ ಮೇರೆಗೆ ಕಾರ್ಯ ಪರಂಪರೆಯು ಘಟಿಸುತ್ತಿತ್ತೆಂಬದು ವ್ಯಕ್ತವಾಗುವದು. ಸ್ಥೂಲಮಾನದಿಂದ ವಿಚಾರಿಸಿದರೆ ೧೬೪೬ರ ವರೆಗೆ-ಮುಸಲ್ಮಾನ ಪಾತಶಾಹಿಯಲ್ಲಿ ಮಾನ-ಮನ್ನಣೆ ಹೊಂದಿ, ಜಹಾಗೀರಿಗಳನ್ನು ಪಡೆದು ಪರತಂತ್ರತೆಯಿಂದ, ಆದರೆ ಸುಖದಿಂದ ಕಾಲಕಳೆಯುವದು ಮರಾಟರ ಧೋರಣವಾಗಿತ್ತು. ಶಿವಾಜಿಯ ವೇಳೆಯಲ್ಲಿ ಸಣ್ಣದೇ ಆಗಲೊಲ್ಲದೇಕೆ ಒಂದು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಬೇಕೆಂದು ಮರಾಟರ ಧೋರಣವಿತ್ತು. ಶಿವಾಜಿಯ ಮರಣಾನಂತರದಿಂದ ಶಾಹುವು ದಕ್ಷಿಣಕ್ಕೆ ಬರುವವರೆಗೆ ಶಿವಾಜಿಯು ಸ್ಥಾಪಿಸಿದ ರಾಜ್ಯವನ್ನು ಮೊಗಲರ ದಾಳಿಯಿಂದ ರಕ್ಷಿಸುವದು ಅವರ ಧೊರಣವಾಗಿತ್ತು. ಶಾಹುವಿನಿಂದ ಎರಡನೆಯ ಮಾಧವರಾಯನ ವರೆಗಿನ ಮರಾಟರ ಧೋರಣವು ಹಳೇ ರಾಜ್ಯವನ್ನು ಕಾಯ್ದುಕೊಂಡು ಇಡೀ ಹಿಂದುಸ್ಥಾನದ ತುಂಬ ಅಧಿಕಾರವನ್ನು ಸ್ಥಾಪಿಸಬೇಕೆಂದಿತ್ತು. ಆಗ ದಿಲ್ಲಿಯ ಮೊಗಲ ಪಾತಶಾಹಿಯನ್ನು ಔಪಚಾರಿಕವಾಗಿ ರಕ್ಷಿಸಿ, ಪ್ರತ್ಯಕ್ಷ ವ್ಯವಹಾರದಲ್ಲಿ ಹಿಂದುಪದಪಾತಶಾಹಿಯನ್ನು ಮೆರೆಯಿಸಬೇಕೆಂಬ ಧೋರಣವು ಅವರಲ್ಲಿತ್ತು. ಎರಡನೆಯ ಬಾಜೀರಾಯನ ಕಾಲದಿಂದ ಮರಾಟರ ಧೋರಣವು ಮತ್ತೆ ಸಂಕುಚಿತವಾಗಿ ಹೊಸ ಪ್ರದೇಶವನ್ನೂ ಅಧಿಕಾರವನ್ನೂ ದೊರಕಿಸುವ ಹವಣಿಕೆಯನ್ನು ಬಿಟ್ಟು, ಯಾರಿಂದಲಾದರೂ ಹಳೆಯ ರಾಜ್ಯದ ಹಾಗು ಅಧಿಕಾರದ ಸಂರಕ್ಷಣೆ ಮಾಡಿಕೊಳ್ಳುವ ಧೋರಣವು ಅವರಲ್ಲಿತ್ತು. ೧೮೧೮ರ ತರುವಾಯ ಮರಾಟಶಾಹಿಯ ಧೊರಣವು ಹರಿದಾಸನ ಕಥೆಯಂತೆ ಮೂಲ ಪದದ ಮೇಲೆ ಬಂದು, ಮರಾಟ ರಾಜಮಹಾರಾಜರ ಧೋರಣವು ಇಂಗ್ಲಿಷ ಪಾತಶಾಹೀ ಛತ್ರದ ಕೆಳಗೆ ಇದ್ದ ವೈಭವವನ್ನು ಜತನ ಮಾಡಿಕೊಂಡು ಪಾತಶಹನಿಂದ ಮಾನ-ಮನ್ನಣೆ ಹೊಂದಿ ಪಾತಶಾಹಿಯನ್ನು ರಕ್ಷಣೆ ಮಾಡುವದಾಗಿದೆ.

ಮರಾಟರಲ್ಲಿ ನಿಜವಾದ ಪಾತಶಾಹೀ ಧೊರಣವಿರುತ್ತಿದ್ದರೆ, ಅದು ೧೭೦೭ರಿಂದ ೧೭೯೪ರ ವರೆಗೆ ಇತ್ತು. ಈ ಧೋರಣದ ನಿಜವಾದ ಸ್ವರೂಪವು ಹೇಗಿತ್ತೆಂಬದರ ಬಗ್ಗೆ ಸ್ವಲ್ಪ ಪರ್ಯಾಲೋಚಿಸುವದು ಅವಶ್ಯಕವು. 'ಪಾತಶಾಹೀ ಧೋರಣ

ಈ ಶಬ್ದಕ್ಕೆ ಎರಡು ಅರ್ಥಗಳಾಗುವವು. ದಿಲ್ಲಿಯ ಬಾದಶಹನ ಸಂಬಂಧವಾಗಿ ಮರಾಟರ ಧೋರಣವೆಂದು ಒಂದು ಅರ್ಥವಾಗುವದು; ನಾವು ಬಾದಶಹರಿರುವೆವು, ಅಥವಾ ಆಗುವೆವು, ಎಂಬ ಭಾವನೆಯು ಧೋರಣವು ಮತ್ತೊಂದು. ಹದಿನೆಂಟನೆಯ ಶತಮಾನದಲ್ಲಿಯ ಮರಾಟರ ಧೋರಣದಲ್ಲಿ ದಿಲ್ಲಿಯ ಪಾತಶಾಹಿಯು ಮಧ್ಯವರ್ತಿಯೂ ಆಧಾರಭೂತವೂ ಆದ ವಸ್ತುವಾಗಿತ್ತು. ದಿಲ್ಲಿಯ ಪಾತಶಾಹಿಯನ್ನು ಮುಳುಗಿಸಿ ಸ್ವಂತದ ಪಾತಶಾಹಿಯನ್ನು ಸ್ಥಾಪಿಸುವ ವಿಚಾರವು ಒಂದು ವೇಳೆ ಅವರ ಮನಸ್ಸಿನಲ್ಲಿ ಹುಟ್ಟಿದ್ದರೂ ಈ ವಿಷಯದ ಶಬ್ದೋಚ್ಚಾರಣೆಯು ಅವರ ತುಟಿಯಿಂದ ಎಂದೂ ಹೊರಗೆ ಬಿದ್ದಿದ್ದಿಲ್ಲವೆಂದು ನಮಗೆ ತೋರುವದು. ರಾಜಕೀಯ ಮಹತ್ವಾಕಾಂಕ್ಷೆಗೆ ಮೇರೆಯಿರುವದಿಲ್ಲ. 'ಅಹಂ ಬ್ರಹ್ಮಾಸ್ಮಿ'-ನಾನು ಬ್ರಹ್ಮನಿರುವೆನು ಇಂಥ ಪ್ರಕಾರದ ಭಾವನೆಯು ಮಹತ್ವಾಕಾಂಕ್ಷೆಯು ಧರ್ಮದಲ್ಲಿ ಯೋಗ್ಯವಿದ್ದಂತೆ, ರಾಜಕಾರಣದಲ್ಲಿ ನಾನು ಜಗತ್ತಿನ ರಾಜನಾಗುವೆನು, ಎಂಬ ಮಹತ್ವಾಕಾಂಕ್ಷೆಯನ್ನು ಯಾರಾದರೂ ಹಿಡಿದರೆ, ರಾಜನೀತಿಯ ದೃಷ್ಟಿಯಿಂದ ಅದಕ್ಕೆ ಎಂದೂ ಹೆಸರಿಡಲಿಕ್ಕೆ ಬರುವದಿಲ್ಲ. ಇಡೀ ಜಗತ್ತಿನ ರಾಜ್ಯವು ದೊರೆತರೂ ನನಗೆ ಬೇಕಾಗಿದೆ; ಮತ್ತು ಸಾಮರ್ಥ್ಯವಿದ್ದರೆ ಅದನ್ನು ದೊರಕಿಸುವ ಪ್ರಯತ್ನವನ್ನಾದರೂ ಮಾಡುವೆನು, ಎಂದು ಮಹತ್ವಾಕಾಂಕ್ಷಿಯು ನುಡಿಯಬಹುದು; ಆದರೆ ಜಗತ್ತಿನ ವಸ್ತುಸ್ಥಿತಿಯು ಬೇರೆ ವಿಧವಾಗಿದೆ. ಇಡೀ ಜಗತ್ತಿನ ರಾಜ್ಯವು ಒಬ್ಬನ ಅಂಕಿತದಲ್ಲಿ ಎಂದೂ ದೊರೆತಿಲ್ಲ; ಮುಂದೆ ಎಂದೂ ದೊರೆಯುವದಿಲ್ಲ ಇದೇ ದೃಷ್ಟಿಯಿಂದ ಮರಾಟರು ಪಾತಶಾಹೀ ಮಹತ್ವಾಕಾಂಕ್ಷೆಯನ್ನು ಸ್ವಿಕರಿಸಿರಬಹುದು

ಇಂಗ್ಲಿಷರಿಗೆ ಅಥವಾ ಮೊಗಲರಿಗೆ ಹಿಂದುಸ್ಥಾನದ ತುಂಬ ಸಾಮ್ರಾಜ್ಯಾಧಿಕಾರವನ್ನು ಸ್ಥಾಪಿಸುವ ಅಧಿಕಾರವು ಎಷ್ಟು ಇತ್ತೋ, ಅಷ್ಟೇ ಅಧಿಕಾರವು ಮರಾಟರಿಗೂ ಇತ್ತು. ಮರಾಟರಿಗೆ ಅದು ಸಾಧಿಸಲಿಲ್ಲವೆಂಬ ಮಾತು ಬೇರೆ. ಮರಾಟರು ಹಿಂದುಗಳಾದ್ದರಿಂದ ಹಿಂದುಪದಪಾತಶಾಹಿಯು ಅವರ ಪಿತ್ರಾರ್ಜಿತ ಸ್ವತ್ತು. ಈ ದೃಷ್ಟಿಯಿಂದ ನೋಡಿದರೆ ಇತರರಿಗಿಂತ ಇವರ ಅಧಿಕಾರವು ಹೆಚ್ಚಿಗಿರುವದೆಂದು ಹೇಳಬಹುದು. ನ್ಯಾಯ-ನೀತಿಗಳನ್ನು ಯಶಸ್ಸಿದ್ಧಿಯ ಮೇಲೆ ಅವಲಂಬಿಸಿಡುವದು ತತ್ವಜ್ಞಾನ ಸಮ್ಮತವಲ್ಲ. ಹದಿನೆಂಟನೆಯ ಶತಕದಲ್ಲಿ ಹಿಂದುಪಾತಶಾಹಿಯು ಧೋರಣವನ್ನು ಮರಾಟರು ಸ್ಪಷ್ಟವಾಗಿ ಉಚ್ಚಾರ ಮಾಡದೆ ಇದ್ದದ್ದಕ್ಕೆ ತತ್ಕಾಲೀನ ಪರಿಸ್ಥಿತಿಯೇ ಕಾರಣವಾಗಿದೆ. ಯಾವ ಸಂಗತಿಯು ಸಾಮರ್ಥ್ಯದ ಹೊರಗಿನದೋ, ಅದನ್ನು ಬಾಯಿಂದ ಆಡುವದರಿಂದ ಅಪಹಾಸ್ಯಕ್ಕೆ ಕಾರಣವಾಗುವದು. ಅಂತರಂಗದಲ್ಲಿ ಅವರು ಯಾವ ಧೋರಣವಿಟ್ಟಿದ್ದರೆಂಬದರ ಬಗ್ಗೆ ಈಗ ಚರ್ಚೆ ಮಾಡುವ ಕಾರಣವಿಲ್ಲ. ಅವರು ಪ್ರತ್ಯಕ್ಷ ವ್ಯವಹಾರದಲ್ಲಿ ಯಾವ ಧೋರಣವಿಟ್ಟಿದ್ದರೋ, ಅದರ ಬಗ್ಗೆ ವಿಚಾರಿಸುವದು ಉಚಿತವು. ದಿಲ್ಲಿಯ ಪಾತಶಾಹಿಯ ಸಂಬಂಧವಾಗಿ ಮರಾಟರ ಧೋರಣವೇನಿತ್ತೆಂಬದನ್ನಷ್ಟು ವಿಚಾರಿಸಲಿಕ್ಕೆ ಅಡ್ಡಿಯಿಲ್ಲ. ಈ ಧೋರಣವೇ ಅವ

ರಿಗೆ ಸುಮಾರು ಒಂದು ಶತಕದಷ್ಟು ಕಾಲ ಸಾಕಾಯಿತೆಂದ ಮೇಲೆ ಅದರ ಮಹತ್ವವು ಎಷ್ಟಿತ್ತೆಂಬದರ ಕಲ್ಪನೆಯಾಗುವದು.

ದಿಲ್ಲಿಯ ಪಾತಶಾಹಿಯ ಸಂಬಂಧವಾಗಿ ಮರಾಟರ ಧೋರಣವು ಹೇಗಿತ್ತೆಂದರೆ, ದಿಲ್ಲಿಯ ಪಾತಶಾಹಿಯನ್ನು ನಷ್ಟಗೊಳಿಸದೆ ಅದರ ಮುಖ್ಯ ದಿವಾಣಗಿರಿಯನ್ನೂ ಮುಖ್ಯ ಸೇನಾಧಿಪತ್ಯವನ್ನೂ ತಮ್ಮ ಕಡೆಗೆ ಇಟ್ಟುಕೊಂಡು, ಈ ಜೋಡು ಅಧಿಕಾರದ ಬಲದಿಂದ ಸ್ವರಾಜ್ಯವನ್ನು ಬೆಳೆಯಿಸಿ, ಹಿಂದುಸ್ತಾನದೊಳಗಿನ ಎಲ್ಲ ರಾಜ-ಮಹಾರಾಜರ ಮೇಲೆ ವರ್ಚಸ್ಸು ನೆಲೆಗೊಳಿಸಿ, ಹೆಸರಿನಿಂದಲ್ಲದಿದ್ದರೂ ಕೃತಿಯಿಂದ ಹಿಂದುಪದಪಾತಶಾಹಿಯನ್ನು ಮೆರೆಯಿಸಬೇಕೆಂದು ಅವರ ಧೋರಣವಿತ್ತು. ಸ್ವಂತದ ಹೆಸರಿನಿಂದ ಪಾತಶಾಹಿಯನ್ನು ಸ್ಥಾಪಿಸುವದರಲ್ಲಿಯೂ ಕೇವಲ ವ್ಯವಹಾರದ ಮಟ್ಟಿಗೆ ಬಳಕೆಯಲ್ಲಿ ತರುವದರಲ್ಲಿಯೂ ಸ್ಥಿತ್ಯಂತರವಿಲ್ಲೆಂದು ಹೇಳಿದರೆ ಮಾತ್ರ ದೊಡ್ಡ ತಪ್ಪಾಗುವದು. ಯಾಕಂದರೆ, ತೋರಿಕೆಗೂ ದೊಡ್ಡ ಸ್ಥಾನವಿದೆ. ಸಾಧ್ಯಾಸಾಧ್ಯ ವಿಚಾರಗಳಲ್ಲಿ ತೋರಿಕೆಯನ್ನು ಮರೆತರೆ ನಡೆಯುವದಿಲ್ಲ. ಮರಾಟರು ಒಮ್ಮೆಲೆ ದಿಲ್ಲಿಯ ಪಾತಶಾಹಿಯನ್ನು ಮುಳುಗಿಸುವ ವಿಚಾರವನ್ನು ಮಾಡಲಿಲ್ಲವೆಂಬದಕ್ಕೆ ಕಾರಣವುಂಟು. ಅವರಿಗೆ ಅದನ್ನು ಮುಳುಗಿಸಲಿಕ್ಕೆ ಬರುವಂತಿದ್ದಿಲ್ಲ. ಮುಳುಗಿಸುವ ಪ್ರಯತ್ನ ಮಾಡುವರೆಂಬ ಸಂಶಯ ಉಂಟಾಗಿದ್ದರೂ ಸಹ ಹೊಸದನ್ನು ದೊರಕಿಸುವದೊತ್ತಟ್ಟಿಗುಳಿದು, ಹಳೆಯದನ್ನು ಕಳೆದುಕೊಳ್ಳುವ ಪ್ರಸಂಗವು ಅವರಿಗೆ ಉಂಟಾಗುತ್ತಿತ್ತು.

ಇಡೀ ಹಿಂದುಸ್ತಾನದ ತುಂಬ ಹಿಂದುಪದಪಾತಶಾಹಿಯನ್ನು ಪ್ರಸ್ಥಾಪಿಸುವ ಕೆಲಸವಾದರೂ ಕಠಿಣವಾದದ್ದೇ. ಅದರಲ್ಲಿ ಇಡೀ ಹಿಂದುಸ್ತಾನದ ತುಂಬ ಮರಾಟವಂಶದ ರಾಜ್ಯಾಧಿಕಾರವನ್ನು ಪ್ರಸ್ಥಾಪಿಸುವದು ಅದಕ್ಕಿಂತಲೂ ಕಠಿಣವು. ಶಿವಾಜಿಯ ಏಕತಂತ್ರೀಯ ಅಧಿಕಾರವು ಮಹಾರಾಷ್ಟ್ರದಲ್ಲಿ ಪ್ರಸ್ಥಾಪಿತವಾಗಿ ರಾಜ್ಯಪದವು ಅವನ ಮನೆತನದ ಕಡೆಗೆ ಎರಡುನೂರು ವರ್ಷ ನಡೆಯಿತು. ಇದಕ್ಕೆ ಕಾರಣವೇನಂದರೆ, ಶಿವಾಜಿಯ ರಾಜ್ಯವು ವಿಸ್ತೃತವಾದದ್ದಾಗಿರಲಿಲ್ಲ ಆದರೂ ತನ್ನ ತರುವಾಯ ಮರಾಟ ರಾಜ್ಯವನ್ನು ಸ್ಥಿರಗೊಳಿಸಬೇಕಾದರೆ ಶಿವಾಜಿಯು ಅಷ್ಟಪ್ರಧಾನರನ್ನು ನಿರ್ಮಾಣ ಮಾಡಿದನು. ಶಿವಾಜಿಯ ತರುವಾಯ ಮೂರನೆಯ ತಲೆಗೆ ನಿಜವಾದ ರಾಜ್ಯಾಧಿಕಾರವು ಅವನ ಮನೆತನದವರ ಕೈಯಿಂದ ಭಟ್ಟ ಪೇಶವೆಯವರ ಕಡೆಗೆ ಬಂದಿತು; ಆದರೆ ಮೊದಲನೆಯ ಬಾಜೀರಾಯನ ಕಾಲದಿಂದಲೇ ಈ ಅಧಿಕಾರವು ಅಬಾಧಿತವಾಗಿ ತನ್ನ ಮನೆತನದವರ ಕಡೆಗೆ ನಡೆಯುವದೋ ಇಲ್ಲವೋ ಎಂಬ ಸಂಶಯವು ಹುಟ್ಟಿದ್ದರಿಂದ, ಅವನು ಹಳೆಯ ಅಷ್ಟಪ್ರಧಾನರ ಪುನರಜ್ಜೀವನ ಮಾಡದಿದ್ದರೂ ರಾಜ್ಯದ ಆಧಾರಸ್ತಂಭವೆಂದು ದೊಡ್ಡ ದೊಡ್ಡ ಮರಾಟ ಸರದಾರರನ್ನು ನಿರ್ಮಾಣ ಮಾಡಿದನು. ಶಿವಾಜಿಯ ರಾಜ್ಯವು ಚಿಕ್ಕದಿದ್ದುದರಿಂದ, ಅಷ್ಟಪ್ರಧಾನ ಮಂಡಳಿಯ ಕಾರ್ಯಭಾರದ ಎಲ್ಲ ಸೂತ್ರಗಳನ್ನು ಪ್ರತ್ಯಕ್ಷ ಕೈಯಲ್ಲಿ ಹಿಡಿದು

ಕೊಂಡು ಕುಳಿತ ಸ್ಥಳದಲ್ಲಿಯೇ ರಾಜ್ಯವಸ್ಥೆ ನೋಡುವದು ಅವನಿಗೆ ಸಾಧ್ಯವಿತ್ತು. ಶಿವಾಜಿಯ ಕಾಲದಲ್ಲಿಯೇ ಹೆಚ್ಚಾಗಿ ರಾಜ್ಯವಿಸ್ತಾರವಾಗಿತ್ತೆಂದರೆ ಅವನಿಗೆ ಸಹ ಏಕತಂತ್ರೀಯ ಅಧಿಕಾರವನ್ನು ಕೈಯಲ್ಲಿಟ್ಟುಕೊಳ್ಳಲಿಕ್ಕೆ ಆಗುತ್ತಿದ್ದಿಲ್ಲ. ಅಧಿಕಾರ ವಿಭಾಗವನ್ನು ಮಾಡಿ, ಅಂದರೆ ಪರ್ಯಾಯದಿಂದ ಸರದಾರರಿಗೆ ಹೆಚ್ಚು-ಕಡಿಮೆ ಸ್ವಾತಂತ್ರ್ಯ ಕೊಟ್ಟು, ಕಾರ್ಯಭಾರ ನಡೆಯಿಸುವ ಆವಶ್ಯಕತೆಯು ಪ್ರತ್ಯಕ್ಷ ಶಿವಾಜಿಗೆ ಸಹ ಉಂಟಾಗುತ್ತಿತ್ತು.

ಶಿವಾಜಿಗಿಂತ ಹೆಚ್ಚಿನ ತೊಂದರೆಗಳು ಪೇಶವೆಯವರಿಗಿದ್ದವು. ಸಾತಾರೆಯಲ್ಲಿ ಕರ್ತೃತ್ವವು ಉಳಿಯದ್ದರಿಂದ ಪೇಶವೆಯವರು ಮುಖ್ಯ ರಾಜ್ಯಕಾರಣದ ಭಾರವನ್ನು ಎಳೆದು ಪುಣೆಗೆ ತಂದು ತಮ್ಮ ಕೈಯಲ್ಲಿಟ್ಟುಕೊಂಡರು. ಇದರಲ್ಲಿ ಒಂದು ದೃಷ್ಟಿಯಿಂದ ದೋಷವನ್ನು ಕಲ್ಪಿಸಲಿಕ್ಕೆ ಬರುವದಿಲ್ಲ; ಆದರೆ 'ರಾಜ್ಯಭಾರ' ಈ ಶಬ್ದಕ್ಕೆ 'ಅಧಿಕಾರಲಾಲಸೆ' ಎಂದು ಅರ್ಥ ಮಾಡುವ ಜನರಾದರೂ ಆ ಕಾಲಕ್ಕೆ ಇದ್ದರು. ಭಟ್ಟ ಪೇಶವೆಯವರ ಮನೆತನವು ಕೊಂಕಣದಿಂದ ಬಂದದ್ದು. ಆ ಮನೆತನಕ್ಕೆ ದೊಡ್ಡಿಸ್ತಿಕೆಯ ಪರಂಪರೆಯಿದ್ದಿಲ್ಲ. ಆದ್ದರಿಂದ ನೂರಾರು ವರ್ಷಗಳಿಂದ ದೊಡ್ಡಿಸ್ತಿಕೆ ಪಡೆದ ಮರಾಟರ ಮನೆತನಗಳಿಗೆ ಪೇಶವೆಯ ಬಗ್ಗೆ ಹೇವವುಂಟಾದದ್ದು ಅಸ್ವಾಭಾವಿಕವಲ್ಲ. ಬ್ರಾಹ್ಮಣರು ಶಾಹುವಿಗೆ ಮಂಕುಬೂದಿ ಹಚ್ಚಿ ರಾಜ್ಯಾಧಿಕಾರದ ಗುತ್ತಿಗೆಯನ್ನು ತಮ್ಮ ಕಡೆಗೆ ತೆಗೆದುಕೊಂಡರೆಂದು ಆ ಮನೆತನಗಳ ತಿಳುವಳಿಕೆಯಾಗಿತ್ತು. ಪೇಶವೆ ಪದವು ಬ್ರಾಹ್ಮಣರ ಕಡೆಗೆ ಏಕೆ? ಅದರಲ್ಲಿಯೂ ಕೊಂಕಣಸ್ಥ ಬ್ರಾಹ್ಮಣರ ಕಡೆಗೇ ಏಕೆ? ಮೊದಲಾದ ಪ್ರಶ್ನೆಗಳನ್ನು ಉಪಸ್ಥಿತ ಮಾಡುವ ಅನೇಕ ಜನರು ಪೇಶವೆಯವರಿಗೆ ಭೆಟ್ಟಿಯಾದರು; ಆದರೆ ಮೂರು ನಾಲ್ಕು ತಲೆಗಳ ವರೆಗೆ ಕರ್ತೃತ್ವಶಾಲಿಗಳಾದ ಪುರುಷರು ಒಬ್ಬರ ಹಿಂದೊಬ್ಬರು ಪೇಶವೆ ಮನೆತನದಲ್ಲಿ ಉದಯಹೊಂದಿದ್ದರಿಂದ ಆ ಅಧಿಕಾರವನ್ನು ಕಸಿದುಕೊಳ್ಳುವದು ಸಹಜವಾಗಿ ದುರ್ಘಟವಾಯಿತು; ಆದರೆ ಪೇಶವೆ ಪದವು ಮೊದಲು ಪಂಪರಾಗತವಾಗಿ ಇದ್ದಿಲ್ಲ; ಈಗ ಅದಕ್ಕೆ ಪರಂಪರಾಗತ ಸ್ವರೂಪವು ಪ್ರಾಪ್ತವಾಯಿತು, ಎಂದು ಪೇಶವೆಯವರ ಪ್ರತಿಪಕ್ಷಿಗಳು ಅವರೊಡನೆ ಹೆಚ್ಚು ಹೆಚ್ಚಾಗಿ ವೈರವನ್ನು ಬಳೆಯಿಸತೊಡಗಿದರು. ದಾಭಾಡೆ, ಗಾಯಕವಾಡ, ಭೋಸಲೆ ಮೊದಲಾದ ಅನೇಕ ಮರಾಟ ಸರದಾರರು ಇದೇ ಕಾರಣಕ್ಕಾಗಿಯೇ ಪೇಶವೆಯವರೊಡನೆ ವೈರ ಮಾಡುತ್ತಿದ್ದರು. ರಾಜ್ಯಾಧಿಕಾರವನ್ನು ಆಕ್ರಮಿಸಿದ್ದರ ಆರೋಪವು ತಮ್ಮ ಮೇಲಿರುವದೆಂಬದರ ಅರಿವು ಪೇಶವೆಯವರಿಗೆ ನಿರಂತರವಾಗಿ ಇತ್ತು. ಆದ್ದರಿಂದ ಶಿವಾಜಿಯು ಮಾಡದೆ ಇದ್ದ ಕೆಲಸವನ್ನು ಅಂದರೆ, ಸರದಾರರಿಗೆ ಸ್ವತಂತ್ರ ಸಂಸ್ಥಾನಗಳನ್ನೂ ಸರಂಜಾಮುಗಳನ್ನೂ ಕೊಟ್ಟು, ಅವರ ಮಹತ್ವಾಕಾಂಕ್ಷೆಯ ಸಮಾಧಾನವನ್ನು ಪೇಶವೆಯವರು ಮಾಡಬೇಕಾಯಿತು.

ಪೇಶವೆಯವರ ಕಾಲದಲ್ಲಿ ಶಿವಾಜಿಯ ಕಾಲಕ್ಕಿಂತ ಹೆಚ್ಚಾಗಿ ರಾಜ್ಯವಿಸ್ತಾರವಾದದ್ದರಿಂದ ಅಧಿಕಾರವಿಭಾಗದೊಡನೆ ಸತ್ತಾವಿಭಾಗವನ್ನೂ ಮಾಡಬೇಕಾಯಿತು.

ಪೇಶವೆಯು ಪುಣೆಯಲ್ಲಿದ್ದು, ಒಂದು ಕಡೆಗೆ ದಿಲ್ಲಿಯ ಸುತ್ತಲಿನ, ಮತ್ತೊಂದು ಕಡೆಗೆ ಕಲಕತ್ತೆಯ ಸುತ್ತಲಿನ, ಮಗದೊಂದು ಕಡೆಗೆ ತಂಜಾವರ ತ್ರಿಚಿನಾಪಳ್ಳಿಗಳ ಸುತ್ತಲಿನ ಪ್ರದೇಶಗಳನ್ನು ಗೆಲ್ಲುವದು ಹೇಗೆ? ಅರ್ಥಾತ್ ಈ ಕೆಲಸಗಳ ಬಹುಭಾಗವನ್ನು ಪೇಶವೆಯವರು ಸರದಾರರ ಕಡೆಗೆ ಒಪ್ಪಿಸಬೇಕಾಯಿತು. ಯಾವನು ಕರ್ತೃತ್ವವನ್ನು ತೋರಿಸುವನೋ, ಅವನಿಗೆ ಅಧಿಕಾರವು ಎಷ್ಟಾದರೂ ದೊರೆತೇ ದೊರೆಯುವದು. ಇದೇ ನ್ಯಾಯದಿಂದ ಮರಾಟ ಸರದಾರರಿಗೆ ಅನಾಯಾಸವಾಗಿ ಸ್ವಾತಂತ್ರ್ಯ ಲಾಭವಾಗಿತ್ತು. ಪೇಶವೆ ರಾಜ್ಯವು ಬಹಳ ಬೆಳೆದಿತ್ತೆಂಬುದೇನೋ ನಿಜ; ಆದರೆ ಕಂದಾಯವನ್ನು ತೆಗೆದುಕೊಳ್ಳುವ ಗೊಂದಲವು ಬಹಳವಾಗುತ್ತಿತ್ತು. ಪ್ರಜೆಗಳು ತೆರಿಗೆಯನ್ನು ನಿಯಮಿತವಾಗಿ ಕೊಡುತ್ತಿದ್ದರೂ ಮಹಾಲಿನ ಹಾಗು ಸುಭೆಯ ಅಧಿಕಾರಿಗಳು ಬೊಕ್ಕಸಕ್ಕೆ ಹಣ ಕಳಿಸುವದನ್ನು ದುರ್ಲಕ್ಷಿಸುತ್ತಿದ್ದರು. ಜಾಟ, ರಜಪುತ ಮೊದಲಾದ ಅಸಂತುಷ್ಟ ಹಾಗು ಶೂರ ಜನರಿಂದ ತೆರಿಗೆ ಎತ್ತುವ ಹಾಗು ನಿಜಾಮನಂಥ ಬಲಿಷ್ಠ ಸುಭೇದಾರನಿಂದ ಚೌಥಾಯಿ ಎತ್ತುವ ಪ್ರಸಂಗದಲ್ಲಿ ಪ್ರತಿವರ್ಷ ಬಹಳೇ ಗೊಂದಲವೆದ್ದು ದಾಳಿಯವರೆಗೆ ಪ್ರಸಂಗ ಬರುತ್ತಿತ್ತು. ಆದ್ದರಿಂದ ಶಿಂದೆ, ಹೋಳಕರ ಮೊದಲಾದ ಸರದಾರರ ಆವಶ್ಯಕತೆಯುಂಟಾಯಿತು. ಈ ಆವಶ್ಯಕತೆಯೊಡನೆ ಅವರ ಮಹತ್ವವೂ ಬೆಳೆಯಿತು.

ಕಾಯಿದೆಯ ಭಾಷೆಯಿಂದ ನೋಡಿದರೆ ಶಿಂದೆ, ಹೋಳಕರರು ರಾಜ್ಯದ ನೌಕರರೆಂದು ಅನ್ನಲಿಕ್ಕೆ ಬರುವಂತಿತ್ತು. ಪರಿಪಾಠಿನಂತೆ ಸರಂಜಾಮಿನ ಹಾಗು ಜಹಾಗಿರಿಯ ಲೆಕ್ಕವನ್ನು ತೆಗೆದುಕೊಳ್ಳುವ ಯೋಗ ಬಂದಾಗ ಫಡಣವೀಸೀ ಭಾಗವೊಳಗಿನ ಗುಮಾಸ್ತನು ಸಹ ಅಧಿಕಾರಿಯಾಗಿ, ಶಿಂದೆ-ಹೋಳಕರರ ಕಣ್ಣುಗಳಲ್ಲಿ ಬೆರಳಾಡಿಸಲಿಕ್ಕೆ ಸಾಧ್ಯವಿತ್ತು; ಆದರೆ ಸರಂಜಾಮುದ ಲೆಕ್ಕವನ್ನು ಪೇಶವೆಯವರು ಬೇಡಿದರೆ ಅದು ತಮಗೆ ಅಪಮಾನವೂ ಹೀನತನವೂ ಎಂದು ತಿಳಿದುಕೊಳ್ಳುವಷ್ಟು ಈ ಸರದಾರರ ಮಹತ್ವವು ಬೆಳೆದಿತ್ತು. ಅರ್ಥಾತ್ ಸರದಾರ ಜನರ ದೊಡ್ಡಿಸ್ತಿಕೆಯು ಈ ವಿಧವಾಗಿ ಬೆಳೆದದ್ದರಿಂದ ರಾಜ್ಯದ ವ್ಯಾಪಕಧೋರಣವನ್ನು ಅವರ ಅನುಮತಿಯ ಹೊರತು ನಿರ್ಧರಿಸುವದು ಪೇಶವೆಗೆ ಅಸಾಧ್ಯವಾಯಿತು ಸರದಾರರು ಯುದ್ಧಮಾಡಿ ಗೆದ್ದು ಶತ್ರುಗಳನ್ನು ಒಪ್ಪಂದಕ್ಕೆ ತರಬೇಕು; ಫಡಣವೀಸನು ಮುಲಕೀ ಧೋರಣವನ್ನು ನೋಡಿ ಒಪ್ಪಂದದ ಕಟ್ಟಳೆಗಳನ್ನು ರಚಿಸಬೇಕು; ಪೇಶವೆಯು ಒಪ್ಪಿಗೆಯನ್ನು ಕೊಡಬೇಕು; ಸಾತಾರೆಯ ಛತ್ರಪತಿಯು ಅದರ ಮೇಲೆ ರಾಜಮುದ್ರೆಯನ್ನು ಒತ್ತಬೇಕು. ಈ ಬಗೆಯ ಚತುಷ್ತಂತ್ರೀಯ ಕಾರ್ಯಭಾರವು ನಡೆಯುತ್ತಿದ್ದು, ಇವರೊಳಗಿನ ಪ್ರತಿಯೊಬ್ಬನಿಗೆ ಉಳಿದ ಮೂರು ತಂತ್ರಗಳನ್ನು ಜತನ ಮಾಡಬೇಕಾಗುತ್ತಿತ್ತು. ಎಲ್ಲಿಯ ವರೆಗೆ ಈ ನಾಲ್ಕೂ ತಂತ್ರಗಳು ಆದರಪೂರ್ವಕವಾಗಿ ಜತನವಾದವೋ, ಅಲ್ಲಿಯವರೆಗೆ ಮರಾಟಶಾಹಿಯ ಅಂತಸ್ಥ ಸಾಮರ್ಥ್ಯವು ಜೀವಂತವಾಗಿ ಉಳಿದಿತ್ತು. ಇಂಗ್ಲಿಷ ಜನರು ಮರಾಟಶಾಹಿಯ ವರ್ಣನೆ ಮಾಡುವಾಗ ಅದಕ್ಕೆ ಮರಾಟ ರಾಜ್

ವೆಂದು ಅನ್ನದೆ, ಮರಾಟ ಸಂಘ(ಕಾನ್ಫೀಡರಸಿ)ಎಂದು ಅನ್ನುತ್ತಿದ್ದರು. ಈ ವರ್ಣನೆಯು ಸರಿಯಾದದ್ದಾಗಿದೆ. ಎಲ್ಲಿಯವರೆಗೆ ಈ ಸಂಘವು ಸ್ಥಿರವಾಗಿತ್ತೋ ಅಲ್ಲಿಯವರೆಗೆ ಹಿಂದುಸ್ತಾನದ ತುಂಬ ಮರಾಟರ ವರ್ಚಸ್ಸವು ಬೆಳೆಯುತ್ತ ನಡೆಯಿತು; ಆದರೆ ಆ ಸಂಘವು ಮುರಿದ ಕೂಡಲೆ ಅದರ ಶಕ್ತಿಯೂ ನಷ್ಟವಾಯಿತು.

ಈ ಸಂಘವು ಅಸ್ತಿತ್ವದಲ್ಲಿದ್ದಾಗ ಮರಾಟರು ಹಿಂದುಸ್ತಾನದ ತುಂಬ ತಮ್ಮ ಅಧಿಕಾರಸ್ಥಾಪನೆ ಮಾಡುವ ಪ್ರಯತ್ನವನ್ನು ಹೇಗೆ ಮಾಡಿದರೆಂಬದನ್ನು ಸ್ವಲ್ಪದರಲ್ಲಿ ನೋಡೋಣ. ಒಂದು ಕಡೆಗೆ ಮರಾಟರ ಮೂಲ ಸಿಂಹಾಸನವು ಸಾತಾರೆಯಲ್ಲಿತ್ತು; ಅದನ್ನು ಪೂರಾ ಮುರಿದು ಪುಣೆಗೆ ತರುವದು ಪೇಶವೆಯವರಿಗೆ ಇಷ್ಟವೂ ಸಾಧ್ಯವೂ ಆಗರಲಿಲ್ಲ. ಎರಡನೆಯ ಕಡೆಗೆ ಸಾತಾರೆಯ ಸಿಂಹಾಸನದಂತೆ ದುರ್ಬಲವಾಗಿ ಜೀವ ಹಿಡಿದುಕೊಂಡಿದ್ದ ಮೊಗಲರ ಸಿಂಹಾಸನವು ದಿಲ್ಲಿಯಲ್ಲಿತ್ತು. ಇಂಥ ಸ್ಥಿತಿಯಲ್ಲಿ ಪೇಶವೆಯವರಿಗೆ ಇಡೀ ಹಿಂದುಸ್ಥಾನದಲ್ಲೆಲ್ಲ ಅಧಿಕಾರ ಪ್ರಸ್ಥಾಪನೆ ಮಾಡುವದು ಕಠಿಣವಾಗಿತ್ತು. ಸಾತಾರೆಯ ಸಿಂಹಾಸನವನ್ನು ಮುರಿಯಲಿಕ್ಕೆ ಎಷ್ಟು ತೊಂದರೆಗಳಿದ್ದವೋ, ಅದಕ್ಕಿಂತ ಹೆಚ್ಚು ತೊಂದರೆಗಳು ದಿಲ್ಲಿಯ ಸಿಂಹಾಸನವನ್ನು ಮುರಿಯುವದರ ಸಲುವಾಗಿ ಇದ್ದವು. ರಾಜನಿಷ್ಠೆಯ ಭಾವನೆಯಿಂದ ಸಾತಾರೆಯ ಸಿಂಹಾಸನವನ್ನು ಮುರಿಯಬಾರದೆಂದು ಪೇಶವೆಯವರಿಗೆ ತೋರುತ್ತಿತ್ತು; ಆದರೆ ಮೊಗಲರ ಸಿಂಹಾಸನವನ್ನು ಮುರಿಯಲಿಕ್ಕೆ ರಾಜನಿಷ್ಠೆಯ ಬಂಧನವೇನೂ ಇದ್ದಿಲ್ಲ; ಆದರೆ ಆ ಕೆಲಸವನ್ನು ನೆರವೇರಿಸುವದು ಕಠಿಣವಿತ್ತು. ಅರ್ಥಾತ್ ಇಂಥ ಸ್ಥಿತಿಯಲ್ಲಿ ಸಿಂಹಾಸನವನ್ನು ನಷ್ಟಪಡಿಸದೆ ಅಧಿಕಾರವನ್ನು ಮಾತ್ರ ಕೈಯಲ್ಲಿ ತೆಗೆದುಕೊಳ್ಳಬೇಕೆಂಬ ಪ್ರಶ್ನೆಯು ಮರಾಟರ ಕಣ್ಣೆದುರಿಗೆ ಯಾವಾಗಲೂ ಇರುತ್ತಿತ್ತು; ಆದರೆ ಅವಸರ ಮಾಡದೆ ಯುಕ್ತಿಯಿಂದ ಈ ಪ್ರಶ್ನೆಯನ್ನು ಬಿಡಿಸುವದಕ್ಕೆ ಅವರು ಉದ್ಯುಕ್ತರಾಗಿದ್ದರು. ಸಾತಾರೆಯ ಅಧಿಕಾರವನ್ನು ಪುಣೆಗೆ ತರುವ ಕೆಲಸವು ನಾನಾಸಾಹೇಬ ಪೇಶವೆಯಿಂದ ನೆರವೇರಿತ್ತು. ದಿಲ್ಲಿಯ ಪಾತಶಾಹಿಯ ಸತ್ತೆಯನ್ನು ಸ್ವಾಧೀನಪಡಿಸಿಕೊಳ್ಳುವದಕ್ಕಾದರೂ ಪೇಶವೆಯವರು ಇದೇ ಯುಕ್ತಿಯ ಅವಲಂಬನ ಮಾಡಿದರು. ದಿಲ್ಲಿಯ ಅಧಿಕಾರವನ್ನು ರಾಯಗಡಕ್ಕೆ ತರುವ ಉಪಕ್ರಮವು ಸಾತಾರೆಯ ಅಧಿಕಾರವು ಪುಣೆಗೆ ಬರುವದಕ್ಕಿಂತ ಮೊದಲೇ ಮಾಡಲ್ಪಟ್ಟಿತ್ತು. ಈ ಉಪಕ್ರಮವು ಶಿವಾಜಿ ಮಹಾರಾಜನಿಂದ ನಡೆಯಿತು. ಮೊಗಲರ ಸತ್ತೆಯು ಮರಾಟರ ಕೈಯಲ್ಲಿ ಬರಬೇಕೆಂಬ ಉದ್ದೇಶದಿಂದಲೇ ಸಾತಾರೆಯ ಸತ್ತೆಯು ಪುಣೆಗೆ ತರಲ್ಪಟ್ಟಿತು. ಮೊದಲನೆಯ ಬಾಜೀರಾಯನು ಮರಾಟರ ಪಾತಶಾಹೀ ಧೋರಣವನ್ನು ವಕ್ತೃತ್ವಪೂರ್ಣವಾಗಿ ವಿವರಿಸಿದಾಗ ಅದರ ಮರ್ಮವನ್ನು ತಿಳಿಯುವಂಥ ರಾಜನೆಂದರೆ, ಸ್ವತಃ ಶಾಹೂರಾಜನು ಸಾತಾರೆಯ ಸಿಂಹಾಸನದ ಮೇಲೆ ಇದ್ದನು. ಶಾಹೂರಾಜನ ತರುವಾಯ ಈ ಮರ್ಮವನ್ನು ತಿಳಿದುಕೊಳ್ಳುವಂಥ ರಾಜನು ಸಾತಾರೆಯ ಸಿಂಹಾಸನಕ್ಕೆ ಲಭಿಸದ್ದರಿಂದಲೇ ರಾಜಕಾರಣದ ಮುಖ್ಯ ಕೇಂದ್ರವು ಪುಣೆಯಾಯಿತು. ಶಾಹು

ವಿನ ಮೃತ್ಯುಪತ್ರವು ಸಟೆಯಿರಲಿ-ದಿಟವಿರಲಿ ಮೊಗಲರ್‍ ಕಾರ್ಯಕಾರಿ ಅಧಿಕಾರವನ್ನು ಸಾಧಿಸುವ ಶಿವಾಜಿ ಮಹಾರಾಜನ ಉದ್ದೇಶವನ್ನು ಸಿದ್ಧಿಗೆ ತರುವ ಪ್ರಯತ್ನವು ಪೇಶವೆಯವರಿಂದ ಮಾಡಲ್ಪಟ್ಟಿತು. ಪೇಶವೆಯವರು ತಮ್ಮ ಮಹತ್ವವನ್ನು ಬೆಳೆಯಿಸಿದರೂ ಮೊದಲಿನ ಪಾತಶಾಹೀ ಧೋರಣವನ್ನು ಮುಂದುವರಿಸಿದರೆಂಬ ಮಾತು ನಿಜವು; ಆದರೆ ಶಾಹೂರಾಜನ ಕಾಲದಲ್ಲಿ ಪ್ರಚಂಡ ರಾಜಕೀಯ ಆಂದೋಲನ ನಡೆಯಿಸಿದ ಬಾಳಾಜಿ ವಿಶ್ವನಾಥ ಪೇಶವೆಗೆ ಈ ಪಾತಶಾಹೀ ಧೋರಣದ ಕಲ್ಪನೆಯ ಯಶಸ್ಸು ಕೊಡಲ್ಪಟ್ಟಿರುವದು; ಆದರೆ ಈ ಧೋರಣದ ಮೂಲವು ಬಾಳಾಜಿ ವಿಶ್ವನಾಥನಾಗಿರದೆ ಶಿವಾಜಿಮಹಾರಾಜನಾಗಿದ್ದಾನೆಂದು ಹೇಳಬಹುದು.

ಯಾವದಾದರೊಂದು ಬಾಧ್ಯತೆಯನ್ನು ದೊರಕಿಸುವದಾದರೆ ಅದು ಪ್ರತಿಪಕ್ಷಿಗಳ ಅಧಿಕಾರದಿಂದಲೇ ಸುಸಾಧ್ಯವೆಂಬದನ್ನು ಶಿವಾಜಿಯು ಚೆನ್ನಾಗಿ ಗುರುತಿಸಿದ್ದನು. ತನ್ನ ಸ್ವರಾಜ್ಯದ ಬಾಧ್ಯತೆಯು ಬೇರೆ, ಮೊಗಲ ರಾಜ್ಯದಲ್ಲಿ ವರ್ಚಸ್ವವನ್ನು ಪ್ರಸ್ಥಾಪಿಸುವ ಅಧಿಕಾರ ಬೇರೆ ಎಂದು ಶಿವಾಜಿ ಮಹಾರಾಜನು ಅಂತರಂಗದಲ್ಲಿ ಭಾವಿಸಿರಲಿಲ್ಲವಾದರೂ ತೋರಿಕೆಗೆ ಹಾಗೆ ಮಾಡುತ್ತಿದ್ದನೆಂದು ಕಂಡುಬರುವದು. ಅವನ ಮೊದಲನೇ ಅಧಿಕಾರವು ಜನ್ಮಸಿದ್ಧವಾದದ್ದು. ಆದ್ದರಿಂದ ಸ್ವರಾಜ್ಯಕ್ಕಾಗಿ ಅವನು ಮೊಗಲರೊಡನೆ ಯುದ್ಧ ಮಾಡಿದನು. ಈ ಅಧಿಕಾರದ ವಿಷಯವಾಗಿ ಒಡಂಬಡಿಕೆಯಾಗುವ ಸಂಭವವಿದ್ದಿಲ್ಲ. ಶಿವಾಜಿಯ ತಂದೆಯ ಕಾಲದ ವರೆಗೆ ಈ ಒಪ್ಪಂದದ ಧೋರಣವು ಪ್ರಚಾರದಲ್ಲಿತ್ತು. ಶಹಾಜಿಯ ವರೆಗಿನ ಮರಾಟ ರಾಜರು ಶಿವಾಜಿಯಷ್ಟು ಎದೆಗಾರರಿದ್ದಿಲ್ಲವೆಂದಾಗಲಿ, ಆಗಿನ ಪರಿಸ್ಥಿತಿಯು ಅತ್ಯಂತ ಕಠಿಣವಿತ್ತೆಂದಾಗಲಿ ಸ್ವಲ್ಪ ಸಾಡಿನದೇ ಯಾಕಾಗಲೊಲ್ಲದು, ಸ್ವತಂತ್ರರಾಜರೆನಿಸಿಕೊಳ್ಳುವ ಎದೆಗಾರಿಕೆಯನ್ನು ಶಿವಾಜಿಯ ಕಾಲದ ವರೆಗಿನ ರಾಜರು ಮಾಡಲಿಲ್ಲವೆಂಬದು ನಿಜ. ಆದ್ದರಿಂದ ಮನಸಬದಾರಿಕೆಯ ಅಥವಾ ಸರದಾರಿಕೆಯ ಬಹುಮಾನದಿಂದ ಅವರು ಸಂತುಷ್ಟರಾದರು. ಶಿವಾಜಿಯು ಮಾತ್ರ ಈ ಬಗೆಯ ಬಹುಮಾನದಿಂದ ಸಮಾಧಾನ ಹೊಂದಲಿಲ್ಲ. ಈ ಅಸಂತೋಷಕ್ಕೆ ಯಶಸ್ಸಿನ ಸ್ವರೂಪ ಕೊಡುವ ಪ್ರತಾಪಶಾಲಿಯು ಆತನಿದ್ದುದರಿಂದ, ಅವನು ಸ್ವಾತಂತ್ರ್ಯಸಂಗ್ರಾಮವನ್ನು ಹೂಡಿ ಸ್ವರಾಜ್ಯ ಸಂಪಾದನೆ ಮಾಡಿದನು. ಶಿವಾಜಿಯ ಮಹತ್ವಾಕಾಂಕ್ಷೆಯು ಇಷ್ಟರಿಂದ ತೃಪ್ತಿ ಹೊಂದತಕ್ಕಂಥದಿರಲಿಲ್ಲವೆಂಬಂತೆ ತೋರುವದು; ಆದರೆ ಯಾವ ನಾಡು ಮೊದಲು ಮರಾಟರ ಕೈಯಲ್ಲಿದ್ದಿಲ್ಲವೋ, ಯಾವ ನಾಡನ್ನು ಮೊಗಲರು ಜಯಿಸಿ ಅದರ ಮೇಲೆ ತಮ್ಮ ವರ್ಚಸ್ವವನ್ನು ನೆಲೆಗೊಳಿಸಿರುವರೋ ಅಂಥ ನಾಡನ್ನು ಕೈಯಲ್ಲಿ ತೆಗೆದುಕೊಳ್ಳುವದಾದರೆ, ಪ್ರತ್ಯಕ್ಷ ಯುದ್ಧವನ್ನೇ ಮಾಡಬೇಕೆಂದು ಅವನ ಮಾನಸವಿದ್ದಿಲ್ಲವೆಂಬಂತೆ ತೋರುವದು.

ಈ ವಿಷಯದಲ್ಲಿ ಒಡಂಬಡಿಕೆಯ ಧೋರಣದಿಂದ ಸಾಗುವದೇ ಒಳ್ಳೇದೆಂದು ಶಿವಾಜಿಯ ನಿರ್ಧಾರವಿರಲಿಕ್ಕೆ ಬೇಕು. ಆ ಪ್ರಾಂತದ ಮೇಲೆ ಇದ್ದ ಮೊಗಲ

ವರ್ಚಸ್ಸವನ್ನು ಅಳಿಸಿಹಾಕದೆ, ಆ ಅಧಿಕಾರದ ಅಂಶಮಾತ್ರವಾಗಿ ಮೊಗಲರ ಮುಖ ತ್ಯಾರನೆನಿಸಿಕೊಂಡು, ಅವರ ಸಮ್ಮತಿಯಿಂದ ಅಧಿಕಾರವನ್ನು ದೊರಕಿಸುವದು ಆ ಒಡಂಬಡಿಕೆಯ ಉದ್ದೇಶವಾಗಿತ್ತು. ಮೊಗಲರ ಅನೇಕ ಅಧಿಕಾರಗಳಲ್ಲಿ ಚೌಥಾಯಿ ಸರದೇಶಮುಖಿ ಅಧಿಕಾರಗಳನ್ನು ದೊರಕಿಸಿದರೆ ಅವುಗಳ ಬಲದಿಂದ ಉಳಿದ ಎಲ್ಲ ಅಧಿಕಾರಗಳನ್ನು ದೊರಕಿಸುವದು ಸಾಧ್ಯವಾಗುವದೆಂದು ಶಿವಾಜಿಗೆ ತೋರಿರಬಹುದು. ಈ ಯುಕ್ತಿಯು ಶಿವಾಜಿಯ ತಲೆಯಲ್ಲಿಯೇ ಮೊದಲು ಹುಟ್ಟಿತೆಂದು ಹೇಳಲಿಕ್ಕೆ ಬರುವದಿಲ್ಲ ಅವನಿಗಾದರೂ ಹಳೆಯ ಇತಿಹಾಸದ ಜ್ಞಾನಪರಿಶೀಲನೆಯಿಂದ ಗೊತ್ತಾಗಿರಬಹುದು. ಯಾಕಂದರೆ, ರಾಜನೀತಿಯು ಅಥವಾ ರಾಜಕಾರಣ ಕುಶಲತೆಯು ಮನುಷ್ಯವಂಶದ ಇತಿಹಾಸದಷ್ಟೇ ಸನಾತನವಿರುವದು "ಧಾತಾಯಥಾ ಪೂರ್ವಮಕಲ್ಪಯತ್" ಈ ನ್ಯಾಯವು ಇತಿಹಾಸದಲ್ಲಿ ಮೇಲಿಂದ ಮೇಲೆ ದೃಗ್ಗೋಚರವಾಗುವದು. ನ್ಯಾಯಮೂರ್ತಿ ರಾನಡೆಯವರು ಮರಾಟರ ಇತಿಹಾಸದ ಮೇಲಿನ ತಮ್ಮ ಸರ್ವಶ್ರುತ ನಿಬಂಧದಲ್ಲಿ ನಿರ್ದೇಶಿಸಿದಂತೆ ಶಿವಾಜಿಯ ತರುವಾಯ ನೂರಾರು ವರ್ಷಗಳ ಮೇಲೆ ಇಂಗ್ಲಿಷರಾದರೂ ಇದೇ ಯುಕ್ತಿಯನ್ನು ಅವಲಂಬಿಸಿದರು. ರಾನಡೆಯವರು ಅನ್ನುವದೇನಂದರೆ:—"ಮುಸಲ್ಮಾನ ಬಾದಶಹರ ಕೈಯೊಳಗಿನ ಎಲ್ಲ ಅಧಿಕಾರಗಳು ಇಲ್ಲದಂತಾಗಿ ಕೊನೆಗೆ ಅವು ಮರಾಟಮಂಡಲದ ಸ್ವಾಧೀನವಾದವು. ಮೇಲಿನ ಸಂಗತಿಯ ಸಾಮ್ಯವು ಹಿಂದುಸ್ತಾನದ ಇತಿಹಾಸದಲ್ಲಿ ಕ್ವಚಿತ್ತಾಗಿ ಕಂಡುಬರುವದು. ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಮಾರ್ಕ್ವಿಸ ಆಫ್ ವೆಲ್ಲಸ್ಲಿಯು ಮಾಡಿದ ದೊಡ್ಡ ಕಾರ್ಯಕ್ಕೆ ಈ ಸಂಗತಿಯ ಸಾಮ್ಯವು ಕಂಡುಬರುವದು ಮಾರ್ಕ್ವಿಸ ವೆಲ್ಲಸ್ಲಿಯು ಏತದ್ದೇಶೀಯ ಸಂಸ್ಥಾನಿಕರಿಂದ ಹಣ ತೆಗೆದುಕೊಂಡು ಸೈನ್ಯವನ್ನು ಪೂರೈಸುವ ಒಪ್ಪಂದ ಮಾಡಿಕೊಂಡನು. ಅದರಲ್ಲಿ ಇಂಗ್ಲಿಷರ ದಂಡನ್ನು ತಮ್ಮ ಸಹಾಯಕ್ಕಾಗಿ ಪ್ರತಿಯೊಬ್ಬ ಸಂಸ್ಥಾನಿಕನೂ ತನ್ನ ವೆಚ್ಚದಿಂದ ಇಟ್ಟುಕೊಳ್ಳಲೇಬೇಕೆಂದು ಕಟ್ಟಳೆ ಮಾಡಿದ್ದನು ಈ ಬಗೆಯ ಒಪ್ಪಂದದ ಯೋಗದಿಂದ ಬ್ರಿಟಿಶ ಕಂಪನಿಯು ಹಿಂದುಸ್ತಾನದ ತುಂಬ ತನ್ನ ಸ್ವಾಮಿತ್ವವನ್ನು ನೆಲೆಗೊಳಿಸಿತು."

ರಾನಡೆಯವರಿಗೆ ಇನ್ನೊಂದು ಸಂಗತಿಯು ಉಲ್ಲೇಖ ಮಾಡಲಿಕ್ಕೆ ಬರುವಂತಿತ್ತು. ಮೇಲಿನ ಒಪ್ಪಂದಕ್ಕೆ ನಾಲ್ವತ್ತು ವರ್ಷ ಮೊದಲು ಈಸ್ಟ ಇಂಡಿಯಾ ಕಂಪನಿಯು ದಿಲ್ಲಿಯ ಪಾತಶಹನಿಂದ ದಿವಾಣಿಯ ಸನದನ್ನು ದೊರಕಿಸಿದ ಉದ್ದೇಶವು ಕನಿಷ್ಠ ಅಧಿಕಾರದಿಂದ ವರಿಷ್ಠ ಅಧಿಕಾರವನ್ನು ದೊರಕಿಸುವದಾಗಿತ್ತು. ರಾನಡೆಯವರ ಶಬ್ದದಿಂದ ಹೇಳುವದಾದರೆ, ಈಸ್ಟ ಇಂಡಿಯಾ ಕಂಪನಿಯ ಕಲ್ಪನೆಯು ಶಿವಾಜಿಯ ಕಲ್ಪನೆಯ ಪುನರಾವೃತ್ತಿಯಾಗಿತ್ತೆಂದು ಹೇಳಬಹುದು. ಮೊಗಲರ ದಾಸ-ನೌಕರ-ರೆನಿಸಿಕೊಳ್ಳುತ್ತಲೇ ಬ್ರಿಟಿಶರ ದಾಸ್ಯವು ಧನಿತನದಲ್ಲಿ ಪರಿಣತವಾಯಿತು. ಇಂಗ್ಲಿಷರು ಸರಂಜಾಮಿ ಸೈನ್ಯವನ್ನಿಡುವ ಒಪ್ಪಂದದಿಂದ ಸಾಧಿಸಿ

ದ್ದನ್ನೇ ಮರಾಟರು ಚೌಥಾಯಿ-ಸರದೇಶಮುಖಿ ಸನದಿನಿಂದ ಸಾಧಿಸಲು ಪ್ರಯತ್ನಿಸಿದರು. ಬ್ರಿಟಿಷರ ಪ್ರಯತ್ನವು ಸಫಲವಾಯಿತು; ಮರಾಟರ ಪ್ರಯತ್ನವು ನಿಷ್ಫಲವಾಯಿತು; ಆದರೆ ಇಬ್ಬರ ಪ್ರಯತ್ನಗಳ ಮಾನಸಿಕ ರಂಗಭೂಮಿಯು ಒಂದೇ ಪ್ರಕಾರದ್ದಿತ್ತೆಂದು ಹೇಳಬಹುದು. ಇವರಿಬ್ಬರ ಸಾಧ್ಯಸಾಧನಗಳ ಯೋಜನೆಯೂ ಧೋರಣವೂ ಒಂದೇ ಸ್ವರೂಪದವಿದ್ದವು. ಮೇಲೆ ಕ್ಷುಲ್ಲಕವಾಗಿ ತೋರುವ ಚೌಥಾಯಿ-ಸರದೇಶಮುಖಿ ಅಧಿಕಾರಿಗಳ ನಿಜವಾದ ಸ್ವರೂಪವು ಹೇಗಿತ್ತು, ಈ ಅಧಿಕಾರ ಪಡೆಯುವದಕ್ಕಾಗಿ ಮರಾಟರು ಹೇಗೆ ಪ್ರಯತ್ನ ಮಾಡಿದರು, ಆ ಪ್ರಯತ್ನದ ಪರಿಣಾಮವೇನಾಯಿತು ಮೊದಲಾದವುಗಳ ಬಗ್ಗೆ ಅಲ್ಪ ಮಟ್ಟಿಗೆ ವಿಚಾರ ಮಾಡೋಣ.

ಮುಸಲ್ಮಾನರು ಈ ದೇಶಕ್ಕೆ ಬರುವ ಮೊದಲು ಎಲ್ಲ ಹಿಂದುಸ್ತಾನವು ಹಿಂದುಗಳ ವಶದಲ್ಲಿತ್ತು. ಹತ್ತನೆಯ-ಹನ್ನೊಂದನೆಯ ಶತಮಾನದಿಂದ ಈ ದೇಶದಲ್ಲಿ ಮುಸಲ್ಮಾನರ ದಾಳಿಗಳು ಪ್ರಾರಂಭವಾದವು. ಅವರು ಪಂಜಾಬ, ಗಂಗಾ-ಯಮುನಾ ನದಿಗಳ ದಂಡೆಗುಂಟದ ಪ್ರದೇಶ, ಬಂಗಾಲ, ಮಧ್ಯಪ್ರಾಂತ, ಮಹಾರಾಷ್ಟ್ರ ಮೊದಲಾದ ಪ್ರಾಂತಗಳನ್ನು ಅನುಕ್ರಮವಾಗಿ ಸ್ವಾಧೀನ ಪಡಿಸಿಕೊಂಡರು. ಇಷ್ಟು ಪ್ರಾಂತಗಳನ್ನು ಸ್ವಾಧೀನದಲ್ಲಿರಿಸಿಕೊಂಡು ಕಂದಾಯದ ವ್ಯವಸ್ಥೆ ಮಾಡುವದು ಅವರಿಗೆ ಕಠಿಣವಾಯಿತು. ಆದ್ದರಿಂದ ಅವರು ಈ ವ್ಯವಸ್ಥೆಗಾಗಿ ಸುಭೇದಾರರನ್ನು ನಿಯಮಿಸಲಿಕ್ಕೆ ಪ್ರಾರಂಭಿಸಿದರು. ಕಾಲಾಂತರದಿಂದ ಈ ಸುಭೇದಾರರು ಸ್ವತಂತ್ರನವಾಬರಾದರು. ಅವರು ನಡುನಡುವೆ ಕಂದಾಯವನ್ನು ದಿಲ್ಲಿಯ ಬಾದಶಹನ ಕಡೆಗೆ ಕಳುಹಿಸುತ್ತಿದ್ದರು; ಆದರೆ ಬಹುತರವಾಗಿ ಕಂದಾಯದ ಉತ್ಪನ್ನವು ಸೈನ್ಯಕ್ಕಾಗಿ ವೆಚ್ಚವಾಯಿತೆಂದು ಹೇಳುವ ಪರಿಪಾಠವು ಆರಂಭವಾಯಿತು ಹೀಗಿದ್ದರೂ ಅವರು ಪಾತಶಾಹೀ ವರ್ಚಸ್ಸನ್ನು ಅಲ್ಲಗಳೆಯುತ್ತಿದ್ದಿಲ್ಲ. ಪಾತಶಾಹೀ ಅಧಿಕಾರದ ಉಪಮರ್ದನೆ ಮಾಡುವವರಿಗೆ ಶಾಸನ ವಿಧಿಸುವ ಸಾಮರ್ಥ್ಯವು ದಿಲ್ಲಿಯ ಬಾದಶಹರಲ್ಲಿ ಉಳಿಯಲಿಲ್ಲ. ದಿಲ್ಲಿಯಲ್ಲಿಯೇ ಅನೇಕ ರಾಜ್ಯಕ್ರಾಂತಿಗಳಾಗುತ್ತಿದ್ದುದರಿಂದ ಬಾದಶಹರಿಗೆ ಬೇರೆ ಕಡೆಗೆ ಲಕ್ಷ್ಯಗೊಡುವದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಔರಂಗಜೇಬನ ತರುವಾಯ ಯಾವ ಬಾದಶಹನೂ ಮಲೆತು ನಿಂತ ಅಧಿಕಾರಿಗಳ ಶಾಸನ ಮಾಡುವದಕ್ಕಾಗಲಿ, ಹೊಸ ಪ್ರದೇಶವನ್ನು ದೊರಕಿಸುವದಕ್ಕಾಗಲಿ ದಂಡಯಾತ್ರೆ ಕೈಕೊಳ್ಳಲಿಲ್ಲ. ಔರಂಗಜೇಬನ ಮರಣಾನಂತರದಲ್ಲಿ ದಿಲ್ಲಿಯಲ್ಲಿ ಅರಾಜಕತೆಯೇ ಪ್ರಾರಂಭವಾಯಿತೆನ್ನಲಿಕ್ಕೆ ಅಡ್ಡಿಯಿಲ್ಲ.

ಮುಸಲ್ಮಾನ ಸುಭೇದಾರರಿಗೆ ಸ್ವತಂತ್ರ ಅಧಿಕಾರವನ್ನು ಪ್ರಸ್ಥಾಪಿಸಲಿಕ್ಕೆ ಬಾಧ್ಯತೆಯಿರಲಿಕ್ಕಿಲ್ಲ; ಆದರೆ ಯಾರ ಪ್ರಾಂತಗಳನ್ನು ಮುಸಲ್ಮಾನರು ಜಯಿಸಿದರೋ ಅವರಿಗೆ ಅಂದರೆ ಶಿವಾಜಿ ಪ್ರಭೃತಿ ಮರಾಟರೇ ಮೊದಲಾದವರಿಗೆ ತಮ್ಮ ನಾಡುಗಳನ್ನು ಗೆಲ್ಲುವ ಇಲ್ಲವೆ ಇತರ ರೀತಿಯಿಂದ ಸ್ವಾಧೀನ ಪಡಿಸಿಕೊಳ್ಳುವ ಬಾಧ್ಯತೆಯು ಖಂಡಿತವಾಗಿಯೂ ಇತ್ತು. ಶಿವಾಜಿ ಮಹಾರಾಜನು ಸ್ವರಾಜ್ಯವನ್ನು ದಿಲ್ಲಿಯ

ಬಾದಶಹನಿಂದಲೂ ವಿಜಾಪುರದ ಆದಿಲಶಹನಿಂದಲೂ ಗೆದ್ದು ತೆಗೆದುಕೊಂಡನು. ಕೇವಲ ಸ್ವರಾಜ್ಯದ ಸೀಮೆಯನ್ನಷ್ಟು ತೆಗೆದುಕೊಂಡದ್ದರಿಂದ ಶಿವಾಜಿಗೆ ಸಮಾಧಾನವಾಗಲಿಲ್ಲ. ಹಿಂದು ಪಾತಶಾಹಿಯ ಮೇಲೆ ಹಿಂದು ರಾಜರ ನಿಸರ್ಗಸಿದ್ಧ ಅಧಿಕಾರವಿದ್ದರೆ ಶಿವಾಜಿಯು ತನ್ನ ರಾಜ್ಯದ ಮೇರೆಯನ್ನು ಮಹಾರಾಷ್ಟ್ರದ ಮಟ್ಟಿಗೇ ಏಕೆ ಇರಿಸಬೇಕು? ಆದರೆ ಈ ಮಹತ್ವಾಕಾಂಕ್ಷೆಯು ಶಿವಾಜಿಯ ಜೀವಮಾನದಲ್ಲಿ ಸಿದ್ಧವಾಗಲಿಲ್ಲ ಅವನ ಮರಣದ ವರೆಗೆ ದಿಲ್ಲಿಯ ಪಾತಶಾಹೀ ವರ್ಚಸ್ಸವು ಒಳ್ಳೇ ಭರದಲ್ಲಿತ್ತು. ಆದ್ದರಿಂದ ಒಳ್ಳೇ ಪರಾಕಾಷ್ಠೆಯಿಂದ ಅವನಿಗೆ ಸಣ್ಣ ರಾಜ್ಯಕ್ಕೆ ಮಾತ್ರ ಸ್ವತಂತ್ರ ರಾಜನೆಂದೆನಿಸಿಕೊಳ್ಳಲು ಸಾಧಿಸಿತು. ಔರಂಗಜೇಬನು ದಿಲ್ಲಿಯಲ್ಲಿ ಜೀವಂತನಿದ್ದಾಗ ಶಿವಾಜಿಯು ರಾಜ್ಯಾಭಿಷೇಕ ಮಾಡಿಸಿಕೊಂಡು, ತನ್ನ ಹೆಸರಿನ ನಾಣ್ಯಗಳನ್ನು ಅಚ್ಚು ಹಾಕಿಸಿ, ತನ್ನ ಹೆಸರಿನ ಶಕವನ್ನು ಪ್ರಾರಂಭ ಮಾಡಿ, ಛತ್ರಪತಿಯೆಂಬ ಪದವನ್ನು ಹೊಂದಿದ್ದೇನೂ ಅಂತಿಂಥ ಪರಾಕ್ರಮದ ಕೆಲಸವಲ್ಲ ಆದರೂ ೧೬೭೪ರ ವರೆಗೆ ಶಿವಾಜಿಗೆ ಸಹ ಈ ಕೆಲಸ ಮಾಡಲಿಕ್ಕೆ ಸಾಧ್ಯವಾಗಲಿಲ್ಲ

ಸ್ವರಾಜ್ಯದ ಹೊರತು ಅಹಮ್ಮದನಗರ ವಿಜಾಪುರಗಳ ಬಾದಶಹರಿಂದ ತೆಗೆದುಕೊಂಡ ಕೋಟೆ ಕೊತ್ತಳಗಳನ್ನೂ ದೇಶವನ್ನೂ ಸ್ವಾಧೀನದಲ್ಲಿರಿಸಿಕೊಳ್ಳಬಾರದೆಂದು ಶಿವಾಜಿಗೆ ಹೇಳುವದಕ್ಕೆ ಔರಂಗಜೇಬನು ಯಾರು? ಬ್ರಾಹ್ಮಣೀ ರಾಜ್ಯದ ಮೇಲೆ ಔರಂಗಜೇಬನ ಅಧಿಕಾರವೇನು? ಆದರೆ ೧೬೬೫।೬೬ರಲ್ಲಿ ಔರಂಗಜೇಬನು ಜಯಸಿಂಗನನ್ನು ಶಿವಾಜಿಯ ಮೇಲೆ ಕಳುಹಿಸಿ ಅವನನ್ನು ರಣಕುಂಠಿತನನ್ನಾಗಿ ಮಾಡಿದ ಮೇಲೆ, ಶಿವಾಜಿಯು ಆ ಕೋಟೆ-ಕೊತ್ತಳಗಳನ್ನೂ ರಾಜ್ಯವನ್ನೂ ದಿಲ್ಲಿಯ ಬಾದಶಹನ ಒಪ್ಪಿಗೆಯಿಂದ ಸ್ವಾಧೀನದಲ್ಲಿರಿಸಿಕೊಳ್ಳುವ ಕಟ್ಟಳೆ ಮಾಡಿದನು ಮೊಗಲರಿಂದ ತೆಗೆದುಕೊಂಡ ಪ್ರಾಂತಗಳನ್ನು ಶಿವಾಜಿಯು ತಿರುಗಿ ಕೊಡಬೇಕಾಯಿತು; ಆದರೆ ಅಹಮ್ಮದನಗರದ ರಾಜ್ಯದಲ್ಲಿಯ ೩೨ ಕೋಟೆಗಳಲ್ಲಿ ೨೦ ಕೋಟೆಗಳನ್ನೂ ಅವುಗಳ ಕೆಳಗಿದ್ದ ಪ್ರಾಂತ ಸಮೇತವಾಗಿ ಮೊಗಲರಿಗೆ ಕೊಡುವ ಬಗ್ಗೆ ಶಿವಾಜಿಯು ಒಪ್ಪಬೇಕಾಯಿತು. ಉಳಿದ ೧೨ ಕೋಟೆಗಳನ್ನೂ ಇತರ ಸೀಮೆಯನ್ನೂ ಬಾದಶಹನು ಕೊಟ್ಟ ಜಹಾಗೀರು ಎಂದು ಶಿವಾಜಿಯು ತನ್ನ ವಶದಲ್ಲಿಟ್ಟುಕೊಳ್ಳಬೇಕಾಗಿತ್ತು. ಎಂಟು ವರ್ಷದ ಸಂಭಾಜಿಯು ಪಾತಶಹನ ಐದು ಸಾವಿರದ ಮನಸಬದಾರನಾಗಬೇಕಾಗಿತ್ತು; ಹಾಗು ವಿಜಾಪುರ ರಾಜ್ಯದ ಕೆಲವು ಭಾಗದಲ್ಲಿ ಚೌಥಾಯಿ ಸರದೇಶಮುಖಿಗಳ ಅಧಿಕಾರವನ್ನು ಶಿವಾಜಿಯು ದೊರಕಿಸಬೇಕಾಗಿತ್ತು ಈ ಕೊನೆಯ ಅಧಿಕಾರಕ್ಕಾಗಿ ಶಿವಾಜಿಯು ಬಾದಶಹನಿಗೆ ೪೦ ಲಕ್ಷ ರೂಪಾಯಿಗಳನ್ನು ಹದಿಮೂರು ಕಂತಗಳಿಂದ ಕೊಡಲೊಪ್ಪಿದ್ದನು. ಸಾರಾಂಶ ಶಿವಾಜಿಗೆ ತಾನು ಸ್ವರಾಜ್ಯದ ರಾಜ, ಬಾದಶಹನ ಜಹಾಗೀರದಾರ, ಪಾತಶಾಹೀ ಮನಸಬದಾರನ ತಂದೆ ಈ ಮೂರೂ ಸಂಬಂಧಗಳನ್ನು ಏಕತ್ರಿತ ಮಾಡುವದಿತ್ತು ಅರ್ಥಾತ್ ಮುಖ್ಯ ಲಕ್ಷ್ಯವು ರಾಜ್ಯಸಂಪಾದನೆ ಮಾಡುವದಿದ್ದು, ಈ ಸಂಬಂಧಗಳು ರಾಜ್ಯವನ್ನು ದೊರಕಿಸಲಿಕ್ಕೆ ಸಾಧನಗಳಾಗಿದ್ದವು. ಮೇಲಿನ ಕಟ್ಟಳೆ

ಗಳನ್ನು ಮಾಡಿಕೊಂಡು ಶಿವಾಜಿಯು ಬಾದಶಹನ ಕಡೆಗೆ ಹೋದನು. ಅಲ್ಲಿ ಸೆರೆಯಲ್ಲಿ ಸಿಲುಕಿ, ಪಾರಾಗಿ ಬಂದು ಮತ್ತೆ ಮೊಗಲರ ಕೋಟೆ-ಕೊತ್ತಳಗಳನ್ನು ತೆಗೆದುಕೊಂಡನು.

ಪಾತಶಹನಿಂದ ಸನದನ್ನು ದೊರಕಿಸುವ ಪ್ರಯತ್ನವು ೧೬೫೦ರಲ್ಲಿ ಪ್ರಾರಂಭವಾಯಿತು. ಈ ವರ್ಷ ಸರದೇಶಮುಖೀ ಸನದಿನ ಪ್ರತಿಫಲವಾಗಿ ಐದು ಸಾವಿರ ಸೈನ್ಯವಿರಿಸಿಕೊಂಡು ಬಾದಶಹನ ಸೇವೆ ಮಾಡುವೆನೆಂದು ಶಿವಾಜಿಯು ಶಹಾಜಹಾನಬಾದಶಹನ ಕಡೆಗೆ ವಿನಂತಿ ಪತ್ರಿಕೆಯನ್ನು ಕಳುಹಿಸಿದನು; ಆದರೆ ಅದರ ಉಪಯೋಗವೇನೂ ಆಗಲಿಲ್ಲ. ಮತ್ತೆ ೧೬೫೭ರಲ್ಲಿ ಈ ಬಗೆಯ ಅರ್ಜಿಯನ್ನು ಔರಂಗಜೇಬನು ದಕ್ಷಿಣಕ್ಕೆ ಬಂದಾಗ ಅವನ ಕಡೆಗೆ ಕೊಟ್ಟನು. ಸರದೇಶಮುಖಿಯ ಸನದಿನ ಸಲುವಾಗಿ ಶಿವಾಜಿಯು ಸೈನ್ಯ ಕೂಡಿಸಿ, ವಿಜಾಪುರದವರ ದಾಭೋಳ ಮೊದಲಾದ ಕೊಂಕಣದೊಳಗಿನ ರಾಜ್ಯಗಳನ್ನು ವಶಪಡಿಸಿಕೊಳ್ಳಬೇಕು; ದಿಲ್ಲಿಯ ಕಡೆಗೆ ಗೊಂದಲವೆದ್ದಾಗ ದಕ್ಷಿಣದಲ್ಲಿಯ ಮೊಗಲರ ರಾಜ್ಯವನ್ನು ಸಂರಕ್ಷಿಸಬೇಕು, ಮೊದಲಾದ ಕಟ್ಟಳೆ ಮಾಡುವ ಸಲುವಾಗಿ ಔರಂಗಜೇಬನು ಶಹಾಜಹಾನನ ಒಪ್ಪಿಗೆ ಹೊಂದಬೇಕೆಂದು ನಿಶ್ಚಯವಾಯಿತು. ಶಿವಾಜಿಯ ಪ್ರತಿನಿಧಿಗಳಾದ ಕೃಷ್ಣಾಜಿಪಂತ, ರಘುನಾಥಪಂತ ಇವರಿಬ್ಬರು ದಿಲ್ಲಿಗೆ ಹೊದರು, ಆದರೆ ಅವರಿಂದ ಏನೂ ಉಪಯೋಗವಾಗಲಿಲ್ಲ. ೧೬೬೬ರಲ್ಲಿ ಜಯಸಿಂಗನ ಮಧ್ಯಸ್ಥಿಕೆಯಿಂದ ಶಿವಾಜಿಯು ಸರದೇಶಮುಖಿಯೊಡನೆ ಚೌಥಾಯಿಯನ್ನಾದರೂ ಬೇಡಿದನು. ಈ ಪ್ರಯತ್ನವು ವ್ಯರ್ಥವಾಯಿತು ೧೬೬೭ರಲ್ಲಿ ಬಾದಶಹನು ಶಿವಾಜಿಗೆ ವರ್ಹಾಡದೊಳಗಿನ ಜಹಾಗೀರನ್ನೂ 'ರಾಜ' ಪದವಿಯನ್ನೂ ಕೊಟ್ಟು ಗೌರವಿಸಿದನು. ಅನಂತರ ಶಿವಾಜಿಯು ಚೌಥಾಯಿ ಸನದು ದೊರೆಯುವ ಮೊದಲೇ ವಿಜಾಪುರ, ಗೋವಳಕೊಂಡಗಳ ಮುಸಲ್ಮಾನೀ ರಾಜ್ಯಗಳಲ್ಲಿ ಚೌಥಾಯಿ ಎತ್ತುವ ಕೆಲಸ ಪ್ರಾರಂಭಿಸಿದನು ರಾಜ್ಯಾಭಿಷೇಕವಾದ ವರ್ಷ ಪೋರ್ತುಗೀಜರ ರಾಜ್ಯದಲ್ಲಿಯೂ ಈ ಅಧಿಕಾರವನ್ನು ಬಳಿಕೆಯಲ್ಲಿ ತಂದನು. ಮುಂದೆ ಎರಡು ವರ್ಷಗಳ ಮೇಲೆ ಅವನು ಕರ್ನಾಟಕದ ಮೇಲೆ ದಾಳಿ ಮಾಡಿ ಅಲ್ಲಿಯೂ ಚೌಥಾಯಿಯನ್ನು ಎತ್ತುವ ಕೆಲಸ ಸಾಗಿಸಿದನು. ಹಿಂದು ಮುಸಲ್ಮಾನ ರಾಜರಿಂದ ಕಪ್ಪ ತೆಗೆದುಕೊಂಡು, ಅದಕ್ಕೆ ಪ್ರತಿಫಲವಾಗಿ ಆ ರಾಜರ ಸಂರಕ್ಷಣೆ ಮಾಡುವ ಪದ್ಧತಿಯನ್ನಾದರೂ ಅವನು ಪ್ರಾರಂಭಿಸಿದನು ಅವನು ಸನದಿನ ಮಾರ್ಗನಿರೀಕ್ಷಣೆ ಮಾಡಲಿಲ್ಲ. ಸನದು ದೊರಕಿಸುವದು ತನ್ನ ಜನ್ಮಸಿದ್ಧವಾದ ಅಧಿಕಾರವಾಗಿದ್ದು ಈ ಅಧಿಕಾರವನ್ನು ಬಾದಶಹನಿಗೆ ಅಲ್ಲಗಳೆಯಲಿಕ್ಕೆ ಬರುವದಿಲ್ಲೆಂದು ಅವನು ಪರಿಪಾಠ ಹಾಕಿದನು.

ವಿಜಾಪುರದ ರಾಜ್ಯದಲ್ಲಿ ಚೌಥಾಯಿ-ಸರದೇಶಮುಖಿಗಳನ್ನು ದೊರಕಿಸುವ ಹಾಗು ಈ ಬಗೆಯಿಂದ ಮುಸಲ್ಮಾನೀ ರಾಜ್ಯಗಳಲ್ಲಿ ತನ್ನ ಅಧಿಕಾರವನ್ನು ನೆಲೆಗೊಳಿಸುವ ಶಿವಾಜಿಯ ಧೊರಣವು ಯಶಸ್ವೀಯಾಗದಿದ್ದರೂ, ಮರಾಟರು ಈ ಧೋರಣ

ವನ್ನು ಮರೆಯಲಿಲ್ಲ. ಯಾವ ಅಧಿಕಾರವನ್ನು ಶಿವಾಜಿಯಿಂದ ವಿಜಾಪುರದ ರಾಜ್ಯ ದಲ್ಲಿ ದೊರಕಿಸಲಿಕ್ಕೆ ಸಾಧ್ಯವಾಗಲಿಲ್ಲವೋ, ಆ ಅಧಿಕಾರವನ್ನು ಅವನ ಮೊಮ್ಮಗ ನಾದ ಶಾಹೂರಾಜನು ಮೊಗಲ ರಾಜ್ಯದಲ್ಲಿ ದೊರಕಿಸಿದನು. ೧೭೦೫ರಲ್ಲಿ ದಕ್ಷಿಣದ ಆರು ಸುಭೆಗಳಲ್ಲಿ ನೂರಕ್ಕೆ ಹತ್ತರಂತೆ ಮರಾಟರಿಗೆ ಕೊಟ್ಟು ಯುದ್ಧಮುಗಿಸ ಬೇಕೆಂದು ಔರಂಗಜೇಬನು ಶಾಹುವಿನ ಮುಖಾಂತರವಾಗಿ ಮಾತು ನಡೆಯಿಸಿದನು. ಶಾಹುವು ದಿಲ್ಲಿಯ ದರಬಾರದಲ್ಲಿ ಮೊದಲು ಸೆರೆಯಾಳಾಗಿದ್ದನು; ಆದರೆ ಆ ದರಬಾರ ದಲ್ಲಿ ಅವನ ಋಣಾನುಬಂಧವು ಕೂಡಿದ್ದರಿಂದ ಹಿಂದಿನಿಂದ ಅವನು ಒಳ್ಳೇ ಗೌರವವನ್ನು ಪಡೆದನು. ೧೭೦೭ರಲ್ಲಿ ಮೊಗಲ ಸುಭೇದಾರನಾದ ದಾವುದಖಾನನು ಮರಾಟ ಸರ ದಾರರೊಡನೆ ಒಪ್ಪಂದ ಮಾಡಿಕೊಂಡು ಕೆಲವು ಪ್ರಾಂತಗಳೊಳಗಿನ ಚೌಥಾಯಿ ಅಧಿ ಕಾರವನ್ನು ಅವರಿಗೆ ಕೊಟ್ಟನು. ೧೭೦೯ರಿಂದ ೧೭೧೩ರ ವರೆಗೆ ಈ ಚೌಥಾಯಿ ಯನ್ನು ಶಾಹುವಿನ ಅಧಿಕಾರಿಗಳು ವಸೂಲ ಮಾಡಿದರು. ೧೭೧೫ರಲ್ಲಿ ಶಾಹುವಿಗೆ ಮೊಗಲರಿಂದ ೧೦ ಸಾವಿರದ ಮನಸಬದಾರಿಯು ದೊರೆಯಿತು. ಕೊನೆಗೆ ೧೭೧೮ರಲ್ಲಿ ಬಾಳಾಜಿ ವಿಶ್ವನಾಥನು ದಿಲ್ಲಿಗೆ ಹೋಗಿ ಶಾಹುವಿನ ಹೆಸರಿನಿಂದ ಚೌಥಾಯಿ-ಸರದೇಶ ಮುಖಿ-ಸ್ವರಾಜ್ಯ ಈ ಮೂರೂ ಸನದುಗಳನ್ನು ತಂದನು; ಹಾಗು ಬರುವಾಗ ದಿಲ್ಲಿ ಯಲ್ಲಿ ಮರಾಟರ ಪ್ರತಿಸಿದ್ಧಿಯನ್ನು ಸ್ಥಿರವಾಗಿ ನೆಲೆಗೊಳಿಸಿ ಬಂದನು. ಈ ಸನದು ಗಳೆಂದರೆ, ಮುಂದೆ ಮರಾಟರು ಹಿಂದುಸ್ತಾನದಲ್ಲೆಲ್ಲ ಪ್ರದೇಶಗಳನ್ನು ತೆಗೆದು ಕೊಂಡದ್ದರ ಹಾಗು ಕಪ್ಪನ್ನು ಎತ್ತಿದ್ದರ ತಳಹದಿಯಾಗಿವೆ.

ಚೌಥಾಯಿ ಸನದಿನಿಂದ ಔರಂಗಾಬಾದ, ವರ್‍ಹಾಡ, ಬೀದರ, ವಿಜಾಪುರ ಹೈದರಾ ಬಾದ, ಖಾನದೇಶ ಈ ಆರು ಸುಭೆಗಳ ಉತ್ಪನ್ನದ ¼ ಪಾಲು ಶಾಹುವಿಗೆ ದೊರೆಯಿತು. ಇದಕ್ಕಾಗಿ ಅವನು ಪಾತಶಾಹೀ ಸಂರಕ್ಷಣೆಗೆಂದು ೫ ಸಾವಿರ ದಂಡು ಇಟ್ಟುಕೊಳ್ಳುವ ಕಟ್ಟಳೆಯಿತ್ತು. ಚೌಥಾಯಿ ಸನದು ದೊರಕಿದ ಹತ್ತು ದಿವಸಗಳ ಮೇಲೆ ಸರದೇಶ ಮುಖಿಯ ಸನದು ಶಾಹೂರಾಜನಿಗೆ ದೊರೆಯಿತು. ಈ ಸನದು ವಂಶಪರಂಪರೆಯಾಗಿ ನಡೆಯತಕ್ಕದ್ದಾಗಿತ್ತು. ಈ ಸನದಿನ ಉತ್ಪನ್ನವು ೧||| ಕೋಟಿ ರೂಪಾಯಿ; ಇದರಲ್ಲಿ ೨೬೩ ಕೋಟಿ ರೂಪಾಯಿಗಳನ್ನು ಒಮ್ಮೆಲೆ ಕೊಡತಕ್ಕದ್ದಿದ್ದು ೮೬೮ ರೂಪಾಯಿ ಗಳನ್ನು ಕಂತದಿಂದ ಕೊಡತಕ್ಕದ್ದಾಗಿತ್ತು. ಸರದೇಶಮುಖಿಯ ಉತ್ಪನ್ನವು ಸುಮಾ ೧ ಕೋಟಿ ೭೧ ಲಕ್ಷ ರೂಪಾಯಿಗಳದಿತ್ತು. ಈ ಎಲ್ಲ ಅಂಕೆಗಳು ಕಾಗದ-ಪತ್ರಗಳ ಮಟ್ಟಿಗಿದ್ದು, ಪ್ರತ್ಯಕ್ಷ ಉತ್ಪನ್ನವು ಕಡಿಮೆಯಾಗಿತ್ತು.

ಬಾಳಾಜಿ ವಿಶ್ವನಾಥನ ತರುವಾಯ ಬಾಜೀರಾಯನು ಪೇಶವೆಯಾದನು. ಈ ಬಾಜೀರಾಯನ ಧೋರಣವು ಮೊದಲಿನಿಂದಲೂ ಉತ್ತರದ ಕಡೆಯ ಪ್ರಾಂತಗಳನ್ನು ಆಕ್ರಮಿಸಬೇಕೆಂದಿತ್ತು. ೧೭೨೪ರಲ್ಲಿ ಅವನು ಮಾಳವದ ಕಡೆಗೆ ಸೈನ್ಯವನ್ನು ಕಳುಹಿ ಸಿದನು. ಬಾಜೀರಾಯನು ತನ್ನ ತಂದೆಯೊಡನೆ ದಿಲ್ಲಿಗೆ ಹೋಗಿದ್ದನಾದ್ದರಿಂದ ಅಲ್ಲಿಯ ಓಲಗದ ಪರಿಸ್ಥಿತಿಯ ಜ್ಞಾನವು ಅವನಿಗೆ ಚನ್ನಾಗಿ ಆಗಿತ್ತು. ಅವನು ರಾಜಕಾರಣ

ಪಟುವಾಗಿದ್ದಂತೆ ಖಡ್ಗಪಾಣಿಪಟುವೂ ಆಗಿದ್ದನು. ಆದ್ದರಿಂದ। ಶಾಹುವಿನ ಓಲಗದಲ್ಲಿ ಪಾತಶಾಹೀ ಧೋರಣದ ಬಗ್ಗೆ ವಾದವು ಉಪಸ್ಥಿತವಾದಾಗ ಬಾಜೀರಾಯನು ಶಾಹುವಿನಿಂದ ಸಹಿತವಾಗಿ ಎಲ್ಲ ಮುತ್ಸದ್ದಿಗಳಿಗೆ ಈ ಧೋರಣದ ಬಗ್ಗೆ ಚನ್ನಾಗಿ ಮನವರಿಕೆ ಮಾಡಿ ಕೊಟ್ಟನು. ಬಖರಕಾರರು ಈ ವಾದದ ವರ್ಣನೆಯನ್ನು ಒಳ್ಳೇ ಸರಸವಾಗಿ ವರ್ಣಿಸಿದ್ದಾರೆ!

ಶಾಹುವಿಗೆ ಹೈದ್ರಾಬಾದ ಸುಭೆಯ ಚೌಥದ ಅಧಿಕಾರವು ದೊರೆತದ್ದನ್ನು ಕಂಡು, ನಿಜಾಮ ಉಲ್ಮುಲುಖನಿಗೆ ಸಹಜವಾಗಿ ವಿಷಾದವಾಯಿತು. ಹೇಗಾದರೂ ತಂತ್ರಮಾಡಿ ಆ ಚೌಥಾಯಿ ಭಾರವನ್ನು ತನ್ನ ಮಟ್ಟಿಗಾದರೂ ತಪ್ಪಿಸಿಕೊಳ್ಳಬೇಕೆಂದು ಅವನು ಪ್ರಯತ್ನ ಮಾಡಹತ್ತಿದನು. ಪ್ರತಿನಿಧಿಯ ಸಹಾಯದಿಂದ ನಿಜಾಮನು ಶಾಹುವಿಗೆ ಇಂದಾಪುರದ ಕಡೆಗೆ ಜಹಾಗೀರನ್ನು ಕೊಟ್ಟು ಚೌಥಾಯಿಯ ಬಿಡುಗಡೆ ಮಾಡಿಸಿಕೊಳ್ಳಬೇಕೆಂದು ಹೊಂಚು ಹಾಕಿದನು ಚೌಥಾಯಿ-ಸರದೇಶಮುಖಿಗಳ ಬಗ್ಗೆ ಶಾಹುವಿನಂತೆ ಕರವೀರದ ಸಂಭಾಜಿಯಾದರೂ ಅಧಿಕಾರ ಹೇಳುತ್ತಿದ್ದುದರಿಂದ ನಿಜವಾದ ಅಧಿಕಾರಿಗಳು ಯಾರೆಂಬದು ನಿರ್ಧಾರವಾಗುವವರೆಗೆ ತೆರಿಗೆಯನ್ನು ಜಪ್ತಿಯಲ್ಲಿಡಬೇಕೆಂದು ನಿಶ್ಚಯಮಾಡಿ, ನಿಜಾಮನು ಚೌಥಾಯಿಯನ್ನು ಎತ್ತುವದಕ್ಕೆ ಬಂದ ಶಾಹುವಿನ ಅಧಿಕಾರಿಗಳನ್ನೂ ಕೆಲಸಗಾರರನ್ನೂ ಹಿಂದಕ್ಕಟ್ಟಿದನು. ಕೂಡಲೆ ಬಾಜೀರಾಯನಿಗೂ ನಿಜಾಮನಿಗೂ ಯುದ್ಧವು ಪ್ರಾರಂಭವಾಗಿ, ಆ ಯುದ್ಧದಲ್ಲಿ ನಿಜಾಮನು ಪೂರ್ಣವಾಗಿ ಪರಾಭೂತನಾದನು. ಆಗ ಚೌಥವಸೂಲಿಯ ಅಧಿಕಾರವು ಸ್ಥಿರವಾಯಿತು (೧೭೨೭) ಇದಕ್ಕಿಂತ ಮೂರು ವರ್ಷ ಮುಂಚಿತವಾಗಿ ಸುರಬುಲಂದಖಾನನು ಪೇಶವೆಗೆ ಗುಜರಾಥದಲ್ಲಿ ಚೌಥಾಯಿ-ಸರದೇಶಮುಖಿಗಳನ್ನು ಎತ್ತುವ ಅಧಿಕಾರ ಕೊಟ್ಟಿದ್ದನು. ಸುರತದ ಹೊರತು ಎಲ್ಲ ಗುಜರಾಥ ಪ್ರಾಂತವು ಈ ಅಧಿಕಾರದಲ್ಲಿ ಸಮಾವೇಶವಾಗಿತ್ತು. ಈ ಅಧಿಕಾರಕ್ಕಾಗಿ ಪೇಶವೆಯು ೨೫೦೦ ಸೈನ್ಯವನ್ನಿರಿಸಿಕೊಂಡು ಅವಶ್ಯವಿದ್ದಾಗ ಬಾದಶಹನ ಸಹಾಯಕ್ಕೆ ಹೋಗಬೇಕೆಂಬ ಕಟ್ಟಳೆಯಿತ್ತು ಈ ಬಗೆಯಾಗಿ ಪೇಶವೆಯು ನಿಜಾಮನೊಡನೆಯೂ ಕೊಲ್ಹಾಪುರದವರೊಡನೆಯೂ ಯುದ್ಧ ಮಾಡಿ, ಮತ್ತೆ ಮತ್ತೆ ಬಾದಶಹನಿಂದ ಸನದು ಪಡೆದು ಶಾಸನ ಪತ್ರಗಳ ದ್ವಾರಾ ಚೌಥಾಯಿಯ ಮಹತ್ವವಾದ ಅಧಿಕಾರವನ್ನು ದೊರಕಿಸಿದನು; ಹಾಗು ಆ ಅಧಿಕಾರವನ್ನು ಹಿಂದುಸ್ಥಾನವೆಲ್ಲ ಒಪ್ಪಿಕೊಂಡಿತು. ಬಾಜೀರಾಯನು ೧೭೩೩ರಲ್ಲಿ ಮಹಮ್ಮದಖಾನ ಬಂಗಶನನ್ನು ಪರಾಭವಗೊಳಿಸಿ ರಾಜಾ ಛತ್ರಸಾಲನ ಬಿಡುಗಡೆ ಮಾಡಿದ ಮೇಲೆ, ಅವನು ಬಾಜೀರಾಯನಿಗೆ ಝಾಸಿಯ ಹತ್ತರದ ೨। ಲಕ್ಷ ಜಹಾಗೀರನ್ನೂ ತನ್ನ ರಾಜ್ಯದ ಮೂರರಲ್ಲೊಂದು ಪಾಲನ್ನೂ ಕೊಟ್ಟನು. ಮೂರನೆಯ ವರ್ಷ ಆಗ್ರಾ ಮಾಳವ ಪ್ರಾಂತಗಳ ಹೊಸ ಸುಭೇದಾರನಾದ ಜಯಸಿಂಗನು ಬಾಜೀರಾಯನಿಗೆ ಮಾಳವ ಪ್ರಾಂತದ ಸುಭೇದಾರಿಯನ್ನು ಅರ್ಪಿಸಿದನು. ಆಗ ಬಾಜೀರಾಯನು

ಮಾಳವ ಪ್ರಾಂತದ ಚೌಥಾಯಿಯನ್ನು ಎತ್ತತೊಡಗಿದನು; ಇಷ್ಟಲ್ಲದೆ ಮಾಳವ ಪ್ರಾಂತವನ್ನು ತನ್ನ ಕಡೆಗೆ ಸ್ವತಂತ್ರವಾಗಿ ಕೊಡಬೇಕೆಂದು ಅವನು ಬಾದಶಹನನ್ನು ಕೇಳಿಕೊಂಡನು

ಈ ವೇಳೆಯಲ್ಲಿ ಖಾನ ಡೌರಾನನು ಬಾಜೀರಾಯನಿಗೆ ಕೊಡುವದಕ್ಕಾಗಿ ಚೌಥಾಯಿ ಸರದೇಶಮುಖಿಗಳ ಸನದುಗಳನ್ನು ಗುಪ್ತವಾಗಿ ಕಳುಹಿಸಿದನು. ಈ ಕಾಲದಲ್ಲಿಯೇ ಅವನು ಬಾದಶಹನ ಬಳಿಯಲ್ಲಿ ಮತ್ತೆ ಕೆಲವು ಬೇಡಿಕೆಗಳನ್ನು ಮುಂದೆ ಮಾಡಿದನು. ಮಾಂಡೂ, ಧಾರ ಕೋಟೆಯನ್ನೂ ಚಂಬಳಾನದಿಯ ದಕ್ಷಿಣದ ಪ್ರಾಂತಗಳ ಜಹಾಗೀರನ್ನೂ, ದಳವಾಯಿ ಕೆಲಸವನ್ನೂ ಹಾಗು ವೆಚ್ಚಕ್ಕಾಗಿ ಐವತ್ತು ಲಕ್ಷ ರೂಪಾಯಿಗಳನ್ನೂ ಅವನು ಬೇಡಿದನು. ಬಾದಶಹನು ಆರು ಲಕ್ಷ ರೂಪಾಯಿಗಳ ಕಾಣಿಕೆ ತೆಗೆದುಕೊಂಡು ಅವನಿಗೆ ಆರು ಸುಭೆಗಳ ಸರದೇಶಪಾಂಡೆಯನ್ನಾಗಿ ಮಾಡಿದನು. ಈ ಎಲ್ಲ ಸಂಗತಿಗಳನ್ನು ಖಾನ ಡೌರಾನನು ತನ್ನ ಶತ್ರುತ್ವವನ್ನು ಸಾಧಿಸುವದಕ್ಕಾಗಿ ಮಾಡಿದನೆಂಬದು ಗೊತ್ತಾದ ಕೂಡಲೆ ನಿಜಾಮನು ದಂಡುತೆಗೆದುಕೊಂಡು ದಿಲ್ಲಿಗೆ ಹೋದನು; ಹಾಗು ಬಾಜೀರಾಯನೊಡನೆ ಯುದ್ಧ ಮಾಡುವ ವಿಚಾರ ಮಾಡತೊಡಗಿದನು. ಬಾಜೀರಾಯನಾದರೂ ಎಂಬತ್ತು ಸಾವಿರ ಸೈನ್ಯವನ್ನು ತೆಗೆದುಕೊಂಡು ನರ್ಮದೆಯನ್ನು ದಾಟಿ ದಿಲ್ಲಿಯ ಬಾಗಿಲವರೆಗೆ ಹೋದನು ಮೊಗಲರು ಸೈನ್ಯಸಮೇತರಾಗಿ ಹೊರಬಿದ್ದರು. ಸಂಗ್ರಾಮದಲ್ಲಿ ಅವರು ಪರಾಭೂತರಾದರು; ಆದರೆ ಬಾಜೀರಾಯನು ದಿಲ್ಲಿಯಲ್ಲಿ ಹೆಚ್ಚು ದಿವಸ ನಿಲ್ಲುವಂತಿದ್ದಿಲ್ಲವಾದ್ದರಿಂದ ಬೇಗನೆ ದಕ್ಷಿಣಕ್ಕೆ ಬಂದನು; ಆದ್ದರಿಂದ ಈಗ ಅವನಿಗೆ ಹೆಚ್ಚಿನ ಲಾಭವೇನೂ ಆಗಲಿಲ್ಲ. ತರುವಾಯ ೧೭೩೮ರಲ್ಲಿ ಬಾಜೀರಾಯನು ನರ್ಮದೆಯನ್ನು ದಾಟಿ ಭೋಪಾಳವನ್ನು ತಲುಪಿದನು. ಅಲ್ಲಿಯ ಯುದ್ಧದಲ್ಲಿ ನಿಜಾಮನು ಪರಾಭೂತನಾಗಿ ದೋರಾಯಿ ಸರಾಯಿ ಎಂಬಲ್ಲಿ ಒಪ್ಪಂದ ಮಾಡಿಕೊಂಡನು ನಿಜಾಮನು ಬಾಜೀರಾಯನಿಗೆ ಐವತ್ತು ಲಕ್ಷ ರೂಪಾಯಿಗಳನ್ನು ಕೊಟ್ಟು ಚಂಬಳಾ-ನರ್ಮದಾ ನದಿಗಳ ನಡುವಿನ ಪ್ರದೇಶದ ಆಧಿಪತ್ಯವನ್ನು ಬಾದಶಹನಿಂದ ದೊರಕಿಸಿಕೊಳ್ಳುವದಕ್ಕಾಗಿ ನೆರವಾಗಬೇಕೆಂದು ಒಡಂಬಡಿಕೆಯಲ್ಲಿ ನಿಶ್ಚಿತವಾಯಿತು.

೧೭೩೯ರಲ್ಲಿ ಮರಾಟರು ಪೋರ್ತುಗೀಜರೊಡನೆ ಯುದ್ಧ ಮಾಡಿ ವಸಯಿ ಮೊದಲಾದ ಕೋಟೆಗಳನ್ನು ತೆಗೆದುಕೊಂಡದ್ದು ಪಾತಶಾಹೀ ಧೋರಣದ ದ್ಯೋತಕವಾಗಿದೆ.

ಇದೇ ವರ್ಷ ಇರಾಣದ ಬಾದಶಹನಾದ ನಾದಿರಶಹನು ದಿಲ್ಲಿಯನ್ನು ತೆಗೆದುಕೊಂಡು ಕೊಲೆಗಡಕತನವನ್ನು ಮಾಡಿದನು. ಅವನು ಒಂದು ಲಕ್ಷ ಇರಾಣೀ ಸೈನ್ಯವನ್ನು ತೆಗೆದುಕೊಂಡು ದಕ್ಷಿಣದ ಮೇಲೆ ದಂಡೆತ್ತಿ ಬರುವನೆಂಬ ವಾರ್ತೆಯು ಹಬ್ಬಿತು. ಈ ಸಂಕಟಸಮಯದಲ್ಲಿ ಬಾದಶಹನಿಗೆ ಬಾಜೀರಾಯನ ಹೊರತು ಯಾರ ಆಶ್ರಯವೂ ಇರಲಿಲ್ಲ. ಆದ್ದರಿಂದ ಬಾಜೀರಾಯನು ದೊಡ್ಡ ಸೈನ್ಯವನ್ನು ತೆಗೆದು

ಕೊಂಡು ದಿಲ್ಲಿಗೆ ಹೊರಟನು ಹಿಂದುಗಳಂತೆ ಮುಸಲ್ಮಾನ ಸೈನಿಕರಾದರೂ ಅವನ ಸೈನ್ಯದಲ್ಲಿ ಕೂಡಿದರು. ಶಿಂದೆ ಹೋಳಕರರು ಅವನನ್ನು ಕೂಡಿದ್ದರು. ವಸಯಿ ಯನ್ನು ತೆಗೆದುಕೊಂಡ ಕೂಡಲೆ ಚಿಮಾಜಿ ಅಪ್ಪಾನಾದರೂ ಅವನನ್ನು ಕೂಡುವವ ನಿದ್ದನು; ಆದರೆ ಇಷ್ಟರಲ್ಲಿ ನಾದಿರಶಹನು ಬಾದಶಹನನ್ನು ದಿಲ್ಲಿಯ ಸಿಂಹಾಸನದ ಮೇಲೆ ಕುಳ್ಳಿರಿಸಿ ಇರಾಣಕ್ಕೆ ಹೊರಟು ಹೋದನು. ಆಗ ಬಾಜೀರಾಯನು ಬಾದಶಹನಿಗೆ ಪತ್ರ ಬರೆದು ಅಭಿನಂದನ ಮಾಡಿದನು; ಹಾಗು ೧೦೧ ಮೊಹರುಗಳನ್ನು ಕಾಣಿಕೆ ಯಾಗಿ ಕಳುಹಿಸಿದನು. ಬಾದಶಹನಾದರೂ ಬಾಜೀರಾಯನಿಗೆ ಆನೆ ಕುದುರೆ ರತ್ನ ವಸ್ತ್ರಗಳನ್ನೂ ಆಭಾರಪ್ರದರ್ಶಕ ಪತ್ರವನ್ನೂ ತಿರುಗಿ ಕಳುಹಿದನು; ಆದರೆ ಈ ಕಾಣಿಕೆ ಯಲ್ಲಿಯೂ ಮಾಳವದ ಸನದು ಬರಲಿಲ್ಲವಾದ್ದರಿಂದ ಈ ಕೆಲಸದಲ್ಲಿ ನಿಜಾಮನ ಕಪಟ ವಿರುವದೆಂದು ಊಹಿಸಿ, ದಕ್ಷಿಣದಿಂದ ಅವನನ್ನು ನಿಃಪಾತ ಮಾಡಿಬಿಡಬೇಕೆಂದು ಬಾಜೀರಾಯನು ಯೋಚಿಸಿದನು; ಆದರೆ ಇಷ್ಟರಲ್ಲಿ ಬಾಜೀರಾಯನು ನರ್ಮದಾ ತೀರದಲ್ಲಿ ೧೭೪೦ರಲ್ಲಿ ಆಕಸ್ಮಿಕವಾಗಿ ಮರಣ ಹೊಂದಿದನು.

ನಾದಿರಶಹನು ಮುಲತಾನ ಕಾಬೂಲ ಮೊದಲಾದ ಪ್ರದೇಶಗಳನ್ನು ತನ್ನ ಕೈಯಲ್ಲಿಟ್ಟುಕೊಂಡದ್ದರಿಂದಲೂ ಬಾದಶಹನ ಅಧಿಕಾರವು ನಿರ್ವೀರ್ಯವಾದುದರಿಂ ದಲೂ ದಿಲ್ಲಿಯಿಂದ ನೂರು ಮೈಲಿನ ಮೇಲೆ ಸಣ್ಣಪುಟ್ಟ ಮುಸಲ್ಮಾನೀ ರಾಜ್ಯಗಳು ನಿರ್ಮಾಣವಾಗಹತ್ತಿದವು. ಖಾನ ಡೌರಾನನು ಕೊಲ್ಲಲ್ಪಟ್ಟನು. ಕಮೊರುದ್ದೀನ ಖಾನನೇ ಮೊದಲಾದ ತುರಾಣೀ ಮುಸಲ್ಮಾನರು ಬಾದಶಹನ ಸುತ್ತು ಸುಳಿದಾಡ ಹತ್ತಿದರು. ರಜಪುತರು ಮೆಲ್ಲಮೆಲ್ಲನೆ ಸ್ವತಂತ್ರರಾಗತೊಡಗಿದರು. ಜಾಟರು ಮರಾ ಟರ ಸ್ನೇಹಿಗಳಾದರು. ರೋಹಿಲರು ಸವತಿಸುಭೆಯನ್ನು ಸ್ಥಾಪಿಸುವ ವಿಚಾರದಲ್ಲಿ ತೊಡಗಿದ್ದರು. ಇಂಗ್ಲಿಷರೂ ಫ್ರೆಂಚರೂ ಇನ್ನೂ ಹೀನಬಲರಾಗಿದ್ದರು. ಯುದ್ಧಮಾಡಿ ದರೆ ಮರಾಟರ ಮುಂದೆ ತಡೆದು ನಿಲ್ಲಲಾರೆವೆಂದು ಅವರಿಗೆ ತೋರುತ್ತಿತ್ತು. ಅವರು ವ್ಯಾಪಾರೀ ಪದ್ಧತಿಯಿಂದ ಆರ್ಜವ ಮಾಡಿಕೊಂಡು ಇಲ್ಲವೆ ಲಂಚಕೊಟ್ಟು ತಮ್ಮ ಕಾರ್ಯಭಾಗವನ್ನು ಸಾಧಿಸಿಕೊಳ್ಳುತ್ತಿದ್ದರು. ಆದ್ದರಿಂದ ಬಾಜೀರಾಯನ ಮಗ ನಾದ ನಾನಾಸಾಹೇಬ ಪೇಶವೆಗೆ ಪಾತಶಾಹೀ ಧೋರಣವನ್ನು ಮುಂದುವರಿಯಿಸ ಲಿಕ್ಕೆ ಸಂಧಿ ದೊರೆಯಿತು. ಇದೇ ಸಮಯದಲ್ಲಿ ಭೋಸಲೆಯು ಬಂಗಾಲದ ಮೇಲೆ ದಾಳಿ ಮಾಡಿದನು. ನಾನಾಸಾಹೇಬ ಪೇಶವೆಯು ಅಲ್ಲಾಬಾದದ ಮೇಲೆ ದಂಡೆತ್ತಿ ಹೋಗುವ ವಿಚಾರದಲ್ಲಿದ್ದನು. ಬಂಗಾಲದಲ್ಲಿ ಮರಾಟರಿಗೂ ಅಲೀವರ್ದೀಖಾನನ ಸೈನಿಕರಿಗೂ ಯುದ್ಧವು ಪ್ರಾರಂಭವಾಯಿತು. ಭೋಸಲೆಯ ಕಾರ್ಯಭಾರಿಯಾದ ಭಾಸ್ಕರ ಪಂತನು ಹುಗಳಿ ಪಟ್ಟಣವನ್ನು ಹಸ್ತಗತಮಾಡಿಕೊಂಡನು. ಆಗ ಅಲಿ ವರ್ದೀಖಾನನು ಪೇಶವೆ ಹಾಗು ದಿಲ್ಲಿಯ ಬಾದಶಹ ಇವರ ಸಹಾಯ ಬೇಡಿದನು. ಭಾಸ್ಕರಪಂತನ ಹಿಂದಿನಿಂದ ಭೋಸಲೆಯೂ ಬಂಗಾಲಕ್ಕೆ ಹೋಗತೊಡಗಿದನು. ಯಾರಿಂದಲಾದರೂ ಬಂಗಾಲದ ಮೇಲಿನ ಮರಾಟರ ದಾಳಿಯು ತಪ್ಪಬೇಕೆಂದು

ದಿಲ್ಲಿಯ ಬಾದಶಹನು ಯೋಚಿಸಿ, ಮಾಳವದ ಸನದನ್ನೂ ಕೆಲವು ಹಣವನ್ನೂ ಕೊಡಲೊಪ್ಪಿ ಭೋಸಲೆಯ ದಾಳಿಯ ಸಂಕಟವನ್ನು ನಿವಾರಿಸುವದಕ್ಕಾಗಿ ವಿನಂತಿ ಮಾಡಿಕೊಂಡನು. ನಾನಾಸಾಹೇಬ ಪೇಶವೆಯು ಈ ವಿನಂತಿಯನ್ನು ಮನ್ನಿಸಿ, ಅಲ್ಲಾಬಾದದಿಂದ ಮುರ್ಶಿದಾಬಾದವನ್ನು ತಲುಪಿ, ಅಲ್ಲಿಂದ ಕೆಳಗೆ ಇಳಿದು ರಘೂಜಿ ಭೋಸಲೆಯನ್ನು ಪರಾಭವಗೊಳಿಸಿದನು. ಪೇಶವೆಯ ಈ ಕೆಲಸವನ್ನೂ ಪೂರ್ವೋಕ್ತ ಹಾಸವನ್ನೂ ಲಕ್ಷಿಸಿ ಮಹಮ್ಮದಶಹ ಪಾತಶಹನು ತನ್ನ ವಚನದ ಮೇರೆಗೆ ಮಾಳವದ ಸನದನ್ನು ಕೊಡಲಿಕ್ಕೆ ಮನಸ್ಸು ಮಾಡಿದನು; ಆದರೆ ಇಂಥ ದೊಡ್ಡ ಪ್ರಾಂತವನ್ನು ಕೊಡುವದರಿಂದ ತನ್ನ ವರ್ಚಸ್ಸಿಗೆ ಬಾಧೆ ಬರುವದೆಂದು ಭಾವಿಸಿ, ತೋರಿಕೆಗೆ ಶಹಾಜಾದಾ ಅಹಮ್ಮದನನ್ನು ಆ ಪ್ರಾಂತದ ಮುಖ್ಯ ಸುಭೇದಾರನನ್ನಾಗಿ ನಿಯಮಿಸಿ, ಪೇಶವೆಗೆ ದಿವಾಣ ಅಥವಾ ಮುತಾಲಿಕ ಪದವನ್ನು ಅರ್ಪಿಸಿದನು. ನಾನಾಸಾಹೇಬನು ನಾಲ್ಕುಸಾವಿರಕ್ಕೆ ಪ್ರತಿಯಾಗಿ ಹನ್ನೆರಡು ಸಾವಿರ ಕುದುರೆಯ ಸ್ವಾರರನ್ನು ನೌಕರಿಗೆ ಇಟ್ಟುಕೊಳ್ಳಲಿಕ್ಕೆ ಒಪ್ಪಿದನು; ಆದರೆ ಈ ಹೆಚ್ಚಿನ ಎಂಟು ಸಾವಿರ ಸೈನ್ಯದ ವೆಚ್ಚವನ್ನು ಬಾದಶಹನೇ ಕೊಡಬೇಕೆಂದು ನಿರ್ಧರವಾಗಿತ್ತು. ಈ ಒಪ್ಪಂದವು ನೆರವೇರುವದಕ್ಕೆ ಪೇಶವೆಗೆ ರಾಜಾ ಜಯಸಿಂಗ ಹಾಗು ನಿಜಾಮ ಇವರ ಸಹಾಯವಿತ್ತು. ಮಹಮ್ಮದಶಹನು ಈ ಒಪ್ಪಂದವನ್ನು ಈಡೇರಿಸುವ ಬಗ್ಗೆ ಜಯಸಿಂಗನ ಹೊಣೆಗಾರಿಕೆಯಿತ್ತು. ಪೇಶವೆಯ ಪರವಾಗಿ ಮಲ್ಲಾರರಾವ ಹೋಳಕರ, ರಾಣೋಜಿ ಶಿಂದೆ ಮತ್ತು ಪಿಲಾಜಿ ಜಾಧವ ಇವರು ಹೊಣೆಗಾರರಾಗಿದ್ದರು.

ಅನಂತರದಲ್ಲಿ ಭೊಸಲೆ ಪೇಶವೆಯವರಲ್ಲಿ ಅಷ್ಟರಮಟ್ಟಿಗೆ ಸ್ನೇಹವುಂಟಾಗಿ, ಶಾಹುವಿನ ಮಧ್ಯಸ್ಥಿಕೆಯಿಂದ ಬಂಗಾಲವು ಭೋಸಲೆಯ ಕಡೆಗೆ ಕೊಡಲ್ಪಟ್ಟಿತು. ಪೇಶವೆಯವರು ಮೊದಲು ದೊರಕಿಸಿದ ಜಹಾಗೀರು, ಕೊಂಕಣ-ಮಾಳವಗಳ ಆಧಿಪತ್ಯ, ಅಲ್ಲಾಬಾದ ಆಗ್ರಾ ಅಜಮೀರಗಳ ಉತ್ಪನ್ನ, ಪಾಟಣಾದೊಳಗಿನ ಮೂರು ತಾಲೂಕುಗಳು, ಅರ್ಕಾಟ ಜಿಲ್ಲೆಯೊಳಗಿನ ಇಪ್ಪತ್ತುಸಾವಿರ ಉತ್ಪನ್ನ, ಭೋಸಲೆಯ ರಾಜ್ಯದೊಳಗಿನ ಕೆಲವು ಗ್ರಾಮಗಳು ನಾನಾಸಾಹೇಬ ಪೇಶವೆಗೆ ಸನದಿನಿಂದ ದೊರೆತವು. ಲಖನೌ, ಪಾಟಣಾ, ದಕ್ಷಿಣ ಬಂಗಾಲ, ಬಿಹಾರ, ವರ್ಧಾದದಿಂದ ಕಟಕದವರೆಗಿನ ಪ್ರಾಂತಗಳ ಉತ್ಪನ್ನ ಭೋಸಲೆಗೆ ದೊರೆತವು. ಅನಂತರದಲ್ಲಿ ಶಾಹೂ ಮಹಾರಾಜನು ಭ್ರಾಂತಿಷ್ಟನಾಗಿ ವ್ಯತ್ಯಪಥವನ್ನಾಕ್ರಮಿಸುವ ಲಕ್ಷಣವು ತೋರತೊಡಗಿತು. ಆಗ ಅವನು ನಾನಾಸಾಹೇಬ ಪೇಶವೆಯನ್ನು ಕರೆಯಿಸಿ 'ಎಲ್ಲ ಮರಾಟ ರಾಜ್ಯದ ಆಧಿಪತ್ಯವನ್ನು ವಂಶಪರಂಪರೆಯಾಗಿ ಪೇಶವೆಯವರೇ ಮಾಡತಕ್ಕದ್ದು; ಸಾತಾರೆಯ ಸಿಂಹಾಸನದ ಮಾನರಕ್ಷಣೆ ಮಾಡುತ್ತಿರಬೇಕು.' ಎಂದು ಸನದು ಮಾಡಿಕೊಟ್ಟನು. ನಿರಂತರವಾದ ಮಹಾಪ್ರಧಾನಪದವು ದೊರೆತದ್ದರಿಂದ, ಪೇಶವೆಯವರ ಪಾತಶಾಹೀ ಧೋರಣಕ್ಕೆ ಮತ್ತಿಷ್ಟು ಬಲವು ಪ್ರಾಪ್ತವಾಯಿತು.

ಮುಂದೆ ಅಹಮ್ಮದಶಹನು ದಿಲ್ಲಿಯ ಬಾದಶಹನಾದಾಗ ಅವನ ವಜೀರನಾದ ಸಫದರಜಂಗನು ಉನ್ಮತ್ತರಾಗಿದ್ದ ರೋಹಿಲರ ಮೇಲೆ ಶಸ್ತ್ರವನ್ನು ಹಿಡಿದನು. ಈ ಕೆಲಸದಲ್ಲಿ ಮಲ್ಲಾರರಾವ ಹೋಳಕರ ಜಯಪ್ಪಾಸಿಂದೆ ಇವರು ವಜೀರನಿಗೆ ಬಹಳೇ ಸಹಾಯ ಮಾಡಿದರು. ಇದಕ್ಕಾಗಿ ವಜೀರನು ಮರಾಟರಿಗೆ ಯಮುನಾ-ಗಂಗಾನದಿಗಳ ನಡುವಿನ ಕೆಲವು ಪ್ರಾಂತಗಳನ್ನು ಪಾರಿತೋಷಕವಾಗಿ ಕೊಟ್ಟನು. (೧೭೪೮) ಇದೇ ಸಮಯಕ್ಕೆ ಅಹಮ್ಮದಶಹಾ ಅಬದಾಲಿಯು ಹಿಂದುಸ್ತಾನದ ಮೇಲೆ ದಾಳೀ ಮಾಡಲಿಕ್ಕೆ ಪ್ರಾರಂಭಿಸಿದ್ದನು. ಅವನು ಬಾದಶಹನಿಂದ ಮುಲತಾನ ಲಾಹೋರ ಪಟ್ಟಣಗಳನ್ನು ವಶಪಡಿಸಿಕೊಂಡಿದ್ದನು. ಆದ್ದರಿಂದ ದಿವಾಣ ಸಫದರಜಂಗನಿಗೆ ಮರಾಟರ ಬಲದ ಆವಶ್ಯಕತೆಯುಂಟಾಯಿತು ರೋಹಿಲರೊಡನೆ ಆದ ಯುದ್ಧದ ವೆಚ್ಚದ ಬಗ್ಗೆ ೫೦ ಲಕ್ಷ ರೂಪಾಯಿಗಳ ಪತ್ರ ಬರೆಯಿಸಿಕೊಂಡ ಮೇಲೆ ಮರಾಟರ ದಂಡು ದುಆಬಪ್ರಾಂತದಿಂದ ಹೊರಟಿತು. ದಿಲ್ಲಿಯೊಳಗಿನ ಅಧಿಕಾರಿವರ್ಗದಲ್ಲಿ ವೈಮನಸ್ಸುಂಟಾಯಿತು. ದಿಲ್ಲಿಯ ಸಮೀಪದಲ್ಲಿಯೇ ವಜೀರನ ಯುದ್ಧಗಳು ಪ್ರಾರಂಭವಾದವು. ಇದೇ ಸಂಧಿಯಲ್ಲಿ ಹೋಳಕರನು ದಿಲ್ಲಿಗೆ ಹೋದನು. ಅವನ ಸಹಾಯದಿಂದ ೧೭೫೪ರಲ್ಲಿ ಎರಡನೇ ಆಲಮಗೀರನು ಪಟ್ಟಕ್ಕೆ ಕುಳಿತನು. ೧೭೫೭ರಲ್ಲಿ ನಾನಾಸಾಹೇಬ ಪೇಶವೆಯು ರಘುನಾಥರಾಯನೊಡನೆ ದೊಡ್ಡ ದಂಡು ಕೊಟ್ಟು ಉತ್ತರ ಹಿಂದುಸ್ತಾನದ ಮೇಲೆ ಕಳುಹಿಸಿದನು. ಅವನ ಸಹಾಯದಿಂದ ವಜೀರ ಶಹಾಬುದ್ದೀನನು ದಿಲ್ಲೀ ಪಟ್ಟಣವನ್ನೂ ಆಲಮಗೀರ ಬಾದಶಹನನ್ನೂ ವಶಪಡಿಸಿಕೊಂಡನು. ಆಗ ಅಬದಾಲಿಯ ಪ್ರತಿನಿಧಿಯಾದ ನಜೀಬ ಉದ್ದೌಲನು ಓಡಿ ಹೋದನು. ರಘುನಾಥರಾಯನು ದಿಲ್ಲಿಯ ಹತ್ತರ ಬಹಳ ದಿನ ವಸತಿ ಮಾಡಿದ್ದನು. ಲಾಹೋರದಿಂದ ಅದಿನಾಬೇಗನು ಅವನಿಗೆ ಬರ ಹೇಳಿ ಕಳುಹಿದನು. ರಘುನಾಥರಾಯನು ಅಲ್ಲಿಗೆ ಹೋಗಿ ಅವನ ಸಹಾಯದಿಂದ ಲಾಹೋರ ಪಟ್ಟಣವನ್ನು ತೆಗೆದುಕೊಂಡನು (೧೭೫೮) ಅನಂತರದಲ್ಲಿ ಅದಿನಾಬೇಗನ ಸಹಾಯಕ್ಕೆ ಕೆಲವು ಮರಾಟ ದಂಡನ್ನಿಟ್ಟು ರಘುನಾಥರಾಯನು ದಕ್ಷಿಣಕ್ಕೆ ಬಂದನು; ಆದರೆ ಈ ದಾಳಿಯಲ್ಲಿ ಅವನಿಗೆ ೭೦ ಲಕ್ಷ ರೂಪಾಯಿಗಳ ಸಾಲವಾದ್ದರಿಂದ ದೌಲತ್ತಿನ ಕಾರಭಾರ ನೋಡುವ ಸದಾಶಿವರಾವ ಭಾವುನಿಗೂ ಇವನಿಗೂ ವ್ಯಾಜ್ಯವಾಗಿ, ಮುಂದಿನ ದಾಳಿಯಲ್ಲಿ ಸದಾಶಿವರಾವ ಭಾವುವೇ ಹೋಗಬೇಕೆಂಬ ನಿಶ್ಚಯವಾಯಿತು. ಲಾಹೋರವನ್ನು ಮರಾಟರು ತೆಗೆದುಕೊಂಡರೆಂಬ ಸಂಗತಿಯು ಅಬದಾಲಿಗೆ ತಿಳಿದ ಕೂಡಲೆ ಅವನು ಮತ್ತೆ ಹಿಂದುಸ್ತಾನಕ್ಕೆ ಬರಬೇಕೆಂದು ಹೊರಟನು. ದಿಲ್ಲಿಯಲ್ಲಿ ಮತ್ತೆ ರಾಜ್ಯಕ್ರಾಂತಿಯಾಯಿತು. ಅಬದಾಲಿಯ ದಂಡು ಲಾಹೋರಕ್ಕೆ ಬಂದು ಮರಾಟರ ಸೈನ್ಯವನ್ನು ಓಡಿಸಿಬಿಟ್ಟಿತು. ಅನಂತರದಲ್ಲಿ ಅವನು ಯಮುನಾ ನದಿಯನ್ನು ದಾಟಿ ರೋಹಿಲರ ಸೈನ್ಯವನ್ನು ಕೂಡುವದಕ್ಕಾಗಿ ಹೊರಟನು. ಶಿಂದೆ ಹೋಳಕರರಲ್ಲಿ ಸ್ವಲ್ಪ ಸೈನ್ಯವಿದ್ದದರಿಂದ ಅವರು ಹಿಂದಕ್ಕೆ ಸರಿದರು. ಈ ಸಂಗತಿಯು ದಕ್ಷಿಣದಲ್ಲಿ ತಿಳಿದ ಕೂಡಲೆ, ಉತ್ತರದ

ದಾಳಿಗಾಗಿ ಮರಾಟರು ಸಿದ್ಧರಾದರು. ಅದೇ ಉದಯಗಿರಿಯ ಕಾಳಗದಲ್ಲಿ ವಿಜಯ ಹೊಂದಿದ್ದ ಸದಾಶಿವರಾವ ಭಾವುಸಾಹೇಬನು ನಾನಾಸಾಹೇಬ ಪೇಶವೆಯ ಮಗನಾದ ವಿಶ್ವಾಸರಾಯನೊಡನೆ ಉತ್ತರಕ್ಕೆ ಹೊರಟನು. ೧೭೬೧ರಲ್ಲಿ ಸುಪ್ರಸಿದ್ಧ ಪಾಣಿಪತ್ತದ ಸಂಗ್ರಾಮವಾಗಿ ಮರಾಟರಿಗೆ ದೊಡ್ಡ ಪರಾಭವವಾಯಿತು. ಇಂದಿನವರೆಗೆ ಪ್ರಸ್ಥಾಪಿತವಾದ ಮರಾಟರ ದಿಲ್ಲಿಯ ಸಂಬಂಧವು ತಪ್ಪುವದು, ಮರಾಟರ ಪಾತಶಾಹೀ ಧೋರಣದ ಚಿಂತವು ಇಲ್ಲಿಗೆ ಆಗುವದು ಎಂಬ ಲಕ್ಷಣವು ಎಲ್ಲರಿಗೂ ತೋರತೊಡಗಿತು.

ಆದರೆ ಈ ಸ್ಥಿತಿಯು ಬಹಳ ದಿವಸ ಉಳಿಯಲಿಲ್ಲ. ಪಾಣಿಪತ್ತದ ಪರಾಭವದಿಂದ ಮರಾಟರಿಗೆ ಬಹು ದೊಡ್ಡ ಹಾನಿಯಾದದ್ದೇನೋ ನಿಜ; ಆದರೆ ಯಾವ ಕಾರಣದ ಸಲುವಾಗಿ ಪಾಣಿಪತ್ತದ ಸಂಗ್ರಾಮವಾಯಿತೋ ಆ ಕಾರಣವು ಆಗಿಂದಾಗಲೆ ಸುಧಾರಿಸುವಂತಿರಲಿಲ್ಲ. ಆ ಕಾರಣವೆಂದರೆ, ದಿಲ್ಲಿಯ ಬಾದಶಹನ ದುರ್ಬಲತೆ ಹಾಗು ದಿಲ್ಲಿಯ ಓಲಗದಲ್ಲಿ ನಡೆದ ಕಾರಸ್ಥಾನೀ ಅಮೀರ-ಉಮರಾವರ ಗೊಂದಲ. ದಿಲ್ಲಿಯ ಕಡೆಗೆ ದಂಡಯಾತ್ರೆಗೆ ಹೊರಡುವ ರೂಢಿಯು ಬಾಳಾಜಿ ವಿಶ್ವನಾಥನಿಂದ ಪ್ರಾರಂಭವಾಗಿತ್ತು. ಆಗ ಇಲ್ಲವೆ ಪಾಣಿಪತ್ತದ ವೇಳೆಯಲ್ಲಿ ಮರಾಟರ ದಂಡಯಾತ್ರೆಯ ಕಾರಣವು ದಿಲ್ಲಿಯನ್ನು ಹಸ್ತಗತ ಮಾಡಿಕೊಳ್ಳಬೇಕೆಂದು ಇರಲಿಲ್ಲ. ಅವರು ಬಾದಶಹನ ವಿನಂತಿಯ ಮೇರೆಗೆ ಪಾತಶಾಹೀ ಸತ್ತೆಯನ್ನು ರಕ್ಷಿಸುವದಕ್ಕಾಗಿ ಹೋಗಿದ್ದರು. ಪಾಣಿಪತ್ತಕಾಳಗದ ಪೂರ್ವದಲ್ಲಿ ದಿಲ್ಲಿಯಲ್ಲಿ ಎರಡು ಮುಖ್ಯ ಪಕ್ಷಗಳಿದ್ದವು. ಸ್ಥೂಲ ಶಬ್ದದಿಂದ ಹೇಳುವದಾದರೆ ಒಂದಕ್ಕೆ ಪಾನ ಇಸ್ಲಾಮಿಕ ಅಂದರೆ ಮುಸಲಮಾನಾಭಿಮಾನಿಯೆಂದೂ, ಮತ್ತೊಂದಕ್ಕೆ ಪಾನ ಹಿಂದಿಕ ಅಂದರೆ ಹಿಂದೂ ಅಭಿಮಾನಿ ಎಂದೂ ಅನ್ನಬಹುದು. ಮೊದಲನೆಯ ಪಕ್ಷದ ಧೋರಣವು ಹಿಂದುಗಳನ್ನು, ಆದರಲ್ಲಿ ಮರಾಟರನ್ನು ಉತ್ತರಕ್ಕೆ ಪ್ರವೇಶ ಮಾಡಗೊಡಬಾರದೆಂದಿತ್ತು. ಪಾತಶಾಹಿ ರಕ್ಷಣೆಯನ್ನು ಆದಷ್ಟು ಹಿಂದುಸ್ತಾನದ ಜನರಿಂದಲೇ ಮಾಡಿಸತಕ್ಕದ್ದು; ಅವರು ಪಾತಶಾಹಿಯ ಋಣಾನುಬಂಧದವರೂ ಮಿತ್ರರೂ ಆಗಿದ್ದರೂ ಅಡ್ಡಿಯಿಲ್ಲವೆಂದು ಎರಡನೆಯ ಪಕ್ಷದ ಧೋರಣವಾಗಿತ್ತು.

ಪ್ರತ್ಯಕ್ಷ ದಿಲ್ಲಿಯ ಬಾದಶಹರು ಈ ಎರಡನೇ ವರ್ಗದಲ್ಲಿ ಗಣಿಸಲ್ಪಡುತ್ತಿದ್ದರು. ಅವರಿಗೆ ಪ್ರಾಯಶಃ ಇರಾಣ, ಅಫಗಾಣಿಸ್ತಾನ ಮೊದಲಾದ ಕಡೆಯ ಸ್ವಧರ್ಮೀಯರಿಗಿಂತ ಹಿಂದುಗಳ ಸಹಾಯವೇ ಹೆಚ್ಚು ಗ್ರಾಹ್ಯವಾಗಿ ತೋರುತ್ತಿತ್ತು. ಯಾಕಂದರೆ ಇರಾಣ, ಅಫಗಾಣಿಸ್ತಾನಗಳ ಮುಸಲ್ಮಾನೀ ರಾಜರಿಗೆ ದಿಲ್ಲಿಯನ್ನು ಹಸ್ತಗತ ಮಾಡಿಕೊಂಡು, ಅಲ್ಲಿ ತಮ್ಮ ಸಿಂಹಾಸನವನ್ನು ಪ್ರಸ್ಥಾಪಿಸುವ ಆಕಾಂಕ್ಷೆ ಹುಟ್ಟುವ ಸಂಭವವಿರುತ್ತಿದ್ದದರಿಂದ, ದಿಲ್ಲಿಯ ಬಾದಶಹರು ಅವರ ಸಹಾಯವನ್ನು ಯಾಚಿಸುತ್ತಿದ್ದಿಲ್ಲ. ಹಿಂದುಗಳು ಎಷ್ಟೇ ಪ್ರಬಲರಿದ್ದರೂ ದಿಲ್ಲಿಯ ಪಾತಶಾಹಿಯನ್ನು ಮುರಿದು ಅಲ್ಲಿ ಹಿಂದುಪದಪಾತಶಾಹಿಯನ್ನು ಸ್ಥಾಪಿಸುವ ಆಕಾಂಕ್ಷೆಯು ಅವರ ಮನಸ್ಸಿನಲ್ಲಿರುವದೆಂಬದರ ಕಲ್ಪನೆಯು ದಿಲ್ಲಿಯ ಬಾದಶಹರ ಮನಸ್ಸಿನಲ್ಲಿ ಎಂದೂ

ಹುಟ್ಟಲಿಲ್ಲ. ಶಹಾಜಹಾನನ ವೇಳೆಯಿಂದ ದಿಲ್ಲಿಯಲ್ಲಿಯ ಜಗಳಗಳಲ್ಲಿ ಹಿಂದುಗಳನ್ನು ಸಹಾಯಕ್ಕೆ ತೆಗೆದುಕೊಳ್ಳುವ ಪರಿಪಾಠವು ಪ್ರಾರಂಭವಾಗಿತ್ತು. ಎಲ್ಲ ಹಿಂದುಗಳಲ್ಲಿ ಮರಾಟರೇ ಪ್ರಬಲರೆಂಬದು ಗೊತ್ತಾದ ಕೂಡಲೆ ೧೮ನೆಯ ಶತಕದಿಂದ ಪಾತಶಾಹೀ ಸಂರಕ್ಷಣೆಯ ಅಧಿಕಾರವು ಅವರ ಕಡೆಗೇ ಕೊಡಲ್ಪಟ್ಟಿತು. ಪ್ರತ್ಯಕ್ಷ ಹಿಂದುಸ್ತಾನದೊಳಗಿನ ಮುಸಲ್ಮಾನೀ ನವಾಬರು ಅಫಗಾಣಿಸ್ತಾನದೊಳಗಿನ ರಾಜರಂತೆ ಸ್ವಾರ್ಥಿಗಳಿದ್ದುದರಿಂದ, ಅವರನ್ನು ನಂಬುವದು ಅಹಿತವೆಂದು ತೋರಿದ ಮೂಲಕ, ಮರಾಟರಿಗೆ ದಕ್ಷಿಣದ ಆರು ಸುಭೆಗಳ ಚೌಥಾಯಿಯನ್ನು ಕೊಟ್ಟು, ಸಂಕಟಸಮಯದಲ್ಲಿ ಪಾತಶಾಹೀ ಸಂರಕ್ಷಣೆ ಮಾಡುವ ಭಾರವನ್ನು ಅವರ ಮೇಲೆಯೇ ಹಾಕಲಾಗಿತ್ತು. ಈ ಅಧಿಕಾರಕ್ಕೆ ಸರಿಯಾಗಿ ಮರಾಟರು ದಂಡು ತೆಗೆದುಕೊಂಡು ದಿಲ್ಲಿಯ ಕಡೆಗೆ ದಾಳೀಮಾಡಹತ್ತಿದರು.

'ಪಾನ ಇಸ್ಲಾಮಿಕ'ರ ಉಪದೇಶದಿಂದ ನಾದಿರಶಹ, ಅಬ್ದಾಲಿ ಇವರು ದಿಲ್ಲಿಯ ಕಡೆಗೆ ಬಂದರು. ಇವರಿಬ್ಬರಲ್ಲಿ ಯಾರಿಗೂ ದಿಲ್ಲಿಯಲ್ಲಿ ನಿಲ್ಲಲಿಕ್ಕೆ ಸಾಧಿಸಲಿಲ್ಲ; ಇಲ್ಲವೆ ಸ್ಥಿರವಾಗಿ ದಂಡು ಇರಿಸಲಿಕ್ಕೆ ಸಾಧ್ಯವಾಗಲಿಲ್ಲ ಆದ್ದರಿಂದ ಪಾಣಿಪತ್ತದ ತರುವಾಯ ಸ್ವಲ್ಪದಿನಗಳಲ್ಲಿಯೇ ಮರಾಟರಿಗೆ ದಿಲ್ಲಿಯಿಂದ ಆಮಂತ್ರಣ ಬರತೊಡಗಿತು ಪಾಣಿಪತ್ತದಲ್ಲಿ ಮರಾಟರಿಗೆ ಪರಾಭವವೊದಗಿದರೂ ಪೇಶವೆಯವರ ಮಧ್ಯವರ್ತಿ ಸತ್ತೆಯು ಇನ್ನೂ ನಷ್ಟವಾಗಿರಲಿಲ್ಲ; ಮರಾಟಮಂಡಳದ ಸಂಘವು ಇನ್ನೂ ಸ್ಥಿರವಾಗಿತ್ತು. ಮರಾಟರ ಒಂದು ಪೀಳಿಗೆಯು ಪಾಣಿಪತ್ತದ ರಣಕಂದನದಲ್ಲಿ ಉಧ್ವಸ್ತವಾಗಿ ಹೋಗಿದ್ದರೂ, ಮುಂದಿನ ಪೀಳಿಗೆಯಲ್ಲಿ ಈ ಅಪಯಶವನ್ನು ತೊಡೆದು ಹಾಕುವ ಆಕಾಂಕ್ಷೆಯಿತ್ತು. ೧೭೬೧ರ ಮೊದಲು ದಿಲ್ಲಿಯಲ್ಲಿ ನೆಲೆಗೊಂಡಿದ್ದ ಅರಾಜಕತೆಯು ೧೭೬೧ರ ತರುವಾಯ ನಷ್ಟವಾಗದೆ ಪ್ರಬಲವಾಗುತ್ತನಡೆಯಿತು. ಮುಂದೆ ಕೆಲವು ದಿವಸ ಬಾದಶಹನು ದಿಲ್ಲಿಯನ್ನು ಬಿಟ್ಟು ಬೇರೆ ಕಡೆಗೆ ಅಲೆದಾಡಬೇಕಾಯಿತು ಪಾತಶಾಹೀ ದಿವಾಣ ಉಪಮರಾವ ಇವರಲ್ಲಿ ನಿಕರವಾದ ಯುದ್ಧವು ದಿಲ್ಲಿಯಲ್ಲಿ ನಡೆದು, ಪಾನಿಪತ್ತದ ಯುದವಾದ ವರ್ಷವೇ ಬಾದಶಹನು ಇಂಗ್ಲಿಷರಿಗೆ ಬಂಗಾಲ, ಬಿಹಾರ, ಓರಿಸಾ ಪ್ರಾಂತಗಳ ದಿವಾಣಗಿರಿಯನ್ನು ಕೊಟ್ಟು, ಮರಾಟರಂತಹ ಮತ್ತೊಬ್ಬ ಮುಸಲ್ಮಾನೇತರ ಸ್ನೇಹಿಯನ್ನು ದೊರಕಿಸಿಕೊಂಡನು; ಆದರೆ ದಿಲ್ಲಿಯ ರಾಜಕಾರಣವು ತಮ್ಮ ಕೈಯಲ್ಲಿ ಬರುವಷ್ಟು ಬಲವಂತರಿರುವೆವೆಂಬದರ ಆತ್ಮಪ್ರತ್ಯಯವು ಇಂಗ್ಲಿಷರಿಗೆ ಇನ್ನೂ ಬಂದಿರಲಿಲ್ಲ. ಬಂಗಾಲ ಅಯೋಧ್ಯಾ ರೋಹಿಲಖಂಡ ಈ ಪ್ರಾಂತಗಳಲ್ಲಿ ಅವರ ವರ್ಚಸ್ವವು ಇನ್ನೂ ಸ್ಥಾಪಿಸಲ್ಪಡಬೇಕಾಗಿತ್ತು. ಅರ್ಥಾತ್ ಸ್ಥಾನಭ್ರಷ್ಟನಾದ ಬಾದಶಹನು ಆತ್ಮರಕ್ಷಣೆಗಾಗಿ ಪುನಃ ಮರಾಟರ ಕಡೆಗೇ ಹೊರಳಬೇಕಾಯಿತು. ಪಾಣಿಪತ್ತದ ಸಂಕಟವನ್ನು ತಮ್ಮ ಮೇಲೆ ತಂದ ನಜೀಬಖಾನ ಮೊದಲಾದವರ ಪಾರುಪತ್ಯಗೊಳಿಸುವದು ಮರಾಟರಿಗೆ ಆವಶ್ಯಕವಿದ್ದುದರಿಂದ, ಇಂಗ್ಲಿಷರ ಸಹಾಯದ ನಿರಾಶೆ ಹೊಂದಿದ ಶಹಾಅಲಮನು ತನ್ನನ್ನು ದಿಲ್ಲಿಗೆ ಒಯ್ಯುವ ಬಗ್ಗೆ ಮಾತು ನಡೆಯಿ

ಸಿದ ಕೂಡಲೆ ಮರಾಟರು ಆನಂದದಿಂದ ಈ ಕಾರ್ಯಕ್ಕೆ ಕೈಹಾಕಿದರು.

೧೭೬೮ರಲ್ಲಿ ಮಹದಾಜಿ ಶಿಂದೆ, ತುಕೋಜಿ ಹೋಳಕರ ಇವರು ದಕ್ಷಿಣವನ್ನು ಬಿಟ್ಟು ಉತ್ತರಹಿಂದುಸ್ತಾನವನ್ನು ಸೇರಿದರು. ೧೭೭೦ರಲ್ಲಿ ನಜೀಬಖಾನನು ಮಡಿದನು. ಅದ್ದರಿಂದ ಮರಾಟರ ಒಬ್ಬ ಪ್ರತಿಸ್ಪರ್ಧಿಯು ನಾಶವಾದಂತಾಯಿತು. ಮಹದಾಜಿ ಶಿಂದೆಯು ೧೭೭೧ರಲ್ಲಿ ಶಹಾಅಲಮ ಬಾದಶಹನನ್ನು ದಿಲ್ಲಿಯ ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಈ ವೇಳೆಯಲ್ಲಿ ಇಂಗ್ಲಿಷರ ಅಂಕಿತದಲ್ಲಿದ್ದ ಶಹಾ ಅಲಮನು ಪ್ರಕಟವಾಗಿ ಮರಾಟರ ಕೈಯಲ್ಲಿ ಬಂದ ಸಂಗತಿಯು ಲಕ್ಷ್ಯದಲ್ಲಿಡುವಂಥದಾಗಿದೆ. ಯಾಕಂದರೆ ಈ ಮಾತಿನಿಂದ ಮರಾಟರ ಹಾಗು ಇಂಗ್ಲಿಷರ ಆ ವೇಳೆಯ ಸಾಪೇಕ್ಷ ಬಲಾಬಲಗಳು ಲಕ್ಷ್ಯದಲ್ಲಿ ಬರುತ್ತವೆ. ಬಾದಶಹನು ಮರಾಟರ ಕೈಯಲ್ಲಿ ಹೋದದ್ದು ಇಂಗ್ಲಿಷರಿಗೆ ಸೇರಲಿಲ್ಲ. ಮರಾಟರ ಸಂಗತಿಯನ್ನು ಹಿಡಿಯಬಾರದೆಂದು ಅವರು ಬಾದಶಹನಿಗೆ ಪರಿಪರಿಯಾಗಿ ಉಪದೇಶ ಮಾಡಿ ನೋಡಿದರು; ಆದರೆ ಮರಾಟರ ಸಹಾಯವನ್ನು ತೆಗೆದುಕೊಳ್ಳುವ ಪರಂಪರೆಯು ಮೊದಲಿನಿಂದಲೂ ನಡೆದು ಬಂದದ್ದಾಗಿದ್ದು, ಅವರ ಸ್ನೇಹವು ಗೌರವಪೂರ್ಣವಾಗಿತ್ತು; ಅಲ್ಲದೆ ಇಂಗ್ಲಿಷರು ಬಾದಶಹನನ್ನು ಸಿಂಹಾಸನದ ಮೇಲೆ ಕುಳ್ಳಿರಿಸುವ ಭಾರವನ್ನು ಹೊತ್ತಿದ್ದರೆ ಆ ಮಾತೇ ಬೇರೆ. ನಾವು ಸಹಾಯ ಮಾಡಲಸಮರ್ಥರಿರುವೆವು; ಆದರೂ ಮರಾಟರ ಸಹಾಯ ತೆಗೆದುಕೊಳ್ಳಬಾರದು, ಎಂಬ ಇಂಗ್ಲಿಷರ ಈ ಸ್ವಾರ್ಥದ ಭಾಷಣವು ದಿಲ್ಲಿಗೆ ಹೋಗಲಿಕ್ಕೆ ಆತುರಗೊಂಡಿದ್ದ ಶಹಾ ಅಲಮನಿಗೆ ಹೇಗೆ ರುಚಿಸಬೇಕು?

ಇರಲಿ. ಮಹದಾಜಿ ಶಿಂದೆಯು ಶಹಾ ಅಲಮನನ್ನು ದಿಲ್ಲಿಗೆ ಒಯ್ದು ಸಿಂಹಾಸನದ ಮೇಲೆ ಕುಳ್ಳಿರಿಸಿದನು; ಆದರೆ ಅವನಿಗೆ ಅಲ್ಲಿ ಬಹಳ ದಿನಗಳ ವರೆಗೆ ಇರಲಿಕ್ಕೆ ಸಾಧ್ಯವಾಗಲಿಲ್ಲ. ೭೭೩ರಲ್ಲಿ ನಾರಾಯಣರಾಯನ ಕೊಲೆಯಾದ ಮೂಲಕ ನಾನಾಫಡಣವೀಸನಿಗೆ ಮಹದಾಜಿಯ ಆವಶ್ಯಕತೆಯುಂಟಾಯಿತು. ಅಲ್ಲಿಂದ ಮುಂದೆ ಸಾಲಬಾಯಿಯ ಒಪ್ಪಂದವಾಗುವವರೆಗೂ ಮಹದಾಜಿಯು ಪೇಶವಾಯಿಯ ರಾಜಕಾರಣದಲ್ಲಿ ಮಗ್ನನಾದುದರಿಂದ ಅವನಿಗೆ ದಿಲ್ಲಿಯ ಕಡೆಗೆ ಲಕ್ಷ್ಯಗೊಡಲಿಕ್ಕೆ ಸಾಧ್ಯವಾಗಲಿಲ್ಲ. ಆದರೂ ಈ ಎಂಟು ವರ್ಷಗಳ ಅವಧಿಯಲ್ಲಿ ಅವನು ಅಪ್ರತ್ಯಕ್ಷ ರೀತಿಯಿಂದ ದಿಲ್ಲಿಯ ರಾಜಕಾರಣದಲ್ಲಿ ತನ್ನ ಅಧಿಕಾರವನ್ನು ನೆಲೆಗೊಳಿಸಿದ್ದನು. ಇಂಗ್ಲಿಷ-ಪೇಶವೆಯವರ ಸಂಬಂಧವಾಗಿ ಈ ಮಹದಾಜಿಯು ತಾನು ಅಗ್ರೇಸರತ್ವವನ್ನು ವಹಿಸಿ, ದಿಲ್ಲಿಯ ರಾಜಕಾರಣದಲ್ಲಿ ಇಂಗ್ಲಿಷರು ಲಕ್ಷ್ಯಗೊಡಲಾಗದೆಂದೂ ಬಾದಶಾಹಿಯ ಎಲ್ಲ ವಿಧದ ವ್ಯವಸ್ಥೆ ಮಾಡುವ ಕೆಲಸವು ತನ್ನೊಬ್ಬನ ಕಡೆಗೇ ಉಳಿಯಬೇಕೆಂದೂ ಅವನು ಇಂಗ್ಲಿಷರಿಂದ ಗರ್ಭಿತ ಸಮ್ಮತಿಯನ್ನು ದೊರಕಿಸಿದ್ದನು. ೧೭೭೪ರಲ್ಲಿ ವಾರನ್ ಹೇಸ್ಟಿಂಗ್ಸನು ಗವ್ಹರ್ನರ ಜನರಲ್ಲನಾದನು. ಅವನಿಗೂ ಮಹದಾಜಿ ಶಿಂದೆಗೂ ಚನ್ನಾಗಿ ಕೂಡಿತು. ಹೇಸ್ಟಿಂಗ್ಸನು ವಿಲಾಯತಿಗೆ ಹೋಗುವವರೆಗೂ ಅವರಿಬ್ಬರ ಸ್ನೇಹವು ಅಬಾಧಿತವಾಗಿ ಉಳಿಯಿತು. ಇಂಗ್ಲಿಷ

ರಾದರೂ ದಿಲ್ಲಿಯ ಒಬ್ಬ ರಾಜಕುಮಾರನನ್ನು ತಮ್ಮ ಕೈಯಲ್ಲಿರಿಸಿಕೊಂಡರು; ಆದರೆ ಅವನ ಉಪಯೋಗವನ್ನು ಅವರಿಗೆ ತಮ್ಮ ಮನಸ್ಸಿನಂತೆ ಮಾಡಿಕೊಳ್ಳಲಿಕ್ಕೆ ಬರಲಿಲ್ಲ.

ಸಾಲಬಾಯಿಯ ಒಪ್ಪಂದವಾದ ಮೇಲೆ ಮಹದಾಜಿಯು ದಿಲ್ಲಿಯ ಕಡೆಗೆ ಹೋದನು; ಆದರೆ ಅಲ್ಲಿಯ ಸ್ಥಿತಿಯನ್ನು ನೋಡಿ, ಈಗಿನ್ವದಕ್ಕಿಂತ ಹೆಚ್ಚಿನ ಅಧಿಕಾರವನ್ನು ದೊರಕಿಸದಿದ್ದರೆ ತನ್ನ ವರ್ಚಸ್ವವು ನೆಲೆಗೊಳ್ಳುವದಿಲ್ಲವೆಂದು ಅವನಿಗೆ ತೋರಿದ್ದರಿಂದ ಅಂಥ ಅಧಿಕಾರವನ್ನು ಬಾದಶಹನಲ್ಲಿ ಬೇಡಿದನು; ಬಾದಶಹನಾದರೂ ಕೊಡಲೊಪ್ಪಿದನು. ಪಾತಶಹನ 'ವಕೀಲ ಮುತಲಕಿ'ಯ ಸನದನ್ನು ಪೇಶವೆಯವರಿಗೆ ದೊರಕಿಸಿಕೊಟ್ಟು ಅವರ ಪರವಾಗಿ ಮಹದಾಜಿಯು ದಿಲ್ಲಿಯ ಸರ್ವಾಧಿಕಾರವನ್ನು ತಾನೇ ಸಾಗಿಸಬೇಕೆಂದು ಯೋಚಿಸಿದ್ದನು. ಬಾದಶಹನಿಗಾದರೂ ಈ ಮಾತಿನ ಒಪ್ಪಿಗೆಯಿತ್ತು; ಆದರೆ ಇದೇ ಸಮಯದಲ್ಲಿ ದಕ್ಷಿಣೀ, ಹಿಂದುಸ್ತಾನೀ ಈ ಸ್ವರೂಪದ ಸ್ಪರ್ಧೆಯು ಪ್ರಬಲವಾಗಿ, ರಜಪೂತರೂ ಜಾಟರೂ ಮುಸಲ್ಮಾನರೂ ಕಾರಸ್ಥಾನ ನಡೆಯಿಸಿ ಮಹದಾಜಿಯೊಡನೆ ಯುದ್ಧವನ್ನು ಪ್ರಾರಂಭಿಸಿದರು ಸನ್ ೧೭೮೭ರಲ್ಲಿ ಲಾಲಸೋಟ ಎಂಬಲ್ಲಿ ಆದ ಯುದ್ಧದಲ್ಲಿ ರಜಪೂತರು ಮಹದಾಜಿಯನ್ನು ಪರಾಭವಗೊಳಿಸಿದರು ಈ ವೇಳೆಯಲ್ಲಿ ಮಹದಾಜಿಯು ಪಾತಶಾಹೀ ಸೈನ್ಯ ತೆಗೆದುಕೊಂಡು ಬಾದಶಹನ ಸರದಾರನಾಗಿ ಯುದ್ಧ ಮಾಡುತ್ತಿದ್ದನು; ಆದರೆ ಈ ಸೈನ್ಯದ ಮೇಲೆ ವಿಶ್ವಾಸ ಇಡಲಿಕ್ಕೆ ಬರುವಂತಿಲ್ಲವೆಂಬದನ್ನು ಅವನು ಬೇಗನೆ ಗುರುತಿಸಿದನು ಯಾಕಂದರೆ ಒಂದೆರಡು ಪ್ರಸಂಗಗಳಲ್ಲಿ ಆಯತ್ತವಾದ ಯುದ್ಧಸಮಯದಲ್ಲಿ ಮುಸಲ್ಮಾನೀ ಸೈನ್ಯವು ವಿಶ್ವಾಸಘಾತ ಮಾಡಿ ಶತ್ರುಗಳನ್ನು ಕೂಡಿತು. ಕೈಯಲ್ಲಿ ವಿಶ್ವಾಸದ ಮರಾಟ ಸೈನ್ಯವಿಲ್ಲದೆ ದಿಲ್ಲಿಗೆ ಹೋಗುವದರಲ್ಲಿ ಅರ್ಥವಿಲ್ಲೆಂದು ಮಹದಾಜಿಯು ಪೇಶವೆಯವರಲ್ಲಿ ಸೈನ್ಯದ ಸಹಾಯ ಬೇಡಿದನು. ಅಲ್ಲಿಂದ ನೆರವು ಬರುವ ವರೆಗೆ ಶಿಂದೆಯು ಮಥುರೆಯಲ್ಲಿದ್ದನು. ಆಗ ದಿಲ್ಲಿಯ ಬಾದಶಹನ ಅವಸರದ ನಿಮಂತ್ರಣವು ಬಂದರೂ ಅವನು ಅಲ್ಲಿಗೆ ಹೋಗಲಿಲ್ಲವೆಂಬ ಪ್ರವಾದವಿದೆ; ಆದರೆ 'ಇತಿಹಾಸ ಸಂಗ್ರಹ'ದಲ್ಲಿ ಪ್ರಸಿದ್ಧವಾದ ದಿಲ್ಲಿಯ ರಾಜಕಾರಣದ ಪತ್ರಗಳನ್ನು ನೋಡಲಾಗಿ ಈ ಆರೋಪಣೆಯು ನಿಜವೆಂದು ತೋರುವದಿಲ್ಲ. ಮಹದಾಜಿಯೊಬ್ಬನಿಂದ ದಿಲ್ಲಿಯ ಕಾರ್ಯಭಾಗವು ನೆರವೇರುವದಿಲ್ಲವೆಂದೂ, ಅವನ ಜೊತೆಗೆ ಮತ್ತೊಬ್ಬ ಮರಾಟ ಸರದಾರನ ಆವಶ್ಯಕತೆಯಿರುವದೆಂದೂ ಬಾದಶಹನಿಗೆ ತಿಳಿದದ್ದರಿಂದ ಅಷ್ಟು ತೀವ್ರವಾಗಿ ದಿಲ್ಲಿಗೆ ಬರುವ ಆವಶ್ಯಕತೆಯಿಲ್ಲವೆಂದು ಅವನೇ ಶಿಂದೆಗೆ ತಿಳಿಸುತ್ತಿದ್ದನು.

೧೭೮೮ರಲ್ಲಿ ಗುಲಾಮಖಾದರನ ಸೈತಾನೀ ಸ್ವಭಾವವು ಶಿಖರಕ್ಕೆ ತಲುಪಿ ಅವನು ಶಹಾಆಲಮನ ಕಣ್ಣುಗಳನ್ನು ಕಿತ್ತು ಪಾತಶಾಹೀ ಝನಾನಖಾನೆಯನ್ನು ಮಾನಗೇಡು ಮಾಡಿದನು. ಆಗ ಮಹದಾಜಿಯು ತನ್ನ ಸರದಾರನಾದ ರಾಣಾಖಾನನನ್ನು ದಿಲ್ಲಿಗೆ ಕಳಿಸಿ, ಗುಲಾಮಖಾದರನನ್ನು ಹಿಡಿದು ತರಿಸಿ ಅವನ ಶಿರಚ್ಛೇ

ದನ ಮಾಡಿಸಿದನು. ಆದರೂ ದಿಲ್ಲಿಯ ರಾಜಕಾರಣವು ಹೊಯ್ದಾಡುತ್ತಲೇ ಇತ್ತು. ಯಾಕೆಂದರೆ ಮಹದಾಜಿಯು ದಕ್ಷಿಣಕ್ಕೆ ಹೋಗತಕ್ಕವನಿದ್ದನು. ಅವನು ೧೭೯೨ರಲ್ಲಿ ಪುಣೆಗೆ ಬಂದನು, ಹಾಗು ಮರುವರ್ಷವೇ ಮರಣಹೊಂದಿದನು. ಮಹದಾಜಿಯ ಮರಣದಿಂದ ಮರಾಟರ ದಿಲ್ಲಿಯ ಸಂಬಂಧವು ತೀರ ತಪ್ಪುವದೋ ಏನೋ ಎಂಬ ಭೀತಿಯು ನಾನಾಫಡಣವೀಸನಲ್ಲಿ ಹುಟ್ಟಿತ್ತು. ಶಿಂದೆಯ ಮರಣದ ತರುವಾಯ ಇಂಗ್ಲಿಷರು ದಿಲ್ಲಿಯನ್ನು ಪ್ರವೇಶಿಸುವದಕ್ಕಾಗಿ ಟೊಂಕ ಕಟ್ಟಿದರು. ದೌಲತರಾವ ಶಿಂದೆಯ ದುರ್ಬಲತೆಯ ಹಾಗು ಮೂರ್ಖತನದ ಮೂಲಕವಾಗಿ ೧೮೦೩ರಲ್ಲಿ ದಿಲ್ಲಿಯು ಇಂಗ್ಲಿಷರ ವಶವಾಯಿತು. ಈ ಮೇರೆಗೆ ಸುಮಾರು ನೂರುವರ್ಷಗಳವರೆಗಿದ್ದ ಮರಾಟರ ಹಾಗು ದಿಲ್ಲಿಯ ಸಂಬಂಧವು ಇಲ್ಲಿಗೆ ಪೂರ್ಣವಾಗಿ ತಪ್ಪಿ ಹೋಯಿತು.

ಇಂಗ್ಲಿಷರು ಇದಕ್ಕಿಂತ ಪೂರ್ವದಲ್ಲಿಯೇ ದಿಲ್ಲಿಯ ರಾಜಕಾರಣದಲ್ಲಿ ಕೈಹಾಕತಕ್ಕವರು; ಆದರೆ ವಾರನ್ ಹೇಸ್ಟಿಂಗ್ಸನ ನಾನಸಿಕತೆಯ ಧೋರಣದಿಂದ ಅದು ಸಾಧ್ಯವಾಗಿರಲಿಲ್ಲ. ಎಷ್ಟೋ ಇಂಗ್ಲಿಷ ಟೀಕಾಕಾರರು ಹೇಸ್ಟಿಂಗ್ಸನ ಈ ಧೋರಣದ ಬಗ್ಗೆ ದೋಷಕೊಟ್ಟಿದಾರೆ. ವಾರನ್ ಹೇಸ್ಟಿಂಗ್ಸನು ಶಿಂದೆಯಿಂದ ಹೆಚ್ಚು ಲಂಚ ತೆಗೆದುಕೊಂಡು ಮಾನಸಿಕತೆಯ ಧೋರಣವನ್ನು ಕೈಕೊಂಡನೆಂದು ಕೆಲವರು ಆರೋಪಿಸಿರುವರು. ಪುಣೆಯ ದರಬಾರದ ರಾಜಕಾರಣದ ಸಲುವಾಗಿ ತಮಗೆ ಶಿಂದೆಯಿಂದ ಸಹಾಯವಾಗುವದೆಂದು ಹೆಸ್ಟಿಂಗ್ಸನ ತಿಳುವಳಿಕೆಯಿತ್ತು. ಸಾಲಬಾಯಿಯ ಒಪ್ಪಂದದ ಘಟನೆಯನ್ನು ಲಕ್ಷಿಸಿದರೆ, ಈ ತಿಳುವಳಿಕೆಯು ತೀರ ಸುಳ್ಳಿತ್ತೆಂದು ಹೇಳಲಿಕ್ಕೆ ಬರುವದಿಲ್ಲ. ೧೭೭೪ರಿಂದ ೧೭೮೫ರ ವರೆಗೆ ೧೧ ವರ್ಷ ಹೇಸ್ಟಿಂಗ್ಸನು ದಿಲ್ಲಿಯ ಕಡೆಗೆ ದುರ್ಲಕ್ಷ್ಯ ಮಾಡಿದನೆಂಬದು ಸ್ಪಷ್ಟವೇ ಇದೆ. ಇಂಗ್ಲಿಷರ ವಿಶ್ವಾಸಿಕ ಮಿತ್ರನಾದ ನಜೀಬಖಾನನು ಮಡಿದ ಕೂಡಲೆ ಮೇಜರ ಬ್ರಾವುನ, ಮೇಜರ ಡೆವ್ಹಿ ಎಂಬ ವಕೀಲರನ್ನು ಅವನು ಬಾದಶಹನ ಗುಪ್ತಭೆಟ್ಟಿಗೆ ಕಳುಹಿಸಿದನು; ಆದರೆ ಆ ಭೆಟ್ಟಿಯಿಂದ ಏನೂ ನಿಷ್ಪನ್ನವಾಗಲಿಲ್ಲ. ೧೭೮೪ರಲ್ಲಿ ಶಹಾಆಲಮನ ಮಗನು ಲಖನೌದಲ್ಲಿ ಹೇಸ್ಟಿಂಗ್ಸನನ್ನು ಭೆಟ್ಟಿಯಾದನು. ಅವನು ತನ್ನ ತಂದೆಯನ್ನು ಸಿಂಹಾಸನದ ಮೇಲೆ ಕುಳ್ಳಿರಿಸುವದಕ್ಕಾಗಿ ಇಂಗ್ಲಿಷರ ಸಹಾಯವನ್ನು ಯಾಚಿಸಿದನು; ಆದರೆ ಈಸ್ಟ ಇಂಡಿಯಾ ಕಂಪನಿಯ ಡಾಯರೆಕ್ಟರರೂ ಕಲಕತ್ತೆಯ ಕೌನ್ಸಿಲದಾರರೂ ದಿಲ್ಲಿಯ ರಾಜಕಾರಣದಲ್ಲಿ ಬೀಳಲು ಇಚ್ಛಿಸುವದಿಲ್ಲವಾದ್ದರಿಂದ ನೀವು ಪುನಃ ಮಹದಾಜಿ ಶಿಂದೆಯ ನೆರವೇ ಹೊಂದಬೇಕೆಂದು ಅವನು ಶಹಾಜಾದಾನಿಗೆ ಪ್ರತ್ಯುತ್ತರವಿತ್ತನು.

ಪ್ರತ್ಯಕ್ಷ ಇಂಗ್ಲಿಷರೇ ಮಹದಾಜಿಯ ಕಡೆಗೆ ಬೆರಳು ಮಾಡಿ ತೋರಿಸಿದ ಮೇಲೆ ಮೊದಲಿನಂತೆ ಅವನು ಬಾದಶಹನ ಪಕ್ಷವನ್ನು ಮತ್ತೆ ವಹಿಸಿದನು. ಇದರಲ್ಲಿ ಅವನ ತಪ್ಪೇನು? ಹೀಗಿದ್ದರೂ ಇಂಗ್ಲಿಷ ಇತಿಹಾಸಕಾರರು ಅವನನ್ನೇ ದುಷ್ಟನೂ

ಕಾರಸ್ಥಾನಿಯೂ ಎಂದು ಅಂದಿದ್ದಾರೆ; ಆದರೆ ಈ ವೇಳೆಯಲ್ಲಿ ಮಹದಾಜಿಯು ಮೊದಲಿಗಿಂತ ಒಂದು ಕೆಲಸವನ್ನು ಹೆಚ್ಚು ಮಾಡಿದನು. ಅದು ಅವನ ಜಾಣತನದ ಸಾಕ್ಷಿಯಾಗಿದೆ. ಆ ಸಂಗತಿ ಯಾವುದೆಂದರೆ, ಅವನು ಬಾದಶಹನಿಂದ ಪೇಶವೆಯವರಿಗೆ 'ವಕೀಲ ಮುತಲಕ' ಎಂಬ ಬಿರುದನ್ನೂ ತನಗೆ 'ಮುಕ್ತ್ಯಾರ ಉಲ್ಮುಲ್ಕ' ಎಂಬ ಬಿರುದನ್ನೂ ದೊರಕಿಸಿದನು. ಯಾರ ನೆರವಿನಿಂದ ಬಾದಶಹನು ಸಿಂಹಾಸನದ ಮೇಲೆ ಗಟ್ಟಿಯಾಗಿ ಕುಳಿತುಕೊಳ್ಳುವೆನೆಂದು ನಂಬಿದ್ದನೋ, ಅವರಿಗೆ ತನ್ನ ವಜೀರನಿಗಿಂತ ಹೆಚ್ಚು ಅಧಿಕಾರವನ್ನು ಕೊಡುವದು ಯೋಗ್ಯವೇ ಆಗಿತ್ತು; ಯಾಕಂದರೆ ದಿಲ್ಲಿಯ ವಜೀರರೇ ಎಲ್ಲ ಅನರ್ಥಕ್ಕೆ ಕಾರಣರಾಗಿದ್ದರು. ಆದ್ದರಿಂದ ಅವರನ್ನು ಅಳತೆಯಲ್ಲಿರಿಸಬೇಕಾದರೆ ಶಸ್ತ್ರದ ಜೊತೆಗೆ ಇಂಥ ಅಧಿಕಾರವಿರುವದೂ ಯೋಗ್ಯವೇ ಆಗಿತ್ತು. ಶಿಂದೆಯ ಕಡೆಗೆ ಇಂಥ ಅಧಿಕಾರವಿರುವದು ಇಂಗ್ಲಿಷರಿಗೆ ಸಮ್ಮತವಿರಲಿಲ್ಲ; ಆದರೆ ಅವರು ಈ ವೇಳೆಯಲ್ಲಿ ದಿಲ್ಲಿಯ ರಾಜಕಾರಣದಲ್ಲಿ ಬೀಳಲಿಕ್ಕೆ ಸಿದ್ಧರಿರಲಿಲ್ಲ. ಹೀಗಿರಲು, ಇಂಗ್ಲಿಷ ಇತಿಹಾಸಕಾರರು ಹಿಂದಿನಿಂದ ಬೆರಳು ಮುರಿಯುವದರಲ್ಲಿ ಯಾವ ಅರ್ಥವಿದೆ? ಮಹದಾಜಿಗೆ ದೊರೆತ ಅಧಿಕಾರದ ಬಗ್ಗೆ ಇಂಗ್ಲಿಷ ಇತಿಹಾಸಕಾರನಾದ ಮಿಲನು ಕೆಳಗಿನಂತೆ ವರ್ಣಿಸಿರುವನು:—

"ಮಹದಾಜಿಗೆ ದೊರೆತ ಅಧಿಕಾರದಿಂದ ಅವನಿಗೆ ಪ್ರತ್ಯಕ್ಷ ದಿವಾಣನ ಮೇಲೆ ಸಹ ಅಧಿಕಾರ ನಡೆಯಿಸಲಿಕ್ಕೆ ಸಾಧ್ಯವಾಯಿತು. ಮರಾಟರ ಕೈಯಲ್ಲಿ ಹಿಂದುಸ್ಥಾನದ ಅಧಿರಾಜ್ಯದ ಎಲ್ಲ ಸತ್ತೆಗಳೂ ಸೇರಿದವು"

ಹೇಸ್ಟಿಂಗ್ಸನು ಬಾದಶಹನಿಗೆ ಶಿಂದೆಯ ಕಡೆಗೆ ಬೆರಳು ಮಾಡಿ ತೋರಿಸಿದಾಗ, ಮುಂದೆ ಶಿಂದೆಯು ಬಾದಶಹನಿಂದ ಸರ್ವಾಧಿಕಾರ ದೊರಕಿಸುವನೆಂಬ ಸ್ವಪ್ನವು ಬಿದ್ದಿರಲಿಲ್ಲವೆಂಬದು ನಿಜ; ಆದರೆ ಮಹದಾಜಿಯು ಈ ಅಧಿಕಾರ ದೊರಕಿಸಿದ್ದಕ್ಕಾಗಿ ನೆವ ತೆಗೆದು ಮರಾಟರೊಡನೆ ಯುದ್ಧ ಮಾಡುವದು ಅನುಚಿತವಾಗಿ ತೋರುತ್ತಿತ್ತು. ಹೇಸ್ಟಿಂಗ್ಸನು 'ಡಿಫೆನ್ಸ' ಕೊಡುವಾಗ ಈ ವಿಷಯವಾಗಿ ಪ್ರತಿವಾದಿಸಿರುವವೇನಂದರೆ: "ಮಹದಾಜಿಯು ಹಾಗು ನನ್ನ ಗುಪ್ತವಾದ ಅರೆದಾಟವಾಗಿ ನಾನಾಗಿ ಬಾದಶಹನನ್ನು ಅವನ ವಶದಲ್ಲಿ ಕೊಟ್ಟೆನೆಂಬದು ನಿಜವಲ್ಲ. ನಾವು ಆಶ್ರಯ ಕೊಡಲಿಕ್ಕೆ ಸಿದ್ಧರಾಗದ ಮೇಲೆ ಬಾದಶಹನನ್ನು ಶಿಂದೆಯು ಕೈಯಲ್ಲಿ ತೆಗೆದುಕೊಂಡನು. ಅನಂತರ ಅವನಿಗೆ ಎಲ್ಲ ಅಧಿಕಾರಗಳೂ ಕೊಡಲ್ಪಟ್ಟವು. ಇದಕ್ಕಾಗಿ ನಾವು ಮರಾಟರೊಡನೆ ಏಕೆ ಯುದ್ಧ ಮಾಡಬೇಕು?" ಇದರಲ್ಲಿಯ ನಿಜವಾದ ಸಂಗತಿಯೇನಂದರೆ, ಮಹದಾಜಿಯು ದಿಲ್ಲಿಯ ರಾಜಕಾರಣವನ್ನು ಕೈಯಲ್ಲಿ ತೆಗೆದುಕೊಳ್ಳಲಿಕ್ಕೆ ಉತ್ಸುಕನಾಗಿದ್ದನು ಇಂಗ್ಲಿಷರು ಈ ಕೆಲಸವು ತಮ್ಮಿಂದ ಆಗದಂತಹದೆಂದೂ ವಿಶೇಷ ವೆಚ್ಚದ್ದೆಂದೂ ತಿಳಿದು ಉಪೇಕ್ಷಿಸುತ್ತಿದ್ದರು. ಮಹದಾಜಿಯು ದಿಲ್ಲಿಗೆ ಹೋದ ಮೇಲೆ ಬಾದಶಹನ ಕಲ್ಯಾಣವು ನಿಜವಾಗಿಯೇ ಆಯಿತು. ಎಲ್ಸನ್ನನು ಮಿಲನ ಇತಿಹಾಸಕ್ಕೆ ಟಿಪ್ಪಣಿ ಕೊಡುವಾಗ ಅಂದಿರುವದೇನಂದರೆ:—"ಪಾತಶಹನ ಸ್ವಾಸ್ಥ್ಯ, ಸುಖ, ಮಾನ, ಮನ್ನಣೆಗಳ ದೃಷ್ಟಿ

ಯಿಂದ ಆವನು ಶಿಂದೆಗೆ ಕಗೆಗೆ ಸೋಲದಷ್ಟೇ ಒಳಿತಾಯಿತು. ಯಾಕಂದರೆ, ದಿಲ್ಲಿಯ ದರಬಾರದಲ್ಲಿ ವಂಶಪರಂಪರವಾಗಿ ಓವಾಗಾರಿ, ಉಮರಾವಗಳನ್ನು ಉಪಭೋಗಿಸಿದ ಮುಸಲ್ಮಾನರು ತಪನ ಪಿಡಂಬನೆಯನ್ನೇ ಮಾಡಿದ್ದರು."

ಇರಲಿ. ಮಹದಾಜಿಯು ಸರ್ವಾಧಿಕಾರ ದೊರಕಿಸಿದ ಮೇಲೆ ಬಾದಶಹನ ಇಚ್ಛೆಯ ವಿರುದ್ಧವಾಗಿ ಬಂಗಾಲದ ಚೌಥಾಯಿಯನ್ನು ಇಂಗ್ಲಿಷರಲ್ಲಿ ಬೇಡಿದನು. ಬಾದಶಹನ ಇಚ್ಛೆಯಿರದಿದ್ದರೂ ದಿವಾಣನಿಗಿಂತ ವರಿಷ್ಠ ಅಧಿಕಾರದ ಬಲದಿಂದ ಇಂಥ ಬೇಡಿಕೆಯನ್ನು ಬೇಡುವ ಬಾಧ್ಯತೆಯು ಮಹದಾಜಿಗಿತ್ತು. ಇಂಗ್ಲಿಷರಿಗೆ ಈ ಬೇಡಿಕೆಯು ವೈಪರೀತ್ಯವಾಗಿ ತೋರಿತು. ಮಹದಾಜಿಯಾದರೂ ಸ್ನೇಹದ ಕಡೆಗೆ ಲಕ್ಷ್ಯಗೊಟ್ಟು ಈ ಬೇಡಿಕೆಯ ಬಗ್ಗೆ ಒತ್ತಾಯ ಮಾಡಲಿಲ್ಲ. ದಿಲ್ಲಿಯ ಅಮೀರ-ಉಮರಾವ ಮೊದಲಾದವರಿಗಾದರೂ ಇಂಗ್ಲಿಷರಂತೆ ಶಿಂದೆಗೆ ಕುಲಮುಖ ತ್ಯಾರಿಯನ್ನು ಕೊಟ್ಟ ಸಂಗತಿಯು ಸೇರಲಿಲ್ಲವೆಂಬದನ್ನು ಹಿಂದೆಯೇ ಉಲ್ಲೇಖಿಸಿದೆ. ಇತರರಿಗೆ ಸೇರಲಿ-ಸೇರದಿರಲಿ; ಮಹದಾಜಿಯು ಆ ಅಧಿಕಾರವನ್ನು ದೊರಕಿಸಿದ್ದು ನಿಜ. ಶಿವಾಜಿಯ ಕಾಲದಿಂದ ಚೌಥಾಯಿಯ ಅಧಿಕಾರ ರೂಪದಿಂದ ಪಾತಶಾಹೀ ಧೋರಣದ ವೃಕ್ಷವು ಬೆಳೆದು, ಮಹದಾಜಿಯು ದೊರಕಿಸಿದ ಅಧಿಕಾರದಿಂದ ಅದಕ್ಕೆ ಹೂ-ಕಾಯಿಗಳಾಗಿದ್ದವು; ಆದರೆ ದುರ್ದೈವದಿಂದ ಶಿಂದೆಯ ಗಾದಿಯ ಮೇಲೆ ದೌಲತರಾಯನಂಥ ಹೇಡಿ ಮನುಷ್ಯನೂ ಪೇಶವಾಯಿಯ ಗಾದಿಯ ಮೇಲೆ ಬಾಜೀರಾಯನಂಥ ಹೇಡಿ ಮನುಷ್ಯನೂ ಬಂದು ಎರಡೂ ಗಾದಿಗಳು ಅಪವಿತ್ರವಾದುದರಿಂದ ಆ ಹೂ-ಕಾಯಿಗಳು ಉದುರಿ ಹೋದವಲ್ಲದ ಇಡೀ ವೃಕ್ಷವೇ ಕಮರಿ ಹೋಯಿತು. ಯಶಾಪಯಶಗಳು ಜಗತ್ತಿನಲ್ಲಿ ಸರಿಯಾಗಿ ಹಂಚಲ್ಪಡುತ್ತಿರುವದಿಲ್ಲ. ಶಿವಾಜಿಯ ಕಾಲದಿಂದ ಪ್ರಾರಂಭವಾದ ಮರಾಟರ ಪಾತಶಾಹೀ ಧೋರಣವು ಕರ್ತೃ ಪುರುಷರ ಪರಂಪರೆಯಿಂದ ಸುಸಂಗತವಾಗಿ ಹೇಗೆ ಸಾಗಿತೆಂಬದನ್ನು ನಾವು ವಾಚಕರಿಗೆ ತೋರಿಸುವದಿತ್ತು. ಪ್ರಸ್ತುತ ಪ್ರಕರಣವನ್ನು ಪೂರ್ಣ ಓದಿದ ಮೇಲೆ ಈ ವಿಧಾನವು ಮನನವಾಗಬಹುವೆಂದು ನಮಗೆ ತೋರುವದು.

ನಾವು ಯಾವ ವಿಷಯದ ಬಗ್ಗೆ ಚರ್ಚೆ ಮಾಡಿರುವೆವೋ, ಆ ವಿಷಯದ ಮೇಲೆ ಪ್ರಕಾಶ ಬೀಳುವಂಥ ಕೆಲವು ಸಂಗತಿಗಳನ್ನು ಹೇಳಿ, ಬೆಳೆದ ಈ ಪ್ರಕರಣವನ್ನು ಪೂರೈಸುವೆವು. ಈ ಸಂಗತಿಗಳೆಂದರೆ, ಕೊನೆಯ ದಿವಸಗಳಲ್ಲಿ ದಿಲ್ಲಿಯಲ್ಲಿದ್ದ ಮರಾಟರ ಪ್ರತಿನಿಧಿಯು ನಾನಾಫಡಣವೀಸನಿಗೆ ಬರೆದ ಪತ್ರಗಳೊಳಗಿನವಾಗಿರುವದರಿಂದ ಅವುಗಳಿಗೆ ಮಹತ್ವವಿರುವದೆಂದು ಹೇಳಬಹುದು.

ದಿಲ್ಲಿಯಲ್ಲಿಯ ಮರಾಟರ ಪ್ರತಿನಿಧಿಯಾದ ಗೋವಿಂದರಾವ ಪುರುಷೋತ್ತಮನು ೧೭೮೩ನೇ ಇಸವಿಯ ಸಪ್ಟಂಬರ ೨೬ನೇ ತಾರೀಖಿಗೆ ಉತ್ತರ ಹಿಂದುಸ್ಥಾನದ ಪರಿಸ್ಥಿತಿಯ ವಿಷಯವಾಗಿ ನಾನಾನಿಗೆ ಬರೆದಿರುವದೇನೆಂದರೆ--"ಹಿಂದುಸ್ಥಾನ

ವೆಲ್ಲ ಬರಿದು ಬಿದ್ದಿದೆ. ಅಫರಾಶಖಾನ, ನಜೀಬಕುಲೀಖಾನ ಇವರಿಬ್ಬರು ಸರದಾರರು ನಜೀಬಖಾನನ ಪಕ್ಷದವರಿದ್ದಾರೆ. ಸೈನ್ಯಸಮವೇತವಾದ ಸೇನಾಪತಿಗಳು ಯಾರಾದರೂ ಬಂದರೆ ಅವರ ಸೇವೆ ಮಾಡಲಿಕ್ಕೆ ಇವರು ಸಿದ್ಧರಿದ್ದಾರೆ. ಹಿಂದುಸ್ಥಾನದಲ್ಲಿ ಕಾಳಗದ ಶಕ್ತಿಗಳು ಉಳಿದಿಲ್ಲ! ಆದ್ದರಿಂದ ಇಲ್ಲಿಗೆ ಸೈನ್ಯ ಕಳುಹಿಸಿ ವಾರ್ತೆ ತಿಳದುಕೊಳ್ಳುವ ಅವಶ್ಯಕತೆಯಿದೆ. ಇಲ್ಲದಿದ್ದರೆ ಶೀಖರ ಇಲ್ಲವೆ ಫಿರಂಗಿಗಳ ಸೇನೆಗಳು ದಿಲ್ಲಿಗೆ ಬರುವವು. ಆ ಮೇಲೆ ಕಾರ್ಯವು ಕಠಿಣವಾಗುವದು. ದಿಲ್ಲಿಯ ಬಾದಶಹನನ್ನು ಕೈಯಲ್ಲಿ ತೆಗೆದುಕೊಂಡು ತಾವು ಹೆಚ್ಚಿನವರಾಗಬೇಕೆಂದು ಇಂಗ್ಲಿಷರ ಮಾನಸವುಂಟು. ಆದ್ದರಿಂದ ತಮ್ಮ ಸೈನ್ಯವು ದಿಲ್ಲಿಗೆ ತೀವ್ರವಾಗಿ ಬಂದರೆ ಬಾದಶಹನು ಕೈವಶನಾಗಿ ಹಿಂದುಸ್ಥಾನವು ನಮ್ಮ ವರ್ಚಸ್ಸಿನಲ್ಲಿ ಉಳಿಯುವದು. ಈ ಮಾತಿಗೆ ವಿಲಂಬವಾದರೆ ಮುಂದೆ ಕಾರ್ಯವು ಕಠಿಣವಾಗುವದೆಂದು ವಿನಂತಿ ಮಾಡಿಕೊಂಡಿರುವೆನು.”

(೧೭೪) “ಪತ್ರದಲ್ಲಿ ಆಜ್ಞೆಯೇನಂದರೆ, ಬಾದಶಹರು ಮೊದಲು ಪ್ರಯಾಗದಲ್ಲಿದ್ದಾಗ ಮತ್ತು ಅದಕ್ಕಿಂತ ಮೊದಲು ಮತ್ತು ಇತ್ತೀಚೆಗೆ ಇಂಗ್ಲಿಷರೊಡನೆ ಅವರ ಕಟ್ಟಳೆಗಳು ಯಾವ ಯಾವ ರೀತಿಯವಾಗಿವೆ, ಮತ್ತು ಎಲ್ಲೆಲ್ಲಿಯ ಪ್ರಾಂತಗಳ ಸನದುಗಳು ಹೇಗೆ ಹೇಗೆ ಕೊಡಲ್ಪಟ್ಟವೆ? ಅಂತರ್ವೇದಿಯೊಳಗಿನ ಎಷ್ಟು ಪ್ರಾಂತಗಳನ್ನೂ ಜಿಲ್ಲೆಗಳನ್ನೂ ಕೊಟ್ಟಿರುವರು? ಈ ಬಗ್ಗೆ ಸೂಕ್ಷ್ಮವಾಗಿ ಪರಿಶೋಧಿಸಿ ಕ್ರಮವಾಗಿ ಗೊತ್ತುವಳಿ ಬರೆಯಬೇಕು’ ಎಂದು ಪತ್ರದ ಆಜ್ಞೆ. "ಬಾದಶಹರ ದಪ್ತರವನ್ನು ಶೋಧಿಸಿದೆನು. ಅದರಲ್ಲಿಯ ಸಂಗತಿಯೇನಂದರೆ, ಪ್ರಯಾಗದಲ್ಲಿ ಬಾದಶಹರಿದ್ದಾಗ ಇಂಗ್ಲಿಷರು ಇಪ್ಪತ್ತಾರು ಲಕ್ಷ ರೂಪಾಯಿಗಳನ್ನು ಪ್ರತಿವರ್ಷ ಕೊಡುತ್ತಿದ್ದರು; ಮತ್ತು ಪ್ರಯಾಗ ಸುಭೆ ಹಾಗು ಕಡಾಕುರಾ ಇವೆರಡನ್ನೂ ಅವರು ಸುಜಾಉದ್ದೌಲನಿಂದ ಬಿಡಿಸಿ ಬಾದಶಹರಿಗೆ ಕೊಡಿಸಿದ್ದರು. ಅದರಲ್ಲಿ ಮೂವತ್ತುಮೂರು ಲಕ್ಷ ರೂಪಾಯಿಗಳು ಬಾದಶಹರಿಗೆ ಪ್ರತಿವರ್ಷ ದೊರೆಯುತ್ತಿದ್ದವು. ಬಾದಶಹರು ಇಂಗ್ಲಿಷರಿಗೆ ಬರ್ದವಾನ, ಇಸ್ಲಾಮನಗರ ಕಮಾವಿಸಿಯ ಮುಅಮಲತ ಸನದು, ಸುಭೆ ಬಂಗಾಲ ಸುಭೆ ಪಟ್ಟಣಗಳಲ್ಲಿಯ ದಿವಾಣಗಿರಿಯ ಸನದು ಆಗಿವೆ. ಇವುಗಳ ಹೊರತು ಅಂತರ್ವೇದಿ ಮೊದಲಾದ ಕಡೆಯ ಸನದುಗಳಾವವೂ ಆಗಿಲ್ಲ. ಪಾತಶಾಹಿ ದಪ್ತರಿನ ಪಾರಸಿಯ ರಾಯ ಸಿದ್ಧರಾಯ, ಪೇಶಕಾರ ದಪ್ತರಿನ ಟಿಪ್ಪಣೆಗಳನ್ನು ತರಿಸಿ ಸೇವೆಗೆ ಕಳುಹಿಸಿರುವೆನು. ಇವನ್ನು ನೋಡಿದರೆ ಎಲ್ಲವೂ ತಿಳಿಯುವದು. ಬಂಗಾಲದ ಹಾಗು ಪಟ್ಟಣಾದ ದಿವಾಣಗಿರಿಯು ಇಂಗ್ರಜರ ಹೆಸರಿನಿಂದ ಮತ್ತು ಸುಭಾ ಪಾತಶಾಹಿಯು ಅಲಿವರ್ದಿಖಾನನ ಮೊಮ್ಮಗನಾದ ಮುಬಾರಕಜಂಗ ಬಹಾದ್ದರನ ಹೆಸರಿನಿಂದ ಹಾಗು ಬರ್ದವಾನ ಇಸ್ಲಾಮನಗರಗಳ ಮಾಮಲತಿಯು ಕಮವೀಸಿಯಿಂದ ಸನದು ಆಗಿವೆ. ಬಾದಶಹರು ಅವನ ಕಡೆಗಿದ್ದಾಗ ವಿಶೇಷ ಕಾಗದ-ಪತ್ರಗಳೇನಾದರೂ ಆಗಿದ್ದರೆ ತಿಳಿಯುವಂತಿಲ್ಲ. ಸನದಿನ ದಪ್ತರಿನ ದಾಖಲೆಯು ಇಷ್ಟೇ ಇರುವದೆಂದು

ಖಾಲಸಾದ ಪೇಶಕಾರರು ಹೇಳಿದರು. ಇದರ ಹೊರತು ಮಹಮ್ಮದಖಾನ ಪಠಾಣ ಮೊದಲಾದವರು ಬಾದಶಹರಿಗೆ ಕೊಡುತ್ತಿದ್ದರು. ದಪ್ತರದ ಪಾರಸೀ ಟಿಪ್ಪಣಿಯನ್ನು ಕಳುಹಿಸಿರುವೆನು. ಇದರ ಮೇಲಿಂದ ಶ್ರುತವಾಗುವದು. ವಿಶೇಷವೇನು ಬರೆಯುವದು?"

(೧೭೮೪) ಇಸ್ಟಿನ ಸಾಹೇಬ ಇಂಗ್ರಜನು ಪಾತಶಹಾಜಾದಾನನ್ನು ತೆಗೆದು ಕೊಂಡು ಶ್ರೀಕಾಶಿಗೆ ಹೋದರು. ಈ ವರ್ತಮಾನವನ್ನು ವಿಲಾಯತಿಯ ಕಂಪನಿಯವರು ಕೇಳಿ ಇಸ್ಟಿನರಿಗೆ ಪತ್ರ ಬರೆದದ್ದೇನಂದರೆ, ನೀವು ಹಿಂದುಸ್ತಾನದ ಪಾತಶಹನ ಪುತ್ರ ಪಾತಶಹಾಜಾದನನ್ನು ಸಂಗಡ ತೆಗೆದುಕೊಂಡು ಹೋಗುತ್ತೀರಿ. ಇದರಲ್ಲಿ ನಿಮ್ಮ ಮಾನಸವೇನೆಂಬದನ್ನು ಬರೆದು ಕಳಿಸಬೇಕು. ದಕ್ಷಿಣಾತ್ಯ ಸರದಾರರಲ್ಲಿ ಹಾಗು ನಮ್ಮಲ್ಲಿ ಸ್ನೇಹವುಂಟಾಗಿದೆ. ಅವರ ಮನಸ್ಸಿನ ವಿರುದ್ಧವಾಗಿ, ಅವರ ವೈರ ಬಳೆಯಿಸಿ, ಅವರ ಮತದ ವಿರುದ್ಧವಾಗಿ ಪಾತಶಹಾಜಾದನನ್ನು ತೆಗೆದುಕೊಂಡು ಬಂದದ್ದು ಒಳಿತಾಗಲಿಲ್ಲ; ಆದರೆ ಪತ್ರದರ್ಶನವೇ ಪಾತಶಹಾಜಾದನನ್ನು ಪಾಟೀಲಬಾವಾನವರ ಕಡೆಗೆ ಕಳಿಸಬೇಕು. ಅವರು ಬಾದಶಹರಿಗೆ ವಿನಂತಿ ಮಾಡಿಕೊಂಡು ಪಾತಶಹಾಜಾದನ ಅಪರಾಧವನ್ನು ಕ್ಷಮಿಸ ಹಚ್ಚಿ ಅವನನ್ನು ಬಾದಶಹರ ಕಡೆಗೆ ಕೊಡುವರು.' ನೀವು ಈ ಗೊಂದಲದಲ್ಲಿ ಬೀಳಬಾರದೆಂದು ಬರೆದಿತ್ತು. ಇದರ ಮೇಲಿಂದ ಇಸ್ಟಿನ ಇಂಗ್ರೇಜಿಯು ಪಾತಶಹಾಜಾದನೊಡನೆ ಎರಡು ಪಥಕಗಳನ್ನು ಕೊಟ್ಟು ರಾಜಶ್ರೀ ಸದಾಶಿವಪಂತ ಬಕ್ಷಿ, ರಾಜಶ್ರೀ ಪಾಟೀಲಬಾವಾ ಇವರೊಡನೆ ಕಳಿಸಿದನು. ಅವರು ಈಗ ಲಖನೌ ಪಟ್ಟಣಕ್ಕೆ ಬಂದಿರುವರು.

"ಹಿಂದುಸ್ತಾನದಲ್ಲಿ ಪಾತಶಾಹಾಜಾದನನ್ನು ತೆಗೆದುಕೊಂಡು ಬರಬೇಕೆಂದು ಇದಿನಾನ ಮಾನಸವಿದೆ. ಪಾಟೀಲಬಾವಾ, ಇಸ್ಟಿನ ಸಾಹೇಬರ ಏಕವಾಕ್ಯತೆಯು ಇಂದ್ರಸೇನ ಸಾಹೇಬ ಮತ್ತು ಮೇಜರ ಬ್ರೌನ ಇಂಗ್ರೇಜ ಇವರೊಡನೆ ಅದೆ. ಅವರ ವಿದ್ಯಮಾನವು ಸದಾಶಿವಪಂತ ಬಕ್ಷಿ ಇವರ ವಿದ್ಯಮಾನದಂತೆ ಇರುವದು. ಅವರ ಭೆಟ್ಟಿಯು ಕಾಲಾನುರೂಪವಾಗಿ ಆಗುವದು. ಅನಂತರದಲ್ಲಿ ಅವರ ಮನೋದಯವು ಪ್ರಕಟವಾಗುವದು."

(೧೭೮೫) "ಈ ದಿವಸದಲ್ಲಿ ಮೇಜರ ಬ್ರೌನ ಇವರ ಕಡೆಗೆ ಸ್ವಾರಿಯು ಹೋಗಿತ್ತು. ಅವರ ಕಡೆಗೆ ಮೌಲವಿ ಎಂಬ ವಕೀಲನಿದ್ದು ಅವನ ಸಂಗಡ ಬಹಳ ಅರೆದಾಟ ನಡೆದಿರುತ್ತದೆ. ಯಾವ ಸಂಗತಿಯೆಂಬ ಬಗ್ಗೆ ಹೇಳಲಾಗುವದಿಲ್ಲ."

"ಪಾತಶಹರು ರಾಜಶ್ರೀ ಪಾಟೀಲಬಾವಾನವರ ವಿಚಾರದಂತೆ ಶ್ರೀಮಂತ ರಾಜಶ್ರೀ ಪಂತಪ್ರಧಾನ ಸಾಹೇಬರಿಗೆ ಮುಖತ್ಯಾರ ಸೀಮೆಯನ್ನು ಕೊಟ್ಟರು; ಶ್ರೀಮಂತರು ಪಾತಶಹರಿಗೆ ೧೦೧ ಮೋಹರುಗಳನ್ನು ಕಾಣಿಕೆ ಕೊಟ್ಟರು. ಶ್ರೀಮಂತರ ಖಿಲ್ಲತ್ತು ಪುಣೆಯ ಕಡೆಗೆ ಹೋದ ಮೇಲೆ ಚಂದ್ರ ೨೧ (೧ನೇ ಮೋ

(೧೭೮೫) ಶ್ರೀಮಂತ ರಾಜಶ್ರೀ ಪಂತಪ್ರಧಾನ ಸ್ವಾಮಿಯವರ ಮುಖತ್ಯಾರಿಯ ವಸ್ತ್ರಗಳನ್ನು ತಾವು ತೆಗೆದುಕೊಂಡಿರಿ. ಚಾರಕುಬಾ ಮತ್ತು ನಾಲಕಿಗಳನ್ನು ಪಾತಶಹರು ಕೊಟ್ಟರು. ಚಾರಕುಬಾ ಅಂದರೆ ಒಂದು ಅಂಗಿ; ಅದಕ್ಕೆ ತೋಳುಗಳಿರುವದಿಲ್ಲ. ತೋಳುಗಳ ಮೇಲೆ ಮುತ್ತಿನ ಸರಗಳಿರುವವು. ಅದಕ್ಕೆ 'ಚಾರಕುಬಾಖಿಲ್ಲತ್ತ' ಅನ್ನುವರು. ರಾಜಶ್ರೀ ಪಾಟೀಲಬಾವಾನವರ ಸ್ನೇಹ ಸ್ಪಷ್ಟ. ಕೆಲಸ ಬಹಳ. ಮುಖತ್ಯಾರಿ ಕಾರಭಾರವೆಂದರೆ ಪಾತಶಾಹಿಯ ಪ್ರತಿನಿಧಿಯ ಕೆಲಸವು."

(೧೭೮೬) ಪಾಟೀಲಬಾವಾನವರ ಕರ್ತವ್ಯಪ್ರಭಾವವನ್ನೂ ಮತ್ತು ಹಿಂದುಸ್ಥಾನದ ಪರಿಸ್ಥಿತಿಯನ್ನೂ ವರ್ಣಿಸುವಾಗ ಗೋವಿಂದರಾವ ಪುರುಷೋತ್ತಮನು ದಿಲ್ಲಿಯಿಂದ ಬರೆದದ್ದೇನಂದರೆ:—"ಹಿಂದುಸ್ಥಾನವು ನಿಃಕ್ಷತ್ರಿಯವಾದಂತೆ ಇಲ್ಲಿಯ ಪ್ರಕಾರವಿದೆ; ಅವರಲ್ಲಿ ಒಡಕುಗಳಿವೆ; ಯಾರೂ ಯಾರ ಸ್ವಾಧೀನದಲ್ಲಿಲ್ಲ. ಪ್ರಸಂಗವೊದಗಿದರೆ ತಾವೇ ಧನಿಗಳಾಗುವರು. ಒಂದು ವೇಳೆ ಅತ್ತ ದುರ್ಲಕ್ಷ್ಯವಾದರೆ ಸುಲಿಗೆಯನ್ನಾದರೂ ಮಾಡುವರು. ಇದು ಶೀಖರ ವರ್ತಮಾನವು. ವಜೀರನ ವಿಷಯವಾಗಿ ಹೇಳುವದಾದರೆ ಇಂಗ್ರೇಜರ ಮೇಲೆ ಅವನ ಲಕ್ಷ್ಯವಿದೆ. ಅವನಿಗೆ ಸದ್ಯಕ್ಕೆ ಅವರು ಕೀಳರಾಗಿ ತೋರುತ್ತಾರೆ. ಹಿಸ್ಟಿನನು ವಿಲಾಯತಿಗೆ ಹೋದನು. ಅವನಿಗೆ ಪ್ರತಿಯಾಗಿ ದೊಡ್ಡ ಸಾಹೇಬನು ಬಂದಿದ್ದಾನೆ. ಅವನು ಹಿಸ್ಟಿನನಂತೆ ಬಿಗಿಯಾದ ಆಳಿಕೆಯವನಲ್ಲ. ಬೊಕ್ಕಸವಾದರೂ ಮೊದಲಿನಂತಿಲ್ಲ. ಕಾರಭಾರ ಮೊದಲಿನಂತೆ ನಡೆದಿದೆ. ಪಾತಶಹರ ವಿಷಯವಾಗಿ ಹೇಳುವದಾದರೆ, ಒಂದು ಲಕ್ಷ ಮೂವತ್ತು ಸಾವಿರ ರೂಪಾಯಿ ಮಾಸಿಕ ವೇತನವಿದೆ. ಅಷ್ಟು ಹಣ ದೊರೆಯಿತೆಂದರೆ, ಅವರಿಗೆ ಒಂದು ಊರಿನ ಒಂದು ಬಿಘೆ ಭೂಮಿಯಾದರೂ ಬೇಕಾಗಿಲ್ಲ. ಈ ಮೇರೆಗೆ ಹಿಂದುಸ್ಥಾನದ ಅವಸ್ಥೆಯಿದೆ. ಹಿಂದುಸ್ಥಾನದ ಆಳಿಕೆಯ ಭಾರವೆಲ್ಲ ರಾಜಶ್ರೀ ಪಾಟೀಲಬಾವಾನ ಮೇಲೆ ಇದೆ. ಅವರು ಮನಃಪೂರ್ವಕವಾಗಿ ತಮ್ಮ ಕರ್ತವ್ಯವನ್ನು ನೆರವೇರಿಸುತ್ತಿದ್ದಾರೆ. ಆದರೆ ಅವರ ಕೈಯಲ್ಲಿ ಮುಲಕೀ ಉತ್ಪನ್ನದ ವ್ಯವಸ್ಥೆಗಾಗಿ ಸರದಾರರಿಲ್ಲ. ಅದಕ್ಕಾಗಿ ಸ್ವಾಮಿಯವರಿಗೆ ಸೂಚನಾರ್ಥವಾಗಿ ವಿನಂತಿ ಮಾಡಿಕೊಳ್ಳುತ್ತೇನೆ. ದೃಷ್ಟಿಗೆ ಬಿದ್ದ ಸಂಗತಿಯನ್ನೂ ಶ್ರವಣಕ್ಕೆ ಬಂದ ಸಂಗತಿಯನ್ನೂ ಅರಿಕೆ ಮಾಡಿಕೊಂಡಿದ್ದೇನೆ."

(೧೭೮೭) ಪಾಟೀಲಬಾವಾನು ಹಿಂದುಸ್ಥಾನದ ಕಾರಭಾರವನ್ನು ನಡೆಯಿಸಲಿಕ್ಕೆ ಸರ್ವತೋಪರಿ ತಕ್ಕವನಲ್ಲ; ಮತ್ತೊಬ್ಬ ಜಾಣ ಸರದಾರನ ಆವಶ್ಯಕತೆಯಿದೆ, ಎಂಬುದನ್ನು ಸೂಚಿಸುವದಕ್ಕಾಗಿ ಗೋವಿಂದರಾಯನು ಇ. ಸ. ೧೭೮೭ರಲ್ಲಿ ಬರೆದದ್ದೇನಂದರೆ:—"ಹೊಟ್ಟೆಗೆ ೧-॥ ಲಕ್ಷ ರೂಪಾಯಿಗಳನ್ನು ಪ್ರತಿ ತಿಂಗಳು ಕೊಟ್ಟರೆ ರಾಜ್ಯಕಾರಭಾರದ ಹಾಗು ರಾಜ್ಯದ ಅಗತ್ಯವು ಅವನಿಗಿರುವದಿಲ್ಲ. ಅವನ ಮಕ್ಕಳೇ ಮೊದಲಾದ ಶಹಾಜಾದಗಳು ನೂರು-ಒಂದೂವರೆ ನೂರು ಜನರಿದ್ದಾರೆ. ಅವರಲ್ಲಿ ಯಾರೂ ವೈಭವಶಾಲಿಗಳಿಲ್ಲ, ಅವರು ಪಾತಶಾಹಿಯನ್ನು ನಿಲ್ಲಿಸಿ

ಐಶ್ವರ್ಯವನ್ನು ನಷ್ಟಪಡಿಸಿರುವರು. ಶ್ರೀಮಂತ ರಾಜಶ್ರೀ ರಾವಸಾಹೇಬರು ಪ್ರಾರಬ್ಧವಾನರೂ ಪ್ರತಾಪಶಾಲಿಗಳೂ ಇರುವರು. ಅವರ ಸುದೈವವೆಂದು ಪಾತಶಾಹಿಯು ಮುಖತ್ಯಾರಿಯು ಕೈವಶವಾಗಿದೆ. ಆದ್ದರಿಂದ ಸಾವಿರ ಸೈನ್ಯವನ್ನೂ ಸರದಾರರನ್ನೂ ರಾಜಶ್ರೀ ಶಿಂಬಕರಾವ ಮಾಮಾ, ವಿಸಾಜಿಪಂತ, ಬಿನೀವಾಲೆ ಮೊದಲಾದವರಂಥ ಜಾಣ ಜನರನ್ನು ಕಳಿಸಿದರೆ ಹಿಂದುಸ್ಥಾನದೊಳಗಿನ ಸಣ್ಣದೊಡ್ಡವರೆಲ್ಲರೂ ಕೈಯಲ್ಲಿ ಬಂದು, ಹೇಗೆ ಸಾತಾರೆಯ ಸಂಸ್ಥಾನವು ತಮ್ಮ ಸ್ವಾಧೀನವಿರುವದೋ, ಹಾಗೆಯೆ ದಿಲ್ಲಿಯ ಸಂಸ್ಥಾನವು ಸ್ವಾಧೀನವಾಗುವಂಥ ಸಮಯವಿದೆ. ಈ ಸಂಸ್ಥಾನಕ್ಕೆ ಎರಡು ರೋಗಗಳಿವೆ. ಒಂದು ಅಬದಾಲಿ. ಮತ್ತೊಂದು ಇಂಗ್ರೇಜಿ. ಅಬದಾಲಿಯು ದೂರದವನು. ಅವನಿಗೆ ಆ ಪ್ರಾಂತದಲ್ಲಿ ಆತಂಕ ಬಹಳ. ಅವನು ಇತ್ತ ಕಡೆಗೆ ಬರಲಿಕ್ಕಿಲ್ಲ. ಇಂಗ್ರೇಜರು ಸಮೀಪದವರು, ಬುದ್ಧಿಶಾಲಿಗಳು; ಆದರೆ ಸದ್ಯಕ್ಕೆ ದಿಲ್ಲಿಯ ಕಾರುಭಾರದಲ್ಲಿ ಮುಖತ್ಯಾರಿಗೆ ಕೈಹಾಕಬೇಕೆಂದು ದೊಡ್ಡ ಸಾಹೇಬನ ಮನಸಿಲ್ಲ. ಅವನು ಇಲ್ಲಿಯ ವೃತ್ತವನ್ನು ವಿಲಾಯತಿಯ ಕಂಪನಿಗೆ ತಿಳಿಸಿರುವನು. ಅಲ್ಲಿಂದ ಉತ್ತರ ಬಂದ ಮೇಲೆ ಕರ್ತವ್ಯವನ್ನು ಮಾಡಬೇಕೆಂದು ಇಂಗ್ರೇಜರ ಮನಸ್ಸಿದೆ. ಇಂಗ್ರೇಜರ ಕಾಲು ದಿಲ್ಲಿಯಲ್ಲಿ ಬಿದ್ದಿತೆಂದರೆ ನಿಮ್ಮ ಕೈಯೊಳಗಿನ ಹಿಂದುಸ್ಥಾನವು ಹೋಯಿತು ಎಲ್ಲಿಯವರೆಗೆ ಅವರ ಕಾಲು ದಿಲ್ಲಿಯಲ್ಲಿ ಬಿದ್ದಿಲ್ಲವೋ, ಅಲ್ಲಿಯವರೆಗೆ ಮನಸ್ಸಿದ್ದಂತೆ ಮಾಡಬೇಕು. ಈ ಸಂಸ್ಥಾನವು ನಿಮ್ಮ ವಶದಲ್ಲಿ ಉಳಿಯಿತೆಂದರೆ, ಬಂಗಾಲ ಮೊದಲಾದ ಇಂಗ್ಲಿಷರ ರಾಜ್ಯದ ಮೇಲೆ ನಿಮ್ಮ ವರ್ಚಸ್ಸು ಪ್ರಸ್ಥಾಪಿತವಾಗುವದು. ಅವರಿಗೆ ಇತ್ತ ಪ್ರಾಂತಗಳು ಬಹಳ; ಆದರೆ ಮೂರು ವರ್ಷ ದುಷ್ಕಾಲವು ಬಿದ್ದು ಐದಾರು ಶೇರು ಅನ್ನ ವಿಕ್ರಯವಾಯಿತು. ಆದ್ದರಿಂದ ಪ್ರಾಂತಗಳ ಜನರು ಬಹಳವಾಗಿ ಮೃತ್ಯುಮುಖದಲ್ಲಿ ಬಿದ್ದರು. ದೇಶವು ಬೈಲಾಗಿದೆ. ಸುರಕ್ಷಿತವುಂಟಾದರೆ ಕೋಟಿಗಟ್ಟಲೆ ರೂಪಾಯಿಗಳ ಪ್ರಾಪ್ತಿಯಿದೆ. ಹಣದ ಉತ್ಪತ್ತಿ ಇಲ್ಲ. ಸದ್ಯಕ್ಕೆ ಸೈನ್ಯವೂ ಬೇಕು; ಹಣವೂ ಬೇಕು. ಯಾರಾದರೂ ಇಲ್ಲಿಗೆ ಬಂದರೆ ಅವರಿಗೆ ಗೌರವ ದೊರೆತು, ರಾಜ್ಯವ್ಯವಸ್ಥೆಯಾಗಿ ಬಾದಶಹನು ಶ್ರೀಮಂತರ ಮನೆಯವನಾಗುವಂಥ ಸಮಯವಿದೆ."

ಪಾತಶಹನ ಗುಣದ ಬಗ್ಗೆ ಗೋವಿಂದರಾಯನು ೧೭೭೧ರ ನೆಯ ಏಪ್ರಿಲ ೨೯ನೆಯ ತಾರೀಖಿನ ಪತ್ರದಲ್ಲಿ ಬರೆದಿರುವದೇನಂದರೆ, "ಯಾರಾದರೂ ಬಾದಶಹನ ಬಳಿಗೆ ಬಂದರೆ ಅವನ ಕೈಯಲ್ಲಿ ರಾಜ್ಯಸೂತ್ರಗಳು ಬರುವವು. ಬಾದಶಹನ ಹೃದಯವು ಗಟ್ಟಿಯುಳ್ಳದ್ದಲ್ಲ. ಯಾವನಾದರೂ ಪ್ರತಾಪಶಾಲಿಯು ಬಂದರೆ ಅವನ ಮನಸ್ಸಿನಂತೆ ಬಾದಶಹನು ವರ್ತಿಸುವನು. ರತಿಯಷ್ಟಾದರೂ ಎರಡನೆಯ ಅರ್ಥವಿಲ್ಲ."

ಇ. ಸ. ೧೭೭೧ರ ಜುಲೈ ತಿಂಗಳಲ್ಲಿ ದಿಲ್ಲಿಯ ಕಡೆಯ ಪರಿಸ್ಥಿತಿಯ ಹಾಗು ಪಾಟೀಲಬಾವಾನ ಗುಣ ವರ್ಣನೆಯ ಬಗ್ಗೆ ಗೋವಿಂದರಾಯನು ಬರೆದಿರುವನು:

"ಪಾತಶಹನ ಮಾನಸವೇನಂದರೆ, ಇಪ್ಪತ್ತೈದು ಸಾವಿರ ಸೈನ್ಯವೂ ಹರಿಪಂತ ಫಡಕೆಯಂಥ ಸರದಾರರೂ ಬಂದರೆ ರಾಜ್ಯವ್ಯವಸ್ಥೆಯು ಚನ್ನಾಗಿ ನೆರವೇರಿ ಸುಖದಿಂದ ಊಟ ಮಾಡುವೆವು. ರಾಜಶ್ರೀ ಪಾಟೀಲಬಾವಾನವರು ಹಿಂದುಸ್ತಾನವನ್ನು ದೊರಕಿಸಿದ್ದರು; ಸ್ವಲ್ಪ ದಿವಸಗಳಲ್ಲಿ ಕಳೆದುಕೊಂಡರು. ಎರಡು-ಮೂರು ತಿಂಗಳೊಳಗಾಗಿ ಹುಜೂರಿನ ಸೈನ್ಯವು ಬಂದು ಅವನನ್ನು ಕೂಡಿದರೆ ಮತ್ತೆ ಮೊದಲಿನಂತೆ ವ್ಯವಸ್ಥೆಯಾಗುವದು. ಬೇರೊಬ್ಬ ಸರದಾರನು ಬಂದ ಹೊರತು ಪಾತಶಾಹಿ ವ್ಯವಸ್ಥೆಯಾಗುವದಿಲ್ಲ. ಪಾಟೀಲ ಬಾವಾನವರು ಮನಸೋಕ್ತ ನಡೆಯುವವರು ಕಾರಸ್ಥಾನ ಬಹಳ. ಅವರ ಬಳಿಯಲ್ಲಿ ಅವರಿಗೆ ತಲೆಭಾರವಾಗುವಂಥ ಕಾರ್ಯಕರ್ತರಿಲ್ಲ. ಕೀಳ ಮನುಷ್ಯರನ್ನು ಹಿಡಿದು ಲೋಭಕ್ಕೆ ಸ್ವತಂತ್ರವಾಗಿ ಅವರು ಕೆಲಸವನ್ನು ಹೊಲಸು ಮಾಡಿದರು. ಇದರೊಳಗಿನ ರೀತಿಯನ್ನು ಸಂಗತಿಯು ರಾಜಶ್ರೀ ಪಾಟೀಲಬಾವಾರ ಕಡೆಯ ವಕೀಲನಿಗೆ ಇಲ್ಲವೆ ಅವರ ಮರ್ಜಿತಿಯ ಮನುಷ್ಯನಿಗೆ ತಿಳಿದರೆ ನಮ್ಮ ಪ್ರಾಣದ ಪಾರಿಪತ್ಯವಾಗುವದು. ಇದಕ್ಕೆ ಕಾರಣವೇನಂದರೆ, ಹಿಂದುಸ್ತಾನದಲ್ಲಿ ತನ್ನ ಹೊರತು ಯಾರಾದರೂ ಮಾತಾಡಿದರೆ ಇಲ್ಲವೆ ಪತ್ರದಲ್ಲಿ ಬರೆದರೆ ಅವರ ಪ್ರಾಣ ತೆಗೆದುಕೊಳ್ಳಬೇಕೆಂದು ಅವರ ಕುತೂಹಲವಿದೆ.

(೧೮೯೪) ಡಿಬಾಯಿನನಂಥ ಪರದೇಶೀಯ ಮನುಷ್ಯನ ಮೇಲೆ ಪಾಟೀಲ ಬಾವಾನವರು ಮತಿಗೆಟ್ಟು, ವಿಶ್ವಾಸವಿಟ್ಟು [illegible] ಸ್ವದೇಶೀಯರ ವಿರುದ್ಧವಾಗಿ ಭಾರವಾಗಿದ್ದರೂ ಇಂಗ್ಲಿಷರೊಡನೆ ಪ್ರಸಂಗವೊದಗಿದರೆ ಅದರ ಉಪಯೋಗವಾಗುವದಿಲ್ಲವೆಂಬ ಸಂಗತಿಯು ತತ್ಕಾಲೀನ ಜಾಣಾಕ್ಷ ಜನರು ಗುರುತಿಸಿದ್ದರು. ಪಾಟೀಲಬಾವಾನವರು ಮಡಿದ ಕೂಡಲೆ ಸನ್ ೧೭೯೪ ಸಪ್ಟಂಬರದಲ್ಲಿ ಡಿಬಾಯಿನನ ಸ್ವರೂಪವು ಹೊರಬೀಳಲು ಗೋವಿಂದರಾಯನು ಆ ಬಗ್ಗೆ ಬರೆದಿರುವದೇನಂದರೆ, "ರಾಜಶ್ರೀ ಪಾಟೀಲಬಾವಾನವರು ಡಿಬಾಯಿಯಲ್ಲಿ ತಳವೂರಿದಾಗ ಶಹಾಜಿಯು(?) ಎಲ್ಲ ಕಾರಸ್ಥಾನವನ್ನು ಪ್ರಕಟಿಸಿದ್ದೇನೆಂದರೆ, ಡಿಬಾಯಿನನು ಭರವಸೆಯು ಏಕರೂಪವಿರಕೂಡದು. ಯಾಕೆಂದರೆ ಅದು ಚಾಕರಿಗೆ ಕಡಿಮೆ ಮಾಡುವದಿಲ್ಲ. ಆದರೆ ಇಂಗ್ರೇಜಿಯವರೊಡನೆ ಪತ್ತುಗೇಡಾದರೆ ಒಡೆದು ಹೊರಟು ಹೋಗಬಹುದು. ತಾತ್ಪರ್ಯ ಸರದಾರರಲ್ಲಿ ಒಡಕು ಪ್ರಾರಂಭವಾಗಿದೆ" ಬಾದಶಹನಾದರೂ ದಿಲ್ಲಿಯ ಸ್ವಾಮಿತ್ವದ ಬಗ್ಗೆ ಯಾರು ಯಾರು ಹೊಂಚು ಹಾಕಿರುವರೆಂಬ ಬಗ್ಗೆ ವರ್ಣಿಸಿರುವನು.

ಶಕೆ ೧೭೦೦ರ ಸಮಯಕ್ಕೆ ದಿಲ್ಲಿಯ ರಾಜಕಾರಣದ ಮೇಲೆ ಮರಾಟರ ವರ್ಚಸ್ಸವು ವಿಶೇಷವಾಗಿತ್ತು. ಪಾತಶಹನು ಹೀನಬಲನಾಗಿದ್ದು ಅವನು ಇಂಗ್ಲಿಷರು, ನಜೀಬಖಾನ, ಮರಾಟರು ಈ ಮೂವರ ಹಿಡಿತದಲ್ಲಿ ಸಿಲುಕಿದ್ದನು. ಅದರಲ್ಲಿ ಮರಾಟರ ಕಡೆಗೆ ಅವನ ಒಲವು ಬಹಳವಾಗಿತ್ತು. ಇಂಗ್ಲಿಷರ ವಿಷಯವಾಗಿ ಅವನು ಪೂರ್ಣ ಪ್ರತಿಕೂಲನಾಗಿದ್ದನು, ಪಾತಶಹನ ಸರ್ವ ಸೂತ್ರಗಳು ನಜೀಬ

ಸನ್ ೧೭೮೯ರಲ್ಲಿ ಬೋರಘಟ್ಟದ ಸಂಗ್ರಾಮವೆಸಗಿ ಇಂಗ್ಲಿಷರು ಪರಾಭೂತರಾದರು. ಈ ಸಂಗತಿಯು ದಿಲ್ಲಿಗೆ ಹೋಯಿತು. ವಕೀಲನು ಪೇಶವೆಯವರ ಆಜ್ಞೆಯಮೇರೆಗೆ ಪತ್ರದ ಫಾರಸೀ ಭಾಷಾಂತರ ಮಾಡಿ ಪಾತಶಹನಿಗೂ ನಜೀಬಖಾನನಿಗೂ ತಿಳಿಸಿದನು. ಅದನ್ನು ಅನುಲಕ್ಷಿಸಿ ವಕೀಲನು ಪೇಶವೆಯವರಿಗೆ ಬರೆದದ್ದೇನಂದರೆ:—"ಪತ್ರವನ್ನೋದಿ ಬಹಳ ಸಂತೋಷವಾಗಿ ಉತ್ತರಕೊಡುವದೇನಂದರೆ, ಈಶ್ವರನು ಯಾವಾಗಲೂ ಶ್ರೀಮಂತರಿಗೆ ವಿಜಯಲಾಭ ಮಾಡಿಕೊಡಲಿ; ಹಾಗು ಇಂಗ್ಲಿಷರ ಕಾಲುಗಳು ಪಾತಶಾಹಿಯೊಳಗಿಂದ ಕಿತ್ತಲ್ಪಡಲಿ. ಎಂದು ಮಮತಾಪೂರ್ವಕವಾಗಿ ಆಶೀರ್ವಾದ ಮಾಡಿ ನಜೀಬಖಾನನಿಗೆ ಆಜ್ಞೆಮಾಡಿದ್ದೇನಂದರೆ, ನೀವು ಏನಾದರೂ ಉದ್ಯೋಗ ಮಾಡುವಿರೋ ಇಲ್ಲವೋ? ಇಂಗ್ಲಿಷರ ನಿಃಪಾತಗೊಳಿಸುವ ಯೋಚನೆಯನ್ನು ನವಾಬಸಾಹೇಬರು ವಿಶೇಷವಾಗಿ ಹೇಳುತ್ತಾರೆ; ಆದರೆ ಸ್ವಾಮಿಯವರ ಪ್ರತ್ಯಯಕ್ಕೆ ಬಂದು ನಮ್ಮಿಂದ ಬರೆಯಿಸಿದರು. ಅವರು ಸೇವೆಗೆ ಬರೆದರೆ ಅದು ಸತ್ಯವು. ಅದೇ ಸುದಿನವು!"

ಸನ್ ೧೭೮೦ನೆಯ ಆಗಸ್ಟ ತಿಂಗಳದ ಒಂದು ಪತ್ರದಲ್ಲಿ ದಿಲ್ಲಿಯ ವಕೀಲನು ನಾನಾಸಗೆ ಬರೆದದ್ದೇನಂದರೆ, ಪಾತಶಹನು ಪೇಶವೆಯವರ ಕಾರ್ಯಭಾಗಕ್ಕೆ ತುಷ್ಟನಾಗಿದ್ದು ನಿತ್ಯವೂ ಅವರಿಗೆ ಆಶೀರ್ವಾದ ಕೊಡುತ್ತಾನೆ. ಪಾತಶಹನ ಸ್ತುತಿವಾದದ ಶಬ್ದಗಳು ಕೆಳಗಿನಂತಿರುವವು. "ಇಂದಿಗೆ ಎಂಟು ವರ್ಷಗಳಾದವು. ಮನೆಯ ಧನಿಯು ಫಿತೂರಿಯಾದನು. ಮುಖ್ಯ ಧನಿಯು ಹೇಡಿಯೂ ಚಿಕ್ಕವನೂ ಇರುವನು. ಹೀಗಿದ್ದು ಇಂಗ್ರೇಜಿಯವರನ್ನು ಹಣಿಯುವ ಕೆಲಸವನ್ನು ದಕ್ಷಿಣದ ಸರದಾರರು ಮಾಡಿದರು. ಈಶ್ವರನು ಕೊಟ್ಟರೆ ಇಂಥ ಮುತ್ಸದ್ದಿಗಳನ್ನೂ ಸರದಾರರನ್ನೂ ದೌಲತ್ತಿಗೆ ಕೊಡಬೇಕು. ಇಂಗ್ಲಿಷರನ್ನು ಹಣಿಯುವದರಲ್ಲಿಯೇ ಎಲ್ಲ ಮಾನವಿದೆ. ಇಲ್ಲದಿದ್ದರೆ ಜಲಚರಗಳು ಪೃಥ್ವಿಯ ಧನಿಗಳಾಗಿ ಪಾಗೋಟೆಯ ಮಾನವು ಉಳಿಯುವದಿಲ್ಲ. ಪಾಗೋಟೆಯ ಮಾನವನ್ನು ಬಿಟ್ಟು ಟೊಪ್ಪಿಗೆ ಹಾಕಿಕೊಂಡರೆ ಪೂರಾ ಟೊಪ್ಪಿಗೆ ಬೀಳುವದು!" ಹೀಗಿದ್ದರೂ ಎಲ್ಲ ಇಂಗ್ಲಿಷರು ಮನಸ್ಸಿನಿಂದ ಹೆದರುತ್ತಿದ್ದರು. ನಜೀಬಖಾನನು ಉದ್ದುದ್ದ ಮಾತುಗಳನ್ನು ಹೇಳುತ್ತಿದ್ದನು. ದಿಲ್ಲಿಯ ವಕೀಲನ ಮತದಂತೆ, ಎಲ್ಲಿಯ ವರೆಗೆ ಶಿಂದೆಯು ಇಂಗ್ಲಿಷರ ಪಾರಿಪತ್ಯ ಮಾಡುವದಿಲ್ಲವೋ, ಅಲ್ಲಿಯವರೆಗೆ ನವಾಬಸಾಹೇಬರು ಇಂಗ್ಲಿಷರೊಡನೆ ದುಶ್ಮನತನ ಮಾಡಲಿಕ್ಕೆ ಹೆದರುತ್ತಾರೆ. ತಿರುಗಿ ಅದೇ ತಿಂಗಳಲ್ಲಿ ವಕೀಲನು ನಾನಾಸಗೆ ಬರೆದದ್ದೇನಂದರೆ, ನಜೀಬಖಾನನು ಕೇವಲ ಲಜ್ಜೆಯಿಂದ ಇರತೊಡಗಿದ್ದಾನೆ. ಹಾಗಿಲ್ಲದಿದ್ದರೆ ಮೊದಲೇ ಇಂಗ್ಲಿಷರನ್ನು ಕೂಡುತ್ತಿದ್ದನು.

ಮರಾಟರು ಬರೇ ಚೌಥಾಯಿಯ ಸನದಿನ ಆಧಾರದಿಂದ ಇಡೀ ಹಿಂದುಸ್ತಾನದ ತುಂಬ ಗೊಂದಲವೆಬ್ಬಿಸಿದರು. ಕರ್ನಾಟಕ, ಗುಜರಾಥ, ಮಾಳವ, ರಾಜಸ್ತಾನ, ಬುಂದೇಲಖಂಡ, ಆಗ್ರಾ, ದಿಲ್ಲಿ, ರೋಹಿಲಖಂಡ, ಬಂಗಾಲ ಮೊದಲಾದ ಎಲ್ಲ

ಪ್ರಾಂತಗಳ ಮೇಲೆ ದಾಳಿಮಾಡಲಿಕ್ಕೆ ಅವರಿಗೆ ಈ ಸನದಿನಿಂದ ಅಧಿಕಾರವು ಪ್ರಾಪ್ತವಾಯಿತು. ಈ ಅಧಿಕಾರವು ಪಾತಶಾಹೀ ಧೋರಣದ ದೃಷ್ಟಿಯಿಂದ ಸ್ವರಾಜ್ಯದ ಸನದಿನಿಂದ ದೊರೆತ ಅಧಿಕಾರಕ್ಕಿಂತ ಹೆಚ್ಚು ಮೌಲ್ಯವುಳ್ಳದ್ದಾಗಿ ತೋರುತ್ತಿತ್ತು. ಈ ಅಧಿಕಾರದ ಪ್ರಚಾರಣೆಯಾದರೂ ಸ್ವರಾಜ್ಯದ ಅಧಿಕಾರಕ್ಕಿಂತ ಮೊದಲೇ ಆಯಿತು. ರಾ ಖರೇ ಶಾಸ್ತ್ರಿಗಳು ಒಂದು ಸ್ಥಳದಲ್ಲಿ ಅಂದಿರುವದೇನಂದರೆ "ಮರಾಟರು ೧೭೪೧ರಲ್ಲಿ ತ್ರಿಚಿನಾಪಲ್ಲಿಯನ್ನು ತೆಗೆದುಕೊಂಡರು. ೧೭೫೧ರಲ್ಲಿ ತ್ರ್ಯಂಬಕದ ಕೋಟೆಯನ್ನು ತೆಗೆದುಕೊಂಡರು. ೧೭೫೮ರಲ್ಲಿ ಲಾಹೋರದಲ್ಲಿ ವರ್ಚಸ್ಸು ನೆಲೆಗೊಳಿಸಿದರು. ೧೭೫೯ರಲ್ಲಿ ಅಹಮ್ಮದನಗರವನ್ನು ತೆಗೆದುಕೊಂಡರು. ಬಾದಶಹನ ಕಡೆಯಿಂದ ಅವರಿಗೆ ಸ್ವರಾಜ್ಯದ ಸನದಿನ ಅಧಿಕಾರ ದೊರೆತಿತ್ತು. ಆ ಸ್ವರಾಜ್ಯವು ದಕ್ಷಿಣದಲ್ಲಿ ಖಾನದೇಶ ಬಾಗಲಾಣ ಮಧ್ಯಮಹಾರಾಷ್ಟ್ರ ಉತ್ತರ ಕರ್ನಾಟಕ ಇವುಗಳಲ್ಲಿ ಪಸರಿಸಿತ್ತು. ಅದನ್ನು ಆಗಿಂದಾಗ ತೆಗೆದುಕೊಳ್ಳಲಿಕ್ಕೆ ಅವರು ಪ್ರಯತ್ನಿಸಲಿಲ್ಲ; ಆದರೆ ಸಂಧಿದೊರೆತಾಗ ಅಲ್ಲಲ್ಲಿಯ ಸ್ವರಾಜ್ಯ-ಪರರಾಜ್ಯಗಳನ್ನು ಅವರು ಸ್ವಾಧೀನಪಡಿಸಿಕೊಂಡರು." ಮರಾಟರ ಸ್ವರಾಜ್ಯದ ಪ್ರಾಂತಗಳನ್ನು ಮೊದಲು ಮೊಗಲರು ತೆಗೆದುಕೊಂಡರು. ಅವರ ತರುವಾಯ ಅವು ಅವರ ನವಾಬರ ಕಡೆಗೆ ಹೋದವು. ಅವುಗಳನ್ನು ಮರಾಟರು ತೆಗೆದುಕೊಳ್ಳಬೇಕಾದರೆ ಯುದ್ಧವನ್ನೇ ಮಾಡಬೇಕಾಯಿತು. ಯುದ್ಧದಲ್ಲಿ ಯಶ ದೊರೆತ ಮೇಲೆ ಅವರು ಕೇವಲ ಸ್ವರಾಜ್ಯದಿಂದಷ್ಟೇ ಏಕೆ ಸಂತುಷ್ಟರಾಗುವರು? ಅವರಿಗೆ ಸ್ವರಾಜ್ಯವನ್ನು ತೆಗೆದುಕೊಳ್ಳುವದಿತ್ತು; ಆದರೆ ಪರರಾಜ್ಯವನ್ನು ತೆಗೆದುಕೊಳ್ಳುವದಿಲ್ಲವೆಂದು ಅವರು ಪ್ರತಿಜ್ಞೆಯನ್ನೇನೂ ಮಾಡಿದ್ದಿಲ್ಲ! ಆದರೂ ಎಷ್ಟೋ ದಿವಸಗಳ ವರೆಗೆ ತಿರುಗಿ ದೊರೆಯದೆ ಇದ್ದ ಸ್ವರಾಜ್ಯದ ಭಾಗವಾದರೂ ಇತ್ತು. ಉದಾಹರಣಾರ್ಥವಾಗಿ ತಂಜಾವರ. ಇಂಥ ಪ್ರಾಂತಗಳಲ್ಲಿಯೇ ಅಂದರೆ ಒಂದು ಅರ್ಥದಿಂದ ಸ್ವರಾಜ್ಯದಲ್ಲಿಯೇ ಚೌಥಾಯಿಯನ್ನೆತ್ತುವ ಪ್ರಸಂಗವು ಮರಾಟರಿಗೆ ಬರುತ್ತಿತ್ತು. ಅಷ್ಟರಿಂದಲೇ ಅವರು ಸಂತುಷ್ಟರಾಗಬೇಕಾಗುತ್ತಿತ್ತು.

ಚೌಥದ ಎಳೆಯ ಆಧಾರದಿಂದ ರಾಜಸತ್ತೆಯ ಸ್ವರ್ಗವನ್ನು ದೊರಕಿಸುವ ಆಕಾಂಕ್ಷೆಯು ಮರಾಟರಲ್ಲಿತ್ತೆಂಬದರ ಉದಾಹರಣೆಗಳು ಹಿಂದುಸ್ತಾನದ ಎಲ್ಲ ಭಾಗಗಳಲ್ಲಿ ಕಂಡುಬರುವವು. ಎರಡನೆಯವರ ಮನೆ ಜಗಳದ ಲಾಭಹೊಂದಿ ಅಲ್ಲಿ ತಮ್ಮ ಕೈ ಸೇರಿಸುವ ಕಾರಸ್ಥಾನದಲ್ಲಿ ಮರಾಟರು ಇಂಗ್ಲಿಷರಂತೆ ಪ್ರವೀಣರಿದ್ದರು. ಈ ಆಟವು ಕೆಲವೆಡೆಯಲ್ಲಿ ಸಾಧಿಸಿತು; ಕೆಲವೆಡೆಯಲ್ಲಿ ಸಾಧಿಸಲಿಲ್ಲ; ಇಷ್ಟೇ ಆದರೆ ರೀತಿಯು ಮಾತ್ರ ಎಲ್ಲೆಡೆಯಲ್ಲಿ ಒಂದೇ ವಿಧವಾಗಿತ್ತು. ಮೊಗಲರಿಂದ ಪ್ರತ್ಯಕ್ಷ ಅಧಿಕಾರವು ದೊರೆಯದಿದ್ದರೂ, ಚೌಥದ ಅಧಿಕಾರವನ್ನು ಅವರು ಬೇಕಾದಲ್ಲಿ ಹೇಳುತ್ತಿದ್ದರು. ಅದರ ಒಂದು ಉದಾಹರಣೆಯು ಮೈಸೂರು ಸಂಸ್ಥಾನವು. ಮೈಸೂರಲ್ಲಿ ಹಿಂದುಗಳ ಸ್ವತಂತ್ರ ಸಂಸ್ಥಾನವು ಪರಂಪರವಾಗಿ ನಡೆದಿದ್ದು ಅದನ್ನು ಮೊಗಲರು ಜಯಿಸಿದ್ದಿಲ್ಲ. ಅರ್ಥಾತ್ ಅಲ್ಲಿ ಮೊಗಲರ ವತಿಯಿಂದ ಚೌಥವನ್ನೆತ್ತುವ ಅಧಿಕಾರವು ಮರಾಟರಿಗೆ

ಹೇಗೆ ದೊರಕುವದು? ಮೈಸೂರಿನ ಓಲಗದ ಒಬ್ಬ ಮುಸಲ್ಮಾನನು ಹಿಂದು ರಾಜನನ್ನು ಪದಚ್ಯುತಗೊಳಿಸಿ ತಾನು ಪಟ್ಟವೇರಿದ್ದರಿಂದ ಅಲ್ಲಿ ಮುಸಲ್ಮಾನ ರಾಜ್ಯವಾಯಿತು. ಈ ಮುಸಲ್ಮಾನನಿಗೂ ದಿಲ್ಲಿಯ ಮೊಗಲ ಪಾತಶಹನಿಗೂ ಏನೂ ಸಂಬಂಧವಿದ್ದಿಲ್ಲ. ಹೀಗಿದ್ದರೂ ಮರಾಟರು ಆ ರಾಜ್ಯದಲ್ಲಿ ಚೌಥದ ಅಧಿಕಾರವನ್ನು ಹೇಳಲಿಕ್ಕೆ ಹಿಂಜರಿಯುಲಿಲ್ಲ. ಕರ್ನಾಟಕದಲ್ಲಿ ಚೌಥವನ್ನೆತ್ತುವ ಅಧಿಕಾರವು ಮರಾಟರಿಗಿತ್ತು. ಕರ್ನಾಟಕದಲ್ಲಿ ಕೆಲವು ಭಾಗಗಳಲ್ಲಿ ಅವರ ಸ್ವರಾಜ್ಯವೂ ಇತ್ತು; ಆದರೆ ಮೈಸೂರವರಿಂದ ಕಪ್ಪನ್ನೆತ್ತುವ ಅಧಿಕಾರವು ಮರಾಟರಿಗಿತ್ತೆಂದು ತೋರುವದಿಲ್ಲ. ೧೭೫೬ರಲ್ಲಿ ಭಾವೂ ಸಾಹೇಬ ಪೇಶವೆಯು ದೊಡ್ಡ ದಂಡು ತೆಗೆದುಕೊಂಡು ಕರ್ನಾಟಕದ ಮೇಲೆ ಹೋದಾಗ ಶ್ರೀರಂಗಪಟ್ಟಣವನ್ನು ಮುತ್ತಿ, ಅಲ್ಲಿಯ ರಾಜನಿಂದ ಅತಿರೇಕವಾದ ಕಪ್ಪವನ್ನು ಬೇಡಿದನು. ಆಗ ನಿರುಪಾಯದಿಂದ ಅಲ್ಲಿಯ ಪ್ರಧಾನಿಯೂ ಸೇನಾಪತಿಯೂ ನಂದರಾಜನೂ ಉತ್ತಮ ಫಲದ್ರೂಪವಾದ ಹದಿನಾಲ್ಕು ಮಹಾಲುಗಳನ್ನು ಮರಾಟರಿಗೆ ಕೊಟ್ಟರು. ಮುಂದೆ ಹೈದರನು ಪ್ರಬಲನಾದ ಮೇಲೆ ಅವನ ಸಲಹೆಯಿಂದ ನಂದರಾಜನು ಈ ಪರಗಣೆಗಳನ್ನು ತಿರುಗಿ ತೆಗೆದುಕೊಂಡನು. ಮುಂದೆ ನಂದರಾಜ-ಹೈದರರಲ್ಲಿ ವೈಮನಸ್ಯ ಉಂಟಾದ ಮೇಲೆ ಮರಾಟರು ತಮ್ಮ ಕುದುರೆಯನ್ನು ಮುಂದೆ ದೂಡುವ ವಿಚಾರ ಮಾಡಿದರು. ಆ ವೇಳೆಯಲ್ಲಿ ಮೈಸೂರಿನಲ್ಲಿದ್ದ ಮರಾಟರ ವಕೀಲನು ಮರಾಟರಿಗೆ ಬರೆದ ಪತ್ರವು 'ಇತಿಹಾಸ ಸಂಗ್ರಹ'ದಲ್ಲಿ ಪ್ರಸಿದ್ಧವಾಗಿದೆ. ಆ ವಕೀಲನು ಬರೆದಿರುವದೇನಂದರೆ, "ಸ್ವಾಮಿಯವರಿಂದ ಆಜ್ಞಾಪತ್ರವು ಸಾದರವಾಯಿತು. ನಂದರಾಜ ಸರ್ವಾಧಿಕಾರಿ ಹಾಗು ಹೈದರ ನಾಯಕ ಇವರಲ್ಲಿ ವಿಮನಸ್ಕತೆಯುಂಟಾಗಿದೆ. ನಂದರಾಜರಿಂದ ಕಟ್ಟಳೆ ಮಾಡಿಕೊಂಡು ಚೌಥಾಯಿ-ಸರದೇಶಮುಖಿ ಅಧಿಕಾರಗಳನ್ನು ಪ್ರಸ್ಥಾಪಿಸಬೇಕೆಂಬ ಕಟ್ಟಳೆಯ ಪತ್ರವನ್ನು ಇಲ್ಲಿ ಇರಿಸಿಕೊಂಡಿರುವೆನು. ಅದರದೊಂದು ಮಾದರಿಯನ್ನೂ ನಂದರಾಜರ ಪತ್ರವನ್ನೂ ಸೇವೆಗೆ ಕಳುಹಿಸಿರುವೆನು. ಒಂದು ಲಕ್ಷ ಹೊನ್ನಿನ ಸೀಮೆಯನ್ನು ತೆಗೆದುಕೊಂಡು ಉಂಡು ಸುಖದಿಂದಿರಬೇಕೆಂದು ಹೈದರನಾಯಕನು ನಂದರಾಜನಿಗೆ ಹೇಳುತ್ತಿರುವನು. ಸ್ವಾಮಿಯವರ ಅಭಯಪತ್ರ ಬಂದುದರಿಂದ ನಂದರಾಜರು ಅವನಿಗೆ ಅಸಮ್ಮತಿಯನ್ನು ವ್ಯಕ್ತಪಡಿಸಿರುವರು. ಧನಿಗಳು ಅವರ ಅಭಿಮಾನ ಹಿಡಿದು ನಾಯಕನ ಪಾರಿಪತ್ಯಗೊಳಿಸಲಿಕ್ಕೆ ಸಮರ್ಥರಿರುವರು ಈಗಿನ ಸಮಯ ಮುಂದೆ ಬರಲಾರದು ಶ್ರಮಬಟ್ಟು ನಂದರಾಜರ ಸ್ಥಾಪನೆ ಮಾಡಿದರೆ, ಚೌಥ-ಸರದೇಶಮುಖಿಗಳ ಅಧಿಕಾರವು ನೆಲೆಗೊಳ್ಳುವದು. ಮುಂದೆ ಸಂಸ್ಥಾನವು ತಮ್ಮದೇ ಆಗುವದು. ಈ ಸಮಯದಲ್ಲಿ ಒಡೆಯರು ಐದು ಸಾವಿರ ಸೈನ್ಯವನ್ನು ಶೀಘ್ರವಾಗಿ ಕಳಿಸಲಿಕ್ಕೆ ಬೇಕು" ಚೌಥಾಯಿಯ ಅರಳೀ ಬೇರನ್ನು ಪರರಾಜ್ಯದಲ್ಲೊಮ್ಮೆ ಊರಿದರೆ ಅದು ಬಲಗೊಂಡು ಆ ರಾಜ್ಯವನ್ನು ತಿರುವಿಹಾಕಲಿಕ್ಕೆ ಸಮರ್ಥವಾಗುವದೆಂಬ ಸಂಗತಿಯು ಆ ಪ್ರತಿನಿಧಿಯ ಮನಸ್ಸಿನಲ್ಲಿ ಚನ್ನಾಗಿ ಬಿಂಬಿಸಿತ್ತೆಂಬಂತೆ ತೋರುವದು.

"ಇಂದು ಚೌಥ-ಸರದೇಶಮುಖಿಗಳ ಅಧಿಕಾರ ನೆಲೆಗೊಂಡರೆ, ಮುಂದೆ ಸಂಸ್ಥಾನವು ತಮ್ಮದೇ ಆಗುವದು" ಇದೇ ಮರಾಟರ ಪಾತಶಾಹೀ ಧೋರಣದ ಮಹಾ ಮಂತ್ರವು!

— —

# ಉಪಸಂಹಾರ.

ಮೊಗಲ ಪಾತಶಾಹಿಯನ್ನು ನುಂಗಿ ಹಿಂದುಸ್ಥಾನದಲ್ಲೆಲ್ಲ ತಮ್ಮ ವರ್ಚಸ್ವವನ್ನು ನೆಲೆಗೊಳಿಸಬೇಕೆಂಬ ಮರಾಟರ ಮಹತ್ವಾಕಾಂಕ್ಷೆಯು ಕೊನೆಗೆ ನೆರವೇರಲಿಲ್ಲವೆಂಬದಿಷ್ಟೇ ಅಲ್ಲ, ಕಡೆಗೆ ತಮ್ಮ ರಾಜ್ಯವನ್ನೇ ಕಳೆದುಕೊಳ್ಳುವ ಪ್ರಸಂಗವು ಅವರಿಗೆ ಬಂದದ್ದು ಆಶ್ಚರ್ಯದ ಸಂಗತಿಯು. ಮರಾಟಶಾಹಿಯ ನಾಶಕ್ಕೆ ಯಾವ ಕಾರಣಗಳು ಘಟಿಸಿದವೆಂಬದರ ವಿವೇಚನೆಯನ್ನು ಹಿಂದೆ ಮಾಡಿರುವೆವು. ಕೇವಲ ಮರಾಟರಲ್ಲಿಯ ದೋಷಗಳ ಮೂಲಕವಾಗಿಯೇ ಇಂಗ್ಲಿಷರು ಯಶಸ್ವಿಗಳಾಗಿರದೆ, ಇಂಗ್ಲಿಷರಲ್ಲಿಯ ಅನೇಕ ಗುಣಗಳೂ ಅವರ ಕಾರ್ಯಕ್ಕೆ ಉಪಯೋಗವಾದವೆಂಬದನ್ನು ಮರೆಯಲಾಗದು. ಇಂಗ್ಲಿಷರು ವ್ಯಾಪಾರದ ಉದ್ದೇಶದಿಂದಲೇ ಇಲ್ಲಿಗೆ ಬಂದರು. ಮರಾಟರು ದಿಲ್ಲಿಯ ಪಾತಶಹೀ ಸೇವೆಯನ್ನು ಮಾಡುತ್ತ ಮಾಡುತ್ತ ಸಾಮ್ರಾಜ್ಯಾಧಿಕಾರವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡಂತೆ, ಇಂಗ್ಲಿಷರಾದರೂ ವ್ಯಾಪಾರ ಮಾಡುತ್ತ ಮಾಡುತ್ತ ರಾಜ್ಯ ಸಂಪಾದನೆಮಾಡಿದರು. ರಾಜ್ಯವು ಅವರ ಮೂಲ ಸಾಧ್ಯವಿರಲಿಕ್ಕಿಲ್ಲ; ಆದರೆ ವ್ಯಾಪಾರವೃದ್ಧಿಗೆ ಅದೊಂದು ಉತ್ಕೃಷ್ಟವಾದ ಸಾಧನವೆಂಬದು ಅವರಿಗೆ ಬೇಗನೆ ತಿಳಿಯಿತು. ಅಂದಿನಿಂದ ಅವರು ರಾಜ್ಯಸಂಪಾದನೆಯ ಉದ್ಯೋಗವನ್ನು ಕೈಕೊಂಡರು. ಈ ಕಾರ್ಯದಲ್ಲಿ ಅವರಿಗೆ ಪರಿಸ್ಥಿತಿಯು ಬಹಳೇ ಪ್ರತಿಕೂಲವಿತ್ತು. ಅವರ ಮೂಲಸ್ಥಳವು ಇಂಗ್ಲಂಡವು. ಹಿಂದುಸ್ಥಾನದಿಂದ ಸಾವಿರಾರು ಮೈಲು ದೂರದಿಂದ ಸಮುದ್ರ ಮಾರ್ಗವಾಗಿ ಬರಬೇಕಾಗುತ್ತಿತ್ತು. ಈಗಿನಂತೆ ಉಗಿಯಂತ್ರಗಳೇ ಮೊದಲಾದ ತೀವ್ರಗತಿಯ ಸಾಧನಗಳಿದ್ದಿಲ್ಲ; ದಾರಿಯಲ್ಲಿ ಪ್ರತಿಸ್ಪರ್ಧಿಗಳಾದ ಯುರೋಪೀಯ ಸಮುದ್ರತೀರನಿವಾಸಿಗಳಿಂದ ಉಪದ್ರವದ ಭೀತಿ; ಹಿಂದುಸ್ಥಾನದಲ್ಲಿ ಮರಾಟರು-ಮುಸಲ್ಮಾನರು ಮೊದಲಾದ ಪ್ರಬಲ ಯೋಧರಾದ ಶತ್ರುಗಳು. ಇಲ್ಲಿಯವರಿಗೆ ಫ್ರೆಂಚರಂಥ ಯುರೋಪೀಯ ಜನರ ಸಹಾಯ. ಇಂಥ ಸ್ಥಿತಿಯಲ್ಲಿ ಈಸ್ಟ ಇಂಡಿಯಾ ಕಂಪನಿಯ ಆರಳೀ ಬೇರು ಮೊಟ್ಟಮೊದಲು ಒಮ್ಮೆ ಬಂಗಾಲದಲ್ಲಿ ಹುಟ್ಟಿ, ಅದು ಕಾಲಾಂತರದಿಂದ ಹಿಂದುಸ್ಥಾನದ ತುಂಬಾ ವ್ಯಾಪಿಸಿದ್ದ ಏತದ್ದೇಶೀಯ ರಾಜಮಹಾರಾಜರ ಪ್ರಚಂಡ ಕಟ್ಟಡಗಳನ್ನು ಧಡಧಡನೆ ಕೆಡವಿ ನೆಲಸಮ ಮಾಡಿತು!

ಈಸ್ಟ ಇಂಡಿಯಾ ಕಂಪನಿಯು ಹಿಂದುಸ್ಥಾನದೊಡನೆ ಮೊದಲು ವ್ಯಾಪಾರ ಮಾಡತೊಡಗಿತು; ಆದರೆ ಮುಂದೆ ನೂರೇ ವರ್ಷಗಳೊಳಗೆ ಅದಕ್ಕೆ ರಾಜ್ಯಸ್ಥಾಪನೆಯ ಬಯಕೆಗಳಾಗತೊಡಗಿದವು. ಹಿಂದುಸ್ಥಾನದ ತತ್ಕಾಲೀನ ಪರಿಸ್ಥಿತಿಯಲ್ಲಿ ಇಂ

ಗ್ಲಿಷರಿಗೆ ಸ್ವತಂತ್ರ ಸೈನ್ಯಸಾಮರ್ಥ್ಯದ ಹೊರತು ಉಗ್ರಾಣಗಳ ಸಂರಕ್ಷಣೆಯನ್ನೂ ವ್ಯಾಪಾರದ ಬೆಳವಣಿಗೆಯನ್ನೂ ಮಾಡುವದು ಅಸಾಧ್ಯವಿತ್ತು. ಸ್ವಸಂರಕ್ಷಣೆಗಾಗಿ ದಂಡು ಇಡದಿದ್ದರೆ ಮೊಗಲ ಅಧಿಕಾರಿಗಳಿಂದ ತಮ್ಮ ರಕ್ಷಣೆಯಾಗುವದಿಲ್ಲವೆಂಬದು ಕಂಪನಿಯ ಅಧಿಕಾರಿಗಳ ಲಕ್ಷ್ಯದಲ್ಲಿ ಚನ್ನಾಗಿ ಉಳಿದಿತ್ತು. ದಂಡು ಇಡಬೇಕಾದರೆ ಅದಕ್ಕೆ ಸ್ಥಿರವಾದ ಉತ್ಪನ್ನವು ಬೇಕು; ಅಲ್ಲದೆ ಹಿಂದುಸ್ತಾನದಲ್ಲಿ ಬೇಕಾದವರು ಒಂದು ಸ್ವತಂತ್ರ ರಾಜ್ಯವನ್ನು ಸ್ಥಾಪಿಸುತ್ತಿರಲು, ನಾವಾದರೂ ಏಕೆ ಸ್ಥಾಪಿಸಕೂಡದೆಂಬ ವಿಚಾರಗಳು ಅವರ ಮನಸ್ಸಿನಲ್ಲಿ ಮೆಲ್ಲ ಮೆಲ್ಲನೆ ಬರತೊಡಗಿದವು.

೧೬೮೦ನೆಯ ವರ್ಷದ ಒಂದು ಕಾಗದದಲ್ಲಿ ಕಂಪನಿಯ ಅಧಿಕಾರಿಗಳು ಬರೆದಿಟ್ಟಿರುವದೇನಂದರೆ:—"ವ್ಯಾಪಾರದ ಲಾಭದಷ್ಟೇ ಪ್ರಾಪ್ತಿಯನ್ನು ಇತರ ರೀತಿಯಿಂದ ದೊರಕಿಸುವದರ ಕಡೆಗೆ ನಮ್ಮ ಲಕ್ಷ್ಯವಿರಬೇಕು. ರಾಜ್ಯಾಧಿಕಾರವನ್ನು ಸ್ಥಾಪಿಸಿದ ಹೊರತು ಈ ಉತ್ಪನ್ನವು ಹೇಗೆ ದೊರಕಬೇಕು? ಮುಂದೆ ವ್ಯಾಪಾರವು ನಿಂತರೆ? ವ್ಯಾಪಾರವು ನಿಂತರೂ ಹಿಂದುಸ್ತಾನದಿಂದ ನಮ್ಮ ಕಾಲು ಕಿತ್ತಬಾರದು ಹೀಗಾಗ ಬೇಕಾದರೆ ಸ್ಥಿರವಾದ ತಳಹದಿಯ ಮೇಲೆ ಚಿರಕಾಲವಾಗಿ ಬಾಳುವ ರಾಜ್ಯವನ್ನು ಹಿಂದುಸ್ತಾನದಲ್ಲಿ ಸ್ಥಾಪಿಸುವದು ಅತ್ಯಾವಶ್ಯಕವು." ರಾಜ್ಯ ಸ್ಥಾಪಿಸಬೇಕಾದರೆ ಯುದ್ಧ ಮಾಡಬೇಕಾಗುವದು; ಯುದ್ಧ ಮಾಡಬೇಕಾದರೆ ಸೈನ್ಯವು ಬೇಕು. ವ್ಯಾಪಾರಕ್ಕಾಗಿ ಸೈನ್ಯವಿರದಿದ್ದರೂ ಸಾಗೀತು; ಆದರೆ ರಾಜ್ಯ ಸ್ಥಾಪಿಸಬೇಕಾದರೆ ಹಾಗು ಅದನ್ನು ರಕ್ಷಿಸಿಕೊಳ್ಳಬೇಕಾದರೆ ಯುದ್ಧದ ಸಿದ್ಧತೆಯು ಬೇಕೇಬೇಕು. ಇಂಗ್ಲಿಷರು ಈ ಸಿದ್ಧತೆಯ ಧೋರಣವನ್ನು ಅರವತ್ತು-ಎಪ್ಪತ್ತು ವರ್ಷಗಳಿಂದ ಮನಸ್ಸಿನಲ್ಲಿ ಇಟ್ಟುಕೊಂಡಿದ್ದರು. ಫ್ರೆಂಚ-ಇಂಗ್ಲಿಷರ ಅಸ್ತಿವೈರವೇ ಇಂಗ್ಲಿಷರ ಸೇನಾಸಾಮರ್ಥ್ಯವನ್ನು ಬೆಳೆಯಿಸಲಿಕ್ಕೆ ಉತ್ತೇಜಕವಾಯಿತು ಹದಿನೆಂಟನೆಯ ಶತಮಾನದ ಮೊದಲನೆಯ ಎಪ್ಪತ್ತೈದು ವರ್ಷ ಇಂಗ್ಲಿಷರು ಫ್ರೆಂಚರೊಡನೆ ಕಾದುವ ಪರಿಶ್ರಮ ಮಾಡಿದ ರಿಂದ, ಆ ಪರಿಶ್ರಮದ ಪ್ರಯೋಜನವು ಏತದ್ದೇಶೀಯ ರಾಜ-ಮಹಾರಾಜರೊಡನೆ ದ್ವಂದ್ವಕ್ಕಾಯಿತು. ತಮ್ಮ ಪೂರ್ಣ ಸಿದ್ಧತೆಯಾದ ಹೊರತು ಏತದ್ದೇಶೀಯರೊಡನೆ ಯುದ್ಧವು ಪ್ರಾರಂಭವಾಗಬಾರದೆಂಬ ಬಗ್ಗೆ ಇಂಗ್ಲಿಷರು ಒಳ್ಳೆಯ ಜಾಗ್ರತರಾಗಿರುತ್ತಿದ್ದರು. ಸರ್ ಆಲ್‍ಫ್ರೆಡ್ ಲಾಯಲನು ಅನ್ನುವದೇನಂದರೆ:—"ನಮ್ಮ ಇಂಗ್ಲಿಷರ ದೈವವು ಒಳಿತಾದದ್ದರಿಂದ ನಮ್ಮ ಸಿದ್ಧತೆಯಾಗುವ ಪೂರ್ವದಲ್ಲಿ ಮರಾಟರ ಹಾಗು ನಮ್ಮ ನಡುವೆ ಯುದ್ಧವು ಪ್ರಾರಂಭವಾಗಲಿಲ್ಲ" ಒಮ್ಮೆ ಯುದ್ಧವು ಪ್ರಾರಂಭವಾದ ಮೇಲೆ ಬಹಳ ಮಟ್ಟಿಗೆ ಹಿಂದಕ್ಕೆ ಸರಿಯುವ ಪ್ರಸಂಗವು ಇಂಗ್ಲಿಷರಿಗೆ ಬರಲಿಲ್ಲ. ಮರಾಟರೊಡನೆ ಜರುಗಿದ ಮೊದಲನೆಯ ಏಳೆಂಟು ವರ್ಷಗಳ ಯುದ್ಧದಲ್ಲಿ ಆದ ಒಪ್ಪಂದಗಳನ್ನು ಸೂಕ್ಷ್ಮದೃಷ್ಟಿಯಿಂದ ನೋಡಿದರೆ, ಇಂಗ್ಲಿಷರಿಗೇ ಹೆಚ್ಚಿನ ಲಾಭವಾಯಿತು. ಮರಾಟರ ಒಳ್ಳೆಯ ಏರಿಕೆಯ ದಿನಗಳಲ್ಲಿಯೇ ಇಂಗ್ಲಿಷರು ನಿರಾತಂಕವಾಗಿ ಧಾಳೀ ಮಾಡಿ ತೆಗೆದುಕೊಂಡ ಸಾಷ್ಟಿಯನ್ನು ಮರಾಟರಿಂದ ತಿರುಗಿ ತೆಗೆದು

ಕೊಳ್ಳಲು ಸಾಧ್ಯವಾಗಲಿಲ್ಲ! ಹಿಂದುಸ್ಥಾನದಲ್ಲಿ ಇಂಗ್ಲಿಷರ ಬಹಳವಾದ ನಾಶವೂ ತಾತ್ಪೂರ್ತಿಕ ಪರಾಭವನವೂ ಆಗಿದ್ದಂಥ ನಾಲ್ಕೆಂಟು ಸಂಗ್ರಾಮಗಳ ಹೆಸರು ಮಾತ್ರ ಹೇಳಬಹುದು. ಇಡೀ ಯುದ್ಧಕ್ಕೆ ಯುದ್ಧವೇ ವೈರಿ ಮೇಲೆ ಬಂದು ಶತ್ರುಗಳೊಡನೆ ಹೇಯವಾದ ಒಡಂಬಡಿಕೆ ಮಾಡಿಕೊಂಡಂಥ ಒಂದೆರಡು ಸಂಗ್ರಾಮಗಳ ಹೆಸರು ಮಾತ್ರ ಹೇಳಲಿಕ್ಕೆ ಬರುವಂತಿದೆ. ಇಂಗ್ಲಿಷರು ಏತದ್ದೇಶೀಯ ರಾಜಮಹಾರಾಜ ರೊಡನೆ ಸಡ್ಡುಹೊಡೆದು ಒಮ್ಮೆ ಯುದ್ಧಕ್ಕೆ ನಿಂತ ಮೇಲೆ ಕಾಳಗದ ಹಿಂದೆ ಕಾಳಗ ಗಳು ಯಶಸ್ವಿಗಳಾಗುತ್ತ ಹೇಗೆ ದ್ರುತಗತಿಯಿಂದ ರಾಜ್ಯಲಾಭವಾಯಿತೆಂಬ ಸಂಗತಿ ಯು ಇತಿಹಾಸ ವಾಚಕರಿಗೆ ಗೊತ್ತೇ ಇದೆ. ಕೇವಲ ನೂರು ವರ್ಷಗಳಲ್ಲಿ ಹಿಂದು ಸ್ಥಾನದ ನಕಾಶಕ್ಕೆ ಕೆಂಪು ಬಣ್ಣವನ್ನು ಬಳಿಯುವ ಕಾರ್ಯವು ಕ್ರಮಕ್ರಮವಾಗಿ ಪೂರ್ಣವಾಯಿತು.

ಮರಾಟರು ಹೇಳಿ ಕೇಳಿ ಇಂಗ್ಲಿಷರಿಗೆ ಎಲ್ಲರಿಗಿಂತ ಬಲಿಷ್ಠರಾದ ಪ್ರತಿಸ್ಪರ್ಧಿ ಗಳು. ಇವರಿಗಾದರೂ ಇಂಗ್ಲಿಷರು ಹದಿನೆಂಟನೆಯ ಶತಕದ ಕೊನೆಯ ಭಾಗದಲ್ಲಿ ಭಾರವಾದರು. ಅಂದಮೇಲೆ ಇತರರ ಪಾಡೇನು? ಇಂಗ್ಲಿಷ ಸತ್ತೆಯ ಜ್ಯೋತಿಯು ಪ್ರಜ್ವಲಿತವಾದ ಮೇಲೆ ಅದರಲ್ಲಿ ಹಿಂದುರಾಜರೂ ರಾಜಮಂಡದದಿರವೂ ಕಾಜಿನಂತೆ ಕರ ಗುವವೆಂಬದರ ಅನುಭವವು ಬರತೊಡಗಿತು. ಬಂಗಾಲ, ಔಂಧ, ಕರ್ನಾಟಕ ಮೊದ ಲಾದ ಸ್ಥಳಗಳ ನವಾಬರೂ ಜಾಟ, ರಜಪುತ ಮೊದಲಾದ ಉತ್ತರ ಹಿಂದುಸ್ಥಾನದೊಳ ಗಿನ ಸಂಸ್ಥಾನಿಕರೂ ಅತ್ಯಲ್ಪ ಶ್ರಮದಿಂದ ಅವರ ಹಸ್ತಗತವಾದರು. ಕೆಲವರ ಮೇಲೆ ಶಸ್ತ್ರವೆತ್ತುವ ಪ್ರಸಂಗವು ಸಹ ಬರದೆ, ತಾವಾಗಿ ಸ್ನೇಹಯಾಚನೆಮಾಡಿ ಇಂಗ್ಲಿಷರೊ ಡನೆ ಒಪ್ಪಂದಮಾಡಿಕೊಂಡರು. ಅವರಿಗೆ ಮೂವರು ಮಾತ್ರ ತೊಂದರೆ ಕೊಟ್ಟರು. ಒಬ್ಬರು ಮರಾಟರು; ಮತ್ತೊಬ್ಬರು ಹೈದರ-ಟೀಪೂ. ಮಗದೊಬ್ಬರೆಂದರೆ ಶೀಖರು. ಕೆಲ ಕೆಲವು ವಿಷಯಗಳಲ್ಲಿ ಮರಾಟರಿಗಿಂತ ಹೈದರನೂ ಶೀಖರೂ ಇಂಗ್ಲಿಷರಿಗೆ ಬಹ ಳ ತೊಂದರೆ ಕೊಟ್ಟರು. ಉಳಿದವರನ್ನು ಅವರು ಲೀಲೆಯಿಂದ ವಶಮಾಡಿಕೊಂ ಡರು. ಲಾರ್ಡ ಡಲಹೌಸಿಯ ಆಳಿಕೆಯಲ್ಲಿ ದತ್ತಕದ ನಿರ್ಬಂಧನೆಯ ಮೂಲಕ ಅನೇಕ ರಾಜ್ಯಗಳು ಅಂಗ್ಲಾಧೀನವಾದವು. ಅವುಗಳೇನೂ ಗೆದ್ದು ತೆಗೆದುಕೊಳ್ಳಲ್ಪಟ್ಟಂಥ ವುಗಳಲ್ಲ. ಈ ಮಾತಿಗೆ ಮೊದಲೇ ರಾಜ್ಯಸತ್ತೆಯನ್ನು ಸ್ಥಾಪಿಸಿದ ಕಾರಣವಿತ್ತೆಂಬದು ಸಕೃದ್ದರ್ಶನದಲ್ಲಿ ಕಂಡುಬರುತ್ತದೆ. ಇದರ ಅರ್ಥವೇನಂದರೆ, ಲಾರ್ಡ ಡಲಹೌಸಿಯ ವೇಳೆಗಿಂತ ಮೊದಲೇ ಇಡೀ ಹಿಂದುಸ್ಥಾನವನ್ನು ಇಂಗ್ಲಿಷರು 'ನಿರ್ವೀರ್ಯ ಮುರ್ವೀ ತಲಂ'ಮಾಡಿಬಿಟ್ಟಿದ್ದರು. ೧೮೫೭ನೆಯ ಇಸವಿಯಲ್ಲಿ ಬಂಡಾಯವಾದದ್ದರಿಂದ ಈಗ ಇದ್ದಷ್ಟು ಸಂಸ್ಥಾನಗಳಾದರೂ ಉಳಿದುಕೊಂಡವು! ಇಲ್ಲದಿದ್ದರೆ ಸಂಸ್ಥಾನದಲ್ಲಿ ಸುಧಾರಣೆಯನ್ನು ಮಾಡುವ ಯಾವ ಪ್ರಶ್ನೆಯು ಇಂದು ಪ್ರಚಲಿತವಿರುವದೋ, ಅದು ಇರುತ್ತಿದ್ದಿಲ್ಲ.

ಇಂಗ್ಲಿಷರಿಗೆ ಅನಿರುದವಾದ ಯಶವು ದೊರೆಯುತ್ತ ಹೋದುದ್ದಕ್ಕೆ ಅವರ

ಷುದ್ದೈವವೊಂದು ಕಾರಣವಂತೂ, ಇದ್ದೇ ಇರುವದು; ಆದರೆ ದೈವದಷ್ಟೇ ಅವರ ಗುಣಗಳೂ ಕಾರಣೀಭೂತವಾದವೆಂದೆನ್ನಲಿಕ್ಕೆ ಅಡ್ಡಿಯಿಲ್ಲ. ಇತಿಹಾಸದ ಚರ್ಚೆಮಾಡುವದಾದರೆ, ಐತಿಹಾಸಿಕ ಬುದ್ಧಿಯಿಂದ ಮಾಡಲಿಕ್ಕೆಬೇಕು. ಅಷ್ಟರಮಟ್ಟಿಗೆ ನಾವು ಅಭಿಮಾನವನ್ನು ಹಿಡಿಯಕೂಡದು. ಕೇವಲ ಐತಿಹಾಸಿಕ ದೃಷ್ಟಿಯಿಂದ ನೋಡಿದರೂ ಮರಾಟರ ವಿಷಯವಾಗಿ ಅಭಿಮಾನವನ್ನು ತಳೆಯುವಂಥ ಎಷ್ಟೋ ಸಂಗತಿಗಳಿರುವವು. ಅವುಗಳ ವಿಷಯವಾಗಿ ನಾವು ಮುಂದೆ ಬರೆಯುವವರಿದ್ದೇವೆ. ಇಂಗ್ಲಿಷರ ವಿಷಯವಾಗಿ ಮಾತಾಡುವ ಪ್ರಸಂಗವಿದ್ದಾಗ ಅವರ ಚರಿತ್ರೆಯ ಪರೀಕ್ಷೆಯನ್ನು ನಿಷ್ಪಕ್ಷಪಾತಬುದ್ಧಿಯಿಂದಲೇ ಮಾಡಲಿಕ್ಕೆ ಬೇಕು. ಅಂದರೇನೇ ನಮ್ಮಲ್ಲಿ ಕೆಲಮಟ್ಟಿಗಾದರೂ ಐತಿಹಾಸಿಕ ದೃಷ್ಟಿಯಿರುವದೆಂದು ಅನ್ನಲಿಕ್ಕೆ ಬಂದೀತು

ಇಂಗ್ಲಿಷರ ಸುದ್ದೈವವೆಂದು ನಾವು ಅಂದಿದ್ದೇವೆ ಆ ಬಗ್ಗೆ ಮೂರು ಉದಾಹರಣೆಗಳನ್ನು ಕೊಡಬಹುದು. ಮೊದಲನೆಯ ಉದಾಹರಣೆಯೆಂದರೆ, ಮರಾಟರು ಮತ್ತು ಇಂಗ್ಲಿಷರಲ್ಲಿ ಯುದ್ಧವು ನಡೆದ ಕಾಲಕ್ಕಿಂತ ಮೊದಲು ಅದು ನಡೆಯಬೇಕಾದದ್ದು ತಪ್ಪಿತು. ಇಂಗ್ಲಿಷರ ಸಂಬಂಧವಾಗಿ ಮಹದಾಜಿ ಶಿಂದೆ ಹಾಗು ನಾನಾಫಡಣವೀಸ ಇವರಿಗೆ ಬಂದ ಸಂಶಯವು ಶಿವಾಜಿಗೆ ಹಾಗು ಬಾಜೀರಾಯ, ಚಿಮಣಾಜಿ ಅಪ್ಪಾ ಇವರಿಗೆ ಬಂದಿದ್ದರೆ ಅವರು ಇಂಗ್ಲಿಷರ ಮುಂಬಯಿಯೊಳಗಿನ ಉಗ್ರಾಣ ಮೊದಲಾದವುಗಳನ್ನು ಸೂರೆಮಾಡಿ ಬಿಡುತ್ತಿದ್ದರು. ಇಂಗ್ಲಿಷರ ಮುಖ್ಯ ಕೇಂದ್ರವು ಬಂಗಾಲದಲ್ಲಿದ್ದು, ಅದು ಮರಾಟರ ಕೈಯ ಸಿಲುಕುವ ಪ್ರದೇಶದ ಆಚೆಗಿತ್ತು. ಇಂಗ್ಲಿಷರ ರಾಜ್ಯಲೋಭವು ಏತದ್ದೇಶೀಯ ರಾಜರಿಗೆ ಸ್ಪಷ್ಟವಾಗಿ ಕಾಣುವ ಪೂರ್ವದಲ್ಲೇ ಇಂಗ್ಲಿಷ ಫ್ರೇಂಚರ ಯುದ್ಧವು ಪ್ರಾರಂಭನಾಗಿ ಮುಗಿದು ಹೋಗಿತ್ತು. ಮೂರನೆಯ ಕಾರಣವೆಂದರೆ, ಹತ್ತೊಂಬತ್ತನೆಯ ಶತಕದಲ್ಲಿ ಶೀಖ ಜನರಂಥ ಯೋಧರ ರಾಷ್ಟ್ರವು ಉದಯವಾಗಿ ವಾಯುವ್ಯದ ಕಡೆಯ ಸೀಮೆಯ ಬಾಗಿಲನ್ನು ಮುಚ್ಚಿಬಿಟ್ಟಿತ್ತು. ಮೇಲಿನ ಮೂರರಲ್ಲಿ ಯಾವುದೊಂದು ಸಂಗತಿಯಾದರೂ ವಿಪರೀತವಾಗಿದ್ದರೆ, ಹಿಂದುಸ್ತಾನದೊಳಗಿನ ಇಂಗ್ಲಿಷರ ರಾಜ್ಯಕ್ಕೆ ಪೆಟ್ಟು ಬೀಳುತ್ತಿತ್ತು: ಇದರ ಕಾಲವೇ ಪಕ್ಷಪಾತಿಯಾಗಿ ಇಂಗ್ಲಿಷರಿಗೆ ದೊಡ್ಡ ಸಹಾಯ ಮಾಡಿತು! ಇವರ ಸುದ್ದೈವದ ಜೊತೆಗೆ ಗುಣವಂತರಾದರೆ ಅದರ ಉಪಯೋಗವಾಗುತ್ತಿರುವದ. ದೈವವು ಹೇಗೆ ಮನುಷ್ಯನ ಕೈಹಿಡಿದು ಮಾಡುವದಾದರೂ ಏನು? ದೈವದ ಲಾಭವನ್ನು ಮಾಡಿಕೊಳ್ಳುವ ಯಾವ ಗುಣಗಳು ಇಂಗ್ಲಿಷರಲ್ಲಿ ಇದ್ದವೆಂದರೆ, (೧) ಶಿಸ್ತು, ಮತ್ತು ಸುವ್ಯವಸ್ಥೆಯಬಗ್ಗೆ ಆಸ್ಥೆ. (೨)ಗಂಭೀರತೆ ಹಾಗು ದೂರದೃಷ್ಟಿ, (೩) ಜಿಗಟುತನ ಹಾಗು ನಿಯಮಿತತನ(೪) ಸ್ವರಾಷ್ಟ್ರಪ್ರೇಮ ಹಾಗು ರಾಷ್ಟ್ರಕೀರ್ತಿಯಬಗ್ಗೆ ಅಭಿಮಾನ. (೫)ಲೋಕೋತ್ತರ ಕರ್ತವ್ಯನಿಷ್ಠೆ. ಮೇಲಿನ ಗುಣಗಳು ಇಂಗ್ಲಿಷರಲ್ಲಿದ್ದುದರಿಂದಲೇ ಎಂಥ ಪ್ರತಿಕೂಲ ಸ್ಥಿತಿಯಲ್ಲಾದರೂ ಅವರಿಗೆ ಇಂಥ ರಾಜ್ಯದೊರಕಿಸಲು ಸಾಧ್ಯವಾಯಿತು. ಅವರಲ್ಲಿ ಲೋಭವೂ ಅನ್ಯಾಯವನ್ನು ದುರ್ಲಕ್ಷಿಸುವ ಸ್ವಭಾವವೂ ತಮ್ಮದೇ ಒಳಿತೆಂದು ತಿಳಿದು

ಕೊಳ್ಳುವ ಮನೋಭಾವವೂ ಕಪಟಸ್ವಭಾವವೂ ಇದ್ದಿಲ್ಲವೆಂದು ಅನ್ನಲಿಕ್ಕೆ ಬರುವದಿಲ್ಲ. ಉದಾಹರಣಾರ್ಥವಾಗಿ. ಎರಡನೆಯವರ ಪ್ರಾಂತಗಳನ್ನು ಬಲುಮೆಯಿಂದ ತೆಗೆದುಕೊಂಡ ದೋಷವು ಮರಾಟರ ಮೇಲೆ ಹೊರಿಸಲ್ಪಡುತ್ತದೆ; ಆದರೆ ಈ ದೋಷದಿಂದ ಮರಾಟರು ಅಲಿಪ್ತರಿದ್ದರೆಂದು ಅನ್ನಲಿಕ್ಕೆ ಬರುವದಿಲ್ಲ. ರೋಹಿಲಖಂಡದ ರೋಹಿಲರ ಮೇಲೆ ಹಾಗು ಅಫಗಾಣರಮೇಲೆ ೧೭೭೪ರಲ್ಲಿ ಇಂಗ್ಲಿಷರು ಮಾಡಿದ ದಾಳಿಯ ಸಮರ್ಥನೆಯನ್ನು ಇಂಗ್ಲಿಷಗ್ರಂಥಕಾರರು ಸಹ ಮಾಡಲು ಶಕ್ತರಾಗುವದಿಲ್ಲ ಸರ ಆಲ್‌ಫ್ರೇಡ ಲಾಯಲನು ಅನ್ನುತ್ತಾನೆ:—

'It was an unprovoked aggression upon the Rohillas who sought no quarrel with us and with whom we had been on not unfriendly terms Nor is Warren Hasting's policy on this matter easily justifiable upon even the elastic principle that enjoins the governor of a distant dependency to prefer above all considerations the security of the territory entrusted to him"

ಇಂಗ್ಲಿಷರು ರಾಘೋಬನ ಪಕ್ಷವನ್ನು ಹಿಡಿದು ಮರಾಟರೊಡನೆ ಯುದ್ಧವನ್ನು ಆರಂಭಿಸಿದ್ದಾದರೂ ಅನ್ಯಾಯವೇ ಇತ್ತೆಂದು ಸ್ವತಃ ವಾರನ್‌ಹೇಸ್ಟಿಂಗ್ಸನಿಗೆ ತೋರಿತು. ಮೊದಲು ರೋಹಿಲರ ಮೇಲೆ ದಾಳಿ ಮಾಡುವ ಅನ್ಯಾಯವನ್ನು ಕಲಕತ್ತೆಯ ನಿವಾಸಿಗಳಾದ ಇಂಗ್ಲಿಷರು ಮಾಡಿದರು; ಈಗ ಮರಾಟರ ಮೇಲೆ ದಾಳಿ ಮಾಡುವ ಅನ್ಯಾಯವನ್ನು ಮುಂಬಯಿ ವಾಸಿಗಳಾದ ಇಂಗ್ಲಿಷರು ಮಾಡಿದರು! ಈ ಕೃತ್ಯದ ವರ್ಣನೆ ಮಾಡುವಾಗ ಸರ ಆಲ್‌ಫ್ರೇಡ ಲಾಯಲನು ಮುಂಬಯಿ ವಾಸಿಗಳಾದ ಇಂಗ್ಲಿಷರಿಗೆ "Anxious to distinguish themselves by the acquisition of territory" ಅಂದರೆ ರಾಜ್ಯಸಂಪಾದನೆಯ ಕೀರ್ತಿಗೆ ಆಶೆಬುರುಕತನ ಮಾಡಿಕೊಂಡವರು' ಎಂದು ಅಂದಿರುವನು. ಮರಾಟರಿಗಾದರೂ ಇಂಗ್ಲಿಷರು ಇದೇ ವಿಶೇಷಣವನ್ನು ಹಚ್ಚುತ್ತಾರೆ; ಆದರೆ ಆರಾಸದ ಯುದ್ಧದಲ್ಲಿ ಇಂಗ್ಲಿಷರು ಪರಾಭವ ಹೊಂದಿದ ಮೇಲೆ ತಮ್ಮ ಕೀರ್ತಿಯು ಹೋಗುವದೆಂಬ ನಿಮಿತ್ತದಿಂದ ಯುದ್ಧವನ್ನು ಪ್ರಾರಂಭಿಸುವ ಆಜ್ಞೆಯನ್ನು ಕಾವಾಗಿ ಕೊಟ್ಟರು ಇಂಥ ಯುದ್ಧಗಳನ್ನು ಮೈಮೇಲೆ ತೆಗೆದುಕೊಳ್ಳುವದು ಘಾತುಕವು; ತಾವಾಗಿ ರಾಜ್ಯಸಂಪಾದನೆಯ ಅಭಿಲಾಷೆ ಹಿಡಿದರೆ ಹಿಂದುಸ್ತಾನದೊಳಗಿನ ರಾಜ-ಮಹಾರಾಜರು ತಮ್ಮ ಮೇಲೆ ಎದ್ದು ಕುಳಿತು, ತಮ್ಮನ್ನು ದೇಶದಿಂದ ಹೊರಗೆ ಹಾಕುವರು; ಮತ್ತು ಕೈಯೊಳಗಿನ ವ್ಯಾಪಾರವೂ ಮುಳುಗುವದು ಮೊದಲಾದ ಭೀತಿಯುಳ್ಳ ಜನರು ಕಂಪನಿ ಸರಕಾರದ ದರಬಾರದಲ್ಲಿ ಆ ಕಾಲಕ್ಕೆ ಇದ್ದರು. ಅವರ ಮನಭೇದದ ಮೂಲಕವಾಗಿ ಇಂಗ್ಲಿಷರ ಇತ್ತ ಕಡೆಯ ಕೃತ್ಯಗಳ ಸಲುವಾಗಿ ನಿಂದಾತ್ಮಕ ನಿಷೇಧದ ಮತಗಳಾದರೂ ನಮಗೆ ನೋಡಲಿಕ್ಕೆ ದೊರೆಯುತ್ತವೆ; ಆದರೆ

ಮುಂದೆ ಈ ಭೀತಿಯು ಬರಬರುತ್ತ ಕಡಿಮೆಯಾಯಿತು. ಇಂಗ್ಲಿಷರು ರಾಜ್ಯಸಂಪಾದನೆಯ ಕಾರ್ಯಕ್ಕೆ ತೊಡಗಿದರೆ, ಏತದ್ದೇಶೀಯ ರಾಜಮಹಾರಾಜರಿಗೆ ಬರತಕ್ಕಷ್ಟು ಸಿಟ್ಟು ಬರುವದಿಲ್ಲ. ಅವರೊಳಗಿನ ಬೇಕಾದವರು ತಮ್ಮೊಡನೆ ಕೂಡಿ ಸ್ವಾರ್ಥಸಾಧನೆ ಮಾಡಲಿಕ್ಕೆ ಹವಣಿಸುತ್ತಾರೆ. ತಮ್ಮ ಸೈನ್ಯವು ಅವರ ಸೈನ್ಯಕ್ಕಿಂತ ಚನ್ನಾಗಿ ಅದೆ, ಮೊದಲಾದ ಸಂಗತಿಗಳು ಲಕ್ಷ್ಯದಲ್ಲಿ ಬರತೊಡಗಿದಾಗಿನಿಂದ ಅವರು ಸ್ವಂತಕ್ಕೆ ನ್ಯಾಯದ ದೃಷ್ಟಿಯಿಂದ ತೊಂದರೆಯಾಗಗೊಡಲಿಲ್ಲ ವಿಲಾಯತಿಯೊಳಗಿನ ಸ್ವತಂತ್ರ ಮತವಾದಿಗಳೂ ನ್ಯಾಯನಿಷ್ಠುರರೂ ಮೌನವ್ರತವನ್ನು ಹಿಡಿಯತೊಡಗಿದರು. ಕಂಪನಿಯು ವ್ಯಾಪಾರಕ್ಕೂ ಮತ್ತು ಬಂಡವಾಳದ ಮೇಲಿನ ಬಡ್ಡಿಗೂ ಪೆಟ್ಟುಹತ್ತದಂತೆ ಬೇಕಾದ ಕೆಲಸ ಮಾಡಬಹುದೆಂಬ ಪ್ರವೃತ್ತಿಯಾಯಿತು. ಹೇಸ್ಟಿಂಗ್ಸ ಸಾಹೇಬನ ಮೇಲೆ ವಿಲಾಯತಿಯಲ್ಲಿ ನಡೆದ ನ್ಯಾಯವಿಚಾರಣೆಯೇ ಕೊನೆಯದು. ಈ ನ್ಯಾಯವಿಚಾರಣೆಯ ಕಾರ್ಯ ನಡೆಯಲಿಕ್ಕೆ ಕಾರಣವೇನಂದರೆ, ಹೇಸ್ಟಿಂಗ್ಸನಿಗೆ ಪ್ರತಿಸ್ಪರ್ಧಿಗಳು ಬಹಳವಾಗಿದ್ದರು. ಕಂಪನಿಗೆ ವ್ಯಾಪಾರದ ಗುತ್ತಿಗೆಯಿದ್ದುದರಿಂದ, ಅದರ ಪಾಲುಗಾರರ ಹೋಳಿಗೆಯು ತುಪ್ಪದಲ್ಲಿ ಬೀಳುತ್ತಿದ್ದುದನ್ನು ನೋಡಿ ಸಹಿಸದಂಥ ಎಷ್ಟೋ ಇಂಗಿಷರು ವಿಲಾಯತಿಯಲ್ಲಿದ್ದರು; ಆದರೆ ಮುಂದೆ ಈ ಗುತ್ತಿಗೆಯು ನಿಂತು, ಬೇಕಾದ ಇಂಗ್ಲಿಷನು ವ್ಯಾಪಾರ ಮಾಡಬಹುದೆಂದು ಪ್ರಕಟನೆ ಹೊರಟಿತು. ಆಗ ಮನೆಯ ಜಗಳವು ನಿಂತಿತು; ಹಿಂದುಸ್ತಾನದಲ್ಲಿದ್ದ ಭೀತಿಯೂ ಮುಗಿಯಿತು. ಈ ರೀತಿಯಿಂದ ಕಂಪನಿ ಸರಕಾರದ ಅನ್ಯಾಯ ಬುದ್ಧಿಯ ಮೇಲೆ ವಿಲಾಯತಿಯಲ್ಲಿಯೂ ಹಿಂದುಸ್ತಾನದಲ್ಲಿಯೂ ಇದ್ದ ಭಾರವು ಕಡಿಮೆಯಾದಬಳಿಕ ಲಾರ್ಡ ವೆಲ್ಲಸ್ಲಿಯಂಥ ಹಾಗು ಲಾರ್ಡ ಡಲಹೌಸಿಯಂಥ ಗವ್ಹರ್ನರ ಜನರಲ್ಲರು ಹಿಂದುಸ್ತಾನದಲ್ಲಿ ಬಂದು, ಮನಸೋಕ್ತವಾಗಿ ರಾಜ್ಯಸಂಪಾದನೆ ಮಾಡಿದರು; ಆಗ ಅದರ ವಿರುದ್ಧವಾಗಿ ಯಾರೂ 'ಬ್ರ' ಅನ್ನದಿದ್ದುದರಲ್ಲಿ ಆಶ್ಚರ್ಯವೇನು?

ಮರಾಟರ ವಿರದ್ಧವಾಗಿಯಾದರೂ ಮೇಲೆ ನಿರ್ದೇಶ ಮಾಡಿದ ದೋಷಗಳು ಇದ್ದಿಲ್ಲವೆಂದು ಯಾರಿಗೂ ಅನ್ನಲಿಕ್ಕೆ ಬರುವದಿಲ್ಲ; ಅರ್ಥಾತ್ ಮರಾಟರಲ್ಲಿ ಹಾಗು ಇಂಗ್ಲಿಷರಲ್ಲಿ ಇದ್ದ ಈ ಸಮಾನ ಧರ್ಮಗಳನ್ನು ಲೆಕ್ಕದಲ್ಲಿ ಹಿಡಿದರೆ ಅರ್ಥವಿಲ್ಲ. ಮೇಲಿನ ಗುಣಗಳ ವಿಷಯದಲ್ಲಿ ಮರಾಟರಿಗಿಂತ ಇಂಗ್ಲಿಷರಲ್ಲಿ ಹೆಚ್ಚುಪ್ರಮಾಣದಿಂದ ಆ ಗುಣಗಳು ವಾಸಿಸಿದ್ದವು. ನಮ್ಮಲ್ಲಿಯ ಲೋಭ, ಅನ್ಯಾಯ ಮೊದಲಾದ ದುರ್ಗುಣಗಳಿಂದಲಾದರೂ ಇಂಗ್ಲಿಷರು ಮಾಡಿಕೊಂಡಷ್ಟು ಲಾಭವನ್ನು ಮರಾಟರು ಮಾಡಿಕೊಳ್ಳಲಿಲ್ಲ. ಮೇಲಿನ ಗುಣಗಳಲ್ಲಿ ಒಂದೆರಡು ಗುಣಗಳ ಬಗ್ಗೆಯಾದರೂ ಮರಾಟರಿಗೆ ನಂಬಿಗೆಯಿತ್ತೆಂಬ ಮಾತಿನಲ್ಲಿ ಸಂಶಯವಿಲ್ಲ. ಬಾಜೀರಾಯನ ವೇಳೆಯಲ್ಲಿ ಮರಾಟ ರಾಜ್ಯದ ಅವ್ಯವಸ್ಥೆಯ ಬಗ್ಗೆ ಮರಾಟರಾಜ್ಯದೊಳಗಿನ ಜನರೇ ಬೇಸರಗೊಂಡಿದ್ದರು. ಅಂತೆಯೇ ಬಾಜೀರಾಯಶಾಹಿಯು ನಷ್ಟವಾದ ಮೇಲೆ ಯಾವ ಮರಾಟನೂ ಇಂಗ್ಲಿಷರ ವಿರುದ್ಧವಾಗಿ ಕೈ ಎತ್ತಲಿಲ್ಲ. ಹಾಗಿಲ್ಲದಿದ್ದರೆ, ಪೇಶವೆ ವೈಭವದಂಥ ದೊಡ್ಡ ವೈಭವ

ವನ್ನು ಜನರು ತಮ್ಮ ಕಣ್ಣೆದುರಿಗೆ ನಷ್ಟವಾಗಗೊಡುತ್ತಿದ್ದರೇನು? ಬಾಜೀರಾಯನು ಹೋಗಿ ಇಂಗ್ಲಿಷರು ಬಂದದ್ದರಿಂದ ರಾಷ್ಟ್ರಕ್ಕೆ ಘಾತುಕವಾದ ರಾಜ್ಯಕ್ರಾಂತಿಸಂಘಟಿಸಿತೆಂದು ಪುಣೆಯೊಳಗಿನ ನಾಗರಿಕರು ಕಲ್ಪಿಸದೆ, ತಾವು ಒಬ್ಬ ನರಾಧಮನ ಕೈಯಿಂದ ಪಾರಾದೆವೆಂದು ತಿಳಿದರು! ರಾಜನು ಪರಾಭೂತನಾಗಿ ದೇಶತ್ಯಾಗ ಮಾಡಿ ಹೋದಾಗ ರಾಜನ ಮೇಲಿನ ಪ್ರೇಮದಿಂದ ಯುದ್ಧ ಮಾಡಿ ರಾಜಧಾನಿಯನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಿದ ದೃಷ್ಟಾಂತಗಳು ಜಗತ್ತಿನ ಇತಿಹಾಸದಲ್ಲಿ ಎಷ್ಟಾದರೂ ದೊರೆಯುವವು. ಶನಿವಾರ ವಾಡೆಯ ಮೇಲಿನ ಪೇಶವೆಯ ನಿಶಾನಿ ಕಿತ್ತು, ಅಲ್ಲಿ ಇಂಗ್ಲಿಷರ ನಿಶಾನೆಯನ್ನಿರಿಸಿದ ಮನುಷ್ಯನು—ಅವನಿಗೆ ದೇಶಾಭಿಮಾನದ ದೃಷ್ಟಿಯಿಂದ ನೀಚ ಅಧಮ ಮೊದಲಾಗಿ ಬೇಕಾದದ್ದು ಹೆಸರಿಡಬಹುದು—ಜನರ ದೃಷ್ಟಿಗೆ ಉಪಕಾರ ಕರ್ತನಾಗಿ ತೋರಿದ ಹೊರತು ಹೇಗೆ ಸುಮ್ಮನಿರುತ್ತಿದ್ದರು? ಸುರಾಜ್ಯದ ಉತ್ಕೃಷ್ಟ ಲಾಭವನ್ನು ಸಹ ತೋರಗೊಡದಂಥ ಸ್ವಾತಂತ್ರ್ಯನಾಶದ ನಿಚ್ಚಳವಾದ ಘಾತುಕ ಪರಿಣಾಮವು ತೋರತೊಡಗಿದ ಮೇಲೆ ಇಂಗ್ಲಿಷರ ವಿಷಯವಾಗಿ ಕೆಲವಂಶದಿಂದ ಕೆಲವು ವಿಷಯುಗಳಲ್ಲಿ ಕೃತಜ್ಞತಾ ಬುದ್ಧಿಯು ಕಡಿಮೆಯಾಗಿರುವದೆಂಬ ಮಾತು ಬೇರೆ. ಈಗ ಮರ್ಯಾದಿತ ಸ್ವರಾಜ್ಯದ ಬೇಡಿಕೆಯ ಕಾಲದಲ್ಲಿ ಇಂಗ್ಲಿಷರ ವಿಷಯವಾಗಿ ಎಷ್ಟು ಆದರ ಬುದ್ಧಿಯು ಇರುವದೋ, ನೂರು ವರ್ಷಗಳ ಹಿಂದೆ ಕೈಯೊಳಗಿನ ಸ್ವರಾಜ್ಯವನ್ನು ಕಳೆದುಕೊಳ್ಳುವ ಮಹಾರಾಷ್ಟ್ರೀಯ ಜನರ ಮನಸ್ಸಿನಲ್ಲಿ ಇದಕ್ಕಿಂತ ಹೆಚ್ಚು ಆದರ ಬುದ್ಧಿಯು ವಾಸಿಸಿತ್ತೆಂದು ಕಾಗದ-ಪತ್ರಗಳ ಹಾಗು ದಂತಕಥೆಗಳ ಆಧಾರದಿಂದ ತರ್ಕ ಮಾಡಬಹುದು. ಇಂಗ್ಲಿಷರು ಬಾಜೀರಾಯನ ರಾಜ್ಯವನ್ನು ತೆಗೆದುಕೊಳ್ಳದಿದ್ದರೆ ಅದನ್ನು ತೆಗೆದುಕೊಳ್ಳುವದಕ್ಕಾಗಿ ಜನರು ವಿನಂತಿ ಪತ್ರವನ್ನು ಕಳಿಸುತ್ತಿದ್ದರೆಂದು ಅನ್ನಲಾಗುವದಿಲ್ಲ; ಇಂಗ್ಲಿಷರು ರಾಜ್ಯವನ್ನು ತೆಗೆದುಕೊಂಡಾಗ ಮಹಾರಾಷ್ಟ್ರೀಯರು ಯುದ್ಧ ಮಾಡಲಿಲ್ಲವೆಂಬ ಮಾತು ನಿಜವು. ಸಂಭಾಜಿಯ ತರುವಾಯ ಮೊಗಲರು ಮಹಾರಾಷ್ಟ್ರದ ಮೇಲೆ ಮುತ್ತಿಗೆ ಹಾಕಿದಾಗ ಯಾವ ಮರಾಟರು ಜೀವವನ್ನು ತೃಣವಾಗಿ ಬಗೆದು ಇಪ್ಪತ್ತು ವರ್ಷಗಳ ವರೆಗೆ ಸ್ವಾತಂತ್ರ್ಯ ರಕ್ಷಣಾರ್ಥವಾಗಿ ಯುದ್ಧ ಮಾಡಿದರೋ, ಅದೇ ಮಹಾರಾಷ್ಟ್ರದ ನಾಲ್ಕನೆಯ-ಐದನೆಯ ತಲೆಯ ಮರಾಟಿಗರು ಆ ವೇಳೆಯಲ್ಲಿದ್ದರು; ಈಗಿನಂತೆ ಆಗ ನಿಃಶಸ್ತ್ರತೆಯು ಕೂಡ ಇರಲಿಲ್ಲ! ೧೮೫೭ನೆಯ ವರ್ಷಕ್ಕಿಂತ ಹೆಚ್ಚಾದ ಅನುಕೂಲತೆಯು ಆಗ ಮಹಾರಾಷ್ಟ್ರೀಯರಿಗಿತ್ತು. ಹೀಗಿದ್ದು ಎಲ್ಲ ಮರಾಟರೂ ತಮ್ಮ ತಮ್ಮ ಮನೆಯಲ್ಲಿ ಸ್ವಸ್ಥವಾಗಿ ಕುಳಿತುಕೊಂಡದ್ದರ ಅರ್ಥವೇನು? ಆಗಿನ ಕಾಲದಲ್ಲಿ ಯುದ್ಧಕ್ಕೆ ಪ್ರವೃತ್ತರಾದವರಿಗೆ ಜಯವು ನಿಶ್ಚಯವಾಗಿ ದೊರೆಯುತ್ತಿತೆಂಬಂತೇನೂ ಇದ್ದಿಲ್ಲ. ಸ್ವಾತಂತ್ರ್ಯಕ್ಕಾಗಿ ಜೀವದ ಪರಿವೆಯಿಲ್ಲದೆ ಯಾವದೊಂದು ರಾಷ್ಟ್ರವು ಯುದ್ಧಸನ್ನದ್ಧವಾಯಿತೆಂದರೆ ಮುಂಗಡವಾಗಿ ಜಯಾಪಜಯುಗಳ ವಿಚಾರ ಮಾಡುತ್ತಿರುವದಿಲ್ಲ. ಬೋಅರರು ಇಂಗ್ಲಿಷರ ವಿರುದ್ಧವಾಗಿ ಇಲ್ಲವೆ ಬೆಲ್ಜಮ್ಮ ಜನರು ಜರ್ಮನರ ವಿರುದ್ಧವಾಗಿ

ಯುದ್ಧಕ್ಕೆ ನಿಂತಾಗ ತಾವು ಪ್ರತಿಪಕ್ಷಿಗಳ ತುಲ್ಯಬಲರಿರುವೆವು, ತಮಗೆ ಜಯವು ನಿಶ್ಚಯವಾಗಿ ದೊರೆಯುವದು ಮೊದಲಾದ ಭಾವನೆಗಳು ಅವರಲ್ಲಿರಲಿಲ್ಲ. ಪ್ರೆಸಿಡೆಂಟ ಕ್ರೂಗರನು 'ನಾವು ಜಗತ್ತನ್ನು ದಂಗುಬಡಿಸಿಬಿಡುವೆವು' ಎಂದು ಜಗತ್ತು ಕೇಳು ವಂತೆ ಕೂಗಿದ್ದರ ಅರ್ಥವು ಇಂಗ್ಲಿಷರ ನಾಶ ಮಾಡಿ ಜಗತ್ತನ್ನು ಆಶ್ಚರ್ಯಗೊಳಿಸುವ ವೆಂದಿರದೆ, ತಮ್ಮ ಸ್ವಾತಂತ್ರ್ಯಪ್ರೇಮಮೂಲಕ ಆತ್ಮಯಶದಿಂದ ಚಕಿತರನ್ನಾಗಿ ಮಾಡುವೆವೆಂದು ಹೇಳಿದ್ದಾಗಿರುವದು. ಮರಾಟರು ಸ್ವಾತಂತ್ರ್ಯಕ್ಕೆ ಬೇಸರಗೊಂ ಡಿದ್ದರೆನ್ನಿರಿ, ಇಲ್ಲವೆ ಇಂಗ್ಲಿಷರು ಬಂದದ್ದಕ್ಕಾಗಿ ತಮಗೆ ಲಾಭವಾಗುವದೆಂದು ತಿಳಿದುಕೊಂಡಿದ್ದರೆನ್ನಿರಿ. ಅವರು ಕೊಂಚವಾದರೂ ಅಲುಕಲಿಲ್ಲ. ಕಾರಣವೇನಾ ದರೂ ಇರಲಿ; ಕಾರ್ಯವು ಘಟಿಸಲಿಲ್ಲವೆಂಬದು ಮಾತ್ರ ನಿಜ.

ಮರಾಟ ಶಾಹಿಯು ನಿರ್ದೋಷವಿರಲಿ, ಸದೋಷವಿರಲಿ ಅದನ್ನು ಮರಾ ಟರು ತಮ್ಮ ಕೈಯಲ್ಲಿಟ್ಟುಕೊಳ್ಳುವದಕ್ಕೆ ಸಮರ್ಥರಾಗಲಿಲ್ಲವೆಂಬದು ನಿಜ; ಆದರೆ ಇಂದಿನ ನಮ್ಮ ಸ್ಥಿತಿಯು ಆ ವೇಳೆಯ ಮರಾಟಶಾಹಿಗಿಂತ ಎಲ್ಲ ಕಡೆ ಯಿಂದಲೂ ಒಳಿತಾಗಿದೆ ಎಂದು ಮಾತ್ರ ತಿಳಿಯಲಾಗದು. ಬಹಳ ವಿಷಯಗಳಲ್ಲಿ ಇಂದು ನಮಗೆ ಮರಾಟಶಾಹಿಯು ನೆನಪಾಗಿ ದುಃಖವಾಗಲಿಕ್ಕೆ ಸ್ಥಳವಿದೆ. ಸದೋಷ ಪಾರತಂತ್ರ್ಯ-ಸದೋಷ ಸ್ವಾತಂತ್ರ್ಯ ಇವುಗಳಲ್ಲಿ ಭೇದವಿಲ್ಲವೆಂದು ಯಾರು ಅನ್ನು ವರು? ಮರಾಟಶಾಹಿಯು ಸದೋಷವಿದ್ದರೂ ಆಗ ಮರಾಟರಲ್ಲಿದ್ದ ತೇಜವು ಇಂದಿ ಲ್ಲವೆಂಬ ಮಾತಿನಲ್ಲಿ ಸಂಶಯವೇನು? ತೇಜವೆಂದರೆ ಅನೇಕ ಅನುಕೂಲ ಸಂಗತಿಗಳು ಏಕತ್ರಿತವಾಗುವ ಒಂದು ಪರಿಣಾಮವಿರುತ್ತದೆ. ಮರಾಟಶಾಹಿಯಲ್ಲಿ ಏನು ಇದ್ದಿಲ್ಲ ವೆಂಬ ಸಂಗತಿಯುಬಗ್ಗೆ ಹಿಂದೆ ಉಲ್ಲೇಖಿಸಿದೆ. ಕೆಲವು ಸಂಗತಿಗಳು ಇಂದಿಗಿಂತಲೂ ಮರಾಟಶಾಹಿಯಲ್ಲಿ ಹೆಚ್ಚಿದ್ದವೆಂದು ಹೇಳಿದರೆ ಯಾರೂ ಅಸಮ್ಮತಿಯನ್ನು ತೋರ್ಪಡಿಸಲಾರರು. ಉದಾಹರಣಾರ್ಥವಾಗಿ, ಇಂದಿಗಿಂತಲೂ ಮರಾಟಶಾಹಿ ಯಲ್ಲಿ ಹೆಚ್ಚಿನ ಸಧನತೆಯೂ, ಸ್ವತಂತ್ರತೆಯೂ, ಪೌರುಷವೂ, ಪರಾಕ್ರಮ ತೋರಿ ಸುವ ಸಂಧಿಯೂ, ರಾಜ್ಯಕಾರ್ಯಭಾರದ ಅನುಭವವೂ, ದೈವವನ್ನು ಅಭ್ಯುದಯ ಗೊಳಿಸುವ ಸಾಧನಗಳೂ, ರಾಷ್ಟ್ರೀಯ ಕೀರ್ತಿಯೂ ಹೆಚ್ಚಾಗಿದ್ದವು. ಪುಣೆಯು ಮರಾಟರ ರಾಜಧಾನಿಯಿದ್ದಮೂಲಕ ಮಹಾರಾಷ್ಟ್ರದೊಳಗಿನ ಸಂಪತ್ತಿನ ಪ್ರವಾಹವು ಪುಣೆಯ ಕಡೆಗೂ, ಮಹಾರಾಷ್ಟ್ರವು ಇಡೀ ಹಿಂದುಸ್ಥಾನದೊಳಗಿನ ಪ್ರಮುಖ ರಾಷ್ಟ್ರ ವಿದ್ದುದರಿಂದ ಹಿಂದುಸ್ಥಾನದೊಳಗಿನ ಸಂಪತ್ತು ಮಹಾರಾಷ್ಟ್ರದ ಕಡೆಗೂ ಹರಿಯು ತ್ತಿತ್ತು. ಆಗಿನ ಸ್ವಾತಂತ್ರ್ಯಕ್ಕೆ ಒಂದು ವಿಧದ ಅಸ್ವಸ್ಥತೆಯು ಅಂಟಿಕೊಂಡಿತ್ತೆಂಬದು ನಿಜ. ಅಸ್ವಸ್ಥತೆಯು ಸಹ ಮನುಷ್ಯನನ್ನು ತೇಜಸ್ವಿಯನ್ನಾಗಿ ಮಾಡಲಿಕ್ಕೆ ಉಪ ಯೋಗಿಯಾಗುವದು. ಯಾವನ ಜನ್ಮವು ನಡುಮನೆಯ ತಣ್ಣನ್ನ ಪ್ರದೇಶದಲ್ಲಿ ಬೆಳೆ ದಿರುವದೋ ಅವನಿಂದ ಆತಪ ಪತ್ರವಿಲ್ಲನೆ ಹೊರಬೀಳಲಾಗುವದಲ್ಲ. ಆತ್ಮಸಾಮರ್ಥ್ಯ ಆತ್ಮವಿಶ್ವಾಸಗಳು ವೇದಸಂಹಿತೆಯಂತೆ ನಿತ್ಯ ಪಾಠದಿಂದ ಮಾತ್ರ ಜಾಗ್ರತವಿರುತ್ತವೆ.

ಯಾವನು ಯಾವಾಗಲೂ ಇತರರನ್ನು ಅವಲಂಬಿಸಿ ನಡೆಯುವನೋ ಅವನ ಕಾಲು ಗಳು ಕಾಲಾಂತರದಿಂದ ನಿರ್ಬಲಗೊಳ್ಳುತ್ತವೆ. ಆಗಿನ ಸ್ವಾತಂತ್ರ್ಯದಲ್ಲಿ ಅಸ್ವಸ್ಥತೆ ಯಿದ್ದರೂ ಆಗಿನ ಮರಾಟರು ಯಾವಾಗಲೂ ಸಾವಧರೂ ತಮ್ಮ ಕಾಲ ಮೇಲೆ ತಾವು ನಿಲ್ಲುವಂಥವರೂ ಆಗಿದ್ದರು. ಜಗತ್ತಿನಲ್ಲಿ ಗುಣದ ಬೆಲೆಯು ಒಂದಾದರೆ ಸಂಧಿಯ ಬೆಲೆಯು ಹತ್ತಾಗಿರುತ್ತದೆ. ಪ್ರತಿಯೊಬ್ಬ ಫ್ರೆಂಚ ಸೈನಿಕನು ತಾನು ರಾಜ್ಯದ ಮುಖ್ಯ ಸೇನಾಪತಿಯಾಗುವೆನೆಂದೂ, ಪ್ರತಿಯೊಬ್ಬ ಅಮೇರಿಕನ್ನನಿಗೆ ತಾನು ರಾಷ್ಟ್ರದ ಅಧ್ಯಕ್ಷನಾಗುವೆನೆಂದೂ ಮಹತ್ವಾಕಾಂಕ್ಷೆ ತಳೆಯುವ ಸಂಧಿಯಿರುವದು. ಅದರಂತೆ ಆಗಿನ ಪ್ರತಿಯೊಬ್ಬ ಮರಾಟನಿಗೆ ತಾನು ದೊಡ್ಡ ಸರದಾರನಾಗುವೆನು. ರಾಜಕಾರಣ ಪಟುವಾಗುವೆನು ಮೊದಲಾದ ಮಹತ್ವಾಕಾಂಕ್ಷೆ ತಳೆಯಲಿಕ್ಕೆ ಸಂಧಿಯಿತ್ತು. ರಾಣೋಜಿ ಶಿಂದೆಗೆ ಪಾದರಕ್ಷೆ ಎತ್ತುವ ಹುಜರೆಯ ಸ್ಥಳದಿಂದ ಒಂದೇ ತಲೆಯಲ್ಲಿ ಮುಕ್ಕಾಲು ಕೋಟಿ ರೂಪಾಯಿಗಳ ಉತ್ಪನ್ನದ ಧನಿಯಾಗಲಿಕ್ಕೂ, ದಿಲ್ಲಿಯ ಬಾದ ಶಹನಿಗೆ ಪೇಶವೆಯುವರ ಪರವಾಗಿ ಒಪ್ಪುವ ಹೊಣೆಗಾರನಾಗಲಿಕ್ಕೂ ಸಂಧಿ ದೊರೆ ಯಿತು! ಯಾವ ಮಲ್ಹಾರರಾವ ಹೋಳಕರನು ಪೂರ್ವ ವಯಸ್ಸಿನಲ್ಲಿ ಕುರಿಗಳನ್ನು ಕಾಯುವ ಹಾಗು ಕಂಬಳಿ ನೇಯುವ ಉದ್ಯೋಗ ಮಾಡುತ್ತಿದ್ದನೋ, ಅವನು ಮರಾಟಶಾಹಿಯಲ್ಲಿ ಅರವತ್ತು ಲಕ್ಷದ ಜಹಾಗೀರನ್ನೂ ಮಾಳವದ ಸುಭೇದಾರಿಕೆ ಯನ್ನೂ ದೊರಕಿಸಲಿಕ್ಕೆ ಸಂಧಿ ದೊರೆಯಿತು. ಬಾಳಾಜಿ ವಿಶ್ವನಾಥನು ನಿಜವಾಗಿ ಪೇದೆಯಿದ್ದವನು ಫರ್ಜಿಯಾದನು. ರಾಜ್ಯಕಾರಭಾರದ ಅಥವಾ ಸೈನಿಕ ವೃತ್ತಿಯ ಪಾತ್ರತೆಯ ಹಾಗು ಅನುಭವದ ಮಾತು ಹೀಗೆಯೇ ಇರುವದು. ಮರಾಟಶಾಹಿಯ ಕೊನೆಯ ನೂರು ವರ್ಷಗಳಲ್ಲಿ ಇತಿಹಾಸದಲ್ಲಿ ನಾಮನಿರ್ದೇಶ ಮಾಡುವಂಥ ನೂರಾರು ವೀರ ಧೀರ ವ್ಯಕ್ತಿಗಳು ಇರುವವು; ಆದರೆ ಮರಾಟಶಾಹಿಯು ಮುಳುಗಿದ ಮೇಲಿನ ನೂರಾರು ವರ್ಷಗಳಲ್ಲಿ ಅಂಥ ವೀರರು ಎಷ್ಟು ಜನರಾಗಿರುವರು? ನಾನಾ ಫಡಣವೀಸನ ಜಾಣತನದ ಬಗ್ಗೆ ಇಂಗ್ಲಿಷರು ಸಹ ಪ್ರಶಂಸೆ ಮಾಡಿರುವರು; ಆದರೆ ನಾನಾನು ಈ ಜಾಣತನ ಕಲಿಯಲಿಕ್ಕೆ ಆತನು ಅನುಭವದ ಹೊರತು ಯಾವು ದೊಂದು ಶಾಲೆಗೆ ಎಂದಾದರೂ ಹೋಗಿದ್ದನೇನು? ಅವನು ಜನ್ಮವೆತ್ತುತ್ತಲೆ ಪರಮೇ ಶ್ವರನು ಅವನ ಸಲುವಾಗಿ ಜಾಣತನದ ಬುತ್ತಿಯನ್ನು ಅವನ ಸೆರಗಿನಲ್ಲಿ ಖಂಡಿತ ವಾಗಿಯೂ ಕಟ್ಟಿಕೊಟ್ಟಿರಲಿಲ್ಲ!

ಪ್ರಸಂಗವು ಮೈಮೇಲೆ ಬಂದಿತೆಂದರೆ ಕರ್ತೃತ್ವವು ಬರುತ್ತದೆಂಬ ಸಂಗತಿಯು ಮರಾಟಶಾಹಿಯ ಇತಿಹಾಸದಲ್ಲಿ ಸ್ಥಳ ಸ್ಥಳಗಳಲ್ಲಿ ದೃಗ್ಗೋಚರವಾಗುವದು. ಕರ್ತೃ ತ್ವವು ಬರೇ ಪುರುಷರಲ್ಲಿ ಮಾತ್ರವಲ್ಲದೆ ಸ್ತ್ರೀಯರಲ್ಲಿಯೂ ಕಂಡುಬರುವದು. ಶಿವಾ ಜಿಯ ಬಾಲ್ಯದ ಇತಿಹಾಸವು ಪ್ರಸಿದ್ಧವೇ ಇರುವದು. ತಂದೆಯು ಮಗನನ್ನು ತ್ಯಜಿ ಸಿದ್ದನು; ತಾಯಿಯ ಹೊರತು ಮತ್ತಾರೂ ದಿಗ್ದರ್ಶಕರು ಇಲ್ಲ; ಮೂರು ದಿಕ್ಕಿಗೆ ಮೂರು ಮುಸಲ್ಮಾನೀ ರಾಜ್ಯಗಳು; ಪಾತಶಾಹಿಯ ವಿರುದ್ಧವಾಗಿ ವರ್ತಿಸಕೂಡ

ದೆಂದು ತಂದೆಯ ಕಟ್ಟಾಜ್ಞೆ. ಇಂಥ ಪರಿಸ್ಥಿತಿಯಲ್ಲಿ ಶಿವಾಜಿ ಮಹಾರಾಜನು ಬಾಲ್ಯದಲ್ಲಿಯೇ ಪ್ರಶಂಸನೀಯ ಕರ್ತೃತ್ವವನ್ನು ತೋರಿಸಿದನು. ಮೈಮೇಲೆ ಪ್ರಸಂಗ ಬಂದಿತೆಂದು ಅವನು ಕರ್ತೃತ್ವ ಪ್ರದರ್ಶನ ಮಾಡಿರದೆ, ಸ್ವಯಂ ಸ್ಫೂರ್ತಿಯಿಂದ ಮಾಡಿದನು. ತತ್ಕಾಲೀನ ಲೋಕಮತದ ವಿರುದ್ಧವಾಗಿ ತನ್ನ ವಯಸ್ಸಿನ ಎಂಟನೆಯ ವರ್ಷದಲ್ಲಿ ಶಿವಾಜಿಯು ವಿಜಾಪುರದ ಓಲಗದಲ್ಲಿ ಸ್ವಾಭಿಮಾನದ ಅಪೂರ್ವ ದೃಶ್ಯವನ್ನು ತೋರಿಸಿದ ಸಂಗತಿಯು ದಂತಕಥೆಯೆಂದು ಬಗೆದರೂ, ಅವನು ತನ್ನ ವಯಸ್ಸಿನ ಹತ್ತೊಂಬತ್ತನೆಯ ವರ್ಷ ತೋರಣ ಕೋಟೆಯನ್ನು ತೆಗೆದುಕೊಂಡು ತನ್ನ ರಾಜ್ಯಪದಾಕಾಂಕ್ಷೆಯ ಧ್ವಜವನ್ನು ನಿಲ್ಲಿಸಿದನೆಂಬ ಮಾತನ್ನು ಯಾರಿಗೂ ಅಲ್ಲಗಳೆಯ ಬರುವಂತಿಲ್ಲ. ಶಿವಾಜಿಯ ವೇಳೆಯಲ್ಲಿ ಕೃತ್ರಿಮ ಶಾಂತತೆಯಿರಲಿಲ್ಲ; ಅಸ್ವಸ್ಥತೆಯಿತ್ತು; ಆದರೆ ಅದು ತೇಜಸ್ವಿತೆಗೆ ಪೋಷಕವಿತ್ತು. ಸಂಭಾಜಿಯು ಇತರ ಗುಣಗಳಿಂದ ಹೇಗಿದ್ದರೂ, ಅವನು ಬಾಲ್ಯದಿಂದ ತೇಜಸ್ವಿಯಾಗಿದ್ದದ್ದೇನೂ ಸುಳ್ಳಲ್ಲ. ವಯಸ್ಸಿನ ಎಂಟನೆಯ ವರ್ಷ ಬಾದಶಹನಿಂದ ದೊರೆತ ಐದುಸಾವಿರದ ಮನಸಬದಾರಿಯನ್ನು ನಡೆಯಿಸುವದು ಅವನಿಗೆ ಸಾಧ್ಯವಿರಲಿಲ್ಲ; ಆದರೆ ಅವನು ಶಿವಾಜಿಯೊಡನೆ ದಿಲ್ಲಿಗೆ ಹೋದಾಗ ಅಲ್ಲಿಯ ಸಂಕಟದಲ್ಲಿ ಅವನು ದಿಟ್ಟತನದಿಂದ ನಡೆದನು. ವಯಸ್ಸಿನ ಇಪ್ಪತ್ತೊಂದು ವರ್ಷದೊಳಗೆ ಅವನು ದಾಳೀ ಮಾಡಿ ಸಂಗ್ರಾಮದಲ್ಲಿ ಹೋಗಿ ಶೂರ ಯೋಧನೆಂಬ ಕೀರ್ತಿಯನ್ನು ಸಂಪಾದಿಸಿದ್ದನು. ರಾಜಾರಾಮನ ಮೇಲಂತೂ ಸಂಭಾಜಿಗಿಂತಲೂ ಹೆಚ್ಚಿನ ಕಠಿಣ ಪ್ರಸಂಗವೊದಗಿತ್ತು. ಸಂಭಾಜಿಯ ವಧಾನಂತರದಲ್ಲಿ ಸ್ವಾತಂತ್ರ್ಯಾರ್ಥವಾಗಿ ನಡೆದ ಪ್ರಚಂಡ ಸಂಗ್ರಾಮದಲ್ಲಿ ರಾಜಾರಾಮನು ನೇತೃತ್ವ ವಹಿಸಿ, ರಾಯಗಡದಿಂದ ಜಿಂಜಿಯ ವರೆಗೆ ಪ್ರವಾಸ ಮಾಡಿ, ಅನೇಕ ಆಂದೋಲನಗಳನ್ನು ಮಾಡುತ್ತ, ಕರ್ತೃತ್ವವನ್ನು ತೋರಿಸಿದನು. ಮೊದಲನೆಯ ಬಾಜೀರಾಯನು ಚಿಕ್ಕಂದಿನಿಂದಲೇ ರಾಜಕಾರಣದಲ್ಲಿ ಮುಳುಗಿದ್ದನು. ನಾನಾಸಾಹೇಬನಿಗೆ ಪೇಶವೆಪದವು ಕೇವಲ ಹತ್ತೊಂಬತ್ತನೆಯ ವರ್ಷದಲ್ಲಿ ದೊರೆಯಿತು. ಅವನು ಮೊದಲನೆಯ ದಿನದಿಂದಲೇ ರಾಜಕಾರಣನಿರತನಾದನು. ನಾನಾಸಾಹೇಬನಂತಹ ವೈಭವಶಾಲಿಯಾದ ಆಳಿಕೆಗಳು ತೀರ ಕಡಿಮೆ ದೃಗ್ಗೋಚರವಾಗುತ್ತವೆ, ಆದರೆ ಈವೈಭವವು ಅವನ ನಾಲ್ವತ್ತನೇ ವರ್ಷದೊಳಗೇ ಮುಗಿಯಿತು. ಹಿರಿಯ ಮಾಧವರಾಯನ ಬಗ್ಗೆಯಂತೂ ಏನೂ ಆಡಲಿಕ್ಕೇ ಬೇಡ; ಅವನು ತನ್ನ ವಯಸ್ಸಿನ ಇಪ್ಪತ್ತೇಳನೆಯ ವರ್ಷದಲ್ಲಿಯೆ ತನ್ನ ಎಲ್ಲ ಗ್ರಂಥದ ಪರಿಸಮಾಪ್ತಿಗೊಳಿಸಿದನು. ಅದರಲ್ಲಿ ಅವನು ಹನ್ನೊಂದು ವರ್ಷ ಪೇಶವಾಯಿಯ ಭಾರವನ್ನು ಹೊತ್ತಿದ್ದನು. ಇಷ್ಟು ಸಣ್ಣ ವಯಸ್ಸಿನಲ್ಲಿ ಇಷ್ಟು ಕರ್ತೃತ್ವವು, ಇಷ್ಟು ಜಾಣತನವು, ಇಷ್ಟು ಗಾಂಭೀರ್ಯವು, ಇಷ್ಟು ಪ್ರೌಢಬುದ್ಧಿಯು ಕಂಡು ಬರುವದು ತೀರ ವಿರಳ. ರಘುನಾಥರಾಯನು ಇಪ್ಪತ್ತೈದನೆಯ ವರ್ಷ ದಿಲ್ಲಿಯನ್ನು ಹಸ್ತಗತ ಮಾಡಿಕೊಂಡು ಅಟಕದಲ್ಲಿ ನಿಶಾನೆಯನ್ನು ನೆಟ್ಟನು. ನಾನಾಫಡಣವೀಸನು ಅಲ್ಪವಯಸ್ಸಿನಲ್ಲಿ ಪೇಶವಾ

ಯಿಯ ಫಡಣವೀಸ ಕೆಲಸವನ್ನು ನಡೆಯಿಸಿದನು. ಸದಾಶಿವರಾವ ಭಾವೂನು ಇಪ್ಪತ್ತೈದು ವರ್ಷಗಳೊಳಗೆ ರಾಜಕಾರಣದಲ್ಲಿ ಬಿದ್ದು, ಮೂವತ್ತನೆಯ ವರ್ಷ ಉದಯಗಿರಿಯ ಸಂಗ್ರಾಮದಲ್ಲಿ ವಿಜಯಿಯಾದನು. ಮೂವತ್ತೊಂದನೆಯ ವರ್ಷ ಪಾಣಿಪತ್ತದ ಘೋರ ಸಂಗ್ರಾಮದಲ್ಲಿ ಅತುಲ ಶೌರ್ಯಪ್ರದರ್ಶನ ಮಾಡಿದನು. ವಿಶ್ವಾಸರಾಯನು ಉತ್ತರಹಿಂದುಸ್ಥಾನದ ಮೇಲೆ ದಾಳಿ ಮಾಡಿದಾಗ ಹತ್ತೊಂಬತ್ತನೆಯ ವರ್ಷದವನಿದ್ದನು. ದೌಲತರಾವ ಸಿಂಧೆಗೆ ತಾರುಣ್ಯದಲ್ಲಿಯೇ ಶಿಂದೆಯ ಪಟ್ಟವು ದೊರೆಯಿತು. ಅವನ ಎಲ್ಲ ಒಳಿತು-ಕೆಡಕು ಪರಾಕ್ರಮಗಳೂ ಇಪ್ಪತ್ತು ವರ್ಷದ ಸುಮಾರಿಗೆ ನಡೆದವು. ವಯಸ್ಸು ಕರ್ತೃತ್ವಕ್ಕೆ ಸಂಬಂಧವಿಲ್ಲ. ಬಹಳವೇನು? ಕರ್ತೃತ್ವವು ಸಣ್ಣ ವಯಸ್ಸಿನಲ್ಲಿ ಕಂಡು ಬಂದಂತೆ ದೊಡ್ಡವಯಸ್ಸಿನಲ್ಲಿ ಕಾಣುತ್ತಿರುವದಿಲ್ಲ. ಮೇಲಿನ ಎಲ್ಲ ಕರ್ತಾ ಪುರುಷರು ರಾಜಕಾರಣ ದುರಂಧರತೆಯನ್ನೂ ಖಡ್ಗ ಪಟುತ್ವವನ್ನೂ ಕಲಿಯಲಿಕ್ಕೆ ಯಾವ ಶಾಲೆಗೂ ಹೋಗಿದ್ದಿಲ್ಲ. ಆಧುನಿಕ ದೃಷ್ಟಿಯಿಂದ ಅವರ ಶಿಕ್ಷಣವು ತಕ್ಕಮಟ್ಟಿಗೆ ಹಾಗು ಬಳಿಕೆಗೆ ಬರುವಷ್ಟು ಮಾತ್ರ ಆಗಿತ್ತು. ಯಾವುದೊಂದು ಕೆಲಸದ ನಿಜವಾದ ಶಿಕ್ಷಣವು ಪ್ರತ್ಯಕ್ಷ ಕೆಲಸ ಮಾಡಿದ ಹೊರ್ತು ದೊರೆಯುವದಿಲ್ಲ. ಮೂವತ್ತು ವರ್ಷದೊಳಗಿನ ತಾರುಣ್ಯದ ಯುರೋಪೀಯ ಹುಡುಗರು ಸಿವ್ಹಿಲ ಸರ್ವ್ಹೀಸ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಇಲ್ಲಿಗೆ ಬಂದು ರಾಜ್ಯಕಾರ್ಯಭಾರ ಮಾಡುತ್ತಿರುವದನ್ನು ನೋಡಿ ನಾವು ಕೌತುಕಗೊಳ್ಳುತ್ತೇವೆ. ಮರಾಟಶಾಹಿಯಲ್ಲಿ ದೊಡ್ಡ ದೊಡ್ಡ ರಾಜಕಾರಣಗಳನ್ನು ಮಾಡುವದಕ್ಕೆ ಯಾವಾಗ ಎಡೆಯಿದ್ದಿತೋ; ಆಗ ಸಣ್ಣ ಸಣ್ಣ ಹುಡುಗರೇ ದೊಡ್ಡ ದೊಡ್ಡ ಕೆಲಸ ಮಾಡಿದರು. ಎಲ್ಲಿ ಸಂಧಿಯೂ ಸ್ಥಳವೂ ಇಲ್ಲವೋ, ಅಲ್ಲಿ ಕೂದಲು ಬೆಳ್ಳಗಾದರೂ ಅಪಾತ್ರತೆಯೇ ಕಂಡು ಬರುವದು ಅಸ್ವಾಭಾವಿಕವಲ್ಲ! ಇರಲಿ.

ಮರಾಟಶಾಹಿಯು ನಷ್ಟವಾಗಿ ನೂರು ವರ್ಷಗಳಾದವೆಂದು ಒಂದು ಅರ್ಥವಾದರೆ, ಅದು ಇನ್ನೂ ಜೀವಂತವಿರುವದೆಂದು ಕೆಲವರಿಗೆ ಅರ್ಥವಾಗುವದು. ಗ್ವಾಲ್ಹೇರ, ಇಂದೂರ, ಧಾರ, ದೇವಾಸ, ಕೊಲ್ಹಾಪುರ, ಅಕ್ಕಲಕೋಟ, ಸಾವಂತವಾಡಿ, ಮುಧೋಳ ಮೊದಲಾದ ಮರಾಟರ ಹಾಗು ಸಾಂಗಲಿ, ಜಮಖಂಡಿ, ಮಿರಜ, ರಾಮದುರ್ಗ ಮೊದಲಾದ ಬ್ರಾಹ್ಮಣರ ಸಂಸ್ಥಾನಗಳು ಇನ್ನೂ ಜೀವಂತವಿದ್ದು, ಪೇಶವೆಯವರ ವಂಶಜರಿಗಾದರೂ ಸ್ವಲ್ಪ ಜಹಾಗೀರು ಇರುವದು. ಇವರೊಳಗಿನ ಬಹುತರ ಜನರು ಇಂಗ್ಲಿಷರೊಡನೆ ಒಪ್ಪಂದ ಮಾಡಿಕೊಂಡಿದ್ದು, ಅದರ ಆಧಾರದಿಂದ ಇವರು ಇಂಗ್ಲಿಷರ ಸ್ನೇಹಿಗಳೆಂದು ಅನ್ನಿಸಿಕೊಳ್ಳಲಿಕ್ಕೆ ಬರುವದು; ಆದರೆ ಬರೇ ಹೆಸರು ತೆಗೆದುಕೊಂಡು ಮಾಡುವದೇನು? ಪ್ರತ್ಯಕ್ಷ ನೋಡತೊಡಗಿದರೆ, ಅವರಿಗೆ ಸ್ವತಂತ್ರ ರಾಜಕೀಯ ಅಧಿಕಾರ-ಭಾಧ್ಯತೆಗಳು ಸ್ವಲ್ಪವೇ ಇರುವವು ಇವರೊಳಗಿನ ಕೆಲವರಿಗೆ ಅಂತರ್ವ್ಯವಸ್ಥೆಯ ಹಾಗು ನ್ಯಾಯ ಮನಸುಬೆಯ ಪೂರ್ಣ ಅಧಿಕಾರವುಂಟು; ಆದರೆ ಅವರ ಬಾಹ್ಯ ಸ್ವಾತಂತ್ರ್ಯವು ಬಹಳೇ ಸಂಕುಚಿತವಿರುವದು.

ರೆಸಿಡೆಂಟನ ಇಲ್ಲವೆ ಪೋಲಿಟಿಕಲ್ ಎಜಂಟನ ಮಧ್ಯಸ್ಥಿಕೆಯು ಹೊರತು ಅವರು ರಾಜಕಾರಣದ ವಿಷಯವಾಗಿ ತಮ್ಮ ತಮ್ಮೊಳಗೆ ಯಾವ ವ್ಯವಹಾರವನ್ನೂ ಮಾಡುವಂತಿಲ್ಲ. ಅಂದ ಮೇಲೆ ಪರರಾಷ್ಟ್ರದ ಸಂಬಂಧಸಂತೂ ದೂರವೇ ಉಳಿಯಿತು. ಅವರು ತಮ್ಮ ಇಚ್ಛೆಯಂತೆ ಸೈನ್ಯವಿಡಲಿಕ್ಕೆ ಬರುವದಿಲ್ಲ. ಶಸ್ತ್ರಾಸ್ತ್ರಗಳ ಕಾರ್ಯಾಲಯುಗಳನ್ನು ನಡೆಯಿಸಲಿಕ್ಕೆ ಬರುವಂತಿಲ್ಲ. ವ್ಯಾಪಾರದ ಮೇಲಿನ ಕರ, ಸುಂಕ, ಅಬಕಾರಿ, ರೇಲ್ವೆ, ತಾರಾಯಂತ್ರ ಮೊದಲಾದವುಗಳ ಬಗ್ಗೆ ಇಂಗ್ಲಿಷ ಸರಕಾರವು ಅವರಿಗೆ ಅನೇಕ ಬಂಧನಗಳನ್ನು ಹಾಕಿದೆ. ಕೇವಲ ಅಂತರ್ವ್ಯವಸ್ಥೆಯ ಸಂಬಂಧದಲ್ಲಾದರೂ ಅವರು ಪೋಲಿಟಿಕಲ್ ಎಜಂಟನ ತಂತ್ರದಂತೆಯೇ ನಡೆಯಬೇಕಾಗುವದು. ಈ ಅಧಿಕಾರಿಯು ಕೊಟ್ಟ ಸಲಹೆಯನ್ನು ನಿರಾಕರಿಸಲಿಕ್ಕೆ ಅವರಿಗೆ ಎಷ್ಟು ಮಾರ್ಗವಿಲ್ಲ. ಒಂದು ವೇಳೆ ನಿರಾಕರಣೆ ಮಾಡಿದರೆ, ಅವರು ಪ್ರತ್ಯಕ್ಷ-ಅಪ್ರತ್ಯಕ್ಷವಾಗಿ ಎಷ್ಟೋ ತೊಂದರೆಗಳನ್ನು ಅನುಭವಿಸಬೇಕಾಗುವದು. ಅನ್ನಲಿಕ್ಕೆ ಬ್ರಿಟಿಶ ಸರಕಾರದ ಸ್ನೇಹಿಗಳು; ಆದರೆ ಪ್ರತ್ಯಕ್ಷ ವ್ಯವಹಾರದಲ್ಲಿ ಬ್ರಿಟಿಶ ಪ್ರಜಾಜನರಿಗಿದ್ದಷ್ಟು ಸ್ವಾತಂತ್ರ್ಯವು ಕೂಡ ಅವರಿಗಿಲ್ಲ. ಸಾಮಾನ್ಯ ಪ್ರಜಾಜನರಿಗಿಂತ ಅವರಿಗೆ ಮಾನ-ಸನ್ಮಾನಗಳು ಹೆಚ್ಚಿಗಿರುವವೆಂಬ ಮಾತೇನೂ ಸುಳ್ಳಲ್ಲ. ಎಷ್ಟೋ ಜನರಿಗೆ ರಾಜ-ಮಹಾರಾಜರೆಂಬ ದೊಡ್ಡ ದೊಡ್ಡ ಪದವಿಗಳಿರುವವು. ಎಷ್ಟೋ ಜನರಿಗೆ ತೋಫಿನ ಸಲಾಮಿಗಳೂ ಉಂಟು. ಎಷ್ಟೋ ಜನರಿಗೆ ರಾಜಪ್ರತಿನಿಧಿಯ ಭೆಟ್ಟಿ-ಪ್ರತಿಭೆಟ್ಟಿಗಳ ಅಧಿಕಾರಗಳಿವೆ; ಆದರೆ ಅವರಿಗೆ ಕಡ್ಡಿಯಷ್ಟು ಕೂಡ ಸ್ವಾತಂತ್ರ್ಯವಿಲ್ಲ. ಈ ಎಲ್ಲ ಸಂಗತಿಗಳನ್ನು ಲಕ್ಷ್ಯದಲ್ಲಿ ತಂದರೆ, ಮರಾಟಶಾಹಿಯು ಜೀವಂತವಿರುವದೆಂದು ಅನ್ನಲಿಕ್ಕೆ ಬರುವದಿಲ್ಲ. ರಾಜಕೀಯ ನಭೋಮಂಡಲದಲ್ಲಿ ಮರಾಟ, ಬ್ರಾಹ್ಮಣ ರಾಜ-ಮಹಾರಾಜರು ಸಣ್ಣ-ದೊಡ್ಡ ಗ್ರಹೋಪಗ್ರಹಗಳಂತೆ ಲಕಲಕಿಸುತ್ತಿದ್ದರೂ ಆ ಗ್ರಹಗಳಿಗೆ ಎಲ್ಲ ಪ್ರಕಾಶವು ಬ್ರಿಟಿಶ ಸರಕಾರರೂಪೀ ಮಧ್ಯವರ್ತೀ ಸೂರ್ಯನಿಂದಲೇ ದೊರೆಯುತ್ತಿದ್ದು, ಅವುಗಳ ಗತಿಯು ಈ ಸೂರ್ಯನ ಸುತ್ತಲೂ ನಿಯಮಿತ ಕಕ್ಷೆಯಲ್ಲಿರುವದು. ಮರ್ರಾಟರ ನಿಜವಾದ ಸ್ವರಾಜ್ಯವು ನೂರು ವರ್ಷಗಳ ಮೊದಲೇ ಮೃತವಾಯಿತು ಮೃತ್ಯುವಿಗಿಂತ ಬೇರೆ ದೊಡ್ಡ ಹಾನಿಯಿಲ್ಲ. ಹೋದದ್ದಕ್ಕಾಗಿ ಶೋಕಮಾಡಬಾರದೆಂಬ ತತ್ವಜ್ಞಾನವು ಸರಿಯಾದದ್ದೇ; ಆದರೆ ಹೋದದ್ದರ ಸ್ಮೃತಿಯನ್ನು ನಷ್ಟಗೊಳಿಸಲಿಕ್ಕೆ ಯಾರು ಸಮರ್ಥರು?

ನೂರು ವರ್ಷಗಳ ಕಾಲಾವಧಿಯೇನೂ ಸಣ್ಣದಲ್ಲ. ಆದರೂ ಅದರಲ್ಲಿ ಹೆಚ್ಚೆಂದರೆ ನಾಲ್ಕು ತಲೆಗಳಾಗುವವು. ಪೇಶವಾಯಿಯ ಸ್ಮೃತಿಯ ಸಂಗತಿಗೆ ನಾಲ್ಕೈದು ತಲೆಗಳಾಗುವವು. ಬಾಜೀರಾಯನು ಚಿರಾಯುವಾಗಿದ್ದನು; ಅಷ್ಟೇ ಆಯುಷ್ಯವನ್ನು ಪಡೆದ ಅವನ ಮಗಳಾದ ಬಯಾಬಾಯಿಯು ೧೯೧೭ನೆಯ ವರ್ಷ ಮರಣ ಹೊಂದಿದಳು. ಅವಳನ್ನು ನೋಡಿದ ಹಾಗು ಅವಳೊಡನೆ ಸಂಭಾಷಣೆ ಮಾಡಿದ ಎಷ್ಟೋ ಜನರು ಈಗಲೂ ಇರುವರು. ಬಾಜೀರಾಯನ ಔರಸ ಸಂತತಿಯೊಡನೆ ಭಾಷಣ ಮಾಡಿ ಅವರ ಮುಖದಿಂದ ಬಾಜೀರಾಯನ ಸಂಬಂಧವಾಗಿ ಮಸಮಸಕಾದ ಕೆಲವು

ನೆನಪುಗಳನ್ನೂ ಅನುಭವಗಳನ್ನೂ ಕಿವಿಯಿಂದ ಕೇಳಲಿಕ್ಕೆ ದೊರೆತಂಥವರಿಗೆ ಪೇಶವಾಯಿಯು ಬಹಳ ಹಳೆಯದಲ್ಲವೆಂದು ತೋರಿದರೆ ಈ ದೋಷವು ಅಕ್ಷಮ್ಯವೆಂದು ಯಾರೂ ತಿಳಿಯಲಿಕ್ಕಿಲ್ಲ.

ಕೇವಲ ಸ್ಮರಣೆಯಿಂದ ಯಾವುದಾದರೂ ಗತಗೋಷ್ಠಿಯು ಮೂರ್ತಿಮಂತ ನಿಂತಂತೆ ಭಾಸವಾಗುವದು. ಕಣ್ಣಿನಿಂದ ನೋಡಿದ ವಸ್ತುಗಳ ಸ್ವರೂಪದ ಬಗ್ಗೆ ಸ್ವಂತದ ಒಂದು ವಿಧದ ಕಲ್ಪನೆಯು ಇದ್ದೇ ಇರುವದು. ಪೇಶವಾಯಿಯೊಳಗಿನ ಯಾವ ಸ್ತ್ರೀಯನ್ನಾಗಲಿ ಪುರುಷನನ್ನಾಗಲಿ ನಾವು ನೋಡಿಲ್ಲ. ಕೆಲವರ ಚಿತ್ರಗಳಾದರೂ ಉಪಲಬ್ಧವಿಲ್ಲ; ಆದರೆ ಕಣ್ಣು ಮುಚ್ಚಿಕೊಂಡು ನೋಡಿದರೆ, ಪೇಶವಾಯಿಯೊಳಗಿನವರಷ್ಟೇ ಏಕೆ, ರಾಮಾಯಣ-ಮಹಾಭಾರತದೊಳಗಿನ ಸ್ತ್ರೀ-ಪುರುಷರೂ ಬೇರೆ ಬೇರೆ ಸ್ವರೂಪದಿಂದ ನಮ್ಮ ಕಣ್ಣಿಗೆ ಕಾಣುವರು. ಮನಸ್ಸು ನಿಜವಾಗಿ ಒಂದು ದಿವ್ಯ ಚಿತ್ರವಿರುವದು ಅದು ಕಾಲವನ್ನಾದರೂ ಜಯಿಸುವದು; ಆದರೆ ಕೇವಲ ಸ್ಮರಣೆಯಿಂದ ಯಾವುದೊಂದು ಗತಗೋಷ್ಠಿಯನ್ನು ಪ್ರತ್ಯಕ್ಷ ವ್ಯವಹಾರ್ಯವನ್ನಾಗಿ ಮಾಡಲಿಕ್ಕೆ ಬರುವದಿಲ್ಲ. ಆಗ ಮಾತ್ರ ಕಾಲವು ತನ್ನ ಅಭಿಲಾಷೆಯನ್ನು ಪೂರ್ತಿಗೊಳಿಸಿಕೊಳ್ಳುತ್ತದೆ.

ಸ್ಮರಣೆ ಮಾಡುವ ವಸ್ತುವನ್ನು ವ್ಯವಹಾರ್ಯವನ್ನಾಗಿ ಮಾಡಬೇಕೆಂದು ಮನುಷ್ಯನ ಯತ್ನವಿರುವದಿಲ್ಲ. ನಮ್ಮ ನಮ್ಮ ಮನೆತನದ ಪೂರ್ವಜರು ನಮೆಲ್ಲರಿಗೆ ವಂದ್ಯರೂ ಪೂಜ್ಯರೂ ಆಗಿರುವರು. ಸ್ಮರಣೆಯಿಂದ ಅಮೃತ ಸಿಂಚನ ಮಾಡಿ ಅವರನ್ನು ಜೀವಂತಗೊಳಿಸುವದು ಸಾಧ್ಯವಿದ್ದರೆ, ಅವರಿಗೆ ಈ ಭೂಮಿಯು ಹೇಗೆ ಸಾಲುವದು? ನಾವೆಲ್ಲರೂ ಅಮರರಾದರೆ, ಮುಂದಿನ ವಂಶಜರು ಎಲ್ಲಿ ಇರಬೇಕು? ಹಳೆಯ ಕಾಲದ ನೆನಪು ಮಾಡುವದು ಕೌತುಕದ ಹಾಗು ಸ್ವಾಭಿಮಾನದ ಸಂಗತಿಯಾಗಿದೆ. ಹಳೆಯ ಜನರಲ್ಲಿ ನಾಮಾಂಕಿತ ವ್ಯಕ್ತಿಗಳನ್ನು ಸ್ಮರಣೆಯು ಅಮೃತ ಸಿಂಚನದಿಂದ ಜೀವಂತಗೊಳಿಸುವದು ಸಾಧ್ಯವಿದ್ದರೆ, ಅವರ ದಟ್ಟಣೆಯನ್ನು ನಾವು ಸಹಿಸುವೆವು; ಪ್ರತಿಫಲವಿಲ್ಲದೆ ಅವರು ತಿರುಗಿ ಬಾರದಂತಿದ್ದರೆ ಆತ್ಮಸಮರ್ಪಣೆ ಮಾಡಿಯಾದರೂ ಅಂಥವರಿಗೆ ನಮ್ಮ ಸ್ಥಳವನ್ನು ಕೊಡಲು ಸಿದ್ಧರಾದೇವು; ಆದರೆ ಹಳೆಯ ಕಾಲದವರೆಂದು ಕೆಟ್ಟ ವ್ಯಕ್ತಿಗಳನ್ನು ನಾವು ಜೀವಂತಗೊಳಿಸಲಿಕ್ಕೆ ಸಿದ್ಧರಾಗೆವು ಇತಿಹಾಸದಲ್ಲಿ ನಾಮೋಲ್ಲೇಖವಾಗಿರುವದೆಂದು ಆ ವ್ಯಕ್ತಿಗಳೆಲ್ಲವೂ ಒಳಿತಾದವುಗಳೆಂದು ಹೇಳಲಿಕ್ಕೆ ಬರುವದಿಲ್ಲ. ತ್ರ್ಯಂಬಕಜಿ ಢೇಂಗಳೆ, ಎರಡನೆಯ ಬಾಜೀರಾಯ, ಚಂದ್ರರಾವ ಮೋರೆ, ಸರ್ಜೇರಾವ ಘಾಟಗೆ ಮೊದಲಾದ ವ್ಯಕ್ತಿಗಳು ಐತಿಹಾಸಿಕವಿದ್ದರೂ ಅಂಥವರನ್ನು ನಾವು ಎಂದೂ ಇಚ್ಛಿಸಲಾರೆವು. ಆಗಿನ ಕಾಲದಲ್ಲಿಯೇ ಆ ವ್ಯಕ್ತಿಗಳು ಬೇಡಾದಾಗ, ಈಗ ನಾವು ಅವರನ್ನು ಹೇಗೆ ಬಯಸುವೆವು? ಕೇವಲ ಐತಿಹಾಸಿಕ ಪ್ರಸಿದ್ಧಿಯೇ ನಿಜವಾದ ಕೀರ್ತಿಯಲ್ಲ. ಯಾವ ವ್ಯಕ್ತಿಗಳು ತಮ್ಮಲ್ಲಿಯ ಸದ್ಗುಣದಿಂದ ನಾಮಾಂಕಿತವೂ ಕೀರ್ತಿಯುತವೂ ಆದಂಥವುಗಳಿದ್ದವೋ ಅಂಥವುಗಳು ಮಾತ್ರ

ತಿರುಗಿ ದೊರೆಯುವಂತಿದ್ದರೆ ನಾವು ಬೇಡುವೆವು. ಯಾರು ತಮ್ಮ ದುಷ್ಟತನದಿಂದ ಇತಿಹಾಸವನ್ನು ಕಲಂಕಿತಗೊಳಿಸಿದರೋ, ಯಾರು ರಾಷ್ಟ್ರವಿಘಾತವನ್ನು ಮಾಡಿರುವರೋ ಅವರು ಕಾಲನ ಉದರದಲ್ಲಿ ಹೋದದ್ದೇ ಒಳಿತು. ಅವರ ದುಃಸ್ಮೃತಿಯು ಇಂದಿಗೂ ನಮ್ಮನ್ನು ಶಲ್ಯದಂತೆ ಚುಚ್ಚುತ್ತಿರುವದು. ಇಷ್ಟೇ ಸಾಕು. ಕಾಲವಾದರೂ ಬರೇ ಚಲೋ ವ್ಯಕ್ತಿಗಳನ್ನಷ್ಟೇ ಕೊಡುವದೆಲ್ಲಿ? ನಾನಾಫಡಣವೀಸನಂಥ ಚಲೋ ವ್ಯಕ್ತಿಯನ್ನು ಅದು ಕೊಟ್ಟರೆ, ಬಾಜೀರಾಯನಂಥ ವ್ಯಕ್ತಿಯನ್ನೂ ಕೊಟ್ಟಿತ್ತು. ಹೀಗಾಗದಿದ್ದರೆ ಒಂದುಕಾಲದಲ್ಲಿ ಬರೇ ಚಲೋ ವ್ಯಕ್ತಿಗಳೇ ಉದಯವಾಗಿ, ಮತ್ತೊಂದು ಕಾಲದಲ್ಲಿ ಕೆಟ್ಟವ್ಯಕ್ತಿಗಳು ತಲೆದೋರುವ ಸಂಭವವುಂಟು. ಹೀಗಾದರೆ ಈಶ್ವರನ ಲೀಲಾಕೌಶಲ್ಯವು ಹೇಗೆ ಸಿದ್ಧವಾಗುವದು?

ನಮ್ಮ ಪೂರ್ವಜರ ಕಡೆಗೆ ನೋಡುವ ಎರಡು ದೃಷ್ಟಿಗಳಿರುವವು. ಒಂದು ಅಭಿಮಾನದ್ದು; ಮತ್ತೊಂದು ವಿವೇಕದ್ದು ಅಥವಾ ಐತಿಹಾಸಿಕದ್ದು. ಅಭಿಮಾನದ ದೃಷ್ಟಿಯಲ್ಲಿ ಒಳಿತು-ಕೆಡಕುಗಳ ವಿವೇಕವಿರುವದಿಲ್ಲ. ಒಂದು ಮರ್ಯಾದೆಯ ವರೆಗೆ ಗುಣ-ದೋಷ ಮರೆತು, ಹಳೆಯದೆಲ್ಲವೂ ಒಳ್ಳೆಯದೆನ್ನುವ ಪ್ರವೃತ್ತಿಯಾಗುವದು. ಸ್ವಕೀಯರ ಇತಿಹಾಸರೂಪಿಯಾದ ಪರ್ವತದ ಎತ್ತರವಾದ ಶಿಖರಗಳು ಕರ್ತೃತ್ವ ರೂಪಿಯಾದ ಶುಭ್ರ ಹಿಮದಿಂದಲೂ ಕೀರ್ತಿರೂಪಿಯಾದ ಉಜ್ವಲ ಸೂರ್ಯ ಪ್ರಕಾಶದಿಂದಲೂ ಹೊಳೆಯುತ್ತಿರುವಂತೆ ಅಭಿಮಾನದ ದೃಷ್ಟಿಗೆ ಕಾಣುವದು; ಆದರೆ ಐತಿಹಾಸಿಕ ಹಾಗು ಚಿಕಿತ್ಸಕ ಬುದ್ಧಿಯ ಮಾತೇ ಬೇರೆ. ಅದರಿಂದ ಪರ್ವತದಲ್ಲಿಯ ಬಿರುಸುತನ, ದರಿ-ಕಂದರ, ಅಲ್ಲಿಯ ಸಿಂಹ-ಶ್ವಾಪದಾದಿ ಮೃಗಜಾತಿಗಳು, ವಿಷ ಮಯ ವೃಕ್ಷಗಳು ಕಂಟಕಮಯ ಲತೆಗಳು ಮೊದಲಾದ ದೋಷಗಳು ಐತಿಹಾಸಿಕ ದೃಷ್ಟಿಗೆ ಕಾಣುವವು.

ರಾ. ರಾಜವಾಡೆಯವರಷ್ಟು ಅಭಿಮಾನವನ್ನು ಮರಾಟಶಾಹಿಯ ವಿಷಯಕ್ಕೆ ತಳೆಯುವ ಜನರು ಬಹುತರ ದೊರೆಯಲಿಕ್ಕಿಲ್ಲ. ಹೀಗಿದ್ದು, ಅವರೂ ಸಹ ಮೂರ ನೆಯ ಖಂಡದ ಪ್ರಸ್ತಾವನೆಯಲ್ಲಿ ಕೆಳಗಿನಂತೆ ಉದ್ಗಾರ ತೆಗೆದಿರುವರು.

"೧೭೯೬ರಿಂದ ೧೮೧೮ ರ ವರೆಗೆ ಬಾಜೀರಾಯನ ಆಳಿಕೆಯಲ್ಲಿ ಬಂಡಾಯ, ಪರಸ್ಪರ ಮತ್ಸರ, ದೇಶದ್ರೋಹ, ಯಾದವಿ, ಭ್ರಷ್ಟಾಚಾರ ಮೊದಲಾದವುಗಳು ನಡೆದು, ಕೊನೆಗೆ ಭರತಖಂಡದೊಳಗಿನ ಮರಾಟರ ಅಧಿಕಾರವು ನಷ್ಟವಾಗುವ ಹೊತ್ತು ಬಂತು. ದುಷ್ಟನೂ ಭ್ರಷ್ಟನೂ ಹೇಡಿಯೂ ಅವಿಶ್ವಾಸಿಯೂ ಕರ್ತೃತ್ವ ಶೂನ್ಯನೂ ಆದ ಬಾಜೀರಾಯನ ದ್ವೇಷವನ್ನು ಎಲ್ಲ ಸರದಾರರೂ ಮಾಡುತ್ತಿದ್ದರೆ, ಅವನನ್ನು ಕಿತ್ತೊಗೆದು ಇಲ್ಲವೆ ಅಂಕೆಯಲ್ಲಿಟ್ಟುಕೊಂಡು ಮರಾಟರ ಸಂಯುಕ್ತ ಸತ್ತೆ ಯನ್ನು ಸ್ಥಾಪಿಸಲಿಕ್ಕೆ ಬರುವಂತಿದ್ದಿಲ್ಲವೆಂಬಂತೇನೂ ಇಲ್ಲ. ಶಿಂದೆ ಹೋಳಕರ ಗಾಯಕವಾಡ ಭೋಸಲೆ ಪಟವರ್ಧನ ಮೊದಲಾದ ಸರದಾರರ ಕರ್ತೃತ್ವವು ಸಂ ಯುಕ್ತ ಘಟನೆಯನ್ನು ಎತ್ತಿಹಿಡಿಯಲು ಅಸಮರ್ಥವಾಗಿತ್ತೆಂಬಂತೇನೂ ಇದ್ದಿಲ್ಲ.

ಮಹಾರಾಷ್ಟ್ರದೊಳಗಿನ ಶಿಲೇದಾರರು, ಸುಖವಸ್ತು ಜನರು, ಸಾಧುಸಂತರು, ಭಿಕ್ಷುಕ-ಶಾಸ್ತ್ರಿಗಳು ಎಲ್ಲಿಯೂ ಓಡಿ ಹೋಗಿದ್ದಿಲ್ಲ; ಆದರೆ ಪರಸ್ಪರರಲ್ಲಿ ವಿಶ್ವಾಸವೂ ರಾಷ್ಟ್ರಾಭಿಮಾನವೂ ಮೊದಲಾದ ರಾಷ್ಟ್ರೀಯ ನೀತಿವಂತಿಕೆಯ ಘಟಕಗಳು ಎಲ್ಲೆಡೆಯಲ್ಲಿಯೂ ಮೃತಪ್ರಾಯವಾದ್ದರಿಂದ ಈ ಸರದಾರರೂ ಶಿಲೇದಾರರೂ ಮುತ್ಸದ್ದಿಗಳೂ ಬಾಜೀರಾಯನು ಬ್ರಹ್ಮಾವರ್ತಕ್ಕೆ ಹೋದದ್ದನ್ನು ಸುಖದಿಂದ ನೋಡಿದರು! ಬ್ರಹ್ಮೇಂದ್ರಸ್ವಾಮಿಗಳು ಹಾಕಿಕೊಟ್ಟ ಚಾಡಿ-ಜಗಳ-ವಿಶ್ವಾಸಘಾತ ಇವುಗಳನ್ನು ಎರಡು ತಲೆಗಳವರೆಗೆ ಕಲಿತದ್ದರ ಪರಿಣಾಮವಿದು! ಔರಂಗಜೇಬನ ವೇಳೆಯಲ್ಲಿ ಯಾವ ಮುಂದಾಳುಗಳು ಸ್ವಾತಂತ್ರ್ಯಾರ್ಥವಾಗಿ ಜೀವವನ್ನು ತೃಣಸಮ ಮಾಡಿದರೋ, ಅವರ ಸಂತತಿಯವರೇ ಹಾಗು ಅವರ ರಾಷ್ಟ್ರದೊಳಗಿನ ಮುಂದಾಳುಗಳೇ ಬಾಜೀರಾಯನ ವೇಳೆಯಲ್ಲಿ ತಟಸ್ಥರಾಗಿ ಕುಳಿತರು! ರಾಮದಾಸೀ, ಭಾರ್ಗವರಾಮೀ ಪಾಠಗಳ ಬಗ್ಗೆ ಹೀಗೆ ಬೇರೆ ಬೇರೆ ಪರಿಣಾಮಗಳಾದವು. ೧೭೯೫ರಲ್ಲಿ ನಾನಾಫಡಣವೀಸನ ಆಳಿಕೆಯಲ್ಲಿದ್ದ ಬಂಧುರ ವೈಭವವು ಮುಂದೆ ಹತ್ತೆಂಟು ವರ್ಷಗಳಲ್ಲೇ ಈ ಬಗೆಯಾಗಿ ಮೂರಕಳಿಗೆ ಬಂದದ್ದು ಎಷ್ಟೋ ಜನರಿಗೆ ಆಶ್ಚರ್ಯಕಾರಕವಾಗುವದು; ಆದರೆ ಈ ರಾಷ್ಟ್ರದ ರಾಷ್ಟ್ರೀಯ ನೀತಿವಂತಿಕೆಯು ಬ್ರಹ್ಮೇಂದ್ರಸ್ವಾಮಿಗಳಿಂದ ಎರಡು-ಮೂರು ತಲೆಗಳ ವರೆಗೆ ಅವನತಿ ಹೊಂದುತ್ತ ಹೋಗಿ, ಅದು ಬಾಜೀರಾಯನ ಆಳಿಕೆಯಲ್ಲಿ ಪೂರಾ ನಾಶವಾಗಿ ಹೋಯಿತೆಂಬದನ್ನು ಲಕ್ಷ್ಯಕ್ಕೆ ತಂದರೆ ಆಶ್ಚರ್ಯಪಡುವ ಕಾರಣವೇ ಉಳಿಯುವದಿಲ್ಲ. ನಾನಾಫಡಣವೀಸನ ಆಳಿಕೆಯಲ್ಲಿ ಮಹದಾಜಿ ಶಿಂದೆ, ತುಕೋಜಿ ಹೋಳಕರ, ಫತ್ತೇಸಿಂಗ ಗಾಯಕವಾಡ, ಭೋಸಲೆ, ಪಟವರ್ಧನ ಮೊದಲಾದ ಮಹಾರಾಷ್ಟ್ರ ಸಾಮ್ರಾಜ್ಯದೊಳಗಿನ ಸರದಾರರು ಸಂಯುಕ್ತ ಸತ್ತೆಯನ್ನು ಮನ್ನಿಸದೆ ಪರರಾಷ್ಟ್ರದೊಡನೆ ಒಪ್ಪಂದ ಮಾಡಿಕೊಳ್ಳುವ ಅಭ್ಯಾಸ ಮಾಡಿದರು; ಮತ್ತೆ ಸಂಯುಕ್ತ ಸತ್ತೆಯ ಬಹುತರವಾದ ಶಕಲಗಳನ್ನು ಮುರಿದುಬಿಟ್ಟರು. ನಾನಾಫಡಣವೀಸನಂಥ ನೀತಿವಂತ ಮುತ್ಸದ್ದಿಯ ವರ್ಚಸ್ಸು ನಾಶವಾದ ಮೇಲೆ ಈ ಅನೀತಿವಂತಿಕೆಯು ಪೂರ್ಣವಾಗಿ ಅನಿಯಂತ್ರಿತವಾಯಿತು. ಬ್ರಹ್ಮೇಂದ್ರಸ್ವಾಮಿಗಳು ಹಚ್ಚಿದ ಅಗಿಯು ವೃಕ್ಷವಾಗಿ, ಅದರ ಕಟುಫಲಗಳು ಫಲಿಸತೊಡಗಿದವು!'' ರಾಜವಾಡೆಯವರ ಬರೆವಣಿಗೆಯನ್ನು ನೋಡಿದರೆ ಮರಾಟಶಾಹಿಯ ಕಟ್ಟಾಭಿಮಾನಿಗಳೂ ಸಹ ಐತಿಹಾಸಿಕ ದೃಷ್ಟಿಯನ್ನಂಗೀಕರಿಸಿದ ಮೇಲೆ ಹೇಗೆ ಕಠೋರತನದಿಂದ ಅನ್ನಬೇಕಾಗುವದೆಂಬದು ಕಂಡುಬರುವದು.

ನಾವು ಹಳೆಯ ಮರಾಟಶಾಹಿಯ ನೆನಪು ಮಾಡುತ್ತಿದ್ದರೂ ಅದನ್ನು ಮತ್ತೆ ಪ್ರಾಣಪ್ರತಿಷ್ಠೆಗೊಳಿಸಲು ಇಚ್ಛಿಸುವೆವೆಂಬಂತೇನೂ ಇಲ್ಲ. ಅದನ್ನು ಜೀವಂತಗೊಳಿಸುವ ಶಕ್ತಿಯಾದರೂ ನಮ್ಮಲ್ಲಿ ಇರುವದೆಲ್ಲಿ? ಮರಾಟ ಪಾತಶಾಹಿಯನ್ನು ರಕ್ಷಿಸುವ ಸಾಮರ್ಥ್ಯವು ಆ ಪರಿಸ್ಥಿತಿಯಲ್ಲಿ ಆಗಿನ ಜನರಲ್ಲಿ ಇಂದಿಗಿಂತಲೂ ನೂರು ಪಟ್ಟು ಹೆಚ್ಚಿಗೆ ಇತ್ತು. ಕಾರ್ಯದ ದೃಷ್ಟಿಯಿಂದ ಆಗಿನ ಜನರಿಗಿಂತ ನಮ್ಮ ಸ್ಥಿತಿಯು ನೂರು ಪಾಲು ಕೆಳಗೆ ಬಂದಿದೆ!

ಮರಾಟರು ತಮ್ಮ ಹಳೇ ಹೆಸರಿನ ಅಭಿಮಾನವನ್ನು ಎಂದೂ ಮರೆಯುವದಿಲ್ಲ; ಆದರೆ ಹೊಸ ಪರಿಸ್ಥಿತಿಯನ್ನು ಮರೆಯುವಂಥ ಮೂಢರೂ ಅವರಿಲ್ಲ. ಇಡೀ ಹಿಂದುಸ್ತಾನದಲ್ಲಿ ಅವರ ಲೌಕಿಕವಿರುವದಕ್ಕೆ ಅವರ ದೇಶಾಭಿಮಾನದಷ್ಟೇ ಸಮಯಜ್ಞತ್ವವೂ ಕಾರಣವಾಗಿದೆ. ಪೂರ್ವದಲ್ಲಿ ದಿಲ್ಲಿಯ ಕಡೆಗೆ ಮರಾಟರು ಹೋಗುತ್ತಿದ್ದಂತೆ ಈಗಲೂ ಹೋಗುತ್ತಿದ್ದಾರೆ. ಆಗಲೂ ಈಗಲೂ ರಾಜಕೀಯ ಮಹತ್ವಾಕಾಂಕ್ಷೆಯೇ ಅವರ ಪ್ರವೃತ್ತಿಯಾಗಿದೆ. ಆಗ ಮಹಾರಾಷ್ಟ್ರವಷ್ಟೇ ತಮ್ಮ ದೇಶವೆಂದು ತಿಳಿದಿದ್ದರೆ, ಈಗ ಇಡಿ ಹಿಂದುಸ್ತಾನವೇ ತಮ್ಮ ದೇಶವೆಂದು ತಿಳಿದುಕೊಳ್ಳುವಂಥ ವಿಶಾಲ ದೃಷ್ಟಿಯು ಅವರಲ್ಲುಂಟಾಗಿದೆ. ಮೊದಲು ಮರಾಟರ ದ್ವೇಷ ಮಾಡುತ್ತಿದ್ದವರು ಈಗ ಅವರೊಡನೆ ಸ್ನೇಹದಿಂದ ನಡೆಯುತ್ತಿದ್ದಾರೆ. ಕಲಕತ್ತೆಯೊಳಗಿನ 'ಮರಾಟರ ಕಂದಕವು' ಇನ್ನೂ ಇರುವದು. ಅದನ್ನು ಮರಾಟರೂ ಬಂಗಾಲಿಗಳೂ ಇನ್ನೂ ಮರೆತಿರುವದಿಲ್ಲ. ಯಾವ ಸಂಗತಿಯು ಮರಾಟರ ಅಪಕೀರ್ತಿಗೆ ಕಾರಣವಾಗಿತ್ತೋ ಅದೇ ಈಗ ಸುಕೀರ್ತಿಗೆ ಕಾರಣವಾಗಿದೆ. ತೊಟ್ಟಿಲೊಳಗಿನ ಅರ್ಭಕರನ್ನು ಹೆದರಿಸುವ ಸಾಧನವೆಂದು ಯಾವ ಹೆಸರಿನ ಉಪಯೋಗ ಮಾಡುತ್ತಿದ್ದರೋ, ಅದನ್ನು ಈಗ ಬಂಗಾಲದೊಳಗಿನ ತರುಣರೂ ಪ್ರೌಢರೂ ವೃದ್ಧರೂ ಪ್ರೇಮ ಕೌತುಕಗಳಿಂದ ಆದರಿಸುತ್ತಾರೆ.

ಅಭಿಮಾನ ವಿಷಯವು ಹೆಚ್ಚಾದಂತೆ ಸ್ವಂತದ ಅಭಿಮಾನವಾದರೂ ವಿಸ್ಮೃತವಾಗುವದು. ಮರಾಟರಿಗೆ 'ಮರಾಟರು' ಎಂಬ ಹೆಸರು ಯಾವಾಗಲಾದರೂ ಪ್ರಿಯ್ಯವಾಗಿದ್ದರೂ, 'ಹಿಂದು ವಾಸಿ' ಎಂಬ ಹೆಸರು ಈಗ ಅವರಿಗೆ 'ಮರಾಟ' ಎಂಬ ಶಬ್ದಕ್ಕಿಂತಲೂ ಸೇರತೊಡಗಿದೆ. ಸ್ಕಾಚ್ ಜನರಿಗೆ ಸ್ಕಾಚ್ ಹೆಸರಿನ ಅಭಿಮಾನವು ಬಹಳವಿದ್ದು ವರ್ಷದಲ್ಲಿ ಒಂದು ದಿವಸ, ಅಂದರೆ ಸೇಂಟ ಆಂಡ್ರ್ಯೂಜ ಸಾಧುವಿನ ಪುಣ್ಯತಿಥಿಯು ದಿವಸ ಅವರು ತಮ್ಮ ಸ್ಕಾಚ್ ಹೆಸರಿನ ಜಯಘೋಷ ಮಾಡುತ್ತಾರೆ. ಉಳಿದ ಮೂರುನೂರಾಅರವತ್ತುನಾಲ್ಕು ದಿವಸ ಅವರು ಇಂಗ್ಲಿಷರೊಡನೆ ಇಂಗ್ಲಿಷರೆಂದೆನಿಸಿಕೊಳ್ಳಲಿಕ್ಕೆ ಸಿದ್ಧರಿರುತ್ತಾರೆ. ಮರಾಟರ ಸಂಬಂಧದಲ್ಲಾದರೂ ಕೆಲವುವಿಷಯಗಳಲ್ಲಿ ಹೀಗೆಯೇ ಸ್ಥಿತ್ಯಂತರವಾಗಿದೆ. ಇಡಿ ಹಿಂದುಸ್ತಾನವೇ ಸ್ವದೇಶವಾದಾಗ ಮರಾಟರೆನಿಸಿಕೊಳ್ಳುವದಕ್ಕಿಂತ ಹಿಂದುಗಳೆನಿಸಿಕೊಳ್ಳುವದರಲ್ಲಿಯೇ ಅವರಿಗೆ ಹೆಚ್ಚಿನ ಅಭಿಮಾನವೆನಿಸುವದು ಸ್ವಾಭಾವಿಕವು. ಮೊದಲು ಮರಾಟರು ಯುದ್ಧಗಳಲ್ಲಿ ವಿಜಯಿಗಳಾಗುತ್ತಿದ್ದರೆ; ಈಗ ಅವರು ಶಾಂತತೆಯೊಳಗಿನ ವಿಜಯಹೊಂದುತ್ತಿರುವರು. ಮುಂದೆ ಅವರ ವಿಜಯವು ಯಾವುದರಲ್ಲಿರುವದೆಂಬದು ದೇವಾ, ನಿನಗೇ ಗೊತ್ತು!

---

ಸಂಪೂರ್ಣ.

---

ಮುದ್ರಕರು:—ಭಿ. ಪ. ಕಾಳೆ, ಶ್ರೀ ಶೇಷಾಚಲ ಪ್ರೆಸ್ಸ, ಆನಂದವನ (ಅಗಡಿ)